# ಮುನ್ನುಡಿ

"ಆದಿಕವಿ ವಾಲ್ಮೀಕಿ"ಯಲ್ಲಿ ರಾಮಾಯಣದ ಸಾರವನ್ನು ಸಂಗ್ರಹಿಸಲು ಮಾಡಿದ ಯತ್ನವನ್ನು ಈ ಪುಸ್ತಕದಲ್ಲಿ ಭಾರತವನ್ನು ಕುರಿತು ಮಾಡಿದೆ. ಎರಡು ಸಂದರ್ಭದಲ್ಲಿಯೂ ನನ್ನ ಮನೋಧರ್ಮ ಒಂದೇ: ವಿಚಾರಯುಕ್ತವಾದ ಶ್ರದ್ಧೆ, ವಿಚಾರದಿಂದ ಹುಟ್ಟಿದ ಭಕ್ತಿ. ಇದೊಂದು ಮಧ್ಯಮಾರ್ಗ: ಅತಿ ಹಳಬರಿಗೆ ಅಶ್ರದ್ಧೆಯಂತೆ ಅತಿ ಹೊಸಬರಿಗೆ ಅಂಧಶ್ರದ್ಧೆಯಂತೆ ಕಾಣುವ ಒಂದು ನಿಲುವು. ಆದರೆ ನನಗೆ ತೋರುವ ಮಟ್ಟಿಗೆ ನಮ್ಮ ಜನಾಂಗದ ಮುಂಬರಿವಿಗೆ ಇದು ಹೊರತು ಬೇರೆ ಮಾರ್ಗವಿಲ್ಲ, ಬೇರೆ ಯಾವ ನಿಲುವೂ ಇದರಷ್ಟು ಸಾಧಕವಲ್ಲ. ನಾನ್ಯಃ ಪಂಥಾ ಅಯನಾಯ ವಿದ್ಯತೇ. "ನನಗೆ ತೋರುವ" ಎಂದರೆ "ನನಗೆ ಮಾತ್ರ ತೋರುವ" ಎಂದರ್ಥವಲ್ಲ. "ಇತಿ ಶುಶ್ರುಮ ಧೀರಾಣಾಂ" ಇದು ಎಲ್ಲ ಕಾಲದಲ್ಲೂ ಧರ್ಮದ ಶ್ರೇಷ್ಠ ಅನುಷ್ಠಾತರು ಒಪ್ಪಿ ಹಿಡಿದ ದಾರಿ, ನಂಬಿ ನಡೆದ ದಾರಿ.

ಗವೀಪುರದ ವಿಸ್ತರಣ
ಬೆಂಗಳೂರು
ನಂದನ ಸಂವತ್ಸರ
ಶ್ರಾವಣ ಬಹುಳ ಅಷ್ಟಮಿ
ತಾ॥ ೧೩–೮–೧೯೫೨

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

# ವಿಷಯ ಸೂಚಿ

# ಭಾರತ ತೀರ್ಥ

## ೧

## ಪ್ರಸ್ತಾವನೆ

ಭರತ ವರ್ಷದ ಪೂರ್ವಾರ್ಜಿತ ಸಂಪತ್ತಿನಲ್ಲಿ ರಾಮಾಯಣದಂತೆ ಮಹಾಭಾರತವೂ ಬಹು ಮುಖ್ಯವಾದ ಒಂದು ವಸ್ತು. ಆಂಗ್ಲೇಯ ಪ್ರಮುಖಲೇಖಕ ಥಾಮಸ್ ಕಾರ್ಲೈಲ್ ತನ್ನ ಕಾಲಕ್ಕೆ ಆ ಜನಾಂಗದ ಬಹು ಹಿರಿಯ ಆಸ್ತಿ ಆದ ಷೇಕ್ಸ್‌ಪಿಯರ್ ಮತ್ತು ಇಂಡಿಯಾ ಚಕ್ರಾಧಿಪತ್ಯ ಎರಡರಲ್ಲಿ ಚಕ್ರಾಧಿಪತ್ಯಕ್ಕಿಂತ ಷೇಕ್ಸ್‌ಪಿಯರ್ ಹೆಚ್ಚಿನ ಬೆಲೆಯ ವಸ್ತು ಎಂದು ಹೇಳಿದನು. ಚಕ್ರಾಧಿಪತ್ಯ ನಿತ್ಯವಲ್ಲ, ಇಂದಲ್ಲದಿದ್ದರೆ ನಾಳೆ ಕೈಯಿಂದ ಜಾರಿಹೋಗಬಹುದು, ಷೇಕ್ಸ್‌ಪಿಯರ್ ಶಾಶ್ವತವಾದ ಆಸ್ತಿ, ಎನ್ನುವುದು ಅವನ ಅಭಿಪ್ರಾಯಕ್ಕೆ ಕಾರಣ. ಈಗ ಇಂಗ್ಲೆಂಡ್ ತನ್ನ ಚಕ್ರಾಧಿಪತ್ಯವನ್ನು ಕಳೆದುಕೊಂಡಿದೆ; ಆದರೂ ಅದಕ್ಕಿಂತ ಬೆಲೆಯುದಾದ, ಅದಕ್ಕಿಂತ ಭದ್ರವಾದ, ಷೇಕ್ಸ್‌ಪಿಯರ್ ಎಂಬ ಆಸ್ತಿಯನ್ನು ಇನ್ನೂ ಇರಿಸಿಕೊಂಡಿದೆ. ರಾಮಾಯಣ ಮಹಾಭಾರತಗಳು ನಮ್ಮ ಜನಾಂಗಕ್ಕೆ ಇಂಥ ಆಸ್ತಿ: ಬೆಲೆಯಿಂದಲೂ ಭದ್ರತೆಯಿಂದಲೂ ಉಳಿದ ಯಾವ ಆಸ್ತಿಗಿಂತಲೂ ಶ್ರೇಷ್ಠವಾದವು.

ಇವುಗಳಲ್ಲಿ ಮಹಾಭಾರತದ ಸ್ಥಾನ ವಿಲಕ್ಷಣವಾದದ್ದು. ರಾಮಾಯಣ ಈಗಯೇನೊ ಒಂದು ಧರ್ಮಗ್ರಂಥ ಆಗಿದೆ; ಆದರೆ ಅದು ಉದಿಸಿದಾಗ ಪ್ರಾಯಶಃ ಕಾವ್ಯ ಮಾತ್ರ ಆಗಿದ್ದಿತು. ಕೃತಿ ಉನ್ನತ ತತ್ತ್ವಗಳನ್ನು ಉಪದೇಶಿಸಿದ ಕಾರಣದಿಂದಲೂ ಅದರ ನಾಯಕನು ಉನ್ನತ ಜೀವನದಿಂದ ಒಬ್ಬ ಅವತಾರ ಪುರುಷನೆಂದು ಪರಿಗಣಿತನಾದದರಿಂದಲೂ ಗ್ರಂಥ ಕಾವ್ಯತ್ವದಿಂದ ಒಂದು ಮತಗ್ರಂಥದ ಸ್ಥಾನಕ್ಕೆ ಏರಿತು. ಏರಿತು; ಅಥವಾ ಇಳಿಯಿತು. ಏಕೆಂದರೆ, ಮತ ಗ್ರಂಥವೆಂದು ಕೆಲವರು ಹೆಚ್ಚಿನ ಮರ್ಯಾದೆಯನ್ನು ಕೊಟ್ಟಂತೆ ಅದು

ಗ್ರಂಥವೇ ಅಲ್ಲ ಎಂಬಂತೆ ಅನೇಕರು ಅದನ್ನು ಕಡೆಗಣಿಸಿದರು. ಮಹಾಭಾರತ ಮತ್ತೊಬ್ಬ ಅವತಾರ ಪುರುಷನ ಚಾರಿತ್ರವನ್ನು ಒಳಗೊಂಡಿರುವುದಾದರೂ ಕೇವಲ ಅವನ ಚರಿತ್ರೆ ಮಾತ್ರ ಆಗಲಿಲ್ಲ. ಕಾವ್ಯದ ದೃಷ್ಟಿಯಿಂದ ಇದು ರಾಮಾಯಣವಷ್ಟು ರುಚಿಕರವಾದ ಕಥನ ವರ್ಣನಗಳನ್ನು ತೋರದಿದ್ದರೂ, ವ್ಯವಹಾರ ಜ್ಞಾನದ ದೃಷ್ಟಿಯಿಂದ ರಾಮಾಯಣಕ್ಕಿಂತ ಹೆಚ್ಚಿನ ವಿಸ್ತಾರವ ಕ್ಷೇತ್ರವನ್ನು ಒಳಗೊಂಡಿದೆ. ಹೀಗಾಗಿ ಈ ಕೃತಿ ಎಷ್ಟೇ ಧರ್ಮವನ್ನು ಉಪದೇಶಿಸಿದರೂ ಈಗಲೂ ಒಂದು ಲೌಕಿಕ ಗ್ರಂಥವೆಂಬಂತೆ ಬಹು ರೀತಿಯ ಜನಕ್ಕೆ ಪ್ರಿಯವಾಗಿದೆ.

ಭರತವರ್ಷ ಇದೀಗ ಸ್ವತಂತ್ರವಾಗಿದೆ; ಲೋಕದ ಕಾರ್ಯರಂಗದಲ್ಲಿ ಪ್ರಮುಖವಾದ ಒಂದು ಸ್ಥಾನವನ್ನು ಪಡೆದಿದೆ. ಈ ಸ್ವಾತಂತ್ರ್ಯವನ್ನು ಗಳಿಸುವ ಕಾರ್ಯದಲ್ಲಿ ಕೊನೆಗೆ ಮುಖ್ಯ ನಿಮಿತ್ತರಾದ ಮಹಾತ್ಮಾ ಗಾಂಧಿಯವರು ಭರತವರ್ಷದ ಸ್ಥಾನ ಪ್ರಮುಖ ಮಾತ್ರ ಅಲ್ಲದೆ ಈ ದೇಶದ್ದೇ ಆದ ಒಂದು ವಿಲಕ್ಷಣಸ್ಥಾನ ಎಂದು ತಿಳಿದಿದ್ದರು. ಭರತವರ್ಷದ ಇತಿಹಾಸವನ್ನು ಪರಿಶೀಲಿಸುವವರಿಗೆ ಹೀಗೆ ತೋರುವುದು ಸಹಜ. ತನ್ನದೆ ಆದ ಈ ಪ್ರಮುಖ ಸ್ಥಾನದಲ್ಲಿ ಭರತವರ್ಷ ಸಿದ್ಧಿಯನ್ನು ಪಡೆಯಬೇಕಾದರೆ ಅದು ಲೋಕದ ವ್ಯವಹಾರವನ್ನು ತನ್ನ ಇದುವರೆಗಿನ ಸಂಸ್ಕೃತಿಯ, ಇದುವರೆಗಿನ ಅನುಭವದ, ದೃಷ್ಟಿಯಿಂದ ನೋಡಬೇಕು. ಎಂದರೆ, ಭರತವರ್ಷದ ಮಕ್ಕಳು, ಮೊದಲಾಗಿ, ಮುಖ್ಯವಾಗಿ, ತಮ್ಮ ದೇಶದ ದೃಷ್ಟಿ ಯಾವುದು ಎಂದು ಯೋಚನೆ ಮಾಡಬೇಕು. ಬೇರೆ ದೇಶಗಳ ಸಂಸ್ಕೃತಿ ಅನುಭವಗಳಿಂದ ಈ ದೃಷ್ಟಿಯನ್ನು ತಿದ್ದಿಕೊಳ್ಳುವುದು ಆವಶ್ಯಕವೆನಿಸಬಹುದು: ಹಾಗೆ ಕಂಡಾಗ ಅದನ್ನು ತಿದ್ದಿಕೊಳ್ಳಬೇಕು; ಹಿಂತೆಗೆಯಬಾರದು. ಆದರೆ, ಮೂಲತಃ ದೃಷ್ಟಿ ಭರತವರ್ಷದ್ದಾಗಬೇಕು. ಇದು ಸಿದ್ಧಿಸಬೇಕಾದರೆ ನಾವೆಲ್ಲ ನಮ್ಮ ಪೂರ್ವಾರ್ಜಿತ ಸಂಸ್ಕೃತಿಯ ಸ್ವರೂಪವನ್ನು ಮನದಟ್ಟುಮಾಡಿಕೊಳ್ಳಬೇಕು. ಮಹಾಭಾರತ ಗ್ರಂಥದ ಎಷ್ಟು ಪಾತ್ರದ ಪರಿಚಯವೂ ಈ ಕೆಲಸದಲ್ಲಿ ಬಹು ಸಹಾಯಕವಾಗುತ್ತದೆ.

೨

## ಮಹಾಭಾರತದ ರಚನೆ

ಈಗ ಬಳಕೆಯಲ್ಲಿರುವಂತೆ, ಈ ಗ್ರಂಥ ಸುಮಾರು ಒಂದು ಲಕ್ಷ ಶ್ಲೋಕಗಳ ಗ್ರಂಥ. ಇವನ್ನು ವ್ಯಾಸಮಹರ್ಷಿ ರಚಿಸಿದರೆನ್ನುವುದು ಸಂಪ್ರದಾಯ. ವ್ಯಾಸಋಷಿ ಭಾರತದ ಇತಿಹಾಸ ನಡೆಯುವ ಕಾಲಕ್ಕೆ ಜೀವಂತರಾಗಿದ್ದವರು, ಅದರ ಯುದ್ಧದ ಎರಡು ಪಕ್ಷದ ವೀರರಿಗೂ ಪಿತಾಮಹರು, ಅವರು ಈ ಇತಿಹಾಸವನ್ನು ರಚಿಸಿದರು; ಅಲ್ಲದೆ ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸಿದರು, ಹದಿನೆಂಟು ಪುರಾಣಗಳನ್ನು ರಚಿಸಿದರು: ಇತ್ಯಾದಿಯಾಗಿ ಮಹಾಭಾರತದ ಕರ್ತೃವಿಗೆ ಸಂಪ್ರದಾಯ ಬಹು ವಿಶಿಷ್ಟವಾದ ಒಂದು ಸ್ಥಾನವನ್ನು ಕಲ್ಪಿಸಿದೆ; ಯಾವನೋ ಒಬ್ಬ ಮನುಷ್ಯನಿಗೆ ಎಷ್ಟೇ ಪೂರ್ಣವಾದ ಜೀವಮಾನದಲ್ಲಿಯೂ ಅಸಾಧ್ಯ ಎಂದು ತೋರುವಷ್ಟು ಪ್ರಮಾಣದ ಮಹತ್ಕಾರ್ಯವನ್ನು ಆರೋಪಿಸಿದೆ. ಇಷ್ಟು ಕೆಲಸವನ್ನು ಒಬ್ಬರು ಮಾಡುವುದುಂಟೆ, ವ್ಯಾಸ ಎನ್ನುವುದು ಒಬ್ಬರ ಹೆಸರು ಮಾತ್ರ ಅಲ್ಲ, ಒಂದು ಕುಟುಂಬ ಅಥವಾ ಒಂದು ಕೂಟ ಅಥವಾ ಒಂದು ಗುರುಪರಂಪರೆಯ ಹೆಸರಿರಬೇಕು, ಎನ್ನುವುದು ಹೊಸ ದೃಷ್ಟಿಯ ಜನ ಕೆಲವರ ಊಹೆ. ಮೇಧಾವಿಗಳೂ ತಪಸ್ವಿಗಳೂ ಆದ ಒಬ್ಬ ಮನುಷ್ಯರು ಎಷ್ಟು ಕೆಲಸ ಮಾಡಬಹುದು ಎಂಬುದನ್ನು ಸಾಮಾನ್ಯರಾದ ನಾವು ಊಹಿಸಲಾರೆವು. ಆದ್ದರಿಂದ ಇಷ್ಟು ಕೆಲಸವನ್ನೂ ಒಬ್ಬರು ಮಾಡಿದರೆ ಎನ್ನುವ ಆಕ್ಷೇಪಕ್ಕೆ ನಾವು ಒಪ್ಪಿಗೆಕೊಡಬೇಕಾದದ್ದಿಲ್ಲ. ಆದರೆ, ಪುರಾಣಗಳೆಲ್ಲ ಒಂದೇ ಕಾಲದಲ್ಲಿ ರಚಿತವಾದ ಗ್ರಂಥಗಳಲ್ಲ ಎಂಬ ಊಹೆ ಇತರ ಕಾರಣಗಳಿಂದ ಉದಿಸುತ್ತದೆ. ಆದ್ದರಿಂದ ವ್ಯಾಸ ಎನ್ನುವುದು ಒಂದು ಗುರುಪರಂಪರೆಯ ಹೆಸರಿರಬಹುದು ಎಂದು ನಾವು ಒಪ್ಪಿಕೊಳ್ಳಬಹುದು. ಇದು ಹೇಗೇ ಆದರೂ ಮಹಾಭಾರತದ ಮೂಲಗ್ರಂಥವನ್ನು ಯಾವುದೊ ಒಂದು ಕಾಲದಲ್ಲಿ ಒಂದು ಆಕಾರಕ್ಕೆ ತಂದ ಮಹಾವ್ಯಕ್ತಿ ಒಬ್ಬರು ಇದ್ದಿರಬೇಕು. ಅವರನ್ನು ನಾವು ವ್ಯಾಸರು ಎಂದು ಕರೆಯಬಹುದು. ಒಂದು ಲಕ್ಷ ಶ್ಲೋಕಗಳ ಈಗಿನ ಗ್ರಂಥವನ್ನೆಲ್ಲ ಆ ಒಬ್ಬರು ಕಟ್ಟಿದರೊ ಇಲ್ಲವೊ, ಇದರ ತಿರುಳಾದ ನಿತ್ಯಜೀವಂತ

ಭಾಗವನ್ನು ರಚಿಸಿದ ಅಥವಾ ಕೂಡಿಸಿ ಪರಿಷ್ಕರಿಸಿದ ಅಮಾನುಷಕಲ್ಪ ಮತ್ತು ಲೋಕೋತ್ತರವಾದ ಒಂದು ಬುದ್ಧಿ ಒಂದು ಕಾಲದಲ್ಲಿ ಇದ್ದಿತು. ಆ ಬುದ್ಧಿಗೆ ಅಧಿಕಾರಿಯಾಗಿದ್ದ ಚೇತನ ವ್ಯಾಸಮಹರ್ಷಿ.

ಮಹಾಭಾರತದಲ್ಲಿ ಈಗ ಹದಿನೆಂಟು ಪರ್ವ, ಸುಮಾರು ಒಂದು ಲಕ್ಷ ಶ್ಲೋಕ, ಇವೆ. ಗ್ರಂಥದ ಆರಂಭದಲ್ಲಿ ಅನುಕ್ರಮಣೀ ಪರ್ವ ಎಂಬ ಒಂದು ಸಣ್ಣ ಪರ್ವ ಇದೆ. ನೈಮಿಷಾರಣ್ಯದಲ್ಲಿ ಶೌನಕನೆಂಬ ಕುಲಪತಿ ದೀರ್ಘಸತ್ರವೆಂಬ ಒಂದು ಯಾಗವನ್ನು ನಡಸುತ್ತಿರುವ ಕಾಲದಲ್ಲಿ, ರೋಮಹರ್ಷಣನ ಮಗನಾದ ಉಗ್ರಶ್ರವನೆಂಬ ಪೌರಾಣಿಕನು ಅಲ್ಲಿಗೆ ಬಂದು ಅಲ್ಲಿ ನೆರೆದಿದ್ದ ಮಹರ್ಷಿಗಳಿಗೆ ವ್ಯಾಸಕೃತವಾದ ಮಹಾ ಭಾರತವನ್ನು ಹೇಳಿದನು, ಆ ಕಥೆಯ ಸ್ವರೂಪ ಮತ್ತು ಸಾರಾಂಶ ಹೀಗೆ, ಎಂದು ಈ ಉಪಪರ್ವ ಪ್ರತಿಪಾದಿಸುತ್ತದೆ. ವ್ಯಾಸರು ರಚಿಸಿದ ಭಾರತವನ್ನು ವೈಶಂಪಾಯನನು ಅರ್ಜುನನ ಮರಿಮಗ ಜನಮೇಜಯನಿಗೆ ಕಥಿಸಿದನು; ಅದನ್ನು ಪೌರಾಣಿಕ ಉಗ್ರಶ್ರವ ಸೂತನು ನೈಮಿಷಾರಣ್ಯ ದಲ್ಲಿ ಋಷಿಗಳಿಗೆ ಮತ್ತೆ ಕಥಿಸಿದನು. ಇಷ್ಟರಿಂದಲೆ ಈ ಭಾಗವನ್ನು ಭಾರತದ ಕರ್ತೃವಾದ ವ್ಯಾಸಮಹರ್ಷಿ ಬರೆಯಲಿಲ್ಲ ಎಂದು ಹೇಳ ಬಹುದು. ಜೊತೆಗೆ, ಈ ಪರ್ವದ ಮೊದಲ ಶ್ಲೋಕ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್

ಎಂದು ವ್ಯಾಸನಿಗೆ ನಮಸ್ಕಾರ ಮಾಡಿದೆ. ಇದನ್ನು ರಚಿಸಿದಾತನು ವ್ಯಾಸನಾದರೆ ಇಲ್ಲಿ 'ವ್ಯಾಸಂ' ಎಂಬ ಶಬ್ದ ಬರುವುದು ಸಾಧ್ಯವಲ್ಲ. ಈ ಆಕ್ಷೇಪವನ್ನು ಊಹಿಸಿ ಯಾರೊ ಪೂರ್ವದಲ್ಲಿ 'ವ್ಯಾಸಂ' ಎಂಬ ಶಬ್ದವನ್ನು ತೆಗೆದು 'ಚೈವ' ಎಂಬ ಪಾದಪೂರಕ ಶಬ್ದವನ್ನು ಸೇರಿಸಿ ಶ್ಲೋಕವನ್ನು

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್

ಎಂದು ಮಾರ್ಪಡಿಸಿದರು. ಹೀಗೆ ಮಹಾಭಾರತಕ್ಕೆ ಸೇರಿದ ಶಬ್ದಗಳು, ಶ್ಲೋಕಗಳು ಅನೇಕ. ಅವುಗಳ ವಿಷಯವನ್ನು ಮುಂದೆ ಸ್ವಲ್ಪ ವಿವರ

ವಾಗಿ ಹೇಳಿದೆ. ಹೀಗೆ ಸೇರಿದ ಶಬ್ದಗಳ, ಶ್ಲೋಕಗಳ, ಮಹಿಮೆಯಿಂದ ವ್ಯಾಸಮಹರ್ಷಿಗೆ "ಚವೈತುಹಿ, ಚವೈತುಹಿ" ಕವಿಯೆಂಬ ಹೆಸರು ಬಂದಿತು. ಏನುವಮಾಡುವುದೆಂಬುದು ತೋರದಿದ್ದರೆ 'ಚ' 'ವೈ' 'ತು' 'ಹಿ' ಅಕ್ಷರ ಅವಶ್ಯಕವಾದಷ್ಟನ್ನು ತುಂಬಿ ಪದ್ಯವನ್ನು ಮುಗಿಸುವುದು. ವ್ಯಾಸಮಹರ್ಷಿಯೇ ರಚಿಸಿದ ಕೃತಿಯಲ್ಲಿಯೂ ಈ ಪಾದಪೂರಕ ಶಬ್ದ ಕಣಗಳ ಪ್ರಯೋಗ ಹೆಚ್ಚೆಂದು ಕಾಣಬಹುದು. ಆದರೆ 'ನರಂ ಚೈವ' ಎಂದು ಒಂದು ಚೈವವನ್ನು ಮೊದಲ ಪಂಕ್ತಿಯಲ್ಲಿ ಹಾಕಿ 'ಸರಸ್ವತೀಂ ಚೈವ' ಎಂಬ ಎರಡನೆಯ ಪಂಕ್ತಿಯಲ್ಲಿ ಮತ್ತೊಂದು ಚೈವವನ್ನು ಹಾಕುವಂಥ ಹಯವರಟು ಕವಿತೆ ಮಹಾಭಾರತದ ಕವಿಗೆ ಒಪ್ಪಿರಲಾರದು. ಈ ಶ್ಲೋಕವನ್ನು ಮಾತ್ರ ಬೇರೆ ಯಾರಾದರೂ ರಚಿಸಿರಬಹುದಲ್ಲ ಎನ್ನಬಹುದು. ಆದರೆ ಮುಂದೆ ಈ ಪರ್ವದಲ್ಲಿ ವ್ಯಾಸಮಹರ್ಷಿಯನ್ನು 'ಅದ್ಭುತ ಕರ್ಮಣಃ ವ್ಯಾಸಸ್ಯ' ಎಂದೂ, ಪೂಜಿತನೂ ಮಹಾತ್ಮನೂ ಆದ ಎಂದೂ, ಋಷಿಗಳಿಂದಲೂ ಸೂತನಿಂದಲೂ ಸ್ತೋತ್ರಮಾಡಿಸಿದೆ ಮತ್ತು ಸೂತನು ತನ್ನ ಮಾತನ್ನು "ನಮೋ ಭಗವತೇ ತಸ್ಮೈ ವ್ಯಾಸಾಯ ಅಮಿತ ತೇಜಸೇ ಯಸ್ಯಪ್ರಸಾದಾತ್ ವಕ್ಷ್ಯಾಮಿ ನಾರಾಯಣ ಕಥಾಮಿಮಾಂ" ಎಂದು ವ್ಯಾಸಮಹರ್ಷಿಗೆ ನಮಸ್ಕಾರಮಾಡಿ ಆರಂಭಿಸುತ್ತಾನೆ. ಅನುಕ್ರಮಣಿಕಾ ಅಧ್ಯಾಯವನ್ನು ವ್ಯಾಸಋಷಿ ಬರೆದು ಭಾರತಕ್ಕೆ ಸೇರಿಸಿದನು ಎಂದು ಅದರಲ್ಲಿ ಎರಡು ಕಡೆ ಉಕ್ತಿಯಿದೆ. ವ್ಯಾಸಋಷಿ ರಚಿಸಿದ್ದರೆ ಅವನೇ ಈ ವಾಕ್ಯಗಳನ್ನು ಹಾಕಬೇಕಾದ ಕಾರಣವಿರಲಿಲ್ಲ. ಉಪಪರ್ವವನ್ನು ಓದಿದವರು ಇದು ವ್ಯಾಸನದಲ್ಲ ಎಂದು ಹೇಳುತ್ತಾರೆ ಎಂಬ ಶಂಕೆಹುಟ್ಟಿ ಯಾರೊ ಈ ವಾಕ್ಯಗಳನ್ನು ಸೇರಿಸಿರಬೇಕು. ಇಂಥ ಮಾತನ್ನೆಲ್ಲ ವ್ಯಾಸಮಹರ್ಷಿ ಬರೆದರೆಂದು ಹೇಳುವುದು ಕೃತ್ರಿಮವಾಗುತ್ತದೆ. ಈ ಎಲ್ಲ ಮಾತನ್ನೂ ಆಮೇಲೆ ಬಂದ ವ್ಯಾಸಭಕ್ತರು ರಚಿಸಿ ಸೇರಿಸಿರಬೇಕು.

ಅನುಕ್ರಮಣಿಕಾಪರ್ವದ ನಂತರ ಪರ್ವಸಂಗ್ರಹ ಪರ್ವ ಎಂಬ ಹೆಸರಿನಿಂದ ಎರಡನೆಯ ಅಧ್ಯಾಯ ಬರುತ್ತದೆ. ಈ ಭಾಗವೂ ಸೂತ

ಪೌರಾಣಿಕ ಮತ್ತು ಶೌನಕಾದಿ ಮುನಿಗಳ ಮಧ್ಯದ ಸಂಭಾಷಣೆ. ಮೂರನೆಯ ಅಧ್ಯಾಯ ಪೌಷ್ಯ ಪರ್ವ. ಅದರಲ್ಲಿ, ಪರೀಕ್ಷಿತ್ಕುಮಾರನಾದ ಜನಮೇಜಯನು ತನ್ನ ಸಹೋದರರೊಡನೆ ಕುರುಕ್ಷೇತ್ರದಲ್ಲಿ ನಡಸಿದ ಸತ್ರಯಾಗದ ಪ್ರಸ್ತಾಪವಿದೆ. ಇದನ್ನಾದರೂ ವ್ಯಾಸಮಹರ್ಷಿ ಬರೆದರು, ವೈಶಂಪಾಯನ ಮಹರ್ಷಿ ಅದೇ ಜನಮೇಜಯನಿಗೆ ಕಥಿಸಿದರು ಎನ್ನುವುದು ಉಚಿತವಾಗಲಾರದು. ನಾಲ್ಕನೆಯ ಅಧ್ಯಾಯದಿಂದ ಪೌಲೋಮ ಎಂಬ ಉಪಪರ್ವ ಆರಂಭವಾಗುತ್ತದೆ. ಅದರ ಮೊದಲಲ್ಲಿ ಉಗ್ರಶ್ರವ ಸೂತ ಪೌರಾಣಿಕನ ಮತ್ತು ನೈಮಿಷಾರಣ್ಯವಾಸಿ ಕುಲಪತಿ ಶೌನಕನ ಮಾತು ಹೊಸತೆಂಬಂತೆ ಮತ್ತೆ ಬರುತ್ತದೆ. ಶೌನಕನು ಭೃಗುವಂಶದಲ್ಲಿ ಹುಟ್ಟಿದ ಮಹರ್ಷಿ. ಈ ಪರ್ವದಲ್ಲಿ ಭೃಗುವಂಶದ ಮಾಹಾತ್ಮ್ಯ ವಿಸ್ತಾರವಾಗಿ ಉಕ್ತವಾಗಿದೆ. ಇದರ ಆಚೆಗೆ ಆಸ್ತೀಕ ಪರ್ವ ಎಂಬ ಉಪಪರ್ವ ಬರುತ್ತದೆ. ಇದರಲ್ಲಿ ಕೂಡ ಜನಮೇಜಯನನ್ನು ಕುರಿತಮಾತು ಹಿಂದಿನಕಾಲದ ಮಾತು ಎಂಬಂತೆ ಬರುತ್ತದೆ. ವ್ಯಾಸಮಹರ್ಷಿ ಬರೆದ ಭಾರತ ಈ ವಿಷಯಗಳನ್ನು ಒಳಕೊಂಡಿರಬೇಕಾದಕಾರಣ ಇಲ್ಲ.

ಹಾಗಾದರೆ ವ್ಯಾಸಮಹರ್ಷಿ ರಚಿಸಿದ ಕೃತಿ ಎಲ್ಲಿಂದ ಆರಂಭವಾಯಿತು? ಇದನ್ನು ಖಂಡಿತವಾಗಿ ಹೇಳುವುದು ಸಾಧ್ಯವಲ್ಲ. ಈ ವಿಚಾರದಲ್ಲಿ ಹಿಂದೆಯೇ ಮತಭೇದ ಇದ್ದಿತೆನ್ನುವುದು ಅನುಕ್ರಮಣಿಕಾಪರ್ವದಲ್ಲಿ ಸ್ಪಷ್ಟವಾಗುತ್ತದೆ.

> ಮನ್ವಾದಿ ಭಾರತಂ ಕೇಚಿತ್ ಆಸ್ತೀಕಾದಿ ತಥಾಪರೇ
> ತಥೋಪರಿಚರಾದ್ಯನ್ಯೇ ವಿಪ್ರಾಃ ಸಮ್ಯಗಧೀಯತೇ;
> ವಿವಿಧಂ ಸಂಹಿತಾಜ್ಞಾನಂ ದೀಪಯಂತಿ ಮನೀಷಿಣಃ.

ಎಂದರೆ, ನಮನದಿಂದ, ಎಂದರೆ ನಾರಾಯಣಂ ನಮಸ್ಕೃತ್ಯ ಶ್ಲೋಕದಿಂದ, ಮೊದಲು ಎಂದು ಕೆಲವರೂ ಆಸ್ತೀಕ ವಿಷಯದಿಂದ ಮೊದಲು ಎಂದು ಕೆಲವರೂ ಉಪರಿಚರವಸು ವಿಷಯದಿಂದ ಮೊದಲು ಎಂದು ಕೆಲವರೂ ಅನುಕ್ರಮಣಿಕಾ ಅಧ್ಯಾಯದ ರಚನೆಯ ಕಾಲಕ್ಕೇ ಪಂಡಿತರು ಮಹಾಭಾರತದ ಆರಂಭವನ್ನು ವಿಧವಿಧವಾಗಿ ಗ್ರಹಿಸುತ್ತಿದ್ದರು.

ಅನುಕ್ರಮಣಿಕಾ ಅಧ್ಯಾಯದಲ್ಲಿ ಕಂಡುಬರುವ ಇನ್ನೊಂದು ಸಂಗತಿ, ಭಾರತ ಮೂಲದಲ್ಲಿ ಇಪ್ಪತ್ತನಾಲ್ಕು ಸಾವಿರ ಗ್ರಂಥ ಮಾತ್ರ ಆಗಿದ್ದಿತು, ಎನ್ನುವುದು.

> ವಿಸ್ತರಂ ಕುರುವಂಶಸ್ಯ ಗಾಂಧಾರ್ಯಾಃ ಧರ್ಮಶೀಲತಾಂ
> ದುರ್ವೃತ್ತಂ ಧಾರ್ತರಾಷ್ಟ್ರಾಣಾಮುಕ್ತವಾನ್ ಭಗವಾನ್ ಋಷಿಃ.
> ಚತುರ್ವಿಂಶತಿ ಸಾಹಸ್ರೀಂ ಚಕ್ರೇ ಭಾರತಸಂಹಿತಾಂ;
> ಉಪಾಖ್ಯಾನೈರ್ವಿನಾ ತಾವದ್ಭಾರತಂ ಪ್ರೋಚ್ಯತೇ ಬುಧೈಃ.

ಉಪಾಖ್ಯಾನಗಳು ಸೇರಿದರೆ ಒಂದು ಲಕ್ಷವಾಗುವ ಗ್ರಂಥ ಅವುಗಳನ್ನು ಬಿಟ್ಟು ಇಪ್ಪತ್ತನಾಲ್ಕುಸಾವಿರ ಇರುತ್ತದೆ; ಇದಕ್ಕೆ ಭಾರತವೆಂದು ಹೆಸರು. ವ್ಯಾಸಋಷಿ ಮಾಡಿದ್ದು ಈ ಭಾರತ. ಉಪಾಖ್ಯಾನಗಳು ಸೇರಿದ ಗ್ರಂಥ ಮಹಾಭಾರತ.

'ನಾರಾಯಣಂ ನಮಸ್ಕೃತ್ಯ' ಎಂಬ ಶ್ಲೋಕವನ್ನು ರಚಿಸಿದ ಇತಿಹಾಸಕಾರನು ತಾನು ಉದೀರಿಸಿದ ಗ್ರಂಥವನ್ನು 'ಜಯ' ಎಂದು ಕರೆದನು. ಈ ಶಬ್ದ ಭಾರತಕ್ಕೆ ಅನ್ವಯಿಸತಕ್ಕದ್ದೇ ಮಹಾಭಾರತಕ್ಕೆ ಅನ್ವಯಿಸತಕ್ಕದ್ದೇ ಎನ್ನುವುದು ಒಂದು ಪ್ರಶ್ನೆ. ಭಾರತ ಕಥೆಯಲ್ಲಿ ಮುಂದೆ, ಕುಂತಿ ಕೃಷ್ಣನ ಮೂಲಕ ಯುಧಿಷ್ಠಿರನಿಗೆ ಕ್ಷತ್ರಿಯ ಧರ್ಮವನ್ನು ಪಾಲಿಸಬೇಕೆಂಬ ಸಂದೇಶವನ್ನು ಕಳುಹಿಸುವಲ್ಲಿ, ವಿದುಲಾ ಎಂಬ ತಾಯಿ ಸಂಜಯ ಎಂಬ ಮಗ ಇವರ ಉಪಾಖ್ಯಾನ ಬರುತ್ತದೆ. ವಿದುಲೋಪಾಖ್ಯಾನವನ್ನು ಅದರ ಕೊನೆಯಲ್ಲಿ 'ಜಯ' ಎಂದು ಕರೆದಿದೆ. 'ನಾರಾಯಣಂ ನಮಸ್ಕೃತ್ಯ' ಶ್ಲೋಕದ 'ಜಯ' ಎಂಬ ಹೆಸರಿಗೂ 'ಜಯ' ಎಂಬ ಹೆಸರಿನ ವಿದುಲಾ ಸಂಜಯರ ಉಪಾಖ್ಯಾನಕ್ಕೂ ಏನಾದರೂ ಸಂಬಂಧವುಂಟೆ ಎನ್ನುವುದು ವಿಚಾರಣೀಯ.

ಅನುಕ್ರಮಣಿಕಾ ಅಧ್ಯಾಯದಲ್ಲಿ ಅತ್ರೋಪನಿಷದಂ ಪುಣ್ಯಾಂ ಕೃಷ್ಣದ್ವೈಪಾಯನೋಽಬ್ರವೀತ್ ಎಂಬ ವಾಕ್ಯಬಂದಿದೆ. ಈ ಶ್ಲೋಕ ಭಾಗಕ್ಕೆ ಸಂಪ್ರದಾಯ, ಭಗವದ್ಗೀತಾ ಗ್ರಂಥವನ್ನು ಸೇರಿಸಿದನು, ಎಂದು ಅರ್ಥಹೇಳುತ್ತದೆ. ಮಹಾಭಾರತದಲ್ಲಿ ಭಗವದ್ಗೀತೆ ಈಗ ಇರುವ ಸ್ಥಳವನ್ನು ಪರಾಮರ್ಶೆಯಿಂದ ನೋಡಿದರೆ, ಸಂಪ್ರದಾಯ ಸಾಧುವಾದ

ದ್ದೆಂದೂ ಭಗವದ್ಗೀತೆ ಮೊದಲು ಭಾರತದಲ್ಲಿ ಆ ಸ್ಥಳದಲ್ಲಿ ಇದ್ದಿರಲಾರದು ಎಂದೂ ಕಾಣುತ್ತದೆ.

ಮೊದಲನೆಯ ಅಧ್ಯಾಯದಲ್ಲಿ ಉಗ್ರಶ್ರವ ಸೂತಪೌರಾಣಿಕನು ನೈಮಿಷಾರಣ್ಯಕ್ಕೆ ಬಂದು ಶೌನಕಮಹರ್ಷಿಯ ಸತ್ರದಲ್ಲಿ ನೆರೆದಿದ್ದ ಋಷಿಗಳಿಗೆ ಕತೆಹೇಳಲು ತೊಡಗಿದನು ಎಂದು ವರ್ಣಿಸಿರುವ ಸನ್ನಿವೇಶ ನಾಲ್ಕನೆಯ ಅಧ್ಯಾಯದಲ್ಲಿ ಪುನಃ ಉಕ್ತವಾಗಿದೆ ಎಂದು ಮೇಲೆ ಸೂಚಿಸಿದೆ. ಈ ಎರಡು ಉಗ್ರಶ್ರವ ವೃತ್ತಾಂತ ಎರಡು ಬೇರೆಯ ಪಾಠಗಳ ಮೊದಲು ಇದ್ದಿರಬೇಕು. ಈ ರೀತಿಯಲ್ಲಿ ಆರಂಭವಾದ ಎರಡು ಭಿನ್ನ ಪಾಠಗಳನ್ನು ಯಾರೊ ಒಟ್ಟುಗೂಡಿಸಿರಬೇಕೆಂದು ಹೇಳಬಹುದಾಗಿದೆ. ಈ ಎರಡು ಬೇರೆಯ ಪಾಠಗಳೊಂದಿಗೆ ಭಾರತವನ್ನು ಕುರಿತು ಪ್ರಚಲಿತವಾಗಿದ್ದ ಇತರ ಸಂಗತಿಗಳನ್ನೂ ಅವರು ಸೇರಿಸಿರಬೇಕು. ಎರಡನೆಯ ಸಲ ಬರುವ ಉಗ್ರಶ್ರವವೃತ್ತಾಂತ ಅಸಂಗತವಾಗಿ ಕಾಣಬಾರದೆಂಬ ಉದ್ದೇಶದಿಂದ, ಹೀಗೆ ಬಂದ ಉಗ್ರಶ್ರವನು ಮೊದಲ ಅಧ್ಯಾಯದಲ್ಲಿ ಆಡಿದ ಮಾತನ್ನು ಮುಂದರಿಸಿದನೆಂಬಂತೆ ವಾಕ್ಯವನ್ನು ಕೂಡಿಸಿದೆ: ಈ ಕೂಡಿಕೆ ಕೃತಕವೆಂದು ಮೇಲಿನ ನೋಟಕ್ಕೇ ಕಾಣುತ್ತದೆ. ಈ ಏರ್ಪಾಡು ಪ್ರಚಲಿತಕೃತಿಗಳನ್ನು ಒಟ್ಟುಗೂಡಿಸಿದವರು ಮಾಡಿದ್ದೇ ಇರಬೇಕು. ಹೀಗೆ ಗ್ರಹಿಸಿ ನೋಡಿದರೆ ಅನುಕ್ರಮಣಿಕಾ ಅಧ್ಯಾಯದಲ್ಲಿ, ಕಥೆಯನ್ನು ಬರಿಯ ಒಂದು ಇತಿಹಾಸವಾಗಿ ವರ್ಣಿಸುವುದು ಒಂದು, ವಾಸುದೇವನ ಮಾಹಾತ್ಮ್ಯವನ್ನು ಪ್ರಕಟಿಸುವ ಪುರಾಣವಾಗಿ ಎಣಿಸಿರುವುದು ಒಂದು, ಈ ರೀತಿ ಎರಡು ಮನೋಧರ್ಮ ಕಾಣುತ್ತದೆ.

ಅನುಕ್ರಮಣಿಕಾ ಅಧ್ಯಾಯದಲ್ಲಿ ಕಾಣುವ ಪಾಠಗಳ ಈ ಭೇದ ಮಹಾಭಾರತದಲ್ಲಿ ಉದ್ದಕ್ಕೂ ಕಾಣುತ್ತಿರುತ್ತದೆ. ಇತಿಹಾಸದೃಷ್ಟಿಯ ಕಥನದಲ್ಲಿ ಶ್ರೀಕೃಷ್ಣನು ಎಷ್ಟೇ ಮಹಾಪುರುಷನಾಗಿ ಆದರೂ ಮಾನವ ವ್ಯಕ್ತಿಯಾಗಿ ನಡೆದುಕೊಳ್ಳುತ್ತಾನೆ. ವಾಸುದೇವ ಪರವಾದ ಪಾಠದಲ್ಲಿ ಅವನು ಶ್ರಿಯಃಪತಿಯ ಅವತಾರ, ಅದ್ಭುತಗಳನ್ನು ಪ್ರಕಟಿಸಿದ ಮನುಜರೂಪಿ ಭಗವಂತ, ಆಗಿ ಕಾಣುತ್ತಾನೆ. ದ್ರೌಪದೀ ವಸ್ತ್ರಾಪಹರಣ

ಪ್ರಸಂಗದಲ್ಲಿ ಅಕ್ಷಯ ವಸ್ತ್ರವನ್ನು ಕೊಟ್ಟದ್ದು, ದುರ್ವಾಸನ ಆತಿಥ್ಯಕ್ಕೆ ಬರಿಯ ಪಾತ್ರೆಯಲ್ಲಿ ಅಕ್ಷಯ ಅನ್ನವನ್ನು ಕಂಡದ್ದು, ದುರ್ಯೋಧನನ ಸಭೆಯಲ್ಲಿಯೂ ಭಗವದ್ಗೀತೆಯ ಪ್ರಸಂಗದಲ್ಲಿಯೂ ವಿಶ್ವರೂಪವನ್ನು ಪ್ರಕಟಿಸಿದ್ದು, ಇವು ಭಾಗವತ ಸಂಪ್ರದಾಯದ ಕಥನ ವಿಶೇಷಗಳು. ಈ ಅದ್ಭುತಗಳಿಂದಲ್ಲದೆ ಇತರ ವಿವರಗಳಿಂದಲೂ ಕಥನಕಾರನು ಶ್ರೀ ಕೃಷ್ಣನ ಮಾಹಾತ್ಮ್ಯವನ್ನು ಸಿದ್ಧಾಂತಮಾಡಿದನು. ದುರ್ಯೋಧನ ನನ್ನು ಕೊಂದು ಬಂದ ಭೀಮನನ್ನು ಧೃತರಾಷ್ಟ್ರನು ಅಪ್ಪಿಕೊಳ್ಳುವುದಕ್ಕೆ ಹತ್ತಿರ ಕರೆದನಂತೆ. ಶ್ರೀ ಕೃಷ್ಣನು ಅವನ ಉದ್ದೇಶವನ್ನು ತಿಳಿದು ಅವನ ತೋಳಿಗೆ ಒಂದು ಲೋಹಕೃತ ಭೀಮವಿಗ್ರಹವನ್ನು ಕೊಟ್ಟನು. ಧೃತರಾಷ್ಟ್ರನು ಅದನ್ನು ಕಟ್ಟಿಕೊಂಡು ಪುಡಿಪುಡಿ ಮಾಡಿದನು. ಇದು ಇಂಥ ಆಖ್ಯಾನಗಳಲ್ಲಿ ಒಂದು. ಇಂಥ ವಿಷಯಗಳನ್ನು ಸೇರಿಸಿ ಭಾಗವತ ಸಂಪ್ರದಾಯ ಮಹಾಭಾರತವನ್ನು ಕೃಷ್ಣಪಾರಮ್ಯದ ಒಂದು ಕಥನ ವನ್ನಾಗಿ ಮಾಡಿತು.

ಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಮಾಡಿ ಮಹಾಭಾರತ ವನ್ನು ವಿಷ್ಣುಪಾರಮ್ಯದ ಒಂದು ಪುರಾಣವಾಗಿ ಮಾಡಿದ ಭಾಗವತ ರಿದ್ದಂತೆ, ಅವನು ಯಾವ ಮಹಿಮೆಯನ್ನು ಪ್ರಕಟಿಸಿದ್ದರೂ ಅವನು ಶಿವನಿಂದ ಶಕ್ತಿಯನ್ನು ಪಡೆಯಬೇಕಾಯಿತು, ಶಿವನೇ ಶ್ರೇಷ್ಠ ದೈವ, ಎಂದು ಹೇಳುವ ಬೇರೆ ಒಂದು ಪಂಥ ಇದ್ದು ಅದು ತನ್ನ ದೃಷ್ಟಿಯಿಂದ ಹಲಕೆಲವು ಕೃತಿಯನ್ನು ರಚಿಸಿ ಮಹಾಭಾರತದಲ್ಲಿ ಸೇರಿಸಿರುವುದೂ ಕಾಣುತ್ತದೆ. ಕೆಲವು ಕಡೆಯಲ್ಲಿ ಈ ಸೇರಿಕೆ ತೀರಾ ಕೃತಕವಾಗಿ ಕಾಣು ತ್ತದೆ. ಇದಕ್ಕೆ ಒಂದು ಉದಾಹರಣೆ ಅನುಶಾಸನಿಕ ಪರ್ವದ ಕೊನೆಯಲ್ಲಿ ಬರುವ ಉಮಾಮಹೇಶ್ವರ ಸಂವಾದ. ಪರ್ವದಲ್ಲಿ ಆ ಮೊದಲೆ ವಿವರ ವಾಗಿ ಉಕ್ತವಾಗಿರುವ ವಿಷಯವನ್ನು ಈ ಸಂವಾದ ಸಂಗ್ರಹವಾಗಿ ಕೊಟ್ಟಿದೆ. ಮೊದಲು ಪ್ರಶ್ನೆ ಮಾಡಿದವನು ಯುಧಿಷ್ಠಿರ, ಉಪದೇಶ ಮಾಡಿದವನು ಭೀಷ್ಮ; ಸಂವಾದದಲ್ಲಿ ಪ್ರಶ್ನೆಮಾಡುವುದು ಉಮಾದೇವಿ, ಉತ್ತರ ಹೇಳುವುದು ಮಹೇಶ್ವರ. ಉಮಾ ಎಂದರೆ, ಈ ಸಂವಾದದ ಲೇಖಕನ ಕಲ್ಪನೆ ಏನೆಂದಿದ್ದಿತೊ! ಆಕೆಯ ಪ್ರಶ್ನೆಗಳು ಸರ್ವಲೋಕ

ವಂಧ್ಯೆಯಾದ ಜಗನ್ಮಾತೆ ಕೇಳಬಹುದಾದ ಪ್ರಶ್ನೆಗಳಾಗಿಲ್ಲ. ಶಿವ ವಿಷ್ಣು ಗಳ ಮಧ್ಯೆ ಭೇದವನ್ನು ಕಂಡ ಶೈವ ವೈಷ್ಣವರು ತಮ್ಮ ತಮ್ಮ ದೇವರು ಹೆಚ್ಚೆಂದು ತೋರಿಸಲು ಪ್ರಯತ್ನವಾಡಿದ್ದು ನಮ್ಮ ಧರ್ಮದ ಇತಿಹಾಸ ದಲ್ಲಿ ಹಲವು ಸಲ ಕಾಣುತ್ತದೆ. ಮಹಾಭಾರತದ ಇಂಥ ಪ್ರಸಂಗಗಳು ಈ ಸ್ಪರ್ಧೆಯ ಬುದ್ಧಿಯಿಂದ ಇಲ್ಲಿಗೆ ಬಂದಿರಬೇಕೆಂದು ನಾವು ಊಹಿಸ ಬಹುದಾಗಿದೆ.

ಭಾರತದ ಇಪ್ಪತ್ತನಾಲ್ಕು ಸಾವಿರ ಗ್ರಂಥ ಒಂದು ಲಕ್ಷವಾಗಿ ಬೆಳೆಯುವುದಕ್ಕೆ ಇನ್ನೊಂದು ಕಾರಣವೂ ಇದ್ದಿತೆಂದು ತೋರುತ್ತದೆ. ಮೂಲ ಭಾರತ ಒಬ್ಬ ಕವಿಯ ಕೃತಿಯಾದರೂ ಅದನ್ನು ಕಥನಕಾರರು ಸಭೆಗಳ ಮುಂದೆ ಕುರಿತು ಕಥಿಸಿ ಕಾಲಾನುಕ್ರಮವಾಗಿ ಬೆಳಸಿದರು. ಈ ಕಥನಕಾರರು ಹಲವರು ಸೇರಿದಾಗ ಒಬ್ಬೊಬ್ಬನು ಒಬ್ಬೊಬ್ಬ ನಾಯಕನನ್ನು ಪ್ರಶಂಸಿಸಿ ಕಥೆ ಹೇಳುವುದು ವಾಡಿಕೆ ಇದ್ದಿರಬೇಕು. ಪೂರ್ವದಲ್ಲಿ ಸಮರಪ್ರೇಮಿಗಳಾದ ಜನಾಂಗಗಳಲ್ಲಿ ಇಂಥ ಪದ್ಧತಿ ಇದ್ದದು ಬೇರೆಯ ಕಡೆ ಕಾಣುತ್ತದೆ. ಹೂಣರಾಜ ಆ್ಯಟಿಲಾ ಸಭೆ ಯಲ್ಲಿ ಕುಳಿತಾಗ ಬೇರೆ ಬೇರೆ ಚಾರಣರು ಬೇರೆ ಬೇರೆ ನಾಯಕರ ಶೌರ್ಯಸಾಹಸಗಳನ್ನು ಉತ್ಕರ್ಷಿಸಿ ಕವನವಾಡಿ ಹಾಡುತ್ತಿದ್ದರಂತೆ. ಭರತವರ್ಷದಲ್ಲಿ ಈ ಪದ್ಧತಿ ಇದ್ದಿರಬೇಕೆನ್ನುವುದು ರಾಜಪುತ್ರಸ್ಥಾನದ ಚಾರಣ ಸಂಪ್ರದಾಯದಲ್ಲಿ ಕಾಣುತ್ತದೆ. ಸದ್ಯದ ಕಾಲದಲ್ಲಿ ಈ ಪದ್ಧತಿಯ ಒಂದು ರೂಪ ನಮ್ಮ ಯಕ್ಷಗಾನ ಹರಿಕಥೆಗಳಲ್ಲಿ ಕಾಣುತ್ತದೆ. ಒಬ್ಬ ಕಥನಕಾರನು ಇರುವಾಗ ರಾಮನನ್ನೊ ಕೃಷ್ಣನನ್ನೊ ಕುರಿತು ಒಂದು ಸಲ ಕಥೆ ಹೇಳುವನು. ದಕ್ಷರಾದ ಇಬ್ಬರು ಕಥನಕಾರರು ಸೇರಿದರೆ ರಾಮ ಹೆಚ್ಚು ಎಂದು ಒಬ್ಬನು, ಕೃಷ್ಣ ಹೆಚ್ಚು ಎಂದು ಒಬ್ಬನು, ವಾದಿಸಿ ಇಬ್ಬರು ನಾಯಕರನ್ನೂ ಹೊಗಳಿ ಕೊನೆಗೆ, ಇವರು ಇಬ್ಬರಲ್ಲ, ಒಬ್ಬನೇ, ಎಂದು ಸಮರಸ ಮಾಡಿ ಮುಗಿಸುತ್ತಾರೆ. ಭಾರತದ ಕಥೆಯಲ್ಲಿ ಈ ರೀತಿ ಯಲ್ಲಿ ಭೀಮನನ್ನು ಹಿರಿಯನಾಗಿ ಮಾಡುವ ಭಾಗ ಕೆಲವು, ಅರ್ಜುನ ನನ್ನು ಹಿರಿಯನಾಗಿ ಮಾಡುವ ಭಾಗ ಕೆಲವು, ಸಿಕ್ಕುತ್ತವೆ. ಯುಧಿಷ್ಠಿರ ನಂತೂ ಕಡೆ ಈಗಿರುವ ಸ್ಥಿತಿಯಲ್ಲಿ ಮುಖ್ಯ ನಾಯಕನೇ. ಅವನನು.

ಹಿರಿಯನನ್ನಾಗಿ ತೋರಿಸುವ ಭಾಗ ಕೆಲವು ಬೆಳೆದಿರುವುದು ಸಹಜವೇ ಆಗಿದೆ.

ಹೀಗೆ ಎರಡು ಬೇರೆ ಬೇರೆಯ ಪಾಠಗಳನ್ನು ಜೋಡಿಸಿ ಹೆಣೆದದ್ದು, ಅದ್ಭುತಗಳ ಕಥೆಯನ್ನು ಬೆಳೆಸಿದ್ದು, ಉಪಾಖ್ಯಾನಗಳನ್ನು ಸೇರಿಸಿದ್ದು, ಗೀತ ಅನುಗೀತ ಉಮಾಮಹೇಶ್ವರ ಸಂವಾದ ಮುಂತಾದುವನ್ನು ಒಳಗೂಡಿಸಿದ್ದು, ಒಟ್ಟು ಸೇರಿ ಮಹಾಭಾರತ ಗ್ರಂಥ ಆಯಿತು. ಗ್ರಂಥ ಎಂದೋಹಿಂದೆ ಒಂದುಎಂದು ಏರ್ಪಟ್ಟ ಕಾಲಕ್ಕೆ ಇವೆಲ್ಲ ವಿನ್ಯಾಸ ನಡೆದು ಮುಗಿದಿತ್ತು. ಈ ಗ್ರಂಥ ದೇಶದಲ್ಲಿ ಹರಡಿದಾಗ ಆಯಾ ದೇಶದಲ್ಲಿ ಹಲಕೆಲವು ಮಾರ್ಪಾಡಿಗೆ ಒಳಗಾಯಿತು. ಈಗ ನಮಗೆ ದೊರೆಯುವ ಕೃತಿಗಳಲ್ಲಿ ಸ್ಪಷ್ಟವಾದ ಎರಡು ರೀತಿಯ ಪಾಠ ಸಿಕ್ಕುತ್ತವೆ. ಒಂದು ಉತ್ತರ ದೇಶದ್ದು, ಒಂದು ದಕ್ಷಿಣ ದೇಶದ್ದು. ಉತ್ತರ ದಕ್ಷಿಣ ದೇಶಗಳ ಪಾಠ ಒಂದರಿಂದೊಂದು ಯಾವ ವಿವರದಲ್ಲಿ ಬೇರೆಯಾಗಿವೆ ಎನ್ನುವುದು ಇತ್ತೀಚೆಗೆ ಭಂಡಾರ್ಕರ್ ಪ್ರಾಚ್ಯಸಂಶೋಧನ ಸಂಸ್ಥೆಯ ಭಾರತ ಗ್ರಂಥ ಹೊರಬೀಳುವವರೆಗೆ ಸ್ಪಷ್ಟವಾಗಿರಲಿಲ್ಲ. ಈ ವೇಳೆಗೆ ಆ ಸಂಸ್ಥೆ ಆರು ಪರ್ವಗಳನ್ನು ಸಂಶೋಧಿಸಿ ಪರಿಷ್ಕರಿಸಿ ಮುದ್ರಿಸಿದೆ. ಇದರಿಂದ ಉತ್ತರ ದಕ್ಷಿಣ ಪಾಠಗಳ ಭೇದವೇನೆನ್ನುವುದು ತಕ್ಕಷ್ಟು ವಿವರವಾಗಿ ತಿಳಿಯುವಂತಿದೆ. ಒಂದು ಕಾಲಕ್ಕೆ ನಮ್ಮ ಜನರಿಗೆ ಸಂಸ್ಕೃತ ಶ್ಲೋಕರಚನೆ ಬಹುಸುಲಭವಾಗಿದ್ದಿತು. ಪೂರ್ವದ ಕೃತಿ ಸಾಕಾದಷ್ಟನ್ನು ಬಾಯಿಪಾಠ ಮಾಡುತ್ತಿದ್ದುದರಿಂದ ಅನುಷ್ಟುಪ್ ಶ್ಲೋಕದ ರಚನೆಗೆ ಬೇಕಾದ ಶಬ್ದ ಸಂಗ್ರಹ ಎಲ್ಲ ಪಂಡಿತರಿಗೂ ಇರುತ್ತಿತ್ತು. ಪದ್ಯರಚನೆಯ ಪ್ರವೃತ್ತಿಯುಳ್ಳ ಇಂಥ ಜನ, ಇಟ್ಟಿಗೆಗಳನ್ನಿಟ್ಟು ಗೋಡೆ ಕಟ್ಟುವಂತೆ, ಈ ಶಬ್ದ ಸಂಯೋಗಗಳನ್ನು ಬಳಸಿ ಕ್ಲೇಶವಿಲ್ಲದೆ ಪದ್ಯಗಳನ್ನು ಕಟ್ಟುತ್ತಿದ್ದರು. ಒಂದು ಸಂದರ್ಭದಲ್ಲಿ ನಾಲ್ಕು ವರ್ಣನೆಯ ಶ್ಲೋಕಗಳನ್ನು, ಮತ್ತೊಂದು ಸಂದರ್ಭದಲ್ಲಿ ನಾಲ್ಕು ವಿವರಣೆಯ ಶ್ಲೋಕಗಳನ್ನು, ಸೇರಿಸುವುದು ಇವರಿಗೆ ಸುಲಭವಾದಷ್ಟೇ ವಾಡಿಕೆಯೂ ಆಗಿರಬೇಕು. ಇನ್ನು ಕೆಲವು ಸಂದರ್ಭದಲ್ಲಿ ಸದಾಚಾರ ಪಕ್ಷಪಾತಿಗಳಾದ ಪಂಡಿತರು ಪೂರ್ವ ಗ್ರಂಥದಲ್ಲಿ ಬಿಟ್ಟುಹೋದುದೆಂದು ಕಂಡ ಭಾಗವನ್ನು

ಸೇರಿಸಿ ಹಿರಿಯರ ಮರ್ಯಾದೆಯನ್ನು ಉಳಿಸಿದೆವು ಎಂದು ಯೋಚಿಸಿದಂತೆ ಕಾಣುತ್ತದೆ. ಪರಾಶರ ಮಹರ್ಷಿ ಮತ್ಸ್ಯಗಂಧಿಯನ್ನು ಸೇರುವ ಮೊದಲು ಒಂದು ಮದುವೆ ನಡೆವಂತೆ ದಾಕ್ಷಿಣಾತ್ಯ ಪಾಠವಲ್ಲಿ ಉಕ್ತವಾಗಿದೆ. ಹೀಗೆಯೆ ಯಯಾತಿ ಶರ್ಮಿಷ್ಠೆಯರಿಗೆ, ದುಷ್ಯಂತ ಶಕುಂತಲೆಯರಿಗೆ, ದಕ್ಷಿಣದ ಪಾಠದಲ್ಲಿ ಮದುವೆಯಾಗುತ್ತದೆ; ಉತ್ತರದ ಪಾಠವಲ್ಲಿ ಆಗುವುದಿಲ್ಲ. ದಕ್ಷಿಣದ ಪಾಠದಲ್ಲಿ ಹೀಗೆ ಕೆಲವು ಭಾಗ ಸೇರಿರುವಂತೆ ಉತ್ತರದ ಪಾಠದಲ್ಲೂ ಕೆಲವು ಭಾಗ ಸೇರಿದೆ. ವ್ಯಾಸನು ರಚಿಸಿದ ಭಾರತವನ್ನು ಗಣೇಶನು ಬಂದು ಬರೆದುಕೊಂಡನೆಂದು ಬರುವ ಆಖ್ಯಾನ ಒಂದು ಪಾಠದಲ್ಲಿದ್ದು ಇನ್ನೊಂದು ಪಾಠದಲ್ಲಿ ಇಲ್ಲ. ರಾಮಾಯಣದಲ್ಲಿ ಬರುವಂತೆ ಇಲ್ಲಿ ಕೂಡ ಬ್ರಹ್ಮನು ಬರುತ್ತಾನೆ. ಆದರೆ ಇಲ್ಲಿ ಬ್ರಹ್ಮನು ಬರುವ ಭಾಗವನ್ನು ಓದಿದರೆ, ರಾಮಾಯಣವನ್ನು ಬರೆಯಿಸುವುದಕ್ಕೆ ಬ್ರಹ್ಮನು ಬಂದಿದ್ದು ಭಾರತಕ್ಕೆ ಅವನಿಲ್ಲದಿದ್ದರೆ ಚೆನ್ನವಲ್ಲ, ಎಂದು ಅವನನ್ನು ಇಳಿಸಿ ತಂದಂತೆ ತೋರುತ್ತದೆ. ದಕ್ಷಿಣ ಉತ್ತರ ಪಾಠಗಳ ವ್ಯತ್ಯಾಸವನ್ನು ಕುರಿತು ಹೆಚ್ಚು ವಿಸ್ತಾರ ಇಲ್ಲಿ ಅಪ್ರಕೃತ. ಒಂದು ಪಾಠದಲ್ಲಿ ಇದ್ದು ಇನ್ನೊಂದು ಪಾಠದಲ್ಲಿ ಇರದಂಥ ಇಂಥ ಸಣ್ಣ ವಿವರಗಳನ್ನು ನಾವು ಸಾವಿರ ಎರಡು ಸಾವಿರ ವರ್ಷದ ಈಚೆಗೆ ಪ್ರಾಂತಗಳ ಕಥನಕಾರರು ಸೇರಿಸಿದ ಸಂಗತಿಗಳು ಎಂದು ಗ್ರಹಿಸಬೇಕು ಎನ್ನುವುದಷ್ಟೆ ಮುಖ್ಯ.

ಮಹಾಭಾರತದ ಸಾರವನ್ನು ನಾವು ಗ್ರಹಿಸಬೇಕಾದರೆ ಇಂಥ ಭಾಗಗಳನ್ನು ಒತ್ತಟ್ಟಿಗಿಟ್ಟು, ಆ ಹಿಂದೆ ರೂಪುಗೊಂಡ ಮಹಾಭಾರತದಲ್ಲಿ ಕೂಡ ಸ್ಪಷ್ಟವಾಗಿ ಯಾವುದೋ ಒಂದು ಕೃತಕವಾದ ಉದ್ದೇಶದಿಂದ ಯಾರೋ ಸೇರಿಸಿದವು ಎಂದು ಕಾಣುವ ಉಪಾಖ್ಯಾನ ಮತ್ತು ಕೃತಿಗಳನ್ನು ಗೌಣವೆಂದು ಗಣಿಸಿ, ಉಳಿದ ಭಾಗವನ್ನು ಮುಖ್ಯವಾಗಿ ಗಮನಿಸಬೇಕು. ಈ ಉಪಾಖ್ಯಾನಗಳನ್ನೂ ಇತರ ಕೃತಿಗಳನ್ನೂ ಸಂಪೂರ್ಣವಾಗಿ ಬಿಡಬೇಕಾದುದಿಲ್ಲ. ನಿಜದಲ್ಲಿ, ಭಾರತದ ಮೂಲ ಇಷ್ಟೆ ಎಂದು ಅದರಿಂದ ಇಪ್ಪತ್ತನಾಲ್ಕು ಸಾವಿರ ಶ್ಲೋಕವನ್ನು ತೆಗೆದು ಹೊರಗಿಟ್ಟು ತೋರಿಸುವಂತಿಲ್ಲ. ಆದರೆ ಆ ಇಪ್ಪತ್ತನಾಲ್ಕು ಸಾವಿರದಲ್ಲಿ

ಹನ್ನೆರಡು, ಹದಿನಾರು, ಹದಿನೆಂಟು ಸಾವಿರ ಇವು ಎಂದು ಎಲ್ಲಕಡೆಯೂ ಪ್ರಚಾರದಲ್ಲಿರುವ ಶ್ಲೋಕಗಳನ್ನು ಗ್ರಹಿಸಬಹುದು. ಈ ಹನ್ನೆರಡು, ಹದಿನಾರು ಅಥವಾ ಹದಿನೆಂಟು ಸಾವಿರದ ಶ್ಲೋಕಗಳ ಜಾಡನ್ನು ಹಿಡಿದು, ಅವುಗಳೊಡನೆ ಸೇರಿ ಅವುಗಳಂತೆಯೆ ಎಲ್ಲ ಕಡೆಯಲ್ಲೂ ಪ್ರಚಾರದಲ್ಲಿರುವ ಉಪಾಖ್ಯಾನಗಳಲ್ಲಿ, ಇತರ ಕೃತಿಗಳಲ್ಲಿ, ಅವಕ್ಕೆ ಅವಿರುದ್ಧವಾಗಿ ಬೆಳೆದಿರುವ ಭಾಗವನ್ನು ತೆಗೆದುಕೊಂಡರೆ, ನಮಗೆ ಮೊದಲ ಮಹಾಭಾರತದ ನೆಲೆ ಸಿಕ್ಕೀತು.

ಭಾರತ ಗ್ರಂಥ ಉಪರಿಚರ ವಸುವಿನ ಕಥೆಯಿಂದ ಆರಂಭವಾಗುವುದಾದರೆ ಅದರಲ್ಲಿ ಭರತ ವಂಶದ ಹಿರಿಯರೆಂದು ಹೆಸರಾದ ಪುರು ಮತ್ತು ಭರತ ಇವರ ಮಹಿಮೆಯನ್ನು ತೋರಿಸುವ ಯಯಾತಿ ಚರಿತ್ರವೂ ಶಕುಂತಲೋಪಾಖ್ಯಾನವೂ ಸೇರಿ ನಿಲ್ಲುತ್ತವೆ. ಯಯಾತಿ ಬಹುಕಾಲ ರಾಜಸಂಪದವನ್ನು ಅನುಭವಿಸಿ ಸಂಸಾರ ಸುಖದ ರುಚಿಯನ್ನು ನೋಡಿದನು. ಆದರೂ ಇವನಿಗೆ ತೃಪ್ತಿಯಾಗಲಿಲ್ಲ. ತನ್ನ ಮುಪ್ಪನ್ನು ಯಾವನಾದರೂ ತರುಣ ತೆಗೆದುಕೊಂಡರೆ ಅವನ ತಾರುಣ್ಯವನ್ನು ಇವನು ಪಡೆಯಬಹುದು ಎಂದು ಇವನಿಗೆ ತಿಳಿಯಿತು. ಮುಪ್ಪನ್ನು ತೆಗೆದುಕೊಳ್ಳುವುದಕ್ಕೆ ಉಳಿದ ಯಾರೂ ಒಪ್ಪಲಿಲ್ಲ; ಮಕ್ಕಳಲ್ಲಿ ಒಬ್ಬನಾದ ಪುರು ಮಾತ್ರ ಒಪ್ಪಿದನು. ಆ ಪುರುವೇ ಕುರುವಂಶದ ಮೂಲಪುರುಷನು. ಶಕುಂತಲೆಯ ಕಥೆ ಕಾಳಿದಾಸನ ನಾಟಕದಿಂದ ಲೋಕವಿದಿತವಾಗಿದೆ. ದುಷ್ಯಂತನು ಹಸ್ತಿನಾವತಿಯ ರಾಜ. ಒಂದು ದಿನ ಬೇಟೆಯಲ್ಲಿ ವನಸಂಚಾರ ಮಾಡುತ್ತಿರುವವೇಳೆ ಅವನು ಮಾಲಿನೀ ತೀರದ ಕಣ್ವಾಶ್ರಮವನ್ನು ಹೊಕ್ಕು ಅಲ್ಲಿ ಒಬ್ಬಳೇ ಇದ್ದ ಶಕುಂತಲೆಯನ್ನು ಕಂಡನು. ಅವಳು ಕಣ್ವನ ಸಾಕು ಮಗಳು, ಬಹುರೂಪವತಿ. ಅರಸನು ಅವಳ ಸಹವಾಸವನ್ನು ಬೇಡಿದನು. ಅವಳು ತನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನಿಗೆ ಪಟ್ಟಕಟ್ಟುವುದಾದರೆ ಅವನನ್ನು ಸೇರುವುದಾಗಿ ಹೇಳಿದಳು. ರಾಜನು ಒಪ್ಪಿದನು, ಅವಳನ್ನು ಕೂಡಿದನು; ಊರಿಗೆ ಹೋಗಿ ಅವಳನ್ನು ಕರಸಿಕೊಳ್ಳುವುದಾಗಿ ಮಾತುಕೊಟ್ಟು ಹಿಂದಿರುಗಿದನು; ಕೊಟ್ಟಮಾತನ್ನು ನಡೆಸಲಿಲ್ಲ. ಶಕುಂತಲೆ ಒಬ್ಬ ಮಗನನ್ನು ಹೆತ್ತಳು. ಅವನು ಬೆಳೆದು

ಹುಡುಗನಾಗಲು ಕಣ್ವರು ಅವಳನ್ನು ಮಗನೊಡನೆ ದೊರೆಯ ಬಳಿಗೆ ಕಳುಹಿದರು. ಮಗನೊಂದಿಗೆ ಬಂದ ಶಕುಂತಲೆಯನ್ನು ದೊರೆ ಒಪ್ಪಿ ಕೊಳ್ಳಲಿಲ್ಲ: ಲೋಕಾಪವಾದಕ್ಕೆ ಹೆದರಿ ಅವಳನ್ನು ನಿರಾಕರಿಸಿದನು; ತಾನು ಅವಳನ್ನು ಕೂಡಿದ ನೆನವು ಇಲ್ಲ ಎಂದನು. ಶಕುಂತಲೆ ಅವನಿಗೆ ತಿಳಿವಳಿಕೆ ಕೊಡಲು ಯತ್ನಿಸಿದಳು: ಆ ಯತ್ನ ವಿಫಲವಾಯಿತು. ಅವಳು ಬೇಸರದಿಂದ ಹಿಂದಿರುಗುವುದರಲ್ಲಿದ್ದಳು: ಆಗ ಅಶರೀರವಾಣಿ, "ಶಕುಂತಲೆಯ ಮಾತು ಸತ್ಯ, ಈ ಮಗ ನಿನ್ನವನು. ಇವರಿಬ್ಬರನ್ನೂ ಸ್ವೀಕರಿಸು," ಎಂದು ಹೇಳಿತು. ದೊರೆ ಅವಳನ್ನು ಒಪ್ಪಿಕೊಂಡನು, ಮಗನೊಂದಿಗೆ ಅರಮನೆಗೆ ಕರೆದುಕೊಂಡನು. ಆ ಮಗನೇ ಭರತ. ಇವನೂ ಈ ವಂಶದ ಮಹಾಪುರುಷರಲ್ಲಿ ಒಬ್ಬನು; ಇವನಿಂದಲೇ ವಂಶ ಭರತವಂಶವೆಂದು ಹೆಸರು ಪಡೆಯಿತು; ಅವನ ದೇಶವಾದದರಿಂದಲೆ ಈ ದೇಶಕ್ಕೆ ಭರತವರ್ಷ ಎಂಬ ಹೆಸರು ಬಂದಿತು. ಇವನ ವಂಶದಲ್ಲಿ ಶಂತನು, ಭೀಷ್ಮ, ಚಿತ್ರಾಂಗದ ವಿಚಿತ್ರವೀರ್ಯ, ಧೃತರಾಷ್ಟ್ರ ಪಾಂಡು, ದುರ್ಯೋಧನ ಯುಧಿಷ್ಠಿರಾದಿಗಳು, ಪರೀಕ್ಷಿತ್ ಜನಮೇಜಯರು ಹುಟ್ಟಿ ದರು. ಭರತವಂಶ ಪ್ರಸೂತರಾದ ಕಾರಣ ದುರ್ಯೋಧನ ಯುಧಿಷ್ಠಿ ರಾದಿಗಳು ಭಾರತರು ಎನಿಸಿಕೊಂಡರು: ಅವರ ಚರಿತ್ರೆಗೆ ಭಾರತ ಎಂದು ಹೆಸರಾಯಿತು.

೩

## ಭಾರತದ ಕಥೆ

ಈ ಆಖ್ಯಾನಗಳ ನಂತರ ವಂಶದ ಅರಸರ ಪಟ್ಟಿಯೊಂದು ಬಂದು ಅದರಾಚೆಗೆ ಮಹಾಭಿಷಕ್ ಎಂಬ ರಾಯನ ಚರಿತ್ರೆ ತೀರಾ ತೊಳೆಬಿಡಿಸಿ ಕೊಂಡು ಒಂದು ಚರಿತೆಯ ಆರಂಭ ಎಂಬ ಧೋರಣೆಯಲ್ಲಿ ಮೊದಲಾಗು ತ್ತದೆ.

**ವೈಶಂಪಾಯನ ಉವಾಚ:**

**ಇಕ್ಷ್ವಾಕುವಂಶ ಪ್ರಭವೋ ರಾಜಾಸೀತ್ ಪೃಥಿವೀಪತಿಃ**
**ಮಹಾಭಿಷಕ್ ಇತಿಖ್ಯಾತಃ ಸತ್ಯವಾಕ್ ಸತ್ಯವಿಕ್ರಮಃ.**

ಹಿಂದಿನ ಅಧ್ಯಾಯದ ಸಂತತಿ ಕಥನವಲ್ಲಿ ಪ್ರತೀಪ ಎಂಬ ಅರಸನ ಹೆಸರು ಬಂದಿದೆ. ಆ ಪ್ರತೀಪನ ಮಗ ಶಂತನು. ಮಹಾಭಿಷಕ್‌ರಾಯನು ಇಂದ್ರಲೋಕದಲ್ಲಿ ಇರುತ್ತ ಒಂದು ದಿನ ಸಭೆಯಲ್ಲಿ ಕುಳಿತಿದ್ದು ಗಂಗೆ ಅಲ್ಲಿಗೆಬಂದಾಗ ಅವಳನ್ನು ನಿಸ್ಸಂಕೋಚವಾಗಿ ಕಾಮಿಸಿ ನೋಡಿದನು; ಈ ಅಸಭ್ಯವರ್ತನಕ್ಕಾಗಿ ಬ್ರಹ್ಮನಿಂದ ಶಾಪ ಪಡೆದು ಭೂಮಿಗೆ ಹಿಂತಿರುಗಿದನು. ಗಂಗೆಯೂ ಇವನನ್ನು ಆಸಕ್ತಿಯಿಂದ ನೋಡಿದ್ದಳು; ಅವಳಿಗೂ ಶಾಪ ಬಂದಿತು. 'ಭೂಮಿಯಲ್ಲಿ ಹುಟ್ಟಿ ಮಹಾಭಿಷಕನೊಂದಿಗೆ ಸಂಸಾರಮಾಡು' ಎನ್ನುವುದು ಶಾಪ. ಮಹಾಭಿಷಕ್ಕೇ ಶಂತನು. ಗಂಗೆ ಇವನನ್ನು ಮದುವೆಯಾದಳು. ಮದುವೆಯಾಗುವ ವೇಳೆ ಒಂದು ಸಮಯವನ್ನು ಮಾಡಿಕೊಂಡಳು. ತಾನು ಏನೇ ಮಾಡಿದರೂ ದೊರೆ ತನಗೆ ಅಡ್ಡಿ ಹೇಳಕೂಡದು; ಹಾಗೆ ಹೇಳಿದರೆ ತಾನು ಅವನನ್ನು ತೊರೆದು ಹೋಗುವವಳು: ಇದು ಅವಳ ಶಾಪವಿಮೋಚನೆಗೆ ದಾರಿ. ಅವಳು ಭೂಮಿಗೆ ಬರುತ್ತ ಬೇರೆ ಕಾರಣದಿಂದ ಶಾಪಪಡೆದಿದ್ದ ಅಷ್ಟವಸುಗಳನ್ನು ಕಂಡಳು. ಅವರೂ ಭೂಮಿಯಲ್ಲಿ ಅವತರಿಸಬೇಕಾಗಿದ್ದಿತು; ಆ ಅವತಾರ ಎಷ್ಟು ಬೇಗನೆ ಮುಗಿದರೆ ಅಷ್ಟು ಒಳ್ಳೆಯದು; ಅವರು ಗಂಗೆಯನ್ನು ತಮಗೆ ತಾಯಾಗಬೇಕೆಂದೂ ಹುಟ್ಟಿದೊಡನೆ ತಮ್ಮನ್ನು ಕೊಂದುಬಿಡಬೇಕೆಂದೂ ಬೇಡಿಕೊಂಡರು. ಅವಳು ಒಪ್ಪಿದಳು. ಶಂತನುವಿನ ರಾಣಿಯಾಗಿ ಏಳು ಮಕ್ಕಳನ್ನು ಹೆತ್ತು ಏಳನ್ನೂ ನೀರುಪಾಲು ಮಾಡಿದಳು. ಶಂತನುವಿಗೆ ಈ ಕೊಲೆ ಇಷ್ಟ ಅಲ್ಲ. ಆದರೆ, ಬೇಡವೆಂದು ತಡೆದರೆ ಇವಳು ಹೊರಟುಹೋಗುವಳಲ್ಲ ಎಂದು, ಅವನು ಇದನ್ನು ಸಹಿಸಿಕೊಂಡನು. ಎಂಟನೆಯ ಮಗ ಹುಟ್ಟಿ ಅವನ್ನೂ ಇವಳು ಕೊಲೆಮಾಡಲು ಯತ್ನಿಸಿದಾಗ ತಾಳಲಾರದೆ ಇದು ಬೇಡ ಎಂದು ತಡೆದನು. ಗಂಗೆ ಆ ಮಗುವನ್ನು ಉಳಿಸಿ ತಾನು ದೊರೆಯನ್ನು ತೊರೆದು ತನ್ನ ದಾರಿಯನ್ನು ಹಿಡಿದಳು. ಈ ಮಗ ದೇವವ್ರತ; ಆಮೇಲೆ ಭೀಷ್ಮ ಎಂದು ಹೆಸರಾದವನು. ದೊರೆ ದೇವವ್ರತನಿಗೆ ಯುವರಾಜ ಪಟ್ಟವನ್ನು ಕಟ್ಟಿದನು.

ಶಂತನು ಒಂದು ಸಲ ಬೇಟೆಗೆ ಹೋಗಿ ದಾಶರಾಜನೊಬ್ಬನ ಮಗಳನ್ನು ಕಂಡು ಮೋಹಿಸಿ ಅವಳನ್ನು ತನ್ನ ರಾಣಿಯಾಗೆಂವನು.

ಅವಳು ತನ್ನ ತಂದೆಯನ್ನು ಕೇಳಿ ತನ್ನನ್ನು ಪಡೆಯಬಹುದೆಂದಳು. ಶಂತನು ಅವಳ ತಂದೆಯನ್ನು ಕೇಳಿದನು. ಅವನು ತನ್ನ ಮಗಳಲ್ಲಿ ಹುಟ್ಟುವ ಮಗನಿಗೆ ರಾಜ್ಯ ಕೊಡುವುದಾದರೆ ದೊರೆ ಅವಶ್ಯವಾಗಿ ಅವಳನ್ನು ಮದುವೆಯಾಗಬಹುದು ಎಂದನು. ಹಿರಿಯ ಮಗನನ್ನು ಬಿಟ್ಟು ಆಮೇಲೆ ಹುಟ್ಟಬಹುದಾದ ಮಗನಿಗೆ ರಾಜ್ಯ ಕೊಡಲು ಶಂತನು ಒಪ್ಪಲಾರದೆ ಆ ಹೆಣ್ಣಿನ ಆಸೆಯನ್ನು ಬಿಟ್ಟುಬಂದನು. ಆದರೂ ಇವನಿಗೆ ಅವಳನ್ನು ಕುರಿತ ಬಯಕೆಯಿಂದ ಜೀವನ ಅರುಚಿಯಾಯಿತು. ತಂದೆ ಯಾವುದೊ ಚಿಂತೆಗೆ ಸಿಕ್ಕಿ ಕೃಶವಾಗುತ್ತಿರುವುದನ್ನು ಕಂಡು ದೇವವ್ರತನು ದೊರೆಯನ್ನು ಕಾರಣ ಏನೆಂದು ಕೇಳಿದನು. ಶಂತನು "ನೀನು ಒಬ್ಬನೆ ಮಗ ಆಗಿರುವ ಕಾರಣ ವಂಶ ಮುಂದರಿಯುವ ವಿಷಯಕ್ಕೆ ಶಂಕಿತನಾಗಿದ್ದೇನೆ" ಎಂದು ಮನಸ್ಸನ್ನು ಅರೆಮರಸಿ ನುಡಿದನು. ದೇವವ್ರತನು ಇದರ ಅಭಿಪ್ರಾಯವನ್ನು ತಿಳಿಯಲೋಸುಗ ದೊರೆಯೊಡನೆ ಬೇಟೆಗೆಹೋಗಿದ್ದ ಜನರನ್ನು ವಿಚಾರಿಸಿ ತಂದೆ ದಾಶರಾಜನ ಕುಮಾರಿ ಯಲ್ಲಿ ಅನುರಕ್ತನಾಗಿರುವುದನ್ನು ತಿಳಿದನು. ಈ ಪರಿಸ್ಥಿತಿಯಲ್ಲಿ ಹೇಗೆ ನಡೆಯಬೇಕೆನ್ನುವ ವಿಷಯದಲ್ಲಿ ಅವನಿಗೆ ಕ್ಷಣಕೂಡ ಸಂದೇಹಬರಲಿಲ್ಲ. ಅವನು ಕೆಲವೇ ಜನರೊಂದಿಗೆ ದಾಶರಾಜನ ಬಳಿಗೆ ಹೋದನು; ಅವನ ಮಗಳನ್ನು ತನ್ನ ತಂದೆಗೆ ಪತ್ನಿಯಾಗಿರಲು ಕೊಡಬೇಕೆಂದು ಬೇಡಿದನು. ಅವನು ಶಂತನುವಿಗೆ ಹೇಳಿದ ಮಾತನ್ನೇ ಇವನಿಗೂ ಹೇಳಲು ಈ ಮಗನು. "ನನಗೆ ರಾಜ್ಯ ಬೇಡ. ನಿನ್ನ ಮಗಳು ಪಡೆಯುವ ಮಗನಿಗೆ ಪಟ್ಟ ಕಟ್ಟುವೆನು," ಎಂದನು. "ನಿನ್ನ ಮಾತೇನೊ ಆಯಿತು. ನಿನ್ನ ಅನಂತರ ನಿನ್ನ ಮಕ್ಕಳು ರಾಜ್ಯಕ್ಕಾಗಿ ವಿವಾದಮಾಡಬಹುದಲ್ಲ," ಎಂದು ದಾಶರಾಜನು ಶಂಕೆತೋರಿದನು. ದೇವವ್ರತನು, "ಒಳ್ಳೆಯದು, ನಾನು ಮಕ್ಕಳನ್ನು ಪಡೆಯುವುದಿಲ್ಲ. ಸಾಯುವವರೆಗೆ ಬ್ರಹ್ಮಚರ್ಯ ವ್ರತದಲ್ಲಿ ನಡೆಯುತ್ತೇನೆ," ಎಂದನು. ಈ ಪ್ರತಿಜ್ಞೆಯನ್ನು ಒಪ್ಪಿ ದಾಶರಾಜನು ಮಗಳನ್ನು ಶಂತನುವಿಗೆ ಕೊಟ್ಟನು.

ಶಂತನುವಿಗೆ ಈ ಪತ್ನಿ ಸತ್ಯವತಿಯಲ್ಲಿ ಚಿತ್ರಾಂಗದ, ವಿಚಿತ್ರವೀರ್ಯ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಶಂತನು ತೀರಿಕೊಂಡನು.

ಭೀಷ್ಮನು ಚಿತ್ರಾಂಗದನಿಗೆ ಪಟ್ಟ ಕಟ್ಟಿದನು. ಅವನು ಒಂದು ಸಲ ಗಂಧರ್ವರೊಡನೆ ಯುದ್ಧಕ್ಕೆ ಹೋಗಿ ಹತನಾದನು. ಭೀಷ್ಮನು ತಾಯ ಅಪ್ಪಣೆಯನ್ನು ಪಡೆದು ವಿಚಿತ್ರವೀರ್ಯನಿಗೆ ಪಟ್ಟ ಕಟ್ಟಿದನು. ಅವನಿಗೆ ಮದುವೆಮಾಡಲು ಯೋಚಿಸಿ, ಕಾಶೀರಾಜನ ಮೂವರು ಹೆಣ್ಣುಮಕ್ಕಳ ಸ್ವಯಂವರ ವಾರ್ತೆಯನ್ನು ಕೇಳಿ ವಾರಣಾಸಿಗೆ ಹೋಗಿ, ಬಂದಿದ್ದ ಎಲ್ಲ ಅರಸರ ಕೈಯಿಂದ ತಪ್ಪಿಸಿ ಅವರನ್ನು ಕರೆದು ತಂದನು. ವಿಚಿತ್ರ ವೀರ್ಯನು ಎರಡನೆಯ ಮತ್ತು ಮೂರನೆಯ ತರುಣಿಯರನ್ನು ಮದುವೆ ಯಾದನು. ಹಿರಿಯವಳಾದ ಅಂಬೆ ತಾನು ಸಾಲ್ವನಲ್ಲಿ ಅನುರಕ್ತಳಾಗಿರು ವುದಾಗಿ ಹೇಳಿದ್ದರಿಂದ ಅವಳನ್ನು ಇವರು ಸಾಲ್ವನ ಬಳಿಗೆ ಕಳುಹಿಸಿದರು. ಬೇರೆಯೊಬ್ಬನು ತನ್ನನ್ನು ಸೋಲಿಸಿ ಅವಳನ್ನು ಗೆದ್ದು ಕರೆದುಕೊಂಡು ಹೋದ ಮೇಲೆ ತಾನು ಅವಳನ್ನು ಮದುವೆ ಆಗಲಾರೆನೆಂದು ಸಾಲ್ವನು ನಿರಾಕರಿಸಿದನು. ಅಂಬೆ ಹಿಂದಿರುಗಿ ಬಂದು ಭೀಷ್ಮನಿಗೆ, "ನನ್ನನ್ನು ಗೆದ್ದು ತಂದ ನೀನೇ ನನಗೆ ಗಂಡನು, ನನ್ನನ್ನು ಮದುವೆಯಾಗು," ಎಂದು ಹೇಳಿದಳು. ಭೀಷ್ಮನು, "ನಾನು ಬ್ರಹ್ಮಚರ್ಯ ವ್ರತವನ್ನು ಹಿಡಿದಿದ್ದೇನೆ. ಹೇಗೂ ಮದುವೆ ಆಗುವವನಲ್ಲ. ನೀನೋ ಬೇರೊಬ್ಬನಲ್ಲಿ ಅನುರಾಗವನ್ನು ಪ್ರಕಟಿಸಿದ್ದೀಯೆ. ಆದ್ದರಿಂದ ನನ್ನ ತಮ್ಮನಿಗೂ ಸ್ವೀಕಾರಯೋಗ್ಯಳಲ್ಲ," ಎಂದನು. ಅಂಬೆ ಹೊರಟು ಹೋದಳು. ಭೀಷ್ಮ ನಿಗೆ, ಇವರ ವಂಶಕ್ಕೆ ಕೇಡಾಗುವ ಉಪಾಯವನ್ನು ಹುಡುಕಿದಳು. ಎರಡನೆಯ ಮೂರನೆಯವರಾದ ಅಂಬಿಕೆ ಅಂಬಾಲಿಕೆಯರೊಡನೆ ಕೆಲವು ವರ್ಷ ಬಾಳಿ ವಿಚಿತ್ರವೀರ್ಯನು ಮಕ್ಕಳಿಲ್ಲದೆ ತೀರಿಕೊಂಡನು. ತಾನು ಹೆತ್ತ ಮಕ್ಕಳಿಬ್ಬರೂ ಹೀಗೆ ವಂಶವಿಲ್ಲದೆ ಮುಗಿಯಲು ಸತ್ಯವತಿ ಭೀಷ್ಮ ನನ್ನು ಅವನು ರಾಜನಾಗಬೇಕೆಂದೂ ತೀರಿಕೊಂಡ ಆ ತಮ್ಮನ ಹೆಂಡತಿ ಯರಲ್ಲಿ ವರ್ತಿಸಿ ಸಂತಾನವನ್ನು ಕಲ್ಪಿಸಬೇಕೆಂದೂ ಬೇಡಿದಳು. ಭೀಷ್ಮನು, "ಇದು ತೀರ ಅಸಾಧ್ಯ, ನಿನಗಾಗಿಯೆ ನಾನು ರಾಜ್ಯಾಭಿಷಿಕ್ತನಾಗುವು ದಿಲ್ಲ ಎಂದೆನು; ಬ್ರಹ್ಮಚಾರಿಯಾಗಿರುವೆನೆಂದೆನು. ಈಗ ಏನೇ ಆದರೂ ನನ್ನ ಪ್ರತಿಜ್ಞೆಯನ್ನು ಮುರಿಯಲಾರೆನು," ಎಂದನು. ಸತ್ಯವತಿ ಅವನ ಮಾತು ನ್ಯಾಯವೆಂದು ಒಪ್ಪಿದಳು. ತಾನು ಚಿಕ್ಕಂದು ಪರಾಶರ

ಮಹರ್ಷಿಯ ಸಹವಾಸದಿಂದ ವ್ಯಾಸ ಎಂಬ ಮಗನನ್ನು ಪಡೆದಿದ್ದದನ್ನು ತಿಳಿಸಿ ವಿಚಿತ್ರವೀರ್ಯನ ಪತ್ನಿಯರಲ್ಲಿ ಅವನಿಂದ ಸಂತಾನವನ್ನು ಕಲ್ಪಿಸ ಬಹುದೆಂಬ ಸೂಚನೆಯನ್ನು ಮಾಡಿದಳು. ಇದು ಭೀಷ್ಮನಿಗೆ ಒಪ್ಪಿಗೆ ಯಾಯಿತು. ಸತ್ಯವತಿ ವ್ಯಾಸನನ್ನು ಸ್ಮರಿಸಿದಳು. ಅವನು ಬರಲು ಅವನಿಗೆ ತನ್ನ ಇಚ್ಛೆಯನ್ನು ತಿಳಿಸಿದಳು. ಅವನು ತಾಯಿ ಮಾತಿಗೆ ಒಡಂಬಟ್ಟು ವಿಚಿತ್ರವೀರ್ಯನ ಇಬ್ಬರು ರಾಣಿಯರಲ್ಲಿ, ಒಬ್ಬ ದಾಸಿ ಯಲ್ಲಿ, ಮೂವರು ಮಕ್ಕಳನ್ನು ಪಡೆದನು. ಹಿರಿಯವಳ ಮಗ ಧೃತ ರಾಷ್ಟ್ರ, ಇವನು ಕುರುಡ. ಎರಡನೆಯವಳ ಮಗ ಪಾಂಡು. ದಾಸಿಯ ಮಗ ವಿದುರ.

ಭೀಷ್ಮನು ಧೃತರಾಷ್ಟ್ರನಿಗೆ ಗಾಂಧಾರಿಯನ್ನು, ಪಾಂಡುವಿಗೆ ಕುಂತಿ ಮಾದ್ರಿಯರನ್ನು ತಂದು ಮದುವೆಮಾಡಿದನು. ಪಾಂಡು ಒಂದು ಶಾಪ ದಿಂದ ಪತ್ನಿಯರ ಸಹವಾಸಮಾಡಿದರೆ ಸಾಯುವೆನೆಂಬ ಭಯ ಹುಟ್ಟಿ ವಿರಕ್ತನಾಗಿ ವನದಲ್ಲಿ ನಿಂತನು. ಅವನು ಮಕ್ಕಳನ್ನು ಪಡೆಯುವಂತಿರ ಲಿಲ್ಲ. ಅವನ ಹಿರಿಯ ಹೆಂಡತಿ ತಾನು ಬಾಲ್ಯದಲ್ಲಿ ದುರ್ವಾಸ ಋಷಿ ಯಿಂದ ಪಡೆದ ಐದು ಮಂತ್ರಗಳ ಬಲದಿಂದ ದೇವತೆಗಳನ್ನು ಆಹ್ವಾನಿಸಿ ಮಕ್ಕಳನ್ನು ಹೊಂದಬಹುದಾದವಳಾಗಿದ್ದಳು. ಚಿಕ್ಕಂದೇ ಅವಳು ಅವು ಗಳಲ್ಲಿ ಒಂದು ಮಂತ್ರವನ್ನು ಉಚ್ಚರಿಸಿ ಒಂದು ಮಗುವನ್ನು ಪಡೆದು, ಅಪವಾದದ ಭಯದಿಂದ ಅದನ್ನು ಗಂಗೆಯಲ್ಲಿ ತೇಲಿಬಿಟ್ಟಿದ್ದಳು. ಆ ಮಗು ಸೂತನೊಬ್ಬನಿಗೆ ಸಿಕ್ಕಿ ಬೆಳೆದು ಕರ್ಣನಾಯಿತು. ಪಾಂಡುವಿ ನಿಂದ ಮಕ್ಕಳನ್ನು ಪಡೆಯಕೂಡದ ಸಂದರ್ಭದಲ್ಲಿ ಕುಂತಿ ಅವನ ಅಪೇಕ್ಷೆ ಅಪ್ಪಣೆಯಿಂದ ಯಮ ವಾಯು ಇಂದ್ರರನ್ನು ಆಹ್ವಾನಿಸಿ ಯುಧಿಷ್ಠಿರ ಭೀಮ ಅರ್ಜುನರನ್ನು ಪಡೆದಳು. ಗಂಡನ ಅಪೇಕ್ಷೆಯಂತೆ ನಾಲ್ಕನೆಯ ಮಂತ್ರವನ್ನು ಮಾದ್ರಿಗೆ ಕಲಿಸಿದಳು. ಅವಳು ಅಶ್ವಿನೀದೇವತೆಗಳನ್ನು ಕರೆದು ನಕುಲ ಸಹದೇವರನ್ನು ಪಡೆದಳು. ಈ ವೇಳೆಗೆ ಗಾಂಧಾರಿ ಒಂದು ಗರ್ಭವನ್ನು ಧರಿಸಿ ಪ್ರಸವದಲ್ಲಿ ಸಾವಕಾಶವಾಗಲು ಆತುರಪಟ್ಟು ಅದನ್ನು ಹೊರಕ್ಕೆ ಕೆಡಹಿ, ಅದರಿಂದ ನೂರು ಜನ ಗಂಡುಮಕ್ಕಳು, ಒಂದು ಹೆಣ್ಣು ಮಗುವನ್ನು ಪಡೆದಳು. ಪಾಂಡು ಒಂದು ಸಲ ಬಯಕೆಯ

ಆತುರದಲ್ಲಿ ಮಾದ್ರಿಯನ್ನು ಕೂಡಿ ವನದಲ್ಲೇ ಮೃತನಾದನು. ಮಾದ್ರಿ ಅವನೊಡನೆ ಸಹಗಮನಮಾಡಿದಳು; ಕುಂತಿ ಮಕ್ಕಳನ್ನು ಕರೆದು ಕೊಂಡು ಹಸ್ತಿನಾಪುರಕ್ಕೆ ಬಂದಳು. ಇವರನ್ನು ಒಪ್ಪಿಕೊಳ್ಳದೆ ವಿಧಿಯಿಲ್ಲ ಎಂದು ಧೃತರಾಷ್ಟ್ರನು ಇವರನ್ನು ಸಾಕತೊಡಗಿದನು.

ಪಾಂಡುವಿನ ಮಕ್ಕಳ, ಧೃತರಾಷ್ಟ್ರನ ಮಕ್ಕಳ, ಮಧ್ಯೆ ಮೊದ ಲಿಂದಲೂ ವೈಷಮ್ಯ ಕಂಡುಬಂದಿತು. ಪಾಂಡುವಿನ ಮಕ್ಕಳನ್ನು ಪಾಂಡವರೆಂದೂ ಧೃತರಾಷ್ಟ್ರನ ಮಕ್ಕಳನ್ನು ಕೌರವರೆಂದೂ ಭಾರತ ಕರೆದಿದೆ. ಪಾಂಡವರಲ್ಲಿ ಭೀಮನು ಬಹಳ ಬಲಶಾಲಿ. ಕೌರವರಿಗೆ ಇವನನ್ನು ಕಂಡರೆ ಅಸೂಯೆ. ಎಳೆತನದಲ್ಲೇ ಇವರು ಅವನನ್ನು ಕೊಲ್ಲಲು ಹಲವು ಪ್ರಯತ್ನಮಾಡಿದರು. ಅದು ಯಾವುದೂ ಫಲಿಸಲಿಲ್ಲ. ಹುಡು ಗರು ಬೆಳೆದಂತೆ ಕೃಪ, ದ್ರೋಣ, ಎಂಬ ಧನುರ್ವೇದಪಾರಂಗತರಾದ ಬ್ರಾಹ್ಮಣರು ಹಸ್ತಿನಾವತಿಗೆ ಬಂದು ಸೇರಿ ಅವರಿಗೆ ಶಸ್ತ್ರಾಭ್ಯಾಸ ಮಾಡಿಸಿದರು. ಈ ಶಿಷ್ಯಸಮುದಾಯದಲ್ಲಿ ಕರ್ಣನೂ ಸೇರಿದನು. ದ್ರೋಣನು ತನ್ನ ಗೆಳೆಯನಾದ ದ್ರುಪದರಾಜನಿಂದ ಅವಮಾನ ಹೊಂದಿ ಹಸ್ತಿನಾವತಿಗೆ ಬಂದವನು; ಅವನಿಗೆ ಅಶ್ವತ್ಥಾಮನೆಂಬ ಒಬ್ಬ ಮಗ ನಿದ್ದನು; ಅಶ್ವತ್ಥಾಮನೂ ರಾಜಕುಮಾರರ ಜೊತೆಗೆ ಅಸ್ತ್ರವಿದ್ಯೆಯನ್ನು ಕಲಿತನು. ಧನುರ್ವಿದ್ಯೆಯಲ್ಲಿ ಅರ್ಜುನನು ಎಲ್ಲರಿಗೂ ಮಿಗಿಲಾದ ಕೌಶಲ್ಯವನ್ನು ತೋರಿದನು; ಕರ್ಣನು ಅವನಿಗಿಂತ ಬಹಳ ಏನೂ ಕಡಮೆ ಅಲ್ಲ. ವಿದ್ಯೆ ಮುಗಿದು ತರುಣರ ಪರಾಕ್ರಮವನ್ನು ಪ್ರಕಟಿಸಲು ಒಂದು ಸ್ಪರ್ಧೆ ಏರ್ಪಾಡಾಯಿತು. ಅದರಲ್ಲಿ ಕರ್ಣನು ಅರ್ಜುನನೊಂದಿಗೆ ಸ್ಪರ್ಧಿಸಲು ಮುಂದೆ ಬಂದಾಗ 'ಅವನು ಒಬ್ಬ ಸೂತನ ಮಗ, ರಾಜ ಕುಮಾರನೊಂದಿಗೆ ಕಾದಲು ಅರ್ಹನಲ್ಲ' ಎಂದು ಅವನಿಗೆ ಅವಮಾನ ವಾಯಿತು. ಆಗ ದುರ್ಯೋಧನನು ಕರ್ಣನನ್ನು ಅಂಗದೇಶದ ರಾಜ ನಾಗಿ ಮಾಡಿದನು. ವಿದ್ಯಾಭ್ಯಾಸ ಮುಗಿದಮೇಲೆ ದ್ರೋಣನು ಶಿಷ್ಯ ರಿಂದ ದ್ರುಪದನನ್ನು ಸೆರೆಹಿಡಿದು ತರಬೇಕೆಂದು ಗುರುದಕ್ಷಿಣೆ ಕೇಳಿದನು. ಅರ್ಜುನನು ದ್ರುಪದನನ್ನು ಸೆರೆಹಿಡಿದು ಈ ದಕ್ಷಿಣೆಯನ್ನು ಸಲ್ಲಿಸಿದನು. ಯುಧಿಷ್ಠಿರನಿಗೆ ಯುವರಾಜ ಪಟ್ಟ ಆಯಿತು.

ಪಾಂಡವ ಕೌರವರು ಸ್ನೇಹದಿಂದ ಬಾಳುವುದು ಸಾಧ್ಯವಲ್ಲ ಎಂದು ಕಂಡು ಧೃತರಾಷ್ಟ್ರನು ಯುಧಿಷ್ಠಿರನನ್ನೂ ಅವನ ತಮ್ಮಂದಿರನ್ನೂ ವಾರಣಾವತದಲ್ಲಿ ಬಾಳಲು ಕೊಟ್ಟು ಕಳುಹಿಸಿದನು. ದುರ್ಯೋಧನನ ಕೃತ್ರಿಮದಿಂದ ಅವನ ಪಕ್ಷದ ಶಿಲ್ಪಿ ಪಾಂಡವರು ವಾಸಮಾಡುವ ಅರಮನೆಯನ್ನು ಅರಗಿನಿಂದ ನಿರ್ಮಿಸಿದನು. ಗೊತ್ತಾದ ಒಂದು ದಿನ ಪಾಂಡವರೆಲ್ಲ ಮಲಗಿರುವ ಹೊತ್ತಿನಲ್ಲಿ ಆ ಮನೆಯನ್ನು ಸುಡುವುದೆಂದು ಸಂಚು ನಡೆದಿದ್ದಿತು. ವಿದುರನಿಂದ ಇದನ್ನು ತಿಳಿದು ಪಾಂಡವರು ತಾಯೊಡನೆ ಆ ಗೊತ್ತಾದ ರಾತ್ರಿ ಅರಮನೆಯನ್ನು ಬಿಟ್ಟು ಕಣ್ಮರೆಯಾದರು. ಅರಮನೆ ಸುಟ್ಟದ್ದು ತಿಳಿದು ದಾಯಾದರು ಸತ್ತರೆಂದು ಕೌರವರು ಸಂತೋಷಪಟ್ಟರು.

ವಾರಣಾವತದಿಂದ ಹೊರಟುಹೋದ ಪಾಂಡವರು ಒಂದು ವನವನ್ನು ಸೇರಿದರು. ಅಲ್ಲಿ ಹಿಡಿಂಬ ಹಿಡಿಂಬಿ ಎಂಬ ರಾಕ್ಷಸ ಸೋದರ ಸೋದರಿಯರು ಇದ್ದರು. ಹಿಡಿಂಬಿ ಭೀಮನಲ್ಲಿ ಅನುರಕ್ತಳಾದಳು; ಅವನಿಗೆ ಹಿಡಿಂಬನೊಂದಿಗೆ ಯುದ್ಧ ಪ್ರಾಪ್ತವಾಯಿತು. ಹಿಡಿಂಬನು ಹತನಾದನು. ಭೀಮನಿಗೆ ಹಿಡಿಂಬಿಯಲ್ಲಿ ಘಟೋತ್ಕಚ ಎಂಬ ಮಗನು ಹುಟ್ಟಿದನು. ಅಲ್ಲಿಂದ ಮುಂದರಿದು ಪಾಂಡವರು ಏಕಚಕ್ರಪುರವನ್ನು ಸೇರಿ ಅಲ್ಲಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ತಂಗಿದರು. ಬಕನೆಂಬ ರಾಕ್ಷಸನು ಆ ಊರನ್ನು ಪೀಡಿಸುತ್ತಿದ್ದನು. ಆ ಪೀಡೆಯಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಊರ ಜನ ಅವನಿಗೆ ದಿನವೂ ಒಂದು ಬಂಡಿ ಆಹಾರವನ್ನೂ ಒಬ್ಬ ಮನುಷ್ಯನನ್ನೂ ಬಲಿಯಾಗಿ ಕಳುಹಿಸುತ್ತಿದ್ದರು. ಪಾಂಡವರು ಏಕಚಕ್ರಪುರಕ್ಕೆ ಬಂದ ಕೆಲವು ದಿನದಲ್ಲಿ ಅವರು ತಂಗಿದ ಮನೆಯ ಬ್ರಾಹ್ಮಣನು ಬಕನಿಗೆ ತನ್ನ ಮಗನನ್ನು ಕಳುಹಿಸುವ ಸರತಿ ಬಂದಿತು. ಬ್ರಾಹ್ಮಣನು ಗೋಳಾಡಿದನು. ಭೀಮನು ಅವನ ಮಗನಿಗೆ ಪ್ರತಿಯಾಗಿ ತಾನು ಹೋಗುವುದಾಗಿ ತಿಳಿಸಿ ಆಹಾರದ ಬಂಡಿಯೊಡನೆ ಹೋಗಿ, ಅದನ್ನೆಲ್ಲ ತಾನೇ ತಿಂದು ಬಕನನ್ನು ವಧಿಸಿ ಹಿಂತಿರುಗಿದನು.

ಇಷ್ಟರಲ್ಲಿ ದ್ರುಪದನ ಮಗಳಾದ ಕೃಷ್ಣೆ ಎಂಬ ಕ್ಷತ್ರಿಯ ತರುಣಿಯ ಸ್ವಯಂವರದ ಸುದ್ದಿ ಬಂದಿತು. ಪಾಂಡವರು ದ್ರುಪದನ ರಾಷ್ಟ್ರ

ವಾದ ಪಾಂಚಾಲವನ್ನು ಕುರಿತು ಪ್ರಯಾಣಮಾಡಿದರು. ಸ್ವಯಂವರ ಮಂಟಪದಲ್ಲಿ ಇವರು ಬ್ರಾಹ್ಮಣರ ಮಧ್ಯೆ ಕುಳಿತಿರಲು ಕುಂತಿಯ ಸೋದರದ ವಾವೆಯ ವಸುದೇವನ ಮಕ್ಕಳಾದ ಬಲರಾಮ ಕೃಷ್ಣರು ಕ್ಷತ್ರಿಯರ ಮಧ್ಯೆ ಇರುತ್ತ ಇವರನ್ನು ಕಂಡರು. ಕೃಷ್ಣನು ಇವರನ್ನು ಗುರುತಿಸಿದನು. ದ್ರುಪದನು ಮತ್ಸ್ಯಯಂತ್ರ ಎಂಬ ಒಂದು ಯಂತ್ರ ವನ್ನು ನಿಲ್ಲಿಸಿ, ಅದರಲ್ಲಿ ಗುರಿಯನ್ನು ಹೊಡೆದ ಬಿಲ್ಲುಗಾರನಿಗೆ ತನ್ನ ಮಗಳನ್ನು ಕೊಡುವುದಾಗಿ ಸಾರಿದನು. ಅದಕ್ಕೆ ತಕ್ಕ ಬಿಲ್ಲುಗಾರಿಕೆ ನೆರೆದಿದ್ದ ಕ್ಷತ್ರಿಯರಲ್ಲಿ ಕಾಣಲಿಲ್ಲ. ಬ್ರಾಹ್ಮಣರ ಮಧ್ಯದಿಂದ ಅರ್ಜುನನು ಎದ್ದು ಹೋಗಿ ಗುರಿಯನ್ನು ಹೊಡೆದನು; ದ್ರೌಪದಿಯನ್ನು ಗೆದ್ದನು.

ಅರ್ಜುನನು ಗೆದ್ದುತಂದ ಹೆಣ್ಣನ್ನು ಪಾಂಡವರೈವರೂ ಮದುವೆ ಯಾದರು. ಇದಕ್ಕೆ ಏನೇನೊ ಬೇರೆಯ ಕಾರಣಗಳು ಇದ್ದಂತೆ ಮಹಾ ಭಾರತದಲ್ಲಿ ಉಕ್ತವಾಗಿದೆ. ಅವು ಆ ಸಂದರ್ಭದಲ್ಲಿ ಕಂಡ ನಿಜವಾದ ಕಾರಣಗಳಲ್ಲ ಎಂದು ತೋರುತ್ತದೆ. ಯುಧಿಷ್ಠಿರನು ಈ ಆಚಾರ ತಮ್ಮ ಪೂರ್ವಿಕರ ಆಚಾರವೆಂದು ಹೇಳುತ್ತಾನೆ. ಅದೇ ಕಾರಣ ಇದ್ದಿರ ಬೇಕು.

ಸ್ವಯಂವರದ ವೇಳೆಯಲ್ಲಿ ಇವರು ಪಾಂಡವರು ಎನ್ನುವುದು ಸ್ಪಷ್ಟವಾಗಿ, ಇವರನ್ನು ಕರಸಿಕೊಳ್ಳುವುದು ಆವಶ್ಯಕವೆಂದು ತೋರಿ ಧೃತರಾಷ್ಟ್ರನು ಇವರಿಗೆ ಬರಹೇಳಿ ಕರೆಕಳುಹಿದನು. ಪಾಂಡವರು ಬಂದರು; ಯುಧಿಷ್ಠಿರನು ಮತ್ತೆ ಅರ್ಧರಾಜ್ಯದ ಅರಸಾದನು. ಈ ಅಣ್ಣ ತಮ್ಮದಿರು ಖಾಂಡವ ಪ್ರಸ್ಥದಲ್ಲಿ ನಿಂತರು. ಪಾಂಡವರಲ್ಲಿ ದ್ರೌಪದಿ ಯನ್ನು ಪತ್ನಿಯಾಗಿ ಅನುಭವಿಸುವ ಕ್ರಮವನ್ನು ಕುರಿತು ಒಂದು ಸಂಕೇತ ಆಯಿತು. ಅದಕ್ಕೆ ತಪ್ಪಿದನೆಂಬ ಕಾರಣದಿಂದ ಅರ್ಜುನನು ತೀರ್ಥಯಾತ್ರೆ ಹೋಗಬೇಕಾಯಿತು. ಅವನು ದೇಶಗಳನ್ನೆಲ್ಲ ಸುತ್ತಿ ಉಲೂಪಿ ಚಿತ್ರಾಂಗದೆಯರನ್ನು ಮದುವೆಯಾಗಿ, ಸಂನ್ಯಾಸಿ ವೇಷದಲ್ಲಿ ದ್ವಾರಕೆಗೆ ಹೋಗಿ ಬಲರಾಮನ ಇಷ್ಟಕ್ಕೆ ವಿರೋಧವಾಗಿ, ಆದರೆ ಕೃಷ್ಣನ ಸಮ್ಮತಿಯಿಂದ, ಸುಭದ್ರೆಯನ್ನು ಮದುವೆಮಾಡಿಕೊಂಡು ಅವಳನ್ನು ಕರೆದುಕೊಂಡು ಹಿಂದಿರುಗಿದನು. ಅರ್ಜುನನೂ ಕೃಷ್ಣನೂ ಖಾಂಡವ

ವನದ ಬಳಿ ವಿಹರಿಸುತ್ತ ಅದನ್ನು ಸುಟ್ಟು ಆ ಸಂದರ್ಭದಲ್ಲಿ ಮಯನೆಂಬ ಶಿಲ್ಪಿಗೆ ತುಂಬ ಉಪಕಾರಮಾಡಿದರು.

ಉಪಕಾರಕ್ಕೆ ಪ್ರತಿಯನ್ನು ಸಲ್ಲಿಸುವ ಇಚ್ಛೆಯಿಂದ ಮಯನು ಪಾಂಡವರಿಗೆ ಒಂದು ಸಭಾಮಂದಿರವನ್ನು ಕಟ್ಟಿಕೊಟ್ಟನು. ಪಾಂಡವರು ಸುಖದಿಂದ ಇರುತ್ತಿರುವಲ್ಲಿ ನಾರದನು ಬಂದು ಧರ್ಮರಾಯನಿಗೆ ರಾಜಸೂಯ ಯಾಗವನ್ನು ನಡಸಬೇಕೆಂದು ಸೂಚನೆಮಾಡಿದನು. ಯುಧಿಷ್ಠಿರನು ಕೃಷ್ಣನನ್ನು ಕರೆಯಿಸಿ ಈ ಸಂಗತಿಯನ್ನು ತಿಳಿಸಲು ಅವನು ಈ ಕಾರ್ಯಕ್ಕೆ ಜರಾಸಂಧನು ಒಂದು ದೊಡ್ಡ ಅಡ್ಡಿ ಎಂದು ತಿಳಿಸಿದನು. ಭೀಮ ಅರ್ಜುನರು ಕೃಷ್ಣನೊಡನೆ ಜರಾಸಂಧನ ನಗರಕ್ಕೆ ಹೋದರು; ಅಲ್ಲಿ ಭೀಮನು ಜರಾಸಂಧನನ್ನು ಕೊಂದನು. ಇದಾದ ಮೇಲೆ ಯುಧಿಷ್ಠಿರನ ನಾಲ್ವರು ತಮ್ಮದಿರು ದಿಗ್ವಿಜಯಕ್ಕೆ ಹೊರಟು ಎಲ್ಲ ಅರಸರಿಂದ ಕಾಣಿಕೆಯನ್ನು ಪಡೆದು ಹಿಂದಿರುಗಿದರು. ಯಾಗ ನಡೆಯಿತು. ಅದರಲ್ಲಿ ಕೃಷ್ಣನಿಗೆ ಅಗ್ರಪೂಜೆ ಆಗುವ ಸಂದರ್ಭದಲ್ಲಿ ಚೇದಿ ದೇಶದ ರಾಜನಾದ ಶಿಶುಪಾಲನು ಅದಕ್ಕೆ ಒಪ್ಪದೆ, ಪೂಜೆಯನ್ನು ಕೊಂಡ ಕೃಷ್ಣನನ್ನೂ ಅವನಿಗೆ ಪೂಜೆಯನ್ನು ನೀಡಿದ ಭೀಷ್ಮ ಮೊದಲಾದ ಎಲ್ಲ ಕ್ಷತ್ರಿಯರನ್ನೂ ನಿಂದಿಸಿದನು. ಕೃಷ್ಣನು ಹಿಂದಿನ ಒಂದು ಸಂಕೇತದಂತೆ ಶಿಶುಪಾಲನ ಭರ್ತ್ಸನೆಯ ನೂರು ಮಾತನ್ನು ಸಹಿಸಿ ಆ ಮೇರೆಯನ್ನು ಮೀರಿದಾಗ ಅವನನ್ನು ತನ್ನ ಚಕ್ರದಿಂದ ವಧಿಸಿದನು.

ಮಯನು ನಿರ್ಮಿಸಿದ ಸಭಾಮಂದಿರದಲ್ಲಿ ಇದು ನೆಲ ಇದು ನೀರು ಎಂದು ತಿಳಿಯದೆ ದುರ್ಯೋಧನನು ಬಿದ್ದು ಎದ್ದನು. ಇದನ್ನು ನೋಡಿ ಪಾಂಡವರ ಪಕ್ಷದ ಜನ ನಕ್ಕರು. ಇದರಿಂದ ಅವಮಾನಗೊಂಡು ದುರ್ಯೋಧನನು ತನ್ನ ಮಾವ ಶಕುನಿಯೊಡನೆ ಇವರನ್ನು ನಿಗ್ರಹಿಸುವ ಉಪಾಯವನ್ನು ಯೋಚಿಸಿದನು. ಶಕುನಿ ದ್ಯೂತವನ್ನು ಸೂಚಿಸಿದನು. ಈ ಸೂಚನೆಗೆ ಧೃತರಾಷ್ಟ್ರನ ಒಪ್ಪಿಗೆಯನ್ನು ಪಡೆದು ದುರ್ಯೋಧನನು ದ್ಯೂತವನ್ನು ಏರ್ಪಡಿಸಿ ಅದರಲ್ಲಿ ತನ್ನ ಪರವಾಗಿ ಶಕುನಿ ಆಡುವನೆಂದು ಹೇಳಿದನು. ಪಾಂಡವರ ಪರವಾಗಿ ಯುಧಿಷ್ಠಿರನು ದಾಳಹಾಕಿದನು. ಶಕುನಿ ಗೆದ್ದು ಯುಧಿಷ್ಠಿರನು ಸೋತು ಪಾಂಡವರ ಸಮಸ್ತ ಸಂಪತ್ತೂ

ದುರ್ಯೋಧನನ ಪಾಲಾಯಿತು. ಮತ್ತು ಪಣವಿಟ್ಟು ಯುಧಿಷ್ಠಿರನು ತನ್ನ ತಮ್ಮಂದಿರನ್ನೂ ತನ್ನನ್ನೂ ಸೋತುಕೊಂಡನು. ಅದಾದಮೇಲೆ ದ್ರೌಪದಿಯನ್ನು ಸೋತುಕೊಂಡನು. ತೀರ ಹೀಗೆ ಪರಾಜಿತನಾದ ದಾಯಾದಿಯನ್ನು ಕಂಡು ದುರ್ಯೋಧನನು ಅತಿಯಾಗಿ ವಿಜೃಂಭಿಸಿ ದಾಸಿಯಾದ ದ್ರೌಪದಿಯನ್ನು ಸಭೆಗೆ ಕರೆತರುವಂತೆ ಅಪ್ಪಣೆಮಾಡಿದನು. ದ್ರೌಪದಿ ಬಂದಳು; ತನ್ನನ್ನು ಸೋಲಲು ಯುಧಿಷ್ಠಿರನಿಗೆ ಅಧಿಕಾರ ಇದ್ದಿತೆ ಎಂದು ಪ್ರಶ್ನೆ ಮಾಡಿದಳು. ಇದಕ್ಕೆ ಯಾರೂ ಉತ್ತರಕೊಡಲಿಲ್ಲ. ದುರ್ಯೋಧನನು ಅವಳ ಪ್ರಶ್ನೆಗಳನ್ನು ನಿರಾಕರಿಸಿ, ದಾಸಿಗೆ ಇಷ್ಟು ವಸ್ತ್ರ ಏಕೆ ಎಂದು ಅವಳ ವಸ್ತ್ರವನ್ನು ತೆಗೆಯಿಸಲು ತೊಡಗಿದನು. ಇಲ್ಲಿ ಕೃಷ್ಣನ ಅನುಗ್ರಹದಿಂದ ಅವಳ ವಸ್ತ್ರ ಅಕ್ಷಯವಾಯಿತೆಂದು ಕಥೆ ಬರುತ್ತದೆ. ಇದಾದಮೇಲೆ ದುರ್ಯೋಧನನು ದ್ರೌಪದಿಗೆ ತನ್ನ ತೊಡೆಯನ್ನು ತಟ್ಟಿ ತೋರಿಸಿದನು. ಭೀಮನು ಆ ತೊಡೆಯನ್ನು ಮುರಿಯುವುದಾಗಿ ಶಪಥಮಾಡಿದನು. ಆಟಕ್ಕೆಂದು ಮೊದಲುಮಾಡಿದ ದ್ಯೂತ ಕೇಡಿಗೆ ಮೂಲವಾದುದನ್ನು ನೋಡಿ ಧೃತರಾಷ್ಟ್ರನು ಅದನ್ನು ಅಲ್ಲಿಗೆ ನಿಲ್ಲಿಸಿ ದ್ರೌಪದಿಯನ್ನು ಸಂತಯಿಸಿ ನಿನಗೆ ಬೇಕಾದ ವರವನ್ನು ಕೇಳು ಎಂದನು. ಅವಳು ತನ್ನ ಗಂಡಂದಿರನ್ನು ದಾಸ್ಯದಿಂದ ಬಿಡಿಸಬೇಕು ಎಂದಳು. ಪಾಂಡವರು ಹೀಗೆ ಬಿಡುಗಡೆ ಹೊಂದಿ ಇಂದ್ರಪ್ರಸ್ಥಕ್ಕೆ ಹಿಂದಿರುಗಿದರು.

ಬಹುಯೋಚಿಸಿ ಮಾಡಿದ ದ್ಯೂತದ ಏರ್ಪಾಡೆಲ್ಲ ವ್ಯರ್ಥವಾಯಿತೆಂದು ದುರ್ಯೋಧನನು ಮತ್ತೆ ತಂದೆಯಬಳಿಗೆ ಹೋಗಿ ಯುಧಿಷ್ಠಿರನನ್ನು ಇನ್ನೊಮ್ಮೆ ದ್ಯೂತಕ್ಕೆ ಕರೆಯಿಸಬೇಕೆಂದು ಒತ್ತಾಯ ಮಾಡಿದನು. (ಇಲ್ಲಿ ಬರುವ ಒಂದು ಮಾತಿನಿಂದ, ದುರ್ಯೋಧನನು ದ್ಯೂತವನ್ನು ಸೂಚಿಸಿದ್ದು ಇದೇ ಮೊದಲ ಸಲ, ಎಂಬ ಧ್ವನಿ ಬರುತ್ತದೆ. ಇದು ನಿಜವಾದರೆ, ಮೊದಲಿನ ದ್ಯೂತಪ್ರಸಂಗವೆಲ್ಲ ಆಮೇಲೆ ಸೇರಿದ ಕತೆ, ಮೂಲ ಭಾರತದಲ್ಲಿ ಇರಲಿಲ್ಲ, ಎನ್ನಬೇಕಾಗುತ್ತದೆ. ಈ ವಿಷಯ ವಿಚಾರಣೀಯ.) ಮಗನ ಮಾತಿಗೆ ಕಟ್ಟುಬಿದ್ದು ಧೃತರಾಷ್ಟ್ರನು ಧರ್ಮರಾಯನನ್ನು ಮತ್ತೆ ಕರೆಯಿಸಿದನು. ಅವನು ಮತ್ತೆ ಬಂದು ದ್ಯೂತಕ್ಕೆ ಕುಳಿತನು. ಈ ಸಲ ಆಟದಲ್ಲಿ ಸೋತವರು ಹನ್ನೆರಡು ವರ್ಷ ವನವಾಸಮಾಡಬೇಕು;

ಹದಿಮೂರನೆಯ ವರ್ಷ ಯಾವುದೋ ಒಂದು ರಾಷ್ಟ್ರದಲ್ಲಿ ಅಜ್ಞಾತರಾಗಿ ವಾಸಮಾಡಬೇಕು; ಆ ವರ್ಷ ಮುಗಿಯುವುದರಲ್ಲಿ ಪ್ರತಿಪಕ್ಷ ಗುರುತಿಸಿದರೆ ಮತ್ತೆ ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸ: ಎಂದು ಸಮಯವಾಯಿತು. ಧರ್ಮರಾಯನು ದ್ಯೂತದಲ್ಲಿ ಮತ್ತೆ ಸೋತನು. ಸಮಯದ ಪ್ರಕಾರವಾಗಿ ತಮ್ಮಂದಿರೊಡನೆ ಹೆಂಡತಿಯೊಡನೆ ಹನ್ನೆರಡು ವರ್ಷ ವನವಾಸ ಹೊರಟನು.

ಪಾಂಡವರನ್ನು ದ್ಯೂತದಲ್ಲಿ ಸೋಲಿಸಿ ವನಕ್ಕೆ ಅಟ್ಟಿದ್ದು ಒಳ್ಳೆಯದಲ್ಲ, ಅವರನ್ನು ಹಿಂದಕ್ಕೆ ಕರೆಯಿಸು, ಎಂದು ವಿದುರನು ಧೃತರಾಷ್ಟ್ರನಿಗೆ ಬುದ್ಧಿ ಹೇಳಿದನು. ಧೃತರಾಷ್ಟ್ರನು ಅವನಮೇಲೆ ಕೋಪಮಾಡಿ ಅವನನ್ನು ಹಗೆಯೆಂದು ನಿಂದಿಸಿ ಅವನಿಗೆ ಇಷ್ಟವಿದ್ದರೆ ಅಲ್ಲಿ ಇರಬಹುದು, ಇಲ್ಲವಾದರೆ ಹೋಗಬಹುದು ಎಂದನು. ವಿದುರನು ಪಾಂಡವರ ಬಳಿಗೆ ಹೋದನು. ಸ್ವಲ್ಪದರಲ್ಲೇ ಧೃತರಾಷ್ಟ್ರನು ಪಶ್ಚಾತ್ತಾಪಪಟ್ಟು ಅವನನ್ನು ಹಿಂದಕ್ಕೆ ಕರೆಯಿಸಿಕೊಂಡನು. ಪಾಂಡವರು ಅಸಹಾಯರಾಗಿ ಕಾಡಿನಲ್ಲಿ ಇರುವಲ್ಲಿ ಅವರನ್ನು ಹೇಗಾದರೂ ತೀರಿಸಿಬಿಡಬೇಕೆಂದು ದುರ್ಯೋಧನನೂ ಅವನ ದುರ್ಮಂತ್ರಿಗಳೂ ಯೋಚನೆಮಾಡಿದರು. ಆ ಕಾಲಕ್ಕೆ ವ್ಯಾಸಮಹರ್ಷಿ ಹಸ್ತಿನಾವತಿಗೆ ಬಂದು ಈ ಯೋಚನೆಯನ್ನು ನಿಲ್ಲಿಸಿದನು. ನೆಂಟರು ವನವಾಸಕ್ಕೆ ಹೋದರೆಂದು ತಿಳಿದು ಕೃಷ್ಣನೇ ಮೊದಲಾಗಿ ಅವರ ಬಂಧುವರ್ಗ ಅರಣ್ಯಕ್ಕೆ ಬಂದು ಅವರನ್ನು ಕಂಡಿತು. ಕೃಷ್ಣನು ದ್ಯೂತದ ಕಾಲದಲ್ಲಿ ತಾನು ಸಾಲ್ವನೊಡನೆ ಯುದ್ಧಕ್ಕೆ ತೊಡಗಿದ್ದುದರ ಕಾರಣದಿಂದ ತಾನು ಪಾಂಡವರನ್ನು ರಕ್ಷಿಸಲಾಗಲಿಲ್ಲವೆಂದೂ ಹಾಗಲ್ಲದಿದ್ದರೆ ಸಂಬಂಧಪಟ್ಟವರಿಗೆ ತಿಳಿವಳಿಕೆ ಹೇಳಿ ದ್ಯೂತವನ್ನು ನಿಲ್ಲಿಸುತ್ತಿದ್ದೆನೆಂದೂ ಹೇಳಿದನು. ಅವನು ಹಿಂದಿರುಗುವ ವೇಳೆ ಸುಭದ್ರೆಯೂ ಅವಳ ಮಗ ಅಭಿಮನ್ಯುವೂ ಅವನೊಡನೆ ದ್ವಾರಕೆಗೆ ಹೋದರು. ಪಾಂಡವರು ಕೊಂಚಕಾಲ ಕಾಮ್ಯಕ ಎಂಬ ವನದಲ್ಲಿದ್ದು ದ್ವೈತ ಎಂಬ ಹೆಸರಿನವನಕ್ಕೆ ಬಂದರು. ವನವಾಸದ ಕಾಲದಲ್ಲಿ ದ್ರೌಪದಿ ಯುಧಿಷ್ಠಿರನನ್ನು ಕುರಿತು ಆತನ ಕ್ಷಮೆ ಅತಿಯಾಯಿತೆಂದಳು; ಅದರಿಂದ ಅವನಿಗೂ ತನ್ನ ಇತರ ಪತಿಗಳಿಗೂ ಬಂದಿರುವ ಕಷ್ಟವನ್ನು ಸಹಿಸಲಾರೆನೆಂದಳು.

ಯುಧಿಷ್ಠಿರನು, 'ಕ್ಷಮೆ ಎಂದಿಗೂ ಅತಿಯಾಗುವುದಿಲ್ಲ, ದುರ್ಯೋಧನನು ದುಷ್ಟನಾದ ಕಾರಣದಿಂದ ತಾನು ಪ್ರತಿಯಾಗಿ ದುಷ್ಟನಾಗುವುದು ಸಲ್ಲದು, ತಮ್ಮ ದೌಷ್ಟ್ಯದಿಂದ ಕೌರವರು ಕೇಡನ್ನೇ ಸಾಧಿಸಿದರು, ಅವರಿಗೆ ಒಳಿತಾಗಲಾರದು, ಗುಣವಂತನಾದ ತಾನು ರಾಜ್ಯಕ್ಕೆ ಅರ್ಹನು, ಕೊನೆಗೂ ಅದನ್ನು ಪಡೆಯತಕ್ಕವನು,' ಎಂದು ಸಮಾಧಾನ ಹೇಳಿದನು. ದ್ರೌಪದಿ ಅವನು ಧರ್ಮವನ್ನು ಬಿಡಬೇಕೆಂಬುದು ತನ್ನ ಅಭಿಪ್ರಾಯ ಅಲ್ಲ ಎಂದು ತನ್ನ ಆಶಯವನ್ನು ವಿವರಿಸಿದಳು. ಭೀಮನೂ ಧರ್ಮನನ್ನು ಕುರಿತು ಅವನು ಹಿಡಿದ ದಾರಿ ಕ್ಷತ್ರಿಯನಿಗೆ ತಕ್ಕುದಲ್ಲ ಎಂದು, ಅವನು ತಪ್ಪುದಾರಿ ಹಿಡಿದದ್ದರಿಂದ ತಾವೆಲ್ಲ ಕಷ್ಟಪಡಬೇಕಾಯಿತು ಎಂದು, ದೂರಿದನು. ಧರ್ಮರಾಜನು ತನ್ನಿಂದ ತಪ್ಪಾಗಿರುವುದು ನಿಜ ಎಂದೂ ಆದರೆ ತಾನು ಧರ್ಮಕ್ಕೆ ಕಟ್ಟುಬಿದ್ದು ಈ ಕಷ್ಟವನ್ನೆಲ್ಲ ಪಡುತ್ತ ತನ್ನವರನ್ನು ಕಷ್ಟಪಡಿಸುತ್ತ ಇರುವೆನು ಎಂದೂ ವಿವರಿಸಿದನು. ಪಾಂಡವರು ಈ ವನವಾಸದ ಕಾಲದಲ್ಲಿ ಅನೇಕ ಪುಣ್ಯಕ್ಷೇತ್ರಗಳಿಗೆ ಹೋದರು. ಬೃಹದಶ್ವ, ಲೋಮಶ, ಮಾರ್ಕಂಡೇಯ, ಬಕದಾಲ್ಭ್ಯ ಮುಂತಾದ ಮಹರ್ಷಿಗಳು ಧರ್ಮರಾಯನಿಗೆ ಸಮಾಧಾನ ಉಂಟಾಗುವಂತೆ ಪೂರ್ವ ಕಾಲದ ಅನೇಕ ಆಖ್ಯಾನಗಳನ್ನು ವಿವರಿಸಿ ಹೇಳಿದರು. ಹೀಗಿರುತ್ತ ಒಂದು ಸಲ ದುರ್ಯೋಧನನು ಇವರು ಹೀಗೆ ಸುಖವಾಗಿರುವ ವೃತ್ತಾಂತವನ್ನು ತಿಳಿದು, ಅವರೆದುರಿಗೆ ತನ್ನ ರಾಜವೈಭವವನ್ನು ಮೆರೆದು ಅವರಿಗೆ ಬೇಸರವುಂಟಾಗುವಂತೆ ಮಾಡಬೇಕೆಂದು ಯೋಚಿಸಿ ಹಿರಿದಾದ ಒಂದು ಪರಿವಾರದೊಂದಿಗೆ ವಿಜೃಂಭಣೆಯಿಂದ ದ್ವೈತವನಕ್ಕೆ ಹೋದನು. ಅಲ್ಲಿಯ ಸರೋವರದ ಬಳಿ ಇವನ ಭೃತ್ಯರಿಗೂ ಅಲ್ಲಿ ವಿಹಾರಕ್ಕೆ ಬಂದಿದ್ದ ಗಂಧರ್ವರಿಗೂ ಜಗಳವಾಯಿತು. ಇದರ ಫಲವಾಗಿ ದುರ್ಯೋಧನನಿಗೂ ಗಂಧರ್ವನಾಯಕ ಚಿತ್ರಸೇನನಿಗೂ ಯುದ್ಧವಾಗಿ, ದುರ್ಯೋಧನನು ಸೆರೆಯಾದನು. ಅವನ ಪರಿವಾರದವರು ಓಡಿಬಂದು ಯುಧಿಷ್ಠಿರನಿಗೆ ಶರಣುಹೋಗಿ ತಮಗೆ ಬಂದ ದುರ್ಗತಿಯನ್ನು ಹೇಳಿಕೊಂಡರು. ಯುಧಿಷ್ಠಿರನು ಭೀಮಾರ್ಜುನರಿಗೆ ದುರ್ಯೋಧನನ ಸಹಾಯಕ್ಕೆ ಹೋಗಿ ಎಂದು ಅಪ್ಪಣೆಮಾಡಿದನು. ಭೀಮನು ಈ ಮಾತಿಗೆ ಒಪ್ಪಲಿಲ್ಲ. ಅಣ್ಣನ

ಮಾತಿಗೆ ಕಟ್ಟುಬಿದ್ದು ಅರ್ಜುನನು ಗಂಧರ್ವರೊಡನೆ ಕಾದಿ ದುರ್ಯೋಧನನನ್ನು ಬಿಡಿಸಿ ತಂದನು. ಯುಧಿಷ್ಠಿರನು ದುರ್ಯೋಧನನಿಗೆ 'ಊರಿಗೆ ಹೋಗು, ಸುಖವಾಗಿ ಬಾಳು' ಎಂದು ಒಳ್ಳೆಯಮಾತು ಹೇಳಿ, ಅವನನ್ನು ಕುಟುಂಬ ಪರಿವಾರದೊಡನೆ ಸುರಕ್ಷಿತವಾಗಿ ಹಿಂದಕ್ಕೆ ಕಳುಹಿಸಿದನು. ವನದಲ್ಲಿ ಇದ್ದವೇಳೆ ಜಯದ್ರಥನು ಬಂದು ದ್ರೌಪದಿಯನ್ನು ಅಪಹರಿಸಿದನೆಂದೂ, ಭೀಮಾರ್ಜುನರು ಅವಳನ್ನು ಬಿಡಿಸಿಕೊಂಡು ಜಯದ್ರಥನ ಮಾನವನ್ನು ಕಳೆದು ಪ್ರಾಣದೊಂದಿಗೆ ಬಿಟ್ಟರೆಂದೂ ಕಥೆಯಿದೆ. ಇದು ಪ್ರಾಯಶಃ ನಡೆಯದ ಸಂಗತಿ ಎಂದು ಕಾಣುತ್ತದೆ.

ವನವಾಸದ ಹನ್ನೆರಡು ವರ್ಷ ಮುಗಿದು ಅಜ್ಞಾತದ ಒಂದು ವರ್ಷ ಆರಂಭ ಆಗುವ ಮುನ್ನ ಧರ್ಮದೇವತೆ ಯುಧಿಷ್ಠಿರನನ್ನು ಪರೀಕ್ಷಿಸುವುದಕ್ಕಾಗಿ ಅವನ ಆಶ್ರಮದ ನೆರೆಯ ಋಷ್ಯಾಶ್ರಮಕ್ಕೆ ಒಂದು ಸಾರಗವಾಗಿ ಬಂದು ಅಲ್ಲಿಯ ಅರಣಿಯನ್ನು ಕದ್ದುಕೊಂಡು ಹೋಯಿತು. ಅರಣಿಯನ್ನು ಹಿಂದಕ್ಕೆ ತರಬೇಕೆಂದು ಋಷಿ ಧರ್ಮರಾಯನನ್ನು ಪ್ರಾರ್ಥಿಸಿದನು. ಇವನು ತಮ್ಮಂದಿರೊಡನೆ ಹೊರಟು ಅಪರಾಹ್ಣದವರೆಗೆ ವೃಥಾ ಕಾಡಿನಲ್ಲಿ ಅಲೆದು ದಣಿದು ಒಂದು ಸ್ಥಳದಲ್ಲಿ ಕುಳಿತು, ಕುಡಿಯಲು ಸ್ವಲ್ಪ ನೀರು ತನ್ನಿ ಎಂದು ತಮ್ಮಂದಿರನ್ನು ಅಟ್ಟಿದನು. ಅವರು ಒಬ್ಬೊಬ್ಬರಾಗಿ ಹೋಗಿ, ಒಂದು ಸರಸ್ಸಿನ ನೀರನ್ನು ಕಾಯುತ್ತಿದ್ದ ಒಂದು ಸತ್ತ್ವವನ್ನು ಧಿಕ್ಕರಿಸಿ ನಿರ್ಜೀವರಾಗಿ ನೀರ ಅಂಚಿನಲ್ಲಿ ಮಲಗಿದರು. ಕೊನೆಯಲ್ಲಿ ಯುಧಿಷ್ಠಿರನೇ ಹೋಗಿ, ಸರೋವರದ ರಕ್ಷಕ ಸತ್ತ್ವ ಕೇಳಿದ ಪ್ರಶ್ನೆಗಳಿಗೆ ಉತ್ತರಕೊಟ್ಟು, ತಾನು ನೀರು ಕುಡಿದು ತಮ್ಮಂದಿರನ್ನು ಬದುಕಿಸಿದನು. ಆಗ ಆ ಸತ್ತ್ವ ತಾನು ಧರ್ಮದ ಅಧಿದೈವ ಎಂದೂ ಯುಧಿಷ್ಠಿರನ ಧರ್ಮಬುದ್ಧಿಯನ್ನು ಪರೀಕ್ಷಿಸಲು ಇದನ್ನೆಲ್ಲ ಮಾಡಿದುದಾಗಿಯೂ ತಿಳಿಸಿ, ಅಜ್ಞಾತವಾಸದ ವರ್ಷವನ್ನು ಕುರಿತು ಧೈರ್ಯ ಹೇಳಿ ಅಭಯವನ್ನು ನೀಡಿತು.

ಅಜ್ಞಾತವಾಸದ ವರ್ಷವನ್ನು ಪಾಂಡವರು ಮತ್ಸ್ಯದೇಶದ ವಿರಾಟರಾಯನ ಆಸ್ಥಾನದಲ್ಲಿ ಕಳೆದರು. ತಮ್ಮ ಆಯುಧಗಳನ್ನು ದಾರಿಯ ಒಂದು ಬನ್ನಿ ಮರದಲ್ಲಿ ಬಚ್ಚಿಟ್ಟು, ಧರ್ಮನು ಒಬ್ಬ ಬ್ರಾಹ್ಮಣನ ವೇಷ

ವನ್ನೂ, ಭೀಮನು ಒಬ್ಬ ಅಡಿಗೆಯವನ ವೇಷವನ್ನೂ, ಅರ್ಜುನನು ಅಂತಃಪುರದಲ್ಲಿ ನಾಟ್ಯಕಲಿಸುವ ಕ್ಲೀಬನ ವೇಷವನ್ನೂ, ನಕುಲ ಸಹದೇವರು ಕುದುರೆಗಳನ್ನೂ ಗೋವುಗಳನ್ನೂ ಕಾಯುವವರ ವೇಷ ವನ್ನೂ, ದ್ರೌಪದಿ ಅರಮನೆಯ ಪರಿಚಾರಿಣಿ ಒಬ್ಬಳ ವೇಷವನ್ನೂ, ಧರಿಸಿ ದರು. ಒಬ್ಬೊಬ್ಬರಾಗಿ ಬಂದು ಆಯಾ ಸ್ಥಾನಗಳನ್ನು ಬೇಡಿ ಪಡೆದು, ನೋಡುವವರಿಗೆ ತಾವು ಒಬ್ಬರಿಗೆ ಒಬ್ಬರು ಸಂಬಂಧಿಸಿದವರು ಎಂಬುದು ಕಾಣದಂತೆ ನಡೆದುಕೊಂಡರು. ಕೆಲವುಕಾಲ ಕಳೆದಮೇಲೆ ವಿರಾಟನ ಮೈದುನ ಕೀಚಕನು ರಾಣಿಯಾದ ಅಕ್ಕ ಸುದೇಷ್ಣೆಯ ಬಳಿಗೆ ಬಂದವೇಳೆ ದ್ರೌಪದಿಯನ್ನು ನೋಡಿ ಅವಳನ್ನು ಕಾಮಿಸಿದನು. ಅರಮನೆಯ ದಾಸಿ ಯೆಂದು ಅವನು ಅವಳನ್ನು ಬಯಸಲು ರಾಣಿ ಒಪ್ಪಲಿಲ್ಲ. ಇವನು ಹಠ ಮಾಡಿದನು. ಸುದೇಷ್ಣೆ ಅವನ ಹಟಕ್ಕೆ ಸೋತು ಪರಿಚಾರಿಣಿಯನ್ನು ಒಮ್ಮೆ ಅವನ ಮನೆಗೆ ಕಳುಹಿಸಿದಳು. ಕೀಚಕನು ದ್ರೌಪದಿಯ ವಿಷಯ ದಲ್ಲಿ ಬಲಾತ್ಕಾರದಿಂದ ವರ್ತಿಸಲು ನೋಡಿದನು. ಅವಳು ತಪ್ಪಿಸಿಕೊಂಡು ದುಃಖಿಸುತ್ತ ರಾಣಿಯ ಬಳಿಗೆ ಬಂದಳು. ಕೀಚಕನಿಂದ ಬಾಧೆಯಿಲ್ಲದೆ ಮರ್ಯಾದೆಯಿಂದ ಬಾಳುವುದು ಸಾಧ್ಯವಲ್ಲವೆಂದು ಕಂಡು ತನ್ನ ಕಷ್ಟ ವನ್ನು ಭೀಮನಿಗೆ ಹೇಳಿಕೊಂಡಳು. ಭೀಮನು ದ್ರೌಪದಿಗೆ, "ಒಂದು ರಾತ್ರಿ ಇಂಥ ಸ್ಥಳಕ್ಕೆ ಬಾ ಎಂದು ಕೀಚಕನಿಗೆ ಸಂಕೇತ ಕೊಡು, ಅಲ್ಲಿ ಅವನು ಬಂದಾಗ ನಾನು ಅವನನ್ನು ತೀರಿಸುತ್ತೇನೆ," ಎಂದನು. ಇದು ನಡೆಯಿತು. ಕೀಚಕನು ಹತನಾದನು. ಇದು ತಿಳಿದು ಕೌರವರು, ಕೀಚಕನನ್ನು ಕೊಂದವನು ಭೀಮನಿರಬೇಕು, ಪಾಂಡವರು ವಿರಾಟನಗರ ದಲ್ಲಿ ಇರಬೇಕು, ಎಂದು ಊಹಿಸಿ ಅವರನ್ನು ಬಯಲಿಗೆಳೆಯುವ ಉದ್ದೇಶ ದಿಂದ ಮತ್ಸ್ಯದೇಶದಮೇಲೆ ದಂಡೆತ್ತಿಹೋಗಿ ವಿರಾಟನ ದನಗಳನ್ನು ಹಿಡಿದರು. ದನಗಳನ್ನು ಬಿಡಿಸುವುದಕ್ಕೆ ಅರ್ಜುನನು ಕಾರಣನಾದನು. ಕೌರವರು ಸೋತು ಹಿಂತಿರುಗಿದರು. ಅಜ್ಞಾತವಾಸ ಮುಗಿಯುವ ಮುನ್ನ ತಾವು ಇವರನ್ನು ಗುರುತಿಸಿದೆವು ಎಂದು ಸಾರಿದರು.

ತನ್ನ ಹತ್ತಿರ ಸೇವೆಗೆ ನಿಂತ ಈ ಜನ ಇಂಥ ಹಿರಿಯರೆಂದು ತಿಳಿದ ಮೇಲೆ ವಿರಾಟರಾಯನಿಗೆ ತುಂಬಪಶ್ಚಾತ್ತಾಪವಾಯಿತು. ಅವನು

ಯುಧಿಷ್ಠಿರನನ್ನು ತನ್ನ ಸಿಂಹಪೀಠದಮೇಲೆ ಕುಳ್ಳಿರಿಸಿ ಅವನು ತನಗೆ ಹಿರಿಯನೆಂದು ಒಪ್ಪಿಕೊಂಡನು. ತನ್ನ ಮಗಳಾದ ಉತ್ತರೆಯನ್ನು ಅರ್ಜುನನ ಮಗನಿಗೆ ಕೊಟ್ಟು ವಿವಾಹಮಾಡಿದನು.

ಅಜ್ಞಾತವಾಸ ಮುಗಿಯುವ ಮೊದಲು ಪಾಂಡವರನ್ನು ಗುರುತಿಸಿದೆವು ಎಂದು ಕೌರವರೂ, ಅರ್ಜುನನು ಅರ್ಜುನನೆಂದು ಸ್ಪಷ್ಟವಾದ ದಿವಸಕ್ಕೆ ಅಜ್ಞಾತವಾಸದ ವರ್ಷ ಮುಗಿದು ಹೋಗಿತ್ತು ಎಂದು ಪಾಂಡವರೂ, ವಾದಿಸಿದರು. ಒಬ್ಬರ ಮಾತನ್ನು ಒಬ್ಬರು ಒಪ್ಪುವಂತೆ ಕಾಣಲಿಲ್ಲ. ಆದಕಾರಣ ಯುದ್ಧ ನಡೆಯಬೇಕಾದ ಸ್ಥಿತಿ ಒದಗಿತು. ಎರಡು ಪಕ್ಷಗಳಲ್ಲಿಯೂ ಸಾಕಾದಷ್ಟು ವಿಚಾರ ನಡೆದು ಸಂಜಯನು ಯುಧಿಷ್ಠಿರನ ಬಳಿಗೆ ಬಂದು, ರಾಜ್ಯದ ಆಸೆಯನ್ನು ಬಿಟ್ಟು ಸ್ನೇಹದಲ್ಲಿ ಬಾಳುವುದು ಅವನಿಗೆ ತಕ್ಕುದು ಎಂದು ತಿಳಿಸಿದನು. ಇದು ಪಾಂಡವರಿಗೆ ಒಪ್ಪಲಿಲ್ಲ. ಪಾಂಡವರ ಪರವಾಗಿ ಕೃಷ್ಣನು ಸಂಧಿ ನಡೆಸಲು ದುರ್ಯೋಧನನ ಬಳಿಗೆ ಬಂದನು. ಕೃಷ್ಣನ ದೌತ್ಯ ವಿಫಲವಾಯಿತು. ಧೃತರಾಷ್ಟ್ರ, ಗಾಂಧಾರಿ, ಕೂಡ ದುರ್ಯೋಧನನಿಗೆ ಬುದ್ಧಿಯಮಾತನ್ನು ಹೇಳಿದರು: ಅವನು ಲಕ್ಷಿಸಲಿಲ್ಲ. ಯುದ್ಧ ತಪ್ಪಿಸಲಾಗಲಿಲ್ಲ ಎಂಬುದನ್ನು ಕಂಡು ಕೃಷ್ಣನು ಕರ್ಣನಿಗೆ ಅವನ ಜನ್ಮದ ವೃತ್ತಾಂತವನ್ನು ತಿಳಿಸಿ ಅವನನ್ನು ಪಾಂಡವರ ಕಡೆಗೆ ಸೆಳೆದುಕೊಳ್ಳಲು ನೋಡಿದನು: ಕರ್ಣನು ಒಪ್ಪಲಿಲ್ಲ. ಕುಂತಿಯೂ ಈ ಪ್ರಯತ್ನಮಾಡಿದಳು; ಕರ್ಣನು ಅದಕ್ಕೂ ಒಳಪಡಲಿಲ್ಲ. ಕೃಷ್ಣನು ಹಿಂದಿರುಗಿದನು. ಅವನು ಹೊರಡುವಾಗ ಕುಂತಿ ಯುಧಿಷ್ಠಿರನಿಗೆ ಕ್ಷತ್ರಿಯಧರ್ಮ ಪ್ರತಿಪಾದಕವಾದ ವಿದುಲೋಪಾಖ್ಯಾನವನ್ನು ಸಂದೇಶವಾಗಿ ಹೇಳಿ ಕಳುಹಿಸಿದಳು. ಸಂಧಿ ಮುರಿದು ಎರಡು ಪಕ್ಷವೂ ಯುದ್ಧಕ್ಕೆ ಸಿದ್ಧವಾಯಿತು.

ಕೌರವ ಪಾಂಡವರ ಯುದ್ಧ ಹದಿನೆಂಟುದಿನ ನಡೆಯಿತು. ಕೌರವ ಪಕ್ಷಕ್ಕೆ ಭೀಷ್ಮನು ಮೊದಲು ಸೇನಾಧಿಪತಿಯಾದನು. ಅವನು ಹತ್ತು ದಿನ ಕಾದಿ, ತನ್ನೆದುರಿಗೆ ದ್ರುಪದನ ಮಗ ಶಿಖಂಡಿ ಬಾಣಹಿಡಿದು ಬಂದಾಗ ತಾನು ಶಿಖಂಡಿಯೊಂದಿಗೆ ಯುದ್ಧಮಾಡುವವನಲ್ಲವೆಂಬ ಸಂಕೇತದ ಕಾರಣದಿಂದ ಶಸ್ತ್ರವನ್ನು ತೊರೆದು ಯುದ್ಧದಿಂದ ವಿರತ

ನಾದನು. ಅವನ ಅನಂತರ ದ್ರೋಣನು ಸೇನಾಧಿಪತಿಯಾದನು. ಅವನು ಕಾದಿದ್ದು ಐದುದಿವಸ. ಐದನೆಯ ದಿವಸ ಇವನಿಗೆ ಮಗ ಅಶ್ವತ್ಥಾಮ ತೀರಿಕೊಂಡನೆಂಬ ಮಾತು ಕಿವಿಗೆ ಬಿದ್ದಿತು. ಇದನ್ನು ಯುಧಿಷ್ಠಿರನು ಹೇಳಿದ್ದರಿಂದ ಅದು ನಿಜವಿರಬೇಕು ಎಂದು ಗ್ರಹಿಸಿ ದ್ರೋಣನು ಯುದ್ಧದಲ್ಲಿ ಮಡಿದನು. ಅವನ ನಂತರ ಕರ್ಣನು ಸೇನಾಧಿಪತಿಯಾದನು. ಇವನು ಯುದ್ಧಮಾಡಿದ್ದು ಎರಡು ದಿವಸ. ಇವನು ಬಹು ಉದಾರಿ. ತನಗೆ ಸಾವಿಲ್ಲದಂತೆ ರಕ್ಷೆಯಾಗಿದ್ದ ಕವಚಕುಂಡಲಗಳನ್ನು, ಬ್ರಾಹ್ಮಣನೊಬ್ಬನು ಬೇಡಿದನೆಂಬ ಕಾರಣದಿಂದ, ಇವನು ಕೊಟ್ಟುಬಿಟ್ಟಿದ್ದನು. ತೊಟ್ಟ ಅಸ್ತ್ರವನ್ನು ತಿರುಗಿ ತೊಡುವುದಿಲ್ಲವೆಂದು ತಾಯಿ ಕುಂತಿಗೆ ಮಾತುಕೊಟ್ಟಿದ್ದನು. ಈ ಕಾರಣಗಳಿಂದ ತಾನು ಅರ್ಜುನನನ್ನು ಸಂಹರಿಸಬಲ್ಲವನಾಗಿದ್ದರೂ ಹಾಗೆ ಮಾಡದೆ ತನ್ನ ಮಾತನ್ನು ಕಾದುಕೊಂಡು ತಾನೇ ಮಡಿದನು.

ಕೊನೆಯದಿನ ಶಲ್ಯನು ಸೇನಾಧಿಪತಿ. ಈ ವೇಳೆಗೆ ಕೌರವ ಸಹೋದರರಲ್ಲಿ ದುರ್ಯೋಧನನ ಹೊರತು ಉಳಿದವರೆಲ್ಲ ಮಡಿದಿದ್ದರು. ಇವರ ಮಕ್ಕಳೆಲ್ಲ ಮಡಿದಿದ್ದರು. ಇವರ ಪಕ್ಷದ ನಾಯಕರೆಲ್ಲ ಮಡಿದಿದ್ದರು. ಪಾಂಡವರ ಪಕ್ಷದಲ್ಲಿ ಅರ್ಜುನ ಸುಭದ್ರೆಯರ ಮಗ ಅಭಿಮನ್ಯು ಮೊದಲಾಗಿ ಎಷ್ಟೋ ಪ್ರಮುಖಜೀವಗಳು ಕೊನೆಯಾಗಿದ್ದುವು. ಧರ್ಮಾದಿಗಳು ಈ ಐದುಜನ, ದ್ರೌಪದಿ ಹೆತ್ತ ಇವರ ಐವರು ಮಕ್ಕಳು, ಇವರು ಮಾತ್ರ ಉಳಿದಿದ್ದರು. ದುರ್ಯೋಧನನು ಆ ದಿವಸ ತನಗೆ ಕೆಟ್ಟ ದಿವಸವೆಂದು ತಿಳಿದು ಅಂದು ಹೇಗಾದರೂ ತಲೆ ಕಾಯ್ದುಕೊಂಡರೆ, ಮರುದಿನ ಯುದ್ಧದಲ್ಲಿ ಗೆಲ್ಲಬಹುದೆಂದು ಒಂದು ಸರೋವರದಲ್ಲಿ ಮುಳುಗಿ ಜಲಸ್ತಂಭನ ವಿದ್ಯೆಯಿಂದ ಜೀವವನ್ನು ಉಳಿಸಿಕೊಂಡಿದ್ದನು. ಇದು ತಿಳಿದು ಪಾಂಡವರು ಸರೋವರದ ಬಳಿಗೆ ಹೋಗಿ, ದುರ್ಯೋಧನನನ್ನು ಹೀಯಾಳಿಸಿ, ಅವನು ಹೊರಗೆಬರುವಂತೆ ಮಾಡಿದರು. ಭೀಮ ದುರ್ಯೋಧನರಿಗೆ ಗದಾಯುದ್ಧ ನಡೆಯಿತು. ಭೀಮನು ದುರ್ಯೋಧನನನ್ನು ಕೊಂದನು.

ದುರ್ಯೋಧನನು ಸಾಯುವ ಮೊದಲು ಅಶ್ವತ್ಥಾಮನು ಅವನನ್ನು ಕಂಡು ಅವನಿಂದ ಸೇನಾಧಿಪತ್ಯವನ್ನು ಪಡೆದು ಪಾಂಡವರನ್ನು ಕೊಲ್ಲ

ಹೋಗಿ ದ್ರೌಪದಿಯ ಐವರು ಮಕ್ಕಳು ಉಪಪಾಂಡವರನ್ನು ಕೊಂದು ತೀರಿಸಿದನು.

ಶಸ್ತ್ರಸಂನ್ಯಾಸ ಮಾಡಿ ಯುದ್ಧದಿಂದ ಹೊರಗೆ ನಿಂತ ಭೀಷ್ಮನು ಉತ್ತರಾಯಣದವರೆಗೆ ದೇಹವನ್ನು ಉಳಿಸುವ ಉದ್ದೇಶದಿಂದ ಶರಶಯ್ಯೆಯಲ್ಲಿ ಮಲಗಿದ್ದನು. ಯುಧಿಷ್ಠಿರನು ಅವನ ಬಳಿ ಕುಳಿತು, ರಾಜಧರ್ಮ ಮಾನವಧರ್ಮಗಳನ್ನು ತಿಳಿದುಕೊಂಡನು. ಉತ್ತರಾಯಣ ಬಂದಮೇಲೆ ಭೀಷ್ಮನು ದೇಹತ್ಯಾಗಮಾಡಿದನು.

ಯುಧಿಷ್ಠಿರನು ಪಟ್ಟಾಭಿಷಿಕ್ತನಾದನು. ಧೃತರಾಷ್ಟ್ರ ಗಾಂಧಾರಿಯರನ್ನು ತನ್ನ ತಾಯಿ ಕುಂತಿಯಂತೆಯೆ ವಿಶ್ವಾಸದಿಂದ ನೋಡಿಕೊಂಡನು. ಕೆಲವು ಕಾಲದನಂತರ ಅವರು ಆಶ್ರಮವಾಸಕ್ಕಾಗಿ ಕುಂತಿ ವಿದುರರೊಡನೆ ವನವನ್ನು ಸಾರಿದರು; ಅಲ್ಲಿ ಕೆಲವು ಕಾಲವಿದ್ದು ತೀರಿಕೊಂಡರು. ಯುಧಿಷ್ಠಿರನು ಅವರಿಗೆ ಅಪರ ಕರ್ಮಗಳನ್ನು ಮಾಡಿದನು; ಇಲ್ಲಿ ರಾಜನಾಗಿ, ಕೃಷ್ಣನ ಸಹಾಯದಿಂದ ಅಶ್ವಮೇಧವನ್ನು ನಡೆಸಿದನು.

ಇದಾದ ಸ್ವಲ್ಪಕಾಲದಲ್ಲಿ ಯಾದವರಲ್ಲಿ ಪರಸ್ಪರ ಕಲಹ ಹುಟ್ಟಿ ಕೃಷ್ಣನ ಸಂಬಂಧಿಗಳು, ಸಂತತಿ, ಎಲ್ಲ ತೀರಿಕೊಂಡರು. ಕೃಷ್ಣನು ದೇಹತ್ಯಾಗಮಾಡಿದನು.

ಕೃಷ್ಣನು ತೀರಿಕೊಂಡ ಮೇಲೆ ತಾವಿದ್ದು ಸುಖವಿಲ್ಲವೆಂದು ಯುಧಿಷ್ಠಿರನು ಮಹಾಪ್ರಸ್ಥಾನ ಮಾಡಲು ನಿರ್ಧರಿಸಿದನು. ಅಭಿಮನ್ಯುವಿನ ಮರಣದ ವೇಳೆ ಗರ್ಭಿಣಿಯಾಗಿದ್ದ ಅವನ ರಾಣಿ ಉತ್ತರೆ ಹೆತ್ತು ಇದುವರೆಗೆ ಬೆಳೆದಿದ್ದ ಪರೀಕ್ಷಿತ್‌ಕುಮಾರನಿಗೆ ರಾಜ್ಯವನ್ನೊಪ್ಪಿಸಿ ಅಣ್ಣ ತಮ್ಮಂದಿರೈವರೂ ಜೊತೆಗೆ ರಾಣಿ ದ್ರೌಪದಿಯೂ ಹಿಮಾಚಲವನ್ನು ಕುರಿತು ಪ್ರಸ್ಥಾನಮಾಡಿದರು.

ಈ ಪ್ರಯಾಣದಲ್ಲಿ ಇವರ ಜೊತೆಗೆ ಒಂದು ನಾಯಿ ಹೊರಟಿತು. ಯುಧಿಷ್ಠಿರ ನಾಯಿ ಹೊರತು ಉಳಿದವರು ಒಬ್ಬೊಬ್ಬರಾಗಿ ತೀರಿಕೊಂಡರು. ಯುಧಿಷ್ಠಿರನು ಧರ್ಮದೇವತೆಯ ಒಂದು ಪರೀಕ್ಷೆಗೆ ಸಿಕ್ಕಿ ತನ್ನ ಆನೃಶಂಸ್ಯವನ್ನು ಪ್ರಕಟಿಸಿದನು. ದೇವತೆಗಳು ಕಳುಹಿಸಿದ ವಿಮಾನವನ್ನೇರಿ ಸ್ವರ್ಗವನ್ನು ಮುಟ್ಟಿದನು.

ಸ್ವರ್ಗದಲ್ಲಿ ಮತ್ತೆ ಧರ್ಮದೇವತೆಯ ಒಂದು ಪರೀಕ್ಷೆಗೆ ಈಡಾಗಿ ಯುಧಿಷ್ಠಿರನು ಮತ್ತೆ ಗೆದ್ದನು. ಎಲ್ಲ ದೇವತೆಗಳ ಮೆಚ್ಚಿಗೆಯನ್ನೂ ಪಡೆದು ಧರ್ಮಿಷ್ಠರಾಗಿ ಬಾಳಿದ್ದ ತನ್ನ ಪ್ರಿಯ ಬಂಧುಗಳು ಸುಖಿಗಳಾಗಿರುವುದನ್ನು ಕಂಡನು. ದ್ರೌಪದಿಯನ್ನು ಕಂಡು ಅವಳು ಲೋಕದಲ್ಲಿ ಒಂದು ಉದ್ದೇಶಕ್ಕಾಗಿ ದೇಹ ತಳೆದಿದ್ದ ಆದಿಶಕ್ತಿ ಎಂಬುದನ್ನೂ ಈಗ ತಾನು ಅವಳ ಸಂಬಂಧವನ್ನು ಬಯಸಲಾಗದೆಂಬುದನ್ನೂ ದೇವತೆಗಳಿಂದ ಅರಿತನು.

ಈ ಕಥೆಯನ್ನು ಹೇಳಿ ಮಹರ್ಷಿ

**ಊರ್ಧ್ವಬಾಹುಃ ವಿರೌಮ್ಯೇಷ ನಚ ಕಶ್ಚಿತ್ ಶೃಣೋತಿಮಾಂ:**
**ಧರ್ಮಾದರ್ಥಶ್ಚ ಕಾಮಶ್ಚ ಸ ಕಿಮರ್ಥಂ ನಸೇವ್ಯತೇ?**
**ನಜಾತು ಕಾಮಾತ್ ನ ಭಯಾತ್ ನ ಲೋಭಾತ್**
**ಧರ್ಮಂ ತ್ಯಜೇತ್ ಜೀವಿತಸ್ಯಾಪಿ ಹೇತೋಃ;**
**ಧರ್ಮೋ ನಿತ್ಯಃ ಸುಖದುಃಖೇತ್ವನಿತ್ಯೇ,**
**ಜೀವೋ ನಿತ್ಯಃ ಹೇತುರಸ್ಯ ಹ್ಯನಿತ್ಯಃ.**

ಎಂದು ಸಮಾಪ್ತಿಯನ್ನು ಹಾಡಿದಾನೆ.

"ಮನುಷ್ಯನ ಈಪ್ಸಿತಗಳಾದ ಅರ್ಥವೂ ಕಾಮವೂ ಧರ್ಮದಿಂದಲೇ ದೊರೆಯುತ್ತವೆ; ಹೀಗಿದ್ದರೂ ಮನುಷ್ಯರು ಏಕೆ ಧರ್ಮವನ್ನು ಮಾರುತ್ತೀರಿ? ಯಾವುದೊ ಒಂದು ಸುಖದ ಬಯಕೆಗಾಗಿ, ಏನನ್ನೋ ಕಳೆದುಕೊಂಡೇವೆಂಬ ಭೀತಿಗಾಗಿ, ಅಥವಾ ಯಾವುದರ ವಿಷಯದಲ್ಲಿಯೋ ಮೋಹದಿಂದ ಧರ್ಮವನ್ನು ಬಿಡುವುದು ಬೇಡ; ಜೀವಿತಕ್ಕಾಗಿ ಕೂಡ ಧರ್ಮವನ್ನು ತ್ಯಜಿಸಲು ಸಲ್ಲದು. ಈ ಬಯಸುವ ಬಯಕೆಗಳು, ಕಳೆದುಕೊಳ್ಳಬಾರದೆಂದು ಭದ್ರವಾಗಿ ಕಟ್ಟಿಕೊಂಡಿರುವ ಈ ಸಂಪತ್ತು, ಈ ಮೋಹ, ಇವೆಲ್ಲ ಎಷ್ಟೇ ರುಚಿಯಾದರೂ ಕೊಂಚಕಾಲದ ಸುಖವನ್ನು ಕೊಡತಕ್ಕವು. ಧರ್ಮ ನಿತ್ಯಸುಖಕ್ಕೆ ಕಾರಣ. ಜೀವಕ್ಕಾಗಿ ಕೂಡ ಧರ್ಮವನ್ನು ಬಿಡುವುದು ಸರಿಯಲ್ಲ. ಜೀವಕ್ಕೆ ಎಂತೂ ಹಾನಿಯಿಲ್ಲ: ಅದರ ಹೇತು ಅನಿತ್ಯ. ಈ ಅನಿತ್ಯವಾದದ್ದು ಹೋದರೂ ನಿತ್ಯವಾದದ್ದು ಇದ್ದೇ ಇರುತ್ತದೆ." ಮಹರ್ಷಿ ತನ್ನ ಕಥೆಯಲ್ಲಿ ಈ ಭಾವಗಳು ಸ್ಫುಟವಾಗುವಂತೆ ಜೀವನವನ್ನು ವರ್ಣಿಸಿದಾನೆ. ಅರ್ಥವನ್ನೂ ಕಾಮವನ್ನೂ

ಜೀವಿತವನ್ನೂ ತೊರೆದಾದರೂ ಧರ್ಮವನ್ನು ಉಳಿಸಿಕೊ ಎನ್ನುವುದೇ ಕಥೆಯೆಲ್ಲದರ ಗುರಿ; ಭಾರತದ ಆದರ್ಶ. ಆದರೆ, ಧರ್ಮ ಎಂಬ ಒಂದು ಶಬ್ದ ಅನೇಕ ಜೀವನಗಳಲ್ಲಿ ಬೇರೆ ಬೇರೆ ಪದಾರ್ಥವಾಗುತ್ತದೆ. ತಂದೆಯ ಧರ್ಮ ಒಂದು, ಮಗನ ಧರ್ಮ ಒಂದು; ರಾಜನ ಧರ್ಮ ಒಂದು, ಪ್ರಜೆಯಧರ್ಮ ಒಂದು; ಒಡೆಯನ ಧರ್ಮ ಒಂದು, ಆಳಿನ ಧರ್ಮ ಒಂದು; ಪುರುಷನ ಧರ್ಮ ಒಂದು, ಸ್ತ್ರೀಯ ಧರ್ಮ ಒಂದು: ಹೀಗೆ ಒಬ್ಬೊಬ್ಬರೂ ಹುಟ್ಟಿ ಬೆಳೆದು ದುಡಿಯಬೇಕಾಗಿರುವ ಕ್ಷೇತ್ರವನ್ನು ಅನುಸರಿಸಿ ಧರ್ಮವೆನ್ನುವುದು ಬೇರೆಬೇರೆ ರೂಪವನ್ನು ತಾಳುತ್ತದೆ. ಭಾರತದ ಕಥೆ ಬಹುರೀತಿಯ ಜನ ಬಹುರೀತಿಯ ಸನ್ನಿವೇಶಗಳಲ್ಲಿ ನಡೆಯುವುದನ್ನು ಚಿತ್ರಿಸಿದೆ. ಇದರಿಂದ ಆಯಾಸ್ಥಳದಲ್ಲಿ ಅಂಥ ವ್ಯಕ್ತಿ ಹೇಗೆ ನಡೆದನು, ಎಷ್ಟರಮಟ್ಟಿಗೆ ಧರ್ಮವನ್ನು ಹಿಡಿದನು, ಎನ್ನುವುದು ಪ್ರಕಟವಾಗುತ್ತದೆ. ಹೀಗೆ ಮಹರ್ಷಿ ಸತ್ಯವಂತನಾದ ಅಣ್ಣನಿಗೆ ತಮ್ಮನಿಗೆ, ರಾಜನಿಗೆ ಪ್ರಜೆಗೆ, ಗಂಡನಿಗೆ ಹೆಂಡತಿಗೆ, ಮಿತ್ರಮಿತ್ರರಿಗೆ, ಜ್ಞಾತಿಜ್ಞಾತಿಗಳಿಗೆ, ಯಾವುದು ಧ್ಯೇಯ ಎನ್ನುವುದನ್ನು ತೋರಿಸಿದ್ದಾನೆ. ಉದ್ದೇಶಿಸಿಯೊ ಉದ್ದೇಶಿಸದೆಯೊ ಯಾವ ಕಾವ್ಯವೂ ಇದನ್ನೇ ಮಾಡುತ್ತದೆ. ಕವಿಯ ತಿಳಿವಳಿಕೆ ಯಥಾರ್ಥ, ವಿಸ್ತಾರ, ಪರಿಶುದ್ಧ ಆದಷ್ಟೂ ಧ್ಯೇಯದ ನಿರೂಪಣ ಉದಾರ, ಉನ್ನತ, ಉದ್ಧಾರಕ ಆಗುತ್ತದೆ. ಭಾರತದ ಕರ್ತೃ ಲೋಕದ ಜೀವನವನ್ನು ತೆರೆದ ಕಣ್ಣಿಂದ ನೋಡಿದ್ದ ಮಹಿಮಾವಂತ ಋಷಿ; ತತ್ತ್ವ ದ್ರಷ್ಟಾರರ ಪಂಕ್ತಿಯಲ್ಲಿ ನಿಲ್ಲುವ ಯೋಗ್ಯತೆಯುಳ್ಳ ಮಹಾಪುರುಷ. ಕೃಷ್ಣನನ್ನು ಭಗವದವತಾರ ಎಂದು ಗುರುತಿಸಿ ಲೋಕಕ್ಕೆ ಹೊಗಳಿ ಹಾಡಿದ ಈ ಮಹನೀಯನನ್ನು ಲೋಕ ಕೃಷ್ಣದ್ವೈಪಾಯನ ಎಂದೇ ಕರೆಯಿತು. ಇದರ ಅರ್ಥ ಕೃಷ್ಣನ ಸ್ವರೂಪವನ್ನು ವರ್ಣಿಸಲು ಕೃಷ್ಣನೇ ಧರಿಸಿದ ಎರಡನೆಯ ರೂಪ ಎಂದು ಇದ್ದಿರಬೇಕು. ತನ್ನ ಅಪಾರ ಮಹಿಮೆಯಿಂದ ಕೃಷ್ಣನು ಒಬ್ಬ ಅವತಾರಪುರುಷನೆಂದು ಜನಕ್ಕೆ ಕಂಡಂತೆ ಆ ಮಹಿಮೆಯನ್ನು ವರ್ಣಿಸಿದ ಕೃತಿಯ ಮಹತ್ವದಿಂದ ವ್ಯಾಸನೂ ಭಗವಂತನ ಅವತಾರವೆಂಬ ಗರಿಮೆಯನ್ನು ಪಡೆದನು.

ಕೃಷ್ಣದ್ವೈಪಾಯನಂ ವ್ಯಾಸಂ ವಿದ್ಧಿ ನಾರಾಯಣಂ ಪ್ರಭುಂ
ಕೋऽನ್ಯೋಹಿ ಭುವಿ ಮೈತ್ರೇಯ ಮಹಾಭಾರತಕೃತ್ ಭವೇತ್ ?

ಎಂದು ಮಹರ್ಷಿಯರು ಅವನನ್ನು ಹೊಗಳಿದರು.

೪

## ಯಯಾತಿ ಶಕುಂತಲಾ ಉಪಾಖ್ಯಾನಗಳು

"ನಜಾತುಕಾಮಃ ಕಾಮಾನಾಂ ಉಪಭೋಗೇನ ಶಾಮ್ಯತಿ; ಕಾಮ ಕಾಮಿತವಸ್ತುಗಳ ಉಪಭೋಗದಿಂದ ಶಮನವಾಗುವುದಿಲ್ಲ." "ನಾವಮಾನ್ಯಾಃ ತ್ವಯಾರಾಜನ್ ಅವರೋತ್ಕೃಷ್ಟ ಮಧ್ಯಮಾಃ; ಅಯ್ಯಾ ಅರಸೆ, ನೀನು ನಿನ್ನ ಜೊತೆಯವರನ್ನಾಗಲಿ ನಿನಗಿಂತ ಶ್ರೇಷ್ಠರಾದವರನ್ನಾಗಲಿ ಕಡಮೆಯಾದವರನ್ನಾಗಲಿ ಕಡಮೆಯೆಂದು ಎಣಿಸಬಾರದು." ಈ ವಾಕ್ಯಗಳು ಭಾರತ ಉಪದೇಶಿಸುವ ಧರ್ಮದ ಎರಡು ಮುಖ್ಯ ಸೂತ್ರಗಳನ್ನು ಗುರುತಿಸುತ್ತವೆ. ಇವನ್ನು ಒಳಗೊಂಡ ಚರಿತ್ರೆ ಯಯಾತಿಯದು. ಯಯಾತಿ ನಹುಷನ ಮಗ. ಅವನು ಒಂದು ದಿನ ಬೇಟೆಗೆ ಹೋಗಿ ಅನುಚರರಿಂದ ಬೇರೆಯಾಗಿ ಒಂದು ಕೊಳದಲ್ಲಿ ಬಿದ್ದಿದ್ದ ಒಬ್ಬ ಚೆಲುವೆಯನ್ನು ಕಂಡನು. ಅವಳು ಶುಕ್ರನ ಮಗಳು ದೇವಯಾನಿ. ಶುಕ್ರನು ಒಬ್ಬ ದೈತ್ಯರಾಜನ ಪುರೋಹಿತನಾಗಿದ್ದನು. ರಾಜನ ಮಗಳು ಶರ್ಮಿಷ್ಠೆ ದೇವಯಾನಿಯೊಂದಿಗೆ ವನವಿಹಾರಕ್ಕೆ ಬಂದು ಈ ಬಾವಿಯಲ್ಲಿ ಸ್ನಾನಮಾಡಿ ಮೇಲಕ್ಕೆ ಬಂದವಳು ತನ್ನ ವಸ್ತ್ರದಂತೆಯೇ ಇದ್ದ ದೇವಯಾನಿಯ ವಸ್ತ್ರವನ್ನು ಉಟ್ಟುಕೊಂಡಳು. ದೇವಯಾನಿ ಆಮೇಲೆ ಹೊರಕ್ಕೆ ಬಂದು, ನನ್ನ ವಸ್ತ್ರವನ್ನು ನೀನು ಧರಿಸಿಕೊಂಡೆ ಹೇಗೆ, ಎಂದು ಜಗಳವಾಡಿದಳು. ತಾನು ಆಚಾರ್ಯನ ಮಗಳೆಂದು ಇವಳು, ಆಚಾರ್ಯನು ಕೆಳಗೆ ನಿಂತಿರುವಾಗ ಸಿಂಹಾಸನದ ಮೇಲೆ ಕುಳಿತುಕೊಳ್ಳುವ ರಾಜನ ಮಗಳು ತಾನು ಎಂದು ಅವಳು, ನಾನು ಹೆಚ್ಚು ತಾನು ಹೆಚ್ಚು ಎಂದು ಕೂಗಾಡಿದರು. ರಾಜನ ಮಗಳು ಗೆದ್ದಳು; ಆಚಾರ್ಯನ ಮಗಳನ್ನು ಬಾವಿಯೊಳಕ್ಕೆ ತಳ್ಳಿಸಿದಳು; ಅರಮನೆಗೆ ಹೋಗಿ ತಾನು ಮಾಡಿರುವುದು ಎಂಥ ಅತ್ಯಾಚಾರ ಎಂಬುದರ ಅರಿವೇ

ಇಲ್ಲದೆ ಸ್ವಸ್ಥವಾಗಿ ನಿಂತುಬಿಟ್ಟಳು. ಒಬ್ಬನೇ ಬಂದ ಯಯಾತಿಯನ್ನು ಕಂಡು ದೇವಯಾನಿ ನನ್ನನ್ನು ಬಾವಿಯಿಂದ ಹೊರಕ್ಕೆ ಸೆಳೆದುಕೊ ಎಂದು ಬೇಡಿ ತನ್ನ ಬಲಗೈಯನ್ನು ನೀಡಿದಳು. ಯಯಾತಿ ಅವಳ ಕೈಯನ್ನು ಹಿಡಿದು ಅವಳನ್ನು ಮೇಲಕ್ಕೆ ಎಳೆದುಕೊಂಡನು. ಹೊರಕ್ಕೆ ಬಂದ ದೇವಯಾನಿ, "ನೀನು ನನ್ನ ಕೈ ಹಿಡಿದೆ, ನೀನೇ ನನಗೆ ಗಂಡ, ನನ್ನನ್ನು ಮದುವೆಯಾಗು," ಎಂದಳು. "ನೀನು ಬ್ರಾಹ್ಮಣನ ಮಗಳು, ನಾನು ಕ್ಷತ್ರಿಯ, ಈ ಸಂಬಂಧ ಕೂಡದು," ಎಂದು ಅವನು ಬಹಳವಾಗಿ ಹೇಳಿದನು. ಅವಳು ಒಪ್ಪಲಿಲ್ಲ: ತಂದೆಯನ್ನು ಕರೆಸಿ ಇವನನ್ನು ಮದುವೆಯಾಗದಿದ್ದರೆ ತಾನು ಬಾಳಲಾರೆನೆಂದು ಹೇಳಿ ಸಂಬಂಧಕ್ಕೆ ಅವನ ಒಪ್ಪಿಗೆಯನ್ನು ಪಡೆದಳು; ಮತ್ತು ತನಗೆ ಅವಮಾನಮಾಡಿದ ಶರ್ಮಿಷ್ಠೆಯನ್ನು ಕರೆಸಿ ತನಗೆ ದಾಸಿಯಾಗಿ ಮಾಡಿಕೊಡಬೇಕೆಂದಳು. ಶುಕ್ರನಿಗೆ ಮಗಳ ವಿಷಯಕ್ಕೆ ತುಂಬ ಮೋಹ. ಅವನು ದೈತ್ಯರಾಜನನ್ನು ಕಂಡು ಮಾತನಾಡಿ, ಮಗಳ ಅವಮಾನವನ್ನು ಸರಿಪಡಿಸದಿದ್ದರೆ ತಾನು ಹೊರಟು ಹೋಗುವೆನೆಂದು ಭಯವನ್ನು ತೋರಿ, ಶರ್ಮಿಷ್ಠೆಯನ್ನು ದೇವಯಾನಿಯ ದಾಸಿಯಾಗಿರಲು ಏರ್ಪಡಿಸಿದನು. ರಾಜನು ತನ್ನ ಮಗಳನ್ನು ಈ ದುರವಸ್ಥೆಗೆ ಈಡುಮಾಡಿದನೇಕೆ?

ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ತ್ಯಜೇತ್ ಕುಲಂ
ಕುಲಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್.

ಭಾರತದಲ್ಲಿ ಈ ಶ್ಲೋಕ ಬರುವುದು ಒಂದು ಸಲ ಅಲ್ಲ: ಇಲ್ಲಿ ಮೊದಲು ಬಂದಿದೆ. ದೈತ್ಯಕುಲ ಉಳಿಯುವುದಕ್ಕಾಗಿ ದೈತ್ಯರಾಜನು ತನ್ನ ಮಗಳನ್ನು ಆಚಾರ್ಯನ ಮಗಳಿಗೆ ದಾಸಿಯಾಗಿ ಕೊಡಲೂ ಹಿಂಜರಿಯಲಿಲ್ಲ.

ದೇವಯಾನಿ ರಾಣಿಯಾಗಿ, ಶರ್ಮಿಷ್ಠೆ ಅವಳ ದಾಸಿಯಾಗಿ, ಯಯಾತಿಯ ಜೊತೆಗೆ ಬಂದರು. ಅರಸನು ದೇವಯಾನಿಯನ್ನು ಪ್ರೀತಿಯಿಂದಲೆ ಕಂಡನು; ಅವಳ ವಿಷಯದಲ್ಲಿ ಸ್ವಲ್ಪ ಭಯದಿಂದಲೂ ಇದ್ದನು. ಅವಳಿಗೆ ಒಬ್ಬ ಮಗನಾಗಿ ಅವಳು ಮಗುವಿನ ವಿಷಯದಲ್ಲಿ ವ್ಯಾಪೃತಳಾಗಿರುವ ವೇಳೆ ಇವನು ಒಮ್ಮೆ ಉಪವನದಲ್ಲಿ ನಡೆದಾಗ ಶರ್ಮಿಷ್ಠೆ ಇವನ ಬಳಿಗೆ ಬಂದು ತನ್ನನ್ನು ಸ್ವೀಕರಿಸಬೇಕೆಂದು ಬೇಡಿ

ಕೊಂಡಳು. ಯಯಾತಿ ಮೊದಲು ಒಪ್ಪಲಿಲ್ಲ. ಶರ್ಮಿಷ್ಠೆ ತನಗೆ ಒಡೆಯಳಾದ ದೇವಯಾನಿಯ ಗಂಡ ತನಗೂ ಗಂಡನೇ ಸರಿ ಎಂದೂ ಪ್ರೇಮಕ್ಕೆ ಒಳಪಟ್ಟು ಅವನು ತನ್ನನ್ನು ಕೂಡಿದರೆ ಅದು ಅಸತ್ಯವಾಗುವುದಿಲ್ಲ ಎಂದೂ ಹೇಳಿ ಕೊನೆಗೂ ಅವನನ್ನು ಒಡಂಬಡಿಸಿದಳು. ಅವಳಿಗೆ ಯಯಾತಿಯಿಂದ ಮೂವರು ಮಕ್ಕಳಾದರು. ಮೊದಲ ಮಗ ಹುಟ್ಟಿದಾಗ ದೇವಯಾನಿ ಬಂದು, "ಇದೇನು ಹೀಗೆ? ನಿನ್ನನ್ನು ನೀನೇ ಕೆಡಿಸಿಕೊಂಡೆ," ಎಂದು ಕೇಳಿದಳು. ಶರ್ಮಿಷ್ಠೆ, "ಒಬ್ಬ ಋಷಿ ಬಂದನು. ಅವನ ಭಯದಿಂದ ಅವನ ಪ್ರಾರ್ಥನೆಗೆ ಒಪ್ಪಿಕೊಂಡೆನು," ಎಂದಳು. ದೇವಯಾನಿ, "ಅವನ ಗೋತ್ರನಾಮಗಳೇನು?" ಎಂದು ಕೇಳಿದಳು. ಇವಳು, "ನಾನು ಕೇಳಲಿಲ್ಲ," ಎಂದಳು. ಈ ಮುಚ್ಚುಮರೆ ಮೂವರು ಮಕ್ಕಳಾಗುವವರೆಗೂ ನಡೆಯಿತು. ಆ ವೇಳೆಗೆ ದೇವಯಾನಿಗೆ ಇಬ್ಬರು ಮಕ್ಕಳು. ಕೊನೆಗೆ ಒಂದು ದಿನ ದೇವಯಾನಿ ತನ್ನ ಮಕ್ಕಳೊಂದಿಗೆ ಯಯಾತಿಯೊಡನೆ ಉದ್ಯಾನಕ್ಕೆ ಬಂದವೇಳೆ ಶರ್ಮಿಷ್ಠೆಯ ಮಕ್ಕಳೂ ಅಲ್ಲಿಗೆ ಬಂದು ದೊರೆಯ ವಿಷಯದಲ್ಲಿ ಸಲಿಗೆಯಿಂದ ನಡೆದುಕೊಂಡವು. ಇದನ್ನು ಕಂಡು ದೇವಯಾನಿ ಶಂಕೆಪಟ್ಟಳು; ನಿಮ್ಮ ತಂದೆ ಯಾರು ಎಂದು ಆ ಮಕ್ಕಳನ್ನು ಕೇಳಿದಳು. ಅವು ಯಯಾತಿಯನ್ನು ತೋರಿಸಿದವು. ಯಯಾತಿ ನಾಚಿಕೊಂಡನು. ಶರ್ಮಿಷ್ಠೆ ಆ ಹೊತ್ತಿಗೆ ಅಲ್ಲಿಗೆ ಬಂದವಳು ತಲೆತಗ್ಗಿಸಿಕೊಂಡು ನಿಂತಳು. ದೇವಯಾನಿ ತುಂಬ ಕೋಪ ಮಾಡಿದಳು; ತನ್ನ ಗಂಡನನ್ನೂ ಗೆಳತಿ ಶರ್ಮಿಷ್ಠೆ ತನಗೆಮಾಡಿದ ಅನ್ಯಾಯವನ್ನೂ ಕುರಿತು ತಂದೆಯಲ್ಲಿ ದೂರಿಕೊಂಡಳು. ಶುಕ್ರನಿಗೆ ಕೋಪಬಂದು ಅವನು ಯಯಾತಿಯನ್ನು ಕುರಿತು, "ನೀನು ನನ್ನ ಮಗಳಿಗೆ ಅನ್ಯಾಯ ಮಾಡಿದ ಕಾರಣ ನಿನಗೆ ಒಡನೆ ಮುಪ್ಪು ಅಡಸಲಿ," ಎಂದು ಶಾಪ ಕೊಟ್ಟನು. ಒಡನೆ ಯಯಾತಿ ಮುದುಕನಾಗಿ ನಿಂತನು.

ಆಗ ಅವನು ಶುಕ್ರನನ್ನು ಕುರಿತು, "ಪೂಜ್ಯರೆ, ಏನು ಮಾಡಿಬಿಟ್ಟಿರಿ! ನನ್ನ ಆಸೆ ಇಂಗಿಲ್ಲ. ನಿಮ್ಮ ಮಗಳೂ ಯೌವನವತಿ. ನನ್ನನ್ನು ಮುದುಕನಾಗಿ ಮಾಡಿಬಿಟ್ಟಿರಲ್ಲಾ. ಇದನ್ನು ತಪ್ಪಿಸಿ ಕಾಪಾಡಿ," ಎಂದನು.

ಶುಕ್ರನು, "ನನ್ನ ಮಾತು ಸುಳ್ಳಾಗಲಾರದು. ಆದರೆ ಯಾವನಾದರೂ ಯುವಕನು ತನ್ನ ಯೌವನವನ್ನು ನಿನಗೆ ಕೊಟ್ಟು, ನಿನ್ನ ಮುಪ್ಪನ್ನು ತೆಗೆದುಕೊಳ್ಳುವುದಕ್ಕೆ ಒಪ್ಪಿದರೆ ನೀನು ನಿನ್ನ ಜರೆಯನ್ನು ಅವನಿಗೆ ಕೊಟ್ಟು ಅವನ ಯೌವನದಿಂದ ಬಾಳುವೆ," ಎಂದು ನಿವಾರಣೆ ಹೇಳಿದನು.

ಯಯಾತಿ ತನ್ನ ಐವರು ಮಕ್ಕಳಲ್ಲಿ ನಾಲ್ವರನ್ನು ಕೇಳಿದನು. ಯಾರೂ ಈ ವ್ಯಾಪಾರಕ್ಕೆ ಒಪ್ಪಲಿಲ್ಲ. ಶರ್ಮಿಷ್ಠೆಯ ಕಿರಿಯಮಗ ಪುರು ಮಾತ್ರ ಒಪ್ಪಿದನು. ತಂದೆ ಮಗನ ಯೌವನವನ್ನು ತೆಗೆದುಕೊಂಡು ಒಂದು ಸಾವಿರ ವರ್ಷ ಇಹಲೋಕದ ಸುಖಗಳನ್ನು ಅನುಭವಿಸಿದನು. ಸರಿಯಾಗಿ ಸಾವಿರ ವರ್ಷ ಮುಗಿಯಿತು; ಸುಖವನ್ನು ಕುರಿತು ಇನ್ನೂ ವೈರಾಗ್ಯ ಹುಟ್ಟಿರಲಿಲ್ಲ; ಯೋಚಿಸಿದ್ದರಲ್ಲಿ ಹುಟ್ಟುವಂತೆ ಕಾಣಲೂ ಇಲ್ಲ.

ಸ ರಾಜಾ ಸಿಂಹವಿಕ್ರಾಂತೋ ಯುವಾ ವಿಷಯಗೋಚರಃ
ಅವಿರೋಧೇನ ಧರ್ಮಸ್ಯ ಚಚಾರ ಸುಖಮುತ್ತಮಂ.
ಸ ಸಂಪ್ರಾಪ್ಯ ಶುಭಾನ್ ಕಾಮಾನ್ ತೃಪ್ತಃ ಖಿನ್ನಶ್ಚ ಪಾರ್ಥಿವಃ
ಕಾಲಂ ವರ್ಷ ಸಹಸ್ರಾಂತಂ ಸಸ್ಮಾರ ಮನುಜಾಧಿಪಃ.
ಪರಿಸಂಖ್ಯಾಯ ಕಾಲಜ್ಞಃ ಕಲಾಃ ಕಾಷ್ಠಾಶ್ಚ ವೀರ್ಯವಾನ್
ಪೂರ್ಣಂ ಮತ್ವಾ ತತಃ ಕಾಲಂ ಪೂರುಂ ಪುತ್ರಮುವಾಚಹ.
ಯಥಾಕಾಮಂ ಯಥೋತ್ಸಾಹಂ ಯಥಾ ಕಾಲಮರಿಂದಮ
ಸೇವಿತಾವಿಷಯಾ ಪುತ್ರ ಯೌವನೇನ ಮಯಾತವ.
ಪುರೋ ಪ್ರೀತೋಽಸ್ಮಿ ಭದ್ರಂತೇ ಗೃಹಾಣೇದಂ ಸ್ವ ಯೌವನಂ.

ಸಾವಿರ ವರ್ಷ ಸುಖಪಟ್ಟಿದ್ದರೂ ಅದು ಕಳೆದು ಹೋಯಿತೆಂದು ರಾಜನು ಖಿನ್ನನಾದನಂತೆ. ಕೆಲವು ಪಾಠದಲ್ಲಿ ಈ ಶ್ಲೋಕಗಳು ಬರುತ್ತವೆ:

ನಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ;
ಹವಿಷಾ ಕೃಷ್ಣವರ್ತ್ಮೇವ ಭೂಯಏವ ಅಭಿವರ್ಧತೇ.
ಯತ್ ಪೃಥಿವ್ಯಾಂ ವ್ರೀಹಿ ಯವಂ ಹಿರಣ್ಯಂ ಪಶವಃ ಸ್ತ್ರಿಯಃ
ಏಕಸ್ಯಾಪಿ ನ ಪರ್ಯಾಪ್ತಂ ತಸ್ಮಾತ್ ತೃಷ್ಣಾಂ ಪರಿತ್ಯಜೇತ್.

* * *

ಪೂರ್ಣಂ ವರ್ಷ ಸಹಸ್ರಂ ಮೇ ವಿಷಯಾಸಕ್ತ ಚೇತಸಃ
ತಥಾಪ್ಯನುದಿನಂ ತೃಷ್ಣಾ ಮಮೈತೇಷ್ವಭಿಜಾಯತೇ.

ತೃಪ್ತಿಪಡಿಸುವುದರಿಂದ ಆಸೆ ಶಮನವಾಗುವುದಿಲ್ಲ. ಬೆಂಕಿ ಸುಡುತ್ತಿದೆಯೆಂದು ಅದಕ್ಕೆ ಹವಿಸ್ಸನ್ನು ಹಾಕಿದಹಾಗೆ, ತೃಪ್ತಿಪಡಿಸಿದಷ್ಟೂ ಆಸೆ ಹೆಚ್ಚುತ್ತದೆ. ಲೋಕದಲ್ಲಿರುವ ಎಲ್ಲ ಕಾಳು, ಎಲ್ಲ ಚಿನ್ನ, ಎಲ್ಲ ಗೋವು, ಎಲ್ಲ ಹೆಣ್ಣು, ಇಷ್ಟನ್ನೂ ಒಬ್ಬನಿಗೆ ಕೊಟ್ಟರೂ ಅವನಿಗೆ ಸಾಕು ಎನ್ನಿಸುವುದಿಲ್ಲ. ಆದಕಾರಣ ಆಸೆಯನ್ನು ತೃಪ್ತಿಪಡಿಸುವ ಯತ್ನ ವ್ಯರ್ಥ. ಆಸೆಯನ್ನು ತೊರೆಯುವುದೇ ಸರಿ. ತುಂಬ ಒಂದು ಸಾವಿರ ವರ್ಷ ವಿಷಯಾಸಕ್ತನಾಗಿದ್ದ ತನಗೆ ಇನ್ನೂ ಅನುದಿನ ಆಸೆ ಹುಟ್ಟುತ್ತಲೇ ಇದ್ದಿತು.

ಕೆಲವು ಪಾಠದಲ್ಲಿ ಬರುವ ಈ ವಾಕ್ಯಗಳು ಪುರಾಣಗಳಲ್ಲಿ ಬೇರೆಯು ಕಡೆ ಬರುತ್ತವೆ. ಇವನ್ನು ಅಲ್ಲಿಂದ ತೆಗೆದುಕೊಂಡು ಇಲ್ಲಿ ಕಥಕರು ಜೋಡಿಸಿರಬಹುದು. ಇದು ಹೇಗಾದರೂ ಇವುಗಳ ಅರ್ಥ ಮೂಲದ 'ಖಿನ್ನ' ಶಬ್ದದಲ್ಲಿ ಅಡಗಿದೆ. ಅನುಭವಿಸಿದ್ದು ಸಾಲದು; ಇನ್ನೂ ಆಶೆಯಿದ್ದಿತು; ಅದರಿಂದಲೆ ದೊರೆ ಖಿನ್ನನಾದನು.

ಯಯಾತಿ ರಾಜ್ಯವನ್ನು ಬಹು ಧರ್ಮದಿಂದ ಪಾಲಿಸಿದನು. ದೇವತೆಗಳನ್ನು ಯಜ್ಞದಿಂದ, ಪಿತೃಗಳನ್ನು ಶ್ರಾದ್ಧದಿಂದ, ದೀನರನ್ನು ಅನುಗ್ರಹದಿಂದ, ದ್ವಿಜರನ್ನು ಇಷ್ಟಕಾಮುಗಳಿಂದ, ಅತಿಥಿಗಳನ್ನು ಅನ್ನಪಾನದಿಂದ, ವೈಶ್ಯರನ್ನು ಪರಿಪಾಲನದಿಂದ, ಶೂದ್ರರನ್ನು ದಾಕ್ಷಿಣ್ಯದಿಂದ, ದಸ್ಯುಗಳನ್ನು ಸನ್ನಿಗ್ರಹದಿಂದ, ಎಲ್ಲ ಪ್ರಜೆಗಳನ್ನೂ ಧರ್ಮದಿಂದ, ಯಥಾವತ್ತಾಗಿ ಒಲಿಸಿದನು. ತನ್ನ ದಿನ ಮುಗಿದು ಸ್ವರ್ಗಕ್ಕೆ ಹೋದನು. ಅವನಿಗೆ ಅಲ್ಲಿ ದೇವೇಂದ್ರನ ಸಮೀಪದಲ್ಲಿ ಉನ್ನತ ಆಸನ ದೊರೆಯಿತು. ಒಮ್ಮೆ ಇಂದ್ರನು ಅವನನ್ನು, "ಯಯಾತಿ, ನೀನು ತುಂಬ ಅನುಭವಶಾಲಿ. ನಿನ್ನಂತೆ ತಪಸ್ಸುಮಾಡಿದ ಮಹಾಶಯರು ಯಾರು?" ಎಂದು ಕೇಳಿದನು. ಯಯಾತಿ

> ನಾಹಂ ದೇವ ಮನುಷ್ಯೇಷು ನ ಗಂಧರ್ವಮಹರ್ಷಿಷು
> ಆತ್ಮನಸ್ತಪಸಾತುಲ್ಯಂ ಕಂಚಿತ್ ಪಶ್ಯಾಮಿ ವಾಸವ

ಎಂದನು. ದೇವ ಮಾನವ ಗಂಧರ್ವ ಮಹರ್ಷಿಗಳಲ್ಲಿ ಇವನ ಕಣ್ಣಿಗೆ ತನಗೆ ಸಮನಾದ ತಪಸ್ವಿಗಳು ಕಾಣಲಿಲ್ಲ. ಯಯಾತಿ 'ನಾಹಂ

ಪಶ್ಯಾಮಿ' ಎಂದು ಹೇಳುತ್ತಾನೆ. 'ನಾಸ್ತಿ' ಎಂದು ಹೇಳಲಿಲ್ಲ. ಎಂದರೆ ಸಮರೂ ಇರಬಹುದು. ಅಧಿಕರೂ ಇರಬಹುದು. ಆದರೆ ಇವನಿಗೆ ಅವರು ಕಾಣುವುದಿಲ್ಲ. ಇದೇ ಸಂದರ್ಭವನ್ನು ಭಾರತದ ಇನ್ನೊಂದು ಭಾಗದಲ್ಲಿ ಹೀಗೆ ವರ್ಣಿಸಿದೆ.

ಅವಮೇನೇ ನರಾನ್ ಸರ್ವಾನ್ ದೇವಾನ್ ಋಷಿಗಣಾನ್ ಸ್ತಥಾ
ಯಯಾತಿ ಮೂಢವಿಜ್ಞಾನೋ ವಿಸ್ಮಯಾವಿಷ್ಟಚೇತನಃ.
ತತಸ್ತಂ ಬುಬುಧೇದೇವಃ ಶಕ್ರೋ ಬಲನಿಷೂದನಃ;
ತೇಚ ರಾಜರ್ಷಯಃ ಸರ್ವೇ ಧಿಗ್‌ಧಿಗಿತ್ಯೇವಮಬ್ರುವನ್.
ವಿಚಾರಶ್ಚ ಸಮುತ್ಪನ್ನೋ ನಿರೀಕ್ಷ್ಯ ನಹುಷಾತ್ಮಜಂ
ಕೋನ್ವಯಂ ಕಸ್ಯವಾ ರಾಜ್ಞಃ ಕಥಂವಾಸ್ವರ್ಗಮಾಗತಃ.
ಕರ್ಮಣಾ ಕೇನ ಸಿದ್ಧೋಯಂ ಕ್ವವಾನೇನ ತಪಶ್ಚಿತಂ.
ಕಥಂವಾ ಜ್ಞಾಯತೇ ಸ್ವರ್ಗೇ ಕೇನವಾ ಜ್ಞಾಯತೇಪ್ಯುತ?
ಏವಂ ವಿಚಾರಯಂತಸ್ತೇ ರಾಜಾನಃ ಸ್ವರ್ಗವಾಸಿನಃ
ದೃಷ್ಟ್ವಾ ಪಪ್ರಚ್ಛುರನ್ಯೋನ್ಯಂ ಯಯಾತಿಂ ನೃಪತಿಂ ಪ್ರತಿ.
ವಿಮಾನಪಾಲಾಃ ಶತಶಃ ಸ್ವರ್ಗದ್ವಾರಾಭಿರಕ್ಷಿಣಃ
ಪೃಷ್ಟಾ ಆಸನಪಾಲಾಶ್ಚ ನಜಾನೀಮೇತ್ಯಥ ಅಬ್ರುವನ್.
ಸರ್ವೇತೇಹ್ಯಾವೃತಜ್ಞಾನಾ ನಾಭ್ಯಜಾನಂತ ತನ್ನೃಪಂ.
ಸಮುಹೂರ್ತಾದಥನೃಪೋ ಹತೌಜಾಶ್ಚಾಭವತ್ತದಾ.
ಅಥ ಪ್ರಚಲಿತ ಸ್ಥಾನಾದಾಸನಾಚ್ಚ ಪರಿಚ್ಯುತಃ
ಕಂಪಿತೇನೇವ ಮನಸಾ ಧರ್ಷಿತಶ್ಶೋಕವಹ್ನಿನಾ.
ಕಿಂ ಮಯಾ ಮನಸಾ ಧ್ಯಾತಮಶುಭಂ ಧರ್ಮದೂಷಿತಂ
ಯೇನಾಹಂ ಚಲಿತಸ್ಸ್ಥಾನಾದಿತಿ ರಾಜಾ ವ್ಯಚಿಂತಯತ್.

ಯಯಾತಿ, ತಾನು ಎಷ್ಟು ದೊಡ್ಡವನು, ಎಂದು ಯೋಚಿಸಿದೊಡನೆ ಸುತ್ತ ಇದ್ದ ದೇವತೆಗಳು ಋಷಿಗಳು ರಾಜರು 'ಛಿಛಿ' ಎಂದರು; ಇವನನ್ನು ನೋಡಿ ಇವನು ಯಾರು, ಯಾವ ಅರಸು, ಹೇಗೆ ಇಲ್ಲಿಗೆ ಬಂದನು, ಇವನನ್ನು ಯಾರಾದರೂ ಬಲ್ಲಿವೆ, ಎಂದು ಯೋಚಿಸ ತೊಡಗಿದರು; ಒಬ್ಬರನ್ನೊಬ್ಬರು ಕೇಳಿದರು. ಸಭಾಪಾಲಕರಿಗೆ ಇವನು ಯಾರು ಎನ್ನುವುದು ಮರೆತುಹೋಯಿತು. ನೃಪತಿಯ ಕಳೆ ಕುಂದಿತು, ಅವನು ತನ್ನ ಪೀಠದಿಂದ ಬಿದ್ದನು; ಆ ಸ್ಥಳದಿಂದ ದೂರವಾದನು. ಅವನ ಮನಸ್ಸು ನಡುಗಿತು; ಅವನು ದುಃಖದಿಂದ ಕಂಗೆಟ್ಟನು. "ನಾನು

ಸ್ಥಾನಚ್ಯುತನಾಗುವಂತೆ ಮನಸ್ಸಿನಲ್ಲಿ ಧರ್ಮದೂಷಿತವಾದ ಯಾವ ಅಶುಭವನ್ನು ಎಣಿಸಿದೆನು?'' ಎಂದು ಅವನು ಚಿಂತಿಸಿದನು. ಇಂದ್ರನ ದೂತನೊಬ್ಬನು

''ಅತೀವ ಮದಮತ್ತಸ್ತ್ವಂ ನ ಕಂಚಿನ್ನಾವಮನ್ಯಸೇ
ಮಾನೇನ ಭ್ರಷ್ಟಃ ಸ್ವರ್ಗಸ್ತೇ ನಾರ್ಹಸ್ತ್ವಂ ಪಾರ್ಥಿವಾತ್ಮಜ

''ಅತ್ಯಂತ ಅಹಂಕಾರಮತ್ತನಾಗಿ ನೀನು ಯಾರಿಗೂ ಅವಮಾನ ಮಾಡತಕ್ಕವನು. ನಿನ್ನ ದುರಭಿಮಾನದಿಂದ ನೀನು ಸ್ವರ್ಗಭ್ರಷ್ಟನಾದೆ. ನೀನು ಅಲ್ಲಿರಲು ಯೋಗ್ಯನಲ್ಲ'' ಎಂದು ಹೇಳಿದನು. ಕಾಲಕಳೆದು ಮೊಮ್ಮಕ್ಕಳು ಮಾಡಿದ ಪುಣ್ಯದಿಂದ ಯಯಾತಿ ಮತ್ತೆ ಸ್ವರ್ಗಕ್ಕೆ ಹೋದನು. ಆಗ ಬ್ರಹ್ಮನು ಅವನಿಗೆ

ಆವೃತಂ ತಮಸಾಚೇತಃ ಸರ್ವೇಷಾಂ ಸ್ವರ್ಗವಾಸಿನಾಂ
ಯೇನತ್ವಾಂ ನಾಭಿಜಾನಂತಿ ತತೋಽಜ್ಞಾತ್ವಾಸಿ ಪಾತಿತಃ

ಎಂದು ಆ ಹಿಂದಿನ ಅನುಭವದ ಕಾರಣವನ್ನು ವಿವರವಾಗಿ ತಿಳಿಸಿದನು. ತಾನು ಎಷ್ಟು ಶ್ರೇಷ್ಠನೆಂದು ಇವನು ಯೋಚಿಸಿದೊಡನೆ ಸ್ವರ್ಗವಾಸಿಗಳ ಚೇತಸ್ಸನ್ನು ಒಂದು ಕತ್ತಲು ಕವಿಯಿತು. ಅವರು ಇವನನ್ನು ಗುರುತಿಸ ಲಾರದೆ ಹೋದರು. ಯಯಾತಿ, ''ಭಗವನ್, ಎಷ್ಟು ಸಾವಿರ ವರ್ಷದ, ಎಷ್ಟು ಒಳ್ಳೆಯ ಕೆಲಸದ, ಅಷ್ಟೊಂದು ಪುಣ್ಯ ಒಂದು ಕ್ಷಣದ ಸ್ವಲ್ಪ ದೋಷದಿಂದ ನಷ್ಟವಾಯಿತೆ?'' ಎಂದು ಕೇಳಿದನು. ಬ್ರಹ್ಮನು ಹೇಳಿ ದನು: ''ಹೌದು ಆ ಅತ್ಯಲ್ಪದೋಷದಿಂದಲೆ ಆ ಬಹು ಪುಣ್ಯ ನಷ್ಟ ವಾಯಿತು.

ಅಭಿಮಾನೇನ ರಾಜೇಂದ್ರ ಧಿಕ್ಕೃತಃ ಸ್ವರ್ಗವಾಸಿಭಿಃ

ನೀನು ದುರಭಿಮಾನಪಟ್ಟೆ. ಸ್ವರ್ಗವಾಸಿಗಳು ನಿನ್ನನ್ನು ಧಿಕ್ಕರಿಸಿದರು.

ನಾವಮಾನ್ಯಾಸ್ತ್ವಯಾ ರಾಜನ್ ಅವರೋತ್ಕೃಷ್ಟಮಧ್ಯಮಾಃ
ನಹಿ ಮಾನಪ್ರದಗ್ಧಾನಾಂ ಕಶ್ಚಿದಸ್ತಿ ಸಮಃ ಕ್ವಚಿತ್

ನಿನಗಿಂತ ಕಡಮೆಯವರನ್ನು ಕೂಡ ನೀನು ಕಡಮೆಯೆಂದು ಎಣಿಸ ಬಾರದು. ಮಾನದಿಂದ ಪ್ರದಗ್ಧರಾದವರಿಗೆ ಸಮನಾದವರು ಎಲ್ಲಿಯೂ ಕಾಣುವುದಿಲ್ಲ.''

ಯಯಾತಿಯ ಚರಿತ್ರೆಯಂತೆ ಭಾರತದ ಆರಂಭದ ಶಕುಂತಲೋಪಾಖ್ಯಾನವೂ ಶಾಶ್ವತ ಧರ್ಮವನ್ನು ಪ್ರತಿಪಾದಿಸುತ್ತದೆ. ಭಾರತದ ಕಥೆಯನ್ನು ಅವಲಂಬಿಸಿ ಅದರಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿ ಕಾಳಿದಾಸನು ತನ್ನ ನಾಟಕವನ್ನು ನಿರ್ಮಿಸಿದನು; ಅವನ ಶಕುಂತಲೆ ದುಷ್ಯಂತರು ಅವನ ಕಾಲದ ನೀತಿ ರೀತಿಗೆ ಅನುಸಾರವಾಗಿ ಮಾರ್ಪಟ್ಟ ಸ್ತ್ರೀಪುರುಷರಾದರು. ಭಾರತದ ಶಕುಂತಲೆ ದುಷ್ಯಂತರು ಆ ಕಾವ್ಯದ ವೀರಯುಗದ ವ್ಯಕ್ತಿಗಳು. ದುಷ್ಯಂತನು ಕಣ್ವಾಶ್ರಮಕ್ಕೆ ಬಂದನು; ಅಲ್ಲಿ ಯಾರೂ ಇರಲಿಲ್ಲ. "ಯಾರಿದ್ದೀರಿ?" ಎಂದು ಅವನು ಗಟ್ಟಿಯಾಗಿ ಕೂಗಿದನು. ಲಕ್ಷ್ಮಿಯಂತೆ ರೂಪವತಿಯಾದ ತಾಪಸಿವೇಷಧಾರಿ ಕನ್ಯೆಯೊಬ್ಬಳು ಹೊರಕ್ಕೆ ಬಂದಳು; ಇವನನ್ನು ಪ್ರತಿಪೂಜಿಸಿ ಸ್ವಾಗತ ನೀಡಿದಳು; ಇವನಿಗೆ ಒಂದು ಪೀಠವನ್ನು ತೋರಿ ಅರ್ಘ್ಯಪಾದ್ಯಗಳನ್ನು ಕೊಟ್ಟಳು; "ನೀವು ಸೌಖ್ಯವೆ?" ಎಂದು ವಿಚಾರಿಸಿ "ನಮ್ಮಿಂದ ಏನಾಗಬೇಕು?" ಎಂದು ಕೇಳಿದಳು. ದುಷ್ಯಂತನು, "ನಾನು ಕಣ್ವ ಋಷಿಗಳನ್ನು ನೋಡುವುದಕ್ಕೆ ಬಂದೆನು. ಅವರು ಎಲ್ಲಿಗೆ ಹೋಗಿದ್ದಾರೆ, ತಿಳಿಸಿ," ಎಂದನು. ಶಕುಂತಲೆ, "ನಮ್ಮ ತಂದೆ ಫಲಗಳನ್ನು ತರುವುದಕ್ಕೆ ಹೋಗಿದ್ದಾರೆ. ಸ್ವಲ್ಪ ಹೊತ್ತು ನಿಲ್ಲಿರಿ. ಅವರು ಬರುವರು. ತಾವು ಅವರನ್ನು ಕಾಣಬಹುದು," ಎಂದಳು. ಶಕುಂತಲೆ ವರಾರೋಹೆ, ಶ್ರೀಮತಿ, ಚಾರುಹಾಸಿನಿ; ಅವಳ ದೇಹ ತಪಸ್ಸಿನಿಂದ ದಮದಿಂದ ವಿಭ್ರಾಜಮಾನವಾಗಿದ್ದಿತು. ರೂಪ ಯೌವನ ಸಂಪನ್ನೆಯಾದ ಅವಳನ್ನು ನೋಡಿ ದುಷ್ಯಂತನು "ನೀನು ಯಾರು? ಯಾರ ಸಂಬಂಧಿ? ಏಕೆ ವನಕ್ಕೆ ಬಂದಿದ್ದೀಯೆ? ಇಂಥ ರೂಪವಂತೆಯಾದ ನೀನು ಎಲ್ಲಿಯವಳು? ನಿನ್ನನ್ನು ನೋಡಿದೊಡನೆ ನನ್ನ ಮನಸ್ಸು ಅಪಹೃತವಾಯಿತು. ನಿನ್ನ ಗುರುತನ್ನು ತಿಳಿಯಬೇಕೆನಿಸುತ್ತದೆ. ಅದನ್ನು ಹೇಳು," ಎಂದನು.

ಶಕುಂತಲೆ ನಗುತ್ತ ಮಧುರಾಕ್ಷರವಾಗಿ, "ಓ ಅರಸೆ, ನಾನು ಕಣ್ವರ ಮಗಳಂತೆಯೆ. ಕಣ್ವರು ನನ್ನನ್ನು ಮಗಳೆಂದು ಭಾವಿಸುತ್ತಾರೆ," ಎಂದಳು. ದುಷ್ಯಂತನು, "ಕಣ್ವರು ಬ್ರಹ್ಮಚಾರಿ. ನೀನು ಅವರ ಮಗಳು ಹೇಗೆ?" ಎಂದನು. ಶಕುಂತಲೆ, "ಅರಸೆ, ಹಿಂದೆ ವಿಶ್ವಾಮಿತ್ರನು

ಬಹು ತಪಸ್ಸನ್ನು ಮಾಡಿ ಇಂದ್ರನಿಗೆ ಶಂಕೆಯುಂಟುಮಾಡಿದನು. ಅವನು ಮೇನಕೆಯನ್ನು ಕರೆದು, 'ವಿಶ್ವಾಮಿತ್ರನ ಬಳಿಗೆ ಹೋಗಿ ಅವನು ನಿನ್ನನ್ನು ಬಯಸುವಂತೆಮಾಡು. ಅವನ ಯಜ್ಞವನ್ನು ಕೆಡಿಸು. ನಾನು ನನ್ನ ಪೀಠದಿಂದ ಉರುಳದಂತೆ ಮಾಡು' ಎಂದು ನಿರೂಪಿಸಿದನು. ಅವಳು, 'ವಿಶ್ವಾಮಿತ್ರನು ಬಹು ತೇಜಸ್ವಿ. ನನ್ನಂತಹ ಒಬ್ಬ ಹೆಂಗಸು ಅಂಥ ಜಿತೇಂದ್ರಿಯನನ್ನು ಹೇಗೆ ಅಭಿಸ್ಪರ್ಶಿಸಲಿ? ಆದರೂ ನೀನು ಅಪ್ಪಣೆ ಮಾಡುವ ಕಾರಣದಿಂದ ಹೋಗುತ್ತೇನೆ. ನನಗೆ ಮನ್ಮಥನು ಸಹಾಯ ವಾಗಲಿ,' ಎಂದಳು; ವಿಶ್ವಾಮಿತ್ರನ ಆಶ್ರಮಕ್ಕೆ ಬಂದು ಅವನಿಗೆ ನಮಸ್ಕಾರಮಾಡಿ, ಹತ್ತಿರದಲ್ಲಿ ಸುಳಿಯುತ್ತಿದ್ದಳು. ಅವಳ ಬಿಳಿದಾದ ವಸ್ತ್ರವನ್ನು ಗಾಳಿ ಎತ್ತಿತು. ಬಟ್ಟೆಯನ್ನು ಸೆಳೆದುಕೊಳ್ಳುವಂತೆ ಸಂಭ್ರಾಂತ ಳಾಗಿ ತೋರಿದ ಮೇನಕೆಯನ್ನು ಋಷಿ ಕಂಡನು; ಅವಳೊಡನೆ ಕೂಡಲು ಮನಸ್ಸುಮಾಡಿ ಅವಳನ್ನು ಕರೆದನು. ಅವಳು ಒಪ್ಪಿದಳು. ಅವರು ಅಲ್ಲಿ ಇಷ್ಟದಂತೆ ರಮಿಸುತ್ತ ಬಹುಕಾಲವನ್ನು ಒಂದು ದಿವಸವೆಂಬಂತೆ ಕಳೆದರು. ಅವರ ಮಗಳು ನಾನು. ಹೀಗೆಂದು ಕಣ್ವರು ಒಬ್ಬ ಋಷಿಗೆ ಹೇಳಿದ್ದನ್ನು ನಾನು ಕೇಳಿದ್ದೇನೆ. ಮೇನಕೆ ತನ್ನ ಕೆಲಸವನ್ನು ಮುಗಿಸಿ, ಮಗುವನ್ನು ವನದಲ್ಲಿ ಬಿಟ್ಟು ಹೊರಟುಹೋದಳು. ಅದನ್ನು ಹಕ್ಕಿಗಳು ಕಾಯುತ್ತಿದ್ದವು. ಆ ಹೊತ್ತಿನಲ್ಲಿ ಕಣ್ವರು ಅಲ್ಲಿ ಬಂದು ಮಗುವನ್ನು ಕಂಡು ಅದನ್ನು ಆಶ್ರಮಕ್ಕೆ ಕರೆತಂದರು; ಮಗುವೆಂದು ಸಾಕಿದರು. ನಾನು ಹೀಗೆ ಕಣ್ವರ ಮಗಳು,'' ಎಂದಳು. ದುಷ್ಯಂತನು, ''ನೀನು ಹೇಳುವಂತೆ, ನೀನು ರಾಜಪುತ್ರಿಯೆಂಬುದು ಸುವ್ಯಕ್ತ. ನೀನು ನನ್ನ ಭಾರ್ಯೆಯಾಗು. ನಿನಗೇನು ಬೇಕು ಹೇಳು. ನಾನು ನಿನಗೆ ಸುವರ್ಣ ಮಾಲೆ, ವಸ್ತ್ರ, ಕುಂಡಲ, ಮಣಿರತ್ನನಿಷ್ಕಗಳನ್ನು ಕೊಡುತ್ತೇನೆ. ಸರ್ವ ರಾಜ್ಯವೂ ನಿನ್ನದಾಗಲಿ. ನನ್ನನ್ನು ಗಾಂಧರ್ವವಿಧಿಯಿಂದ ಮದುವೆ ಯಾಗು. ಉಳಿದೆಲ್ಲ ರೀತಿಯ ಮದುವೆಗಿಂತ ಇದು ಶ್ರೇಷ್ಠ ಎಂದು ಹೇಳಿದೆ,'' ಎಂದನು. ಶಕುಂತಲೆ, ''ಅರಸೆ, ನನ್ನ ತಂದೆ ಹಣ್ಣು ತರಲು ಹೋಗಿದ್ದಾರೆ. ಸ್ವಲ್ಪ ಹೊತ್ತು ಕಾದಿರು. ಅವರೇ ನನ್ನನ್ನು ನಿನಗೆ ಕೊಡುತ್ತಾರೆ,'' ಎಂದಳು. ದುಷ್ಯಂತನು, ''ಸುಂದರಿ, ನೀನು ನನ್ನನ್ನು

ಒಪ್ಪಬೇಕೆಂದು ನನ್ನ ಅಪೇಕ್ಷೆ. ನಾನು ನಿನ್ನನ್ನು ಬಯಸುತ್ತಿದ್ದೇನೆ. ನೀನು ನಿನ್ನನ್ನು ದಾನಮಾಡಿಕೊ. ಕ್ಷತ್ರಿಯರಿಗೆ ಯುಕ್ತವಾದ ವಿವಾಹ ಕ್ರಮಗಳಲ್ಲಿ ಗಾಂಧರ್ವ ಒಂದು. ಸಕಾಮನಾದ ನನಗೆ ಸಕಾಮಳಾಗಿ ನೀನು ಗಾಂಧರ್ವದಿಂದ ಪತ್ನಿಯಾಗುವುದು ಸರಿ,'' ಎಂದನು. ಶಕುಂತಲೆ, ''ಇದು ಸರಿಯಾದ ದಾರಿ, ನಾನು ನನ್ನನ್ನು ದಾನಮಾಡಿಕೊಳ್ಳಬಹುದು, ಎನ್ನುವುದಾದರೆ ನನ್ನ ಒಪ್ಪಿಗೆಗೆ ಸಂಬಂಧಿಸಿದ ಒಂದು ಸಮಯವನ್ನು ತಿಳಿ. ನನ್ನ ಗರ್ಭದಲ್ಲಿ ಜನಿಸುವ ಮಗನು ನಿನಗೆ ಉತ್ತರಾಧಿಕಾರಿಯಾಗ ಬೇಕು. ಇದಕ್ಕೆ ನೀನು ಒಪ್ಪಿದರೆ ನಾನು ನಿನ್ನನ್ನು ಸೇರುವೆನು,'' ಎಂದಳು.

ಏವಮಸ್ತ್ವಿತಿ ತಾಂ ರಾಜಾ ಪ್ರತ್ಯುವಾಚಾ ವಿಚಾರಯನ್.

ಯೋಚನೆಮಾಡದೆ ದುಷ್ಯಂತನು ಅವಳ ಮಾತಿಗೆ ಒಪ್ಪಿದನು.

ಅಪಿ ಚ ತ್ವಾಂ ನಯಿಷ್ಯಾಮಿ ನಗರಂ ಸ್ವಂ ಶುಚಿಸ್ಮಿತೇ;
ಯಥಾತ್ವಮರ್ಹಾ ಸುಶ್ರೋಣಿ ಸತ್ಯಮೇತದ್ಬ್ರವೀಮಿ ತೇ

ಎಂದನು. ಹೀಗೆಂದು ಆ ರಾಜರ್ಷಿ ಆ ಅನಿಂದಿತಗಾಮಿನಿಯನ್ನು ವಿಧಿವತ್ತಾಗಿ ಕೈಹಿಡಿದು ಅವಳ ಸಹವಾಸವನ್ನು ಮಾಡಿದನು. ಅವಳಿಗೆ ನಂಬಿಕೆ ಹೇಳಿ, ''ನಿನಗಾಗಿ ಚತುರಂಗ ಸೇನೆಯನ್ನು ಕಳುಹಿಸಿ ನಿನ್ನನ್ನು ಅರಮನೆಗೆ ಕರೆಸಿಕೊಳ್ಳುತ್ತೇನೆ,'' ಎಂದು ಮತ್ತೆ ಮತ್ತೆ ಮಾತು ಕೊಟ್ಟನು. ಹೀಗೆ ಹೇಳುತ್ತ ದುಷ್ಯಂತನಿಗೆ ಕಣ್ವನನ್ನು ಕುರಿತು ಯೋಚನೆ ಬಂದಿತು. ''ನನ್ನ ಈ ಕೃತ್ಯ ತಿಳಿದು ಈ ಪೂಜ್ಯ ತಪಸ್ವಿ ಏನು ಮಾಡು ವನೊ?'' ಎಂದು ಯೋಚಿಸುತ್ತಾ ಅವನು ತನ್ನ ನಗರಕ್ಕೆ ಹೋದನು. ಒಂದು ಮುಹೂರ್ತ ಕಳೆದು ಕಣ್ವನು ಆಶ್ರಮಕ್ಕೆ ಬಂದನು. ಶಕುಂತಲೆ ನಾಚಿಕೆಯಿಂದ ಅವನ ಬಳಿಗೆ ಬರಲಿಲ್ಲ. ಮಹಾತಪಸ್ವಿಯಾದ ಕಣ್ವನು ಅವಳ ಸಂಗತಿಯನ್ನು ದಿವ್ಯಜ್ಞಾನದಿಂದ ತಿಳಿದು ಪ್ರೀತನಾಗಿ, ರಾಜ ವಂಶದವಳಾದ ನೀನು ನನಗೆ ತಿಳಿಸದೆ ಒಬ್ಬ ಗಂಡನೊಡನೆ ಸೇರಿದ್ದೆನ್ನು ವುದು ಏನಿದೆ, ಇದು ಧರ್ಮಕ್ಕೆ ವಿರುದ್ಧವಲ್ಲ. ಕ್ಷತ್ರಿಯರಿಗೆ ಗಾಂಧರ್ವ ವಿವಾಹ ಶ್ರೇಷ್ಠವೆಂದು ಹೇಳಿದೆ. ಸಕಾಮಳಾದ ಹೆಣ್ಣು ಸಕಾಮನಾದ ಗಂಡನೊಂದಿಗೆ ಯಾರಿಗೂ ತಿಳಿಯದೆ, ಮಂತ್ರವಿಲ್ಲದೆ, ಸೇರಬಹುದು.

ದುಷ್ಯಂತನು ಮಹಾತ್ಮನು. ನೀನು ಮಹಾತ್ಮನಾದ ಮಹಾಬಲನಾದ ಮಗನನ್ನು ಹೆರುವೆ. ಅವನು ಈ ಸಮಸ್ತ ಭೂಮಿಯನ್ನು ಆಳುವನು.

ಯ ಇಮಾಂ ಸಾಗರಾಪಾಂಗಾಂ ಕೃತ್ಸ್ನಾಂ ಭೋಕ್ಷ್ಯತಿ ಮೇದಿನೀಂ

ಎಂದನು. ಆಗ ಶಕುಂತಲೆ ಅವನ ಕಾಲನ್ನು ತೊಳೆದು ಅವನು ವಿಶ್ರಮಿಸಿಕೊಂಡಮೇಲೆ, "ನಾನು ಪರಿಸಿರುವ ಗಂಡನ ವಿಷಯದಲ್ಲಿ ನೀನು ಪ್ರಸನ್ನನಾಗಬೇಕು," ಎಂದು ಬೇಡಿದಳು. ಕಣ್ವನು, "ನಿನ್ನ ಸಲುವಾಗಿ ನಾನು ಅವನ ವಿಷಯಕ್ಕೆ ಪ್ರಸನ್ನನಾಗಿಯೇ ಇದ್ದೇನೆ. ಅವನ ವಿಷಯ ನೀನು ಬಯಸುವ ವರವನ್ನು ಬೇಡು, ಕೊಡುತ್ತೇನೆ," ಎಂದನು.

ತತೋ ಧರ್ಮಿಷ್ಠತಾಂ ವವ್ರೇ ರಾಜ್ಯಾತ್ ಚ ಅಸ್ಖಲನಂತಥಾ
ಶಕುಂತಲಾ ಪೌರವಾಣಾಂ ದುಷ್ಯಂತಹಿತಕಾಮ್ಯಯಾ.

ಶಕುಂತಲೆ ಗರ್ಭಿಣಿಯಾದಳು; ಒಬ್ಬ ಮಗನನ್ನು ಪಡೆದಳು. ಬಾಲಕನ ಸಾಹಸಕರ್ಮಗಳನ್ನು ನೋಡಿ ಆಶ್ರಮದ ಬಾಲಕರು ಅವನನ್ನು ಸರ್ವದಮನನೆಂದು ಕರೆದರು. ಹುಡುಗನು ಬೆಳೆಯಲು ಕಣ್ವಋಷಿ ಶಕುಂತಲೆ ಮಾಡಿಕೊಂಡಿದ್ದ ಸಮಯವನ್ನು ನೆನೆದು ಅವಳನ್ನು ಮಗನೊಂದಿಗೆ ದುಷ್ಯಂತನ ಬಳಿಗೆ ಕಳುಹಿಸಿದನು. ಶಕುಂತಲೆ ರಾಜನನ್ನು ಕಂಡು, "ಇವನು ನಿನ್ನ ಮಗನು. ಇವನಿಗೆ ಯುವರಾಜ ಪಟ್ಟವನ್ನು ಕೊಡು. ನಿನ್ನ ಮಾತನ್ನು ನಡೆಸು. ನನ್ನನ್ನು ವರಿಸುವ ಮೊದಲು ನೀನು ಕೊಟ್ಟ ಮಾತನ್ನು ನೆನೆದುಕೊ," ಎಂದಳು. ಅವಳ ಮಾತನ್ನು ಕೇಳಿ ರಾಜನು, ಸ್ಮರನ್ನಪಿ ಅಬ್ರವೀನ್ನ ಸ್ಮರಾಮಿತಿ, ಜ್ಞಾಪಕವಿದ್ದರೂ, ಇವು ಯಾವುವೂ ತನಗೆ ಜ್ಞಾಪಕ ಇಲ್ಲ, ಎಂದನು. "ಕಸ್ಯತ್ವಂ ದುಷ್ಟತಾಪಸಿ?

ಧರ್ಮಕಾಮಾರ್ಥಸಂಬಂಧಂ ನಸ್ಮರಾಮಿ ತ್ವಯಾಸಹ
ಗಚ್ಛವಾ ತಿಷ್ಠವಾ ಕಾಮಂ ಯದ್ವಾಪೀಚ್ಛಸಿ ತತ್ಕುರು,

ದುಷ್ಟತಾಪಸಿ ನೀನು ಯಾರವಳು? ನಿನ್ನೊಂದಿಗೆ ಧರ್ಮಕಾಮಾರ್ಥ ಸಂಬಂಧ ಒಂದನ್ನು ನಾನರಿಯೆ. ಹೋಗುವೆಯೋ ಇರುವೆಯೋ ನಿನ್ನಿಷ್ಟದಂತೆ ನಡೆ ಹೋಗು," ಎಂದನು. ಶಕುಂತಲೆ ಮನಸ್ವಿನಿ; ಈ ಮಾತಿನಿಂದ ನಾಚಿದಂತಾದಳು; ದುಃಖದಿಂದ ಮೈಮರೆತವಳಂತೆ ನಿಶ್ಚಲವಾದ ಮರದ ತುಂಡೆಂಬಂತೆ ನಿಂತಳು. ಸಂರಂಭ, ಅಮರ್ಷದಿಂದ ಸ್ಫುರಮಾಣ

ಓಷ್ಠ ಸಂಪುಟಳಾಗಿ ತಾಮ್ರಾಕ್ಷಿ ಕಟಾಕ್ಷದಿಂದ ದಹಿಸುವಳೋ ಎಂಬಂತೆ ಅಡ್ಡನೋಟದಿಂದ ರಾಜನನ್ನು ನೋಡಿದಳು. ಕೋಪದಿಂದ ತುಂಬಿ ಮೈಯನ್ನಡಗಿಸಿಕೊಂಡು, "ಓ ಮಹಾರಾಜ, ತಿಳಿದಿದ್ದರೂ ಯಾವ ಕಾರಣದಿಂದ ತಿಳಿಯದು ಎಂದು ಒಬ್ಬ ಪ್ರಾಕೃತನಂತೆ ಹೇಳುತ್ತಿದ್ದೀಯೊ ನಾನು ಕಾಣೆ. ಆದರೆ ನಿನ್ನ ಮನಸ್ಸು ಸತ್ಯ ಅಸತ್ಯಗಳನ್ನು ಬಲ್ಲದು. ಮಾತ್ಮಾನಂ ಅವಮನ್ಯಥಾಃ, ನಿನ್ನನ್ನು ನೀನೇ ನಿರಾಕರಿಸಿಕೊಳ್ಳಬೇಡ.

ಯೋಽನ್ಯಥಾ ಸಂತಮಾತ್ಮಾನಂ ಅನ್ಯಥಾ ಪ್ರತಿಪದ್ಯತೇ
ಕಿಂತೇನ ನ ಕೃತಂ ಪಾಪಂ ಚೋರೇಣ ಆತ್ಮಾಪಹಾರಿಣಾ?
ಮನ್ಯತೇ ಪಾಪಕಂ ಕೃತ್ವಾ ನ ಕಶ್ಚಿತ್ ವೇತ್ತಿ ಮಾಮಿತಿ
ವಿದಂತಿ ಚೈನಂ ದೇವಾಶ್ಚ ಸ್ವಶ್ಚೈವಾಂತರ ಪೂರುಷಃ.
ಯಮೋ ವೈವಸ್ವತಃತಸ್ಯ ನಿರ್ಯಾತಯತಿ ದುಷ್ಕೃತಂ
ಹೃದಿ ಸ್ಥಿತಃ ಕರ್ಮಸಾಕ್ಷೀ ಕ್ಷೇತ್ರಜ್ಞೋಯಸ್ಯ ತುಷ್ಯತಿ.
ನತು ತುಷ್ಯತಿ ಯಸ್ಯೈಷ ಪುರುಷಸ್ಸದುರಾತ್ಮನಃ
ತಂ ಯಮಃ ಪಾಪಕರ್ಮಾಣಾಂ ನಿರ್ಭರ್ತ್ಸಯತಿ ದುಷ್ಕೃತಂ.
ಅವಮಾನ್ಯಾತ್ಮನಾತ್ಮಾನಂ ಅನ್ಯಥಾ ಪ್ರತಿಪದ್ಯತೇ
ದೇವಾನ ತಸ್ಯ ಶ್ರೇಯಾಂಸೋ ಯಸ್ಯಾತ್ಮಾಪಿ ನ ಕಾರಣಂ

"ನಾನೇ ಬಂದೆನೆಂದು ನನ್ನನ್ನು ನಿರಾಕರಿಸಬೇಡ. ನಾನು ಪತಿವ್ರತೆಯಾಗಿ ಬಂದಿದ್ದೇನೆ. ನನ್ನ ವಿಷಯದಲ್ಲಿ ಸಭೆಯಲ್ಲಿ ಪ್ರಾಕೃತನಂತೆ ನಡೆದುಕೊಳ್ಳುತ್ತಿದೀಯೆ. ಏಕೆ? ನಾನು ಇಲ್ಲಿ ಶೂನ್ಯದಲ್ಲಿ ಅಳುತ್ತಿಲ್ಲವಲ್ಲ. ನನ್ನ ಮೊರೆ ನಿನಗೇಕೆ ಕೇಳುವುದಿಲ್ಲ.

* * *

ಸತ್ವಂ ಸ್ವಯಮನು ಪ್ರಾಪ್ತಂ ಸಾಭಿಲಾಷಮಿಮಂಸುತಂ
ಪ್ರೇಕ್ಷಮಾಣಂಚ ಕಾಕ್ಷೇಣ ಕಸ್ಮಾರ್ಥಮವಮನ್ಯಸೇ?
ಅಂಡಾನಿ ಬಿಭ್ರತಿ ಸ್ವಾನಿ ನಭಿಂದಂತಿ ಪಿಪೀಲಿಕಾಃ
ನ ಭರೇಥಾಃ ಕಥಂ ನುತ್ವಂ ಧರ್ಮಜ್ಞಸ್ಸನ್‌ಸ್ವಮಾತ್ಮಜಂ
ನ ವಾಸಸಾಂ ನ ರಾಮಾಣಾಂ ನಾಪಾಂಸ್ಪರ್ಶಸ್ತಥಾಸುಖಃ
ಶಿಶೋರಾಲಿಂಗ್ಯಮಾನಸ್ಯ ಸ್ಪರ್ಶಸ್ಸೂನೋಃ ಯಥಾಸುಖಃ.

* * *

ಸ್ಪೃಶತುತ್ವಾಂ ಸಮಾಶ್ರಿತ್ಯ ಪುತ್ರೋಽಯಂ ಪ್ರಿಯದರ್ಶನಃ.

* * *

ನನು ನಾಮಾಂಕಮಾರೋಪ್ಯ ಸ್ನೇಹಾತ್ ಗ್ರಾಮಾಂತರಂ ಗತಾಃ
ಮೂರ್ಧ್ನಿ ಪುತ್ರಾನುಪಾಘ್ರಾಯ ಪ್ರತಿನಂದಂತಿ ಮಾನವಾಃ.
ತ್ವದಂಗೇಭ್ಯಃ ಪ್ರಸೂತೋಽಯಂ ಪುರುಷಾತ್ ಪುರುಷೋಪರಃ;
ಸರಸೀವಾಮಲೇಽತ್ಮಾನಂ ದ್ವಿತೀಯಂ ಪಶ್ಯಮೇ ಸುತಂ.''

*                *                *

ಶಕುಂತಲೆಯ ಈ ಯಾವ ಮಾತೂ ದುಷ್ಯಂತನನ್ನು ಗೆಲ್ಲಲಿಲ್ಲ. ಅವನು, ''ನಿನ್ನಲ್ಲಿ ಹುಟ್ಟಿದ ಯಾವ ಮಗನನ್ನೂ ನಾನು ಗುರುತಿಸಲಾರೆ. ಹೆಂಗಸರು ಸುಳ್ಳಾಡುವರು. ನಿನ್ನ ಮಾತನ್ನು ಯಾರು ನಂಬುವರು? ನೀನು ಹೇಳುವ ಮಾತೆಲ್ಲ ನನಗೆ ಪರೋಕ್ಷವಾಗಿದೆ. ನನಗೆ ನಿನ್ನ ಗುರುತೂ ಇಲ್ಲ. ನೀನು ಹೊರಡು; ಬೇಕಾದಲ್ಲಿಗೆ ಹೋಗು,'' ಎಂದನು. ಶಕುಂತಲೆ, ''ದೊರೆಯೆ, ಸರ್ಷಪಗಾತ್ರದ ಪರದೋಷವನ್ನು ನೀನು ಕಾಣುತ್ತಿರುವೆ. ಬಿಲ್ವಗಾತ್ರದ ಸ್ವಂತ ತಪ್ಪನ್ನು ಕಂಡೂ ಕಾಣದೆ ಇರುವೆ.

ವಿರೂಪೋ ಯಾವದಾದರ್ಶೇ ನಾತ್ಮನಃ ಪಶ್ಯತೇ ಮುಖಂ
ಮನ್ಯತೇ ತಾವದಾತ್ಮಾನಂ ಅನ್ಯೇಭ್ಯೋ ರೂಪವತ್ತರಂ.
ಯದಾತು ಮುಖಮಾದರ್ಶೇ ವಿಕೃತಂ ಸೋಭಿವೀಕ್ಷತೇ
ತದೇತರಂ ವಿಜಾನಾತಿ ಆತ್ಮಾನಂ ನೇತರಂ ಜನಂ.

''ತನ್ನ ಮುಖ ವಿರೂಪವೆನ್ನುವುದನ್ನು ಕಾಣುವವರೆಗೆ ಮನುಷ್ಯನು ತಾನು ಉಳಿದವರಿಗಿಂತ ರೂಪವಂತನೆಂದು ಭಾವಿಸುತ್ತಾನೆ. ಆತ್ಮಜ್ಞಾನವಿದ್ದಲ್ಲಿ ಪರರ ದೋಷಕಾಣುವುದಿಲ್ಲ.

ಸ್ವಯಮುತ್ಪಾದ್ಯ ವೈ ಪುತ್ರಂ ಸದೃಶಂಯೋವಮನ್ಯತೇ
''ತಸ್ಯ ದೇವಾಃ ಶ್ರಿಯಂಘ್ನಂತಿ; ನಚ ಲೋಕಾನುಪಾಶ್ನುತೇ.

''ಸದೃಶನಾದ ಮಗನನ್ನು ಪಡೆದು ನಿರಾಕರಿಸಿದವನ ಸಂಪತ್ತನ್ನು ದೇವತೆಗಳು ನಾಶಮಾಡುತ್ತಾರೆ; ಅವನಿಗೆ ಇಹಪರಗಳಿಲ್ಲ.

ಸತ್ವಂ ನೃಪತಿ ಶಾರ್ದೂಲ ನ ಪುತ್ರಂ ತ್ಯಕ್ತುಮರ್ಹಸಿ

*                *                *

ನರೇಂದ್ರ ಸಿಂಹ ಕಪಟಂ ನವೋಢುಂ ತ್ವಮಿಹಾರ್ಹಸಿ.
ವರಂ ಕೂಪಶತಾದ್ವಾಪೀ ವರಂ ವಾಪೀ ಶತಾತ್ಕ್ರತುಃ

"ವರಂ ಕ್ರತುಶತಾತ್ ಪುತ್ರಃ ಸತ್ಯಂ ಪುತ್ರಶತಾತ್ ವರಂ.
ಅಶ್ವಮೇಧ ಸಹಸ್ರಂಚ ಸತ್ಯಂಚ ತುಲಯಾ ಧೃತಂ
ಅಶ್ವಮೇಧ ಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ.
ಸರ್ವವೇದಾಧಿಗಮನಂ ಸರ್ವತೀರ್ಥಾವಗಾಹನಂ
ಸತ್ಯಂಚ ವದತೋ ರಾಜನ್ ಸಮಂ ವಾ ಸ್ಯಾನ್ನವಾಸಮಂ.
ನಾಸ್ತಿ ಸತ್ಯಾತ್ ಪರೋಧರ್ಮೋ ನಸತ್ಯಾತ್ ವಿದ್ಯತೇಪರಂ;
ನಹಿ ತೀವ್ರಕರಂ ಕಿಂಚಿತ್ ಅನೃತಾದಿಹ ವಿದ್ಯತೇ.
ರಾಜನ್ ಸತ್ಯ ಪರಂ ಬ್ರಹ್ಮ ಸತ್ಯಂಚ ಸಮಯಃಪರಃ
ಮಾತ್ಯಾಕ್ಷೀಃ ಸಮಯಂ ರಾಜನ್; ಸತ್ಯಂ ಸಂಗತ ಮಸ್ತುತೇ.
ಅನೃತೇಚೇತ್ ಪ್ರಸಂಗಸ್ತೇ ಶ್ರದ್ಧಧಾಸಿ ನಚೇತ್ಸ್ವಯಂ
ಆತ್ಮನೋ ಹಂತ ಗಚ್ಛಾಮಿ ತ್ವಾದೃಶೇ ನಾಸ್ತಿಸಂಗಮಂ.
ಋತೇಪಿ ತ್ವಯಿ ದುಷ್ಯಂತ ಶೈಲರಾಜಾವತಂಸಕಾಂ
ಚತುರಂತಾಮಿಮಾಮುರ್ವೀಂ ಪುತ್ರೋಮೇ ಪಾಲಯಿಷ್ಯತಿ.

"ನೀನು ಹೆತ್ತ ಮಗನನ್ನು ನೀನೇ ನಿರಾಕರಿಸಬೇಡ. ನೂರು ಧರ್ಮಕ್ಕಿಂತ ಒಬ್ಬ ಮಗನು ಹೆಚ್ಚು. ನೂರು ಮಕ್ಕಳಿಗಿಂತ ಒಂದು ಸತ್ಯ ಹೆಚ್ಚು. ಸಾವಿರ ಅಶ್ವಮೇಧದ ಪುಣ್ಯವನ್ನೂ ಸತ್ಯವನ್ನೂ ತೂಕಮಾಡಿದರೆ ಸತ್ಯ ಹೆಚ್ಚಾಗುತ್ತದೆ. ಸರ್ವವೇದ ಅಧಿಗಮನವೂ ಸರ್ವತೀರ್ಥ ಅವಗಾಹನವೂ ಸತ್ಯವಚನಕ್ಕೆ ಸಮವಾದೀತು, ಇಲ್ಲವೆ ಆಗಲಾರದು. ಸತ್ಯಕ್ಕಿಂತ ಹಿರಿಯ ಧರ್ಮವಿಲ್ಲ. ಸತ್ಯಕ್ಕಿಂತ ಹೆಚ್ಚು ಯಾವುದೂ ಇಲ್ಲ. ಅನೃತಕ್ಕಿಂತ ಕೀಳಾದದ್ದು ಬೇರೆ ಒಂದಿಲ್ಲ. ಸತ್ಯವನ್ನು ಬಿಡಬೇಡ ಅರಸೆ! ಅದು ಪರಬ್ರಹ್ಮ. ಅದು ಅತಿ ಶ್ರೇಷ್ಠ ಸಮಯ. ನೀನು ಅದನ್ನು ಹಿಡಿ. ಹಾಗಲ್ಲದೆ ನೀನು ಅನೃತವನ್ನೇ ಆಶ್ರಯಿಸಿದೆಯಾದರೆ ನಾನು ನನ್ನಂತೆ ಹೋಗುತ್ತೇನೆ. ನಿನ್ನ ಸಹವಾಸ ನನಗೆ ಬೇಡ. ನಿನ್ನ ಮೂಲಕ ಅಲ್ಲ, ನಿನ್ನನ್ನು ಬಿಟ್ಟೇ ನನ್ನ ಮಗನು ಶೈಲರಾಜಾವತಂಸಕವಾದ ಚತುರಂತವಾದ ಈ ಭೂಮಿಯನ್ನು ಆಳುವನಾಗುತ್ತಾನೆ," ಎಂದಳು. ಹೀಗೆ ಹೇಳಿ ಶಕುಂತಲೆ ಅಲ್ಲಿಂದ ಹೊರಟಳು. ಆಗ ಅಂತರಿಕ್ಷದಿಂದ ದುಷ್ಯಂತನಿಗೆ ಅಶರೀರವಾಣಿ,

"ಭಸ್ತ್ರಾ ಮಾತಾ; ಪಿತುಃ ಪುತ್ರೋ; ಯೇನಜಾತಃ ಸಏವ ಸಃ;
ಭರಸ್ವ ಪುತ್ರಂ, ದುಷ್ಯಂತ; ಮಾವಮಂಸ್ಥಾಃ ಶಕುಂತಲಾಂ.
ತ್ವಂಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ.

"ಶಕುಂತಲೆ ಹೇಳುವುದು ನಿಜ. ಇವನು ನಿನ್ನ ಮಗ, ಇವನನ್ನು ಭರಿಸು, ಶಕುಂತಲೆಯನ್ನು ನಿರಾಕರಿಸಬೇಡ," ಎಂದು ಹೇಳಿತು. ಈ ಮಾತನ್ನು ಕೇಳಿ ದುಷ್ಯಂತನು ಅತ್ಯಂತ ಸಂತೋಷದಿಂದ ಪುರೋಹಿತ ಅಮಾತ್ಯರನ್ನು ಕುರಿತು, "ತಾವು ಇದನ್ನು ಕೇಳೋಣಾಗಲಿ. ನಾನು ಹೀಗೆಂದು ಬಲ್ಲೆನು. ಇವನು ನನ್ನ ಮಗನು. ಈಕೆ ಹೇಳಿದಷ್ಟರಿಂದ ನಾನು ಈ ಮಗನನ್ನು ಸ್ವೀಕರಿಸಿದ್ದನಾದರೆ ಲೋಕದ ಶಂಕೆ ಇದ್ದೇ ಇರುತ್ತಿತ್ತು. ಆಗ್ಗೆ ಇವನು ಶುದ್ಧನೆನ್ನುವುದು ಸಿದ್ಧಾಂತವಾಗುತ್ತಿರಲಿಲ್ಲ." ಎಂದು ಹೇಳಿ ಮಗನನ್ನು ಹತ್ತಿರಕ್ಕೆ ಕರೆದುಕೊಂಡು ಮುಂಡೆಯನ್ನು ಮೂಸಿ ಅಪ್ಪಿಕೊಂಡನು. ಹಾಗೆಯೇ ಶಕುಂತಲೆಯನ್ನು ಕುರಿತು, "ಲೋಕ ಕಾಣದಂತೆ ನಿನ್ನೊಡನೆ ಸಂಬಂಧವನ್ನು ಮಾಡಿದೆನು. ಅದನ್ನು ಸರಿಪಡಿಸುವುದಕ್ಕಾಗಿ ಈಗ ಹೀಗೆ ನಡೆಯಬೇಕಾಯಿತು. ನೀನು ಕೋಪಿಸಿಕೊಂಡು ಯಾವ ಅಪ್ರಿಯವನ್ನು ಹೇಳಿದೆಯೋ ಪ್ರಿಯಪ್ರಣಯಿಯಾದ ನೀನು ಹೇಳಿದ ಕಾರಣದಿಂದ ಅದರ ವಿಷಯದಲ್ಲಿ ನನಗೆ ಕೋಪವಿಲ್ಲ," ಎಂದು ವಿವರಿಸಿ ಅವಳಿಗೆ ವಸನ ಅನ್ನಪಾನಗಳಿಂದ ಉಪಚಾರಮಾಡಿದನು. ಮಗನಿಗೆ "ಭರತ" ಎಂದು ಹೆಸರಿಟ್ಟು ಅವನನ್ನು ಯುವರಾಜನಾಗಿ ಮಾಡಿದನು.

## ೫
## ಶಂತನು, ಭೀಷ್ಮ

ಈ ಎರಡು ಉಪಾಖ್ಯಾನಗಳನಂತರ ಪ್ರತ್ಯಕ್ಷ ಭಾರತ ಇತಿಹಾಸ ಆರಂಭವಾಗುತ್ತದೆ. ಪುರುಭರತರ ವಂಶದ ಅರಸು ಪ್ರತೀಪನೆಂಬವನು ಒಬ್ಬನಿದ್ದನು. ಅವನು ಒಂದು ದಿನ ವಿಹಾರಕ್ಕೆ ಗಂಗಾತೀರದಲ್ಲಿ ಕುಳಿತಿರುವಾಗ ಬಹುರೂಪವತಿಯಾದ ತರುಣಿಯೊಬ್ಬಳು ಬಂದು ಅವನ ಬಲ ತೊಡೆಯಮೇಲೆ ಕುಳಿತು ನನ್ನನ್ನು ಮದುವೆಯಾಗೆಂದಳು. ಅವನು, "ನೀನು ನನ್ನ ಬಲ ತೊಡೆಯಮೇಲೆ ಕುಳಿತೆ. ಇದು ನನ್ನ ಮಗಳ ಅಥವಾ ಸೊಸೆಯ ಸ್ಥಳ. ಆದಕಾರಣ ನಾನು ನಿನ್ನನ್ನು ಹೆಂಡತಿಯೆಂದು ಭಾವಿಸಲಾರೆನು. ನೀನು ನನ್ನ ಸೊಸೆಯಾಗುವುದಾದರೆ ನಿನ್ನನ್ನು ನನ್ನ

ಮಗನಿಗಾಗಿ ಒಪ್ಪಿಕೊಳ್ಳುತ್ತೇನೆ.'' ಎಂದನು. ಆ ಸ್ತ್ರೀ ಅದಕ್ಕೆ ಒಪ್ಪಿ ಅಂತರ್ಧಾನವಾದಳು. ಮಹಾಭಿಷ ಪ್ರತೀಪನ ಮಗನಾಗಿ ಹುಟ್ಟಿದನು: ಶಂತನುವೆಂದು ಹೆಸರುಪಡೆದು ಬೆಳೆದನು. ಪ್ರತೀಪನು ತನಗೂ ಆ ಚೆಲುವೆಗೂ ಆಗಿದ್ದ ಒಪ್ಪಂದವನ್ನು ಮಗನಿಗೆ ತಿಳಿಸಿ, ಅವನನ್ನು ರಾಜ್ಯಕ್ಕೆ ಸಲ್ಲಿಸಿ ತಾನು ವನಕ್ಕೆ ತೆರಳಿದನು. ಕೆಲವುಕಾಲದ ಮೇಲೆ ಶಂತನು ನದೀತೀರದಲ್ಲಿ ಒಬ್ಬನೇ ಸುಳಿಯುತ್ತ ಆ ಸುಂದರಿಯನ್ನು ಕಂಡನು; ನೀನು ಯಾರೆಂದು ಕೇಳಿ ತನ್ನನ್ನು ವರಿಸು ಎಂದನು. ಅವಳು ಒಪ್ಪಿದಳು; ಆದರೆ ಒಂದು ಸಮಯವನ್ನು ನಿಯಮಿಸಿದಳು.

''ಯತ್ತು ಕುರ್ಯಾಮಹಂ ರಾಜನ್ ಶುಭಂವಾ ಯದಿವಾಶುಭಂ
ನ ತದ್ವಾರಯಿತವ್ಯಾಸ್ಮಿ; ನವಕ್ತವ್ಯಾ ತಥಾಪ್ರಿಯಂ.
ಏವಂ ಹಿ ವರ್ತಮಾನೇಽಹಂ ತ್ವಯಿ ವತ್ಸ್ಯಾಮಿ ಪಾರ್ಥಿವ;
ವಾರಿತಾ ವಿಪ್ರಿಯಂಚೋಕ್ತಾ ತ್ಯಜೇಯಂ ತ್ವಾಮಸಂಶಯಂ

''ನಾನು ಒಳ್ಳೆಯದನ್ನು ಮಾಡಲಿ ಕೆಟ್ಟದನ್ನು ಮಾಡಲಿ ನೀನು ನನ್ನನ್ನು ತಡೆಯಕೂಡದು ನನ್ನನ್ನು ದಂಡಿಸಕೂಡದು. ಹೀಗಾದರೆ ನಾನು ನಿನ್ನೊಡನೆ ಇರುತ್ತೇನೆ. ಎಂದೇ ಆಗಲಿ ಏನನ್ನೇ ಮಾಡುವಾಗ ಆಗಲಿ ನನ್ನನ್ನು ನೀನು ದಂಡಿಸಿದರೂ ತಡೆದರೂ ನಾನು ಖಂಡಿತವಾಗಿ ನಿನ್ನನ್ನು ಬಿಟ್ಟು ಹೋಗುವವಳು.'' ಇವಳು ಮಹಾಭಿಷನೊಂದಿಗೆ ಸ್ವರ್ಗದಲ್ಲಿ ಶಾಪಪಡೆದು ಭೂಮಿಯಲ್ಲಿ ಮಾನವ ಜೀವನವನ್ನು ನಡೆಸಲು ಇಳಿದು ಬಂದ ಗಂಗೆ. ಶಂತನು ಈ ಸಮಯಕ್ಕೆ ಒಪ್ಪಿಕೊಂಡನು. ಸುಂದರಿ ಅವನ ಪತ್ನಿಯಾಗಿ ಬಾಳತೊಡಗಿದಳು. ಕಾರಣಾಂತರದಿಂದ ಶಾಪ ಹೊಂದಿ ಭೂಮಿಯಲ್ಲಿ ಅವತರಿಸಬೇಕಾಗಿ ಬಂದಿದ್ದ ವಸುಗಳು ತಮಗೆ ಜನ್ಮಕೊಟ್ಟು ಸಹಾಯಮಾಡಬೇಕೆಂದು ಗಂಗೆಯಲ್ಲಿ ಬೇಡಿಕೊಂಡಿದ್ದರು. ಭೂಲೋಕದ ವಾಸ ಆದಷ್ಟು ಕಡಿಮೆಯಾಗುವಂತೆ ತಮ್ಮಲ್ಲಿ ಏಳು ಜನವನ್ನು ಹೆತ್ತೊಡನೆ ಕೊಂದುಬಿಡಬೇಕೆಂದು ಕೇಳಿಕೊಂಡಿದ್ದರು. ಎಂಟನೆಯವನು ಸ್ವಲ್ಪ ಹೆಚ್ಚು ತಪ್ಪಿತಸ್ಥನು. ಅವನನ್ನು ಒಡನೆಯೇ ಕೊಲ್ಲುವುದು ಬೇಡ ಎಂದೂ ತಿಳಿಸಿದ್ದರು. ಗಂಗೆ ಆಗಲಿ ಎಂದಿದ್ದಳು. ಈಗ ತಾಯಿಯಾಗಿ ಒಂದೊಂದಾಗಿ ಏಳು ಮಕ್ಕಳನ್ನು ಹೆತ್ತಳು:

ಏಳನ್ನೂ ಕೊಂದಳು. ಕೊಲ್ಲಬೇಡವೆಂದು ತಡೆದರೆ ತನ್ನನ್ನು ಇವಳು ಬಿಟ್ಟು ಹೋಗುವಳೆಂಬ ಭಯದಿಂದ ಶಂತನು ಇವಳು ಮಾಡಿದ ಕೊಲೆಗಳಿಗೆ ಅಡ್ಡಿಬಾರದೆ ಸುಮ್ಮನಿದ್ದನು. ಏಳು ಗಂಡುಮಕ್ಕಳು ಹೋದದ್ದನ್ನು ಸಹಿಸಿದ ಅವನ ಮನಸ್ಸು ಎಂಟನೆಯ ಮಗ ಕೊಲೆಯಾದಾನೆಂಬ ವೇಳೆಗೆ ಸೋತಿತು. ಅವನು

"ಮಾ ವಧೀಃ ಕಾಸಿ ಕಸ್ಯಾಸಿ ಕಿಂ ಹಿಂಸಸಿ ಸುತಾನಿತಿ
ಪುತ್ರಘ್ನಿ ಸುಮಹತ್ಪಾಪಂ ಮಾಪ್ರಾಪಸ್ತ್ವಂ ಗರ್ಹಿತೇ.

ಕೊಲ್ಲಬೇಡ, ನೀನು ಯಾರು ಏತರವಳು, ಮಕ್ಕಳನ್ನು ಏಕೆ ಹಿಂಸಿಸುತ್ತೀಯೆ, ಪುತ್ರಘ್ನಿ ಮಹಾಪಾತಕವನ್ನು ಕಟ್ಟಿಕೊಳ್ಳಬೇಡ ತಡೆ, ಗರ್ಹಿತೆ," ಎಂದನು. ಮಾಡುವ ಕೆಲಸವನ್ನು ತಡೆದಂತಾಯಿತು. ಅಪ್ರಿಯವನ್ನು ನುಡಿದದ್ದಾಯಿತು. ಸ್ತ್ರೀ ಹೇಳಿದಳು :

"ಪುತ್ರಕಾಮ ನತೇ ಹನ್ಮಿ ಪುತ್ರಂ ಪುತ್ರವತಾಂ ವರ;
ಜೀರ್ಣಸ್ತು ಮಮ ವಾಸೋಽಯಂ ಯಥಾಸ ಸಮಯಃ ಕೃತಃ.

ನಾನು ನಿನ್ನ ಮಗನನ್ನು ಕೊಲ್ಲುವುದಿಲ್ಲ. ಅವನು ಉಳಿಯುತ್ತಾನೆ. ಆದರೆ ನಾನಿನ್ನು ಹೊರಡುತ್ತೇನೆ. ನನ್ನ ನಿನ್ನ ಒಪ್ಪಂದದಂತೆ ನಮ್ಮ ಸಹವಾಸ ಈಗ್ಗೆ ಮುಗಿಯಿತು," ಎಂದಳು. ತಾನು ಗಂಗೆಯೆಂದೂ ತನ್ನ ಮತ್ತು ವಸುಗಳ ಒಪ್ಪಂದದ ಪ್ರಕಾರ ಇಷ್ಟೆಲ್ಲ ನಡೆಯಿತೆಂದೂ ತಿಳಿಸಿದಳು. ಗಂಗೆ ಉಳಿಸಿದ ಈ ಮಗನು ದೇವವ್ರತನು. ಆಮೇಲೆ ಭೀಷ್ಮ ಎಂದು ವಿಖ್ಯಾತನಾದನು.

ಗಂಗೆ ಶಂತನುವಿನ ಒಪ್ಪಿಗೆಯಿಂದ ಮಗನನ್ನು ಕರೆದುಕೊಂಡು ಹೋಗಿ ಸಾಕಿ ದೊಡ್ಡವನನ್ನು ಮಾಡಿ ಮತ್ತೆ ತಂದೆಯಬಳಿ ತಂದು ಬಿಟ್ಟಳು. ಕೆಲವುಕಾಲ ಹೀಗೆ ಕಳೆಯಲು ದೇವವ್ರತನು ಅಸಾಧಾರಣ ಕ್ಷತ್ರಿಯ ಗುಣಗಳಿಂದ ಬೆಳೆಯುತ್ತ ತಂದೆಯ ಪ್ರೇಮಕ್ಕೆ ಪಾತ್ರನಾಗಿ ಕೀರ್ತಿವಂತನಾದನು. ಒಂದು ದಿನ ಶಂತನು ಬೇಟೆಗೆಹೋಗಿ ದಾಶರಾಜನ ಮಗಳನ್ನು ಕಂಡು ತುಂಬ ಚೆಲುವೆಯಾದ ಅವಳನ್ನು ಬಯಸಿದನು. ಅವಳು "ನನ್ನ ತಂದೆಯನ್ನು ಕೇಳು" ಎನ್ನಲು ಶಂತನು ಆ ತಂದೆಯ

ಬಳಿಗೆ ಹೋದನು. ದಾಶರಾಜನು, "ಸ್ವಾಮಿ, ಅವಳು ಹುಟ್ಟಿರುವುದೇ ಒಬ್ಬ ವರನಿಗೆ ಕೊಡುವುದಕ್ಕಾಗಿ. ಅವಶ್ಯವಾಗಿ ಅವಳು ನಿಮ್ಮವಳು. ಆದರೆ ನನ್ನ ಮನಸ್ಸಿನಲ್ಲಿ ಒಂದು ಆಶೆಯಿದೆ. ತಾವು ಇವಳನ್ನು ತಮ್ಮ ಧರ್ಮಪತ್ನಿಯಾಗಿ ಮಾಡಿಕೊಳ್ಳುವುದಾದರೆ ಆ ಆಶೆಯನ್ನು ಸಲ್ಲಿಸುವುದಾಗಿ ಮಾತು ಕೊಡಿ. ನಿಮಗಿಂತ ಇನ್ನು ಒಳ್ಳೆಯ ವರನು ಇನ್ನು ಯಾರು?" ಎಂದನು. ಶಂತನು, "ನಿನ್ನ ಆಶೆಯೇನು ಎನ್ನುವುದನ್ನು ತಿಳಿದು ಅದನ್ನು ಕೊಡಬಹುದಾದರೆ ಕೊಡುತ್ತೇನೆ. ಕೊಡಬಾರದ ಬೇಡಿಕೆಯಾದರೆ ನಾನು ಒಪ್ಪಲಾರೆ," ಎಂದನು. ದಾಶನು, "ಇವಳ ಹೊಟ್ಟೆಯಲ್ಲಿ ಯಾವ ಮಗನು ಹುಟ್ಟುತ್ತಾನೆ ಅವನು ನಿಮ್ಮ ಅನಂತರ ರಾಜನಾಗಬೇಕು. ಮತ್ತೆ ಯಾರೂ ಆಗಕೂಡದು," ಎಂದನು. ಶಂತನು ಹೀಗೆ ಮಾತುಕೊಡುವುದಕ್ಕೆ ಮನಸ್ಸುಮಾಡಲಿಲ್ಲ. ಆದರೆ ಅವನಿಗೆ ದಾಶಕನ್ಯೆ ಬೇಕಾಗಿದ್ದಳು. ಅವನು ಅವಳ ವಿಷಯವನ್ನೇ ಯೋಚಿಸುತ್ತ ಹಿಂದಿರುಗಿದನು. ಬೇಟೆಯಿಂದ ಹಿಂತಿರುಗಿ ಬಂದು ತಂದೆ ಏನೋ ಚಿಂತೆಯಲ್ಲಿರುವ ಸಂಗತಿ ದೇವವ್ರತನಿಗೆ ಕಂಡಿತು. ಅವನು ತಂದೆಯ ಬಳಿ ಸಾರಿ ಚಿಂತೆಗೇನು ಕಾರಣ ಎಂದು ವಿಚಾರಿಸಿದನು. ಶಂತನು, "ನಾನು ಚಿಂತಿತನಾಗಿರುವುದು ನಿಜ. ನಮ್ಮ ಮನೆಗೆ ಮಗನು ನೀನೊಬ್ಬನೇ ಇದೀಯೆ. ಮರ್ತ್ಯರ ಅನಿತ್ಯತೆಯನ್ನು ಕುರಿತು ನಾನು ದುಃಖಿಸುತ್ತೇನೆ. ಯಾವುದೇ ರೀತಿಯಲ್ಲಿ ನೀನು ವಿಪತ್ತಿಗೆ ಸಿಕ್ಕಿದರೆ ನಮ್ಮ ಕುಲ ಅಳಿಯುತ್ತದೆ. ಗುಣಶಾಲಿಯಾದ ನೀನೊಬ್ಬ ಮಗನು ಬೇರೆ ನೂರು ಮಕ್ಕಳಿಗಿಂತ ಶ್ರೇಷ್ಠ, ನಿಜ. ನಾನು ಮತ್ತೆ ಮದುವೆಯಾಗಲು ಮನಸ್ಸು ಮಾಡಲಾರೆ. ನಮ್ಮ ಸಂತತಿ ಬೆಳೆಯಲೆಂದು ಮಾತ್ರ ಬಯಸುತ್ತಿದ್ದೇನೆ," ಎಂದನು. ದೇವವ್ರತನು ಮಹಾಬುದ್ಧಿವಂತನು; ತಂದೆಯ ಮಾತನ್ನು ಕುರಿತು ಯೋಚಿಸುತ್ತ ಹೊರಟು ಬಂದನು; ವೃದ್ಧಾಮಾತ್ಯನನ್ನು ತಂದೆಯ ಚಿಂತೆಯ ವಿಷಯದಲ್ಲಿ ಪ್ರಶ್ನೆ ಮಾಡಿದನು. ಅವನಿಂದ ದಾಶರಾಜನ ಮಗಳ ವಿಷಯ, ಅವನು ಹಾಕಿದ ನಿಯಮದ ವಿಷಯ, ತಿಳಿಯ ಬಂದವು. ದೇವವ್ರತನು ಒಡನೆ ಹಿರಿಯರನ್ನು ಜೊತೆಮಾಡಿಕೊಂಡು ದಾಶರಾಜನ ಬಳಿಗೆ ಹೋದನು. ತನ್ನ

ತಂದೆಗೆ ಅವನ ಮಗಳನ್ನು ಕೊಡಬೇಕೆಂದು ಕೇಳಿದನು. ದಾಶರಾಜನು ಅವನನ್ನು ಮರ್ಯಾದೆಯಿಂದ ಕಂಡು, "ಶಂತನು ಮಹಾರಾಜನಿಗೆ ನೀನು ಎಂಥ ಶ್ರೇಷ್ಠ ಪುತ್ರನು! ನಿನಗೆ ನಾನು ಏನು ಉತ್ತರ ಹೇಳಲಿ? ಇಂಥ ಸಂಬಂಧವನ್ನು ಒಲ್ಲೆನೆಂದು ಯಾವನು ತಾನೆ ತಪಿಸದೆ ಇದ್ದಾನು? ಇಂದ್ರನಾದರೂ ಬಯಸುವ ಸಂಬಂಧ ಇದು. ಆದರೆ ಹೆಣ್ಣಿನ ತಂದೆ ಯಾದುದರಿಂದ ನಾನು ಒಂದು ಮಾತನ್ನು ಹೇಳುವೆನು. ಬಲಿಷ್ಠವಾದ ನಿನ್ನಂಥ ಜ್ಞಾತಿಯಿರುವುದು ಈ ಸಂಬಂಧದಲ್ಲಿ ದೋಷ. ನೀನು ಯಾರಿಗೆ ಸಪತ್ನನೊ ಅವನು ಗಂಧರ್ವನಾಗಲಿ ಅಸುರನಾಗಲಿ ಕೋಪಿಷ್ಠನಾದ ನಿನ್ನ ಸನ್ನಿಧಿಯಲ್ಲಿ ಸುಖವಾಗಿ ಬಾಳಲಾರನು. ಇದೊಂದೆ ಇಲ್ಲಿ ಕೊರತೆ. ಬೇರೆ ಒಂದೂ ಇಲ್ಲ. ಕೊಡುವ ಬಿಡುವ ವಿಷಯದಲ್ಲಿ ಏತತ್ ಜಾನೀಹಿ," ಎಂದನು. ದೇವವ್ರತನು, "ಅಯ್ಯಾ ನೀನು ಹೇಳುವಂತೆ ನಾನು ಮಾಡುತ್ತೇನೆ. ನಿನ್ನ ಮಗಳಲ್ಲಿ ಹುಟ್ಟುವ ಮಗನು ನಮ್ಮ ಅರಸನಾಗು ತ್ತಾನೆ," ಎಂದು ಭಾಷೆಮಾಡಿದನು. ದಾಶನು ಮತ್ತೆ ಹೇಳಿದನು: "ಸ್ವಾಮಿ, ಸತ್ಯಧರ್ಮ ಪರಾಯಣನಾದ ನೀನು ಮಾಡಿದ ಈ ಪ್ರತಿಜ್ಞೆ ನಿನಗೆ ಅನುರೂಪವಾಗಿದೆ. ಈ ವಿಚಾರದಲ್ಲಿ ನನಗೆ ಇನ್ನು ಶಂಕೆಯಿಲ್ಲ. ಆದರೆ ನಿನ್ನ ಮಕ್ಕಳ ವಿಷಯಕ್ಕೆ ಸಂಶಯ ಪ್ರಬಲವಾಗಿ ಉಂಟು. ಆ ವಿಷಯದಲ್ಲಿ ಪ್ರತಿಜ್ಞೆ ಮಾಡಬೇಕಾಗಿದೆ." ದೇವವ್ರತನು, "ದಾಶರಾಜ, ಕೇಳುವನಾಗು. ಈ ಮೊದಲು ನಾನು ರಾಜ್ಯವನ್ನು ತ್ಯಾಗಮಾಡಿದ್ದಾಯಿತು. ಈಗ ಮಕ್ಕಳ ವಿಷಯವಾಗಿ ಈ ನಿಶ್ಚಯವನ್ನು ಮಾಡುತ್ತೇನೆ. ಇದು ಮೊದಲು ನಾನು ಮುಂದೆ ಬ್ರಹ್ಮಚಾರಿಯಾಗಿ ಇರತಕ್ಕವನು. ಅಪುತ್ರವಂತನಾದರೂ ನನಗೆ ಸ್ವರ್ಗದಲ್ಲಿ ಅಕ್ಷಯ ಲೋಕಗಳು ದೊರೆಯುತ್ತವೆ," ಎಂದು ಶಪಥಮಾಡಿದನು. ದಾಶನು ಮಗಳನ್ನು ಅವನ ಕೈಗೆ ಒಪ್ಪಿಸಿದನು. ಅವನು, "ತಾಯಿ, ನಮ್ಮ ಮನೆಗೆ ಹೋಗೋಣ ಬಾ," ಎಂದು ಅವಳನ್ನು ರಥದಲ್ಲಿ ಕುಳ್ಳಿರಿಸಿ ಕರೆತಂದು ತಂದೆಗೆ ಒಪ್ಪಿಸಿದನು.

**ತತಸ್ಸ ಪಿತುರರ್ಥಾಯ ತಾಮುವಾಚ ಯಶಸ್ವಿನೀಂ**
**ಅಧಿರೋಹ ರಥಂ ಮಾತಃ ಗಚ್ಛಾವಃ ಸ್ವಗೃಹಾನಿತಿ.**

ಏವಮುಕ್ತ್ವಾತು ಭೀಷ್ಮಸ್ತಾಂ ರಥಮಾರೋಪ್ಯಭಾಮಿನೀಂ
ಆಗಮ್ಯ ಹಾಸ್ತಿನಪುರಂ ಶಂತನೋಃ ಸಂನ್ಯವೇದಯುತ್.

ಮಗನ ಈ ದುಸ್ಸಾಧ್ಯವಾದ ವರ್ತನೆಗೆ ಮೆಚ್ಚಿ ಶಂತನು ಅವನಿಗೆ ಸ್ವಚ್ಛಂದ ಮರಣದ ವರವನ್ನು ಕೊಟ್ಟನು.

ತದ್ದೃಷ್ಟ್ವಾ ದುಷ್ಕರಂ ಕರ್ಮ ಕೃತಂ ಭೀಷ್ಮೇನ ಶಂತನುಃ
ಸ್ವಚ್ಛಂದ ಮರಣಂ ತಸ್ಮೈ ದದೌ ತುಷ್ಟಃ ಪಿತಾಸ್ವಯಂ.

ಸತ್ಯವತಿ ಪಡೆದ ಇಬ್ಬರು ಮಕ್ಕಳು ಚಿತ್ರಾಂಗದವಿಚಿತ್ರವೀರ್ಯರು ಬೆಳೆಯುವ ಮೊದಲೆ ಶಂತನು ಕಾಲವಾದನು. ಭೀಷ್ಮನು ಚಿತ್ರಾಂಗದನನ್ನು ರಾಜನಾಗಿ ನಿಲ್ಲಿಸಿದನು. ಚಿತ್ರಾಂಗದನು ಬಹು ಶೂರನು. ಒಂದು ಸಲ ಅವನಿಗೆ ಗಂಧರ್ವರೊಡನೆ ಕದನವಾಗಿ ಗಂಧರ್ವರ ನಾಯಕ ಚಿತ್ರಾಂಗದನೆಂಬವನು ಈ ಚಿತ್ರಾಂಗದನನ್ನು ಕೊಂದುಹಾಕಿದನು. ಭೀಷ್ಮನು ಅವನ ಪ್ರೇತಕಾರ್ಯಗಳನ್ನು ನಡೆಸಿ ಇನ್ನೂ ಬಾಲನಾಗಿದ್ದ ವಿಚಿತ್ರವೀರ್ಯನನ್ನು ರಾಜನಾಗಿ ನಿಲ್ಲಿಸಿದನು. ವಿಚಿತ್ರವೀರ್ಯನು ಭೀಷ್ಮನ ಮಾತನ್ನು ಅನುಸರಿಸುತ್ತ ಪಿತೃಪೈತಾಮಹವಾದ ರಾಜ್ಯವನ್ನು ಆಳಿದನು. ಮತ್ತು ಅಣ್ಣನನ್ನು ಮರ್ಯಾದೆಯಿಂದ ನೋಡಿಕೊಂಡನು. ಆ ಅಣ್ಣನೂ ತಮ್ಮನನ್ನು ಪ್ರೀತಿಯಿಂದ ಸಾಕಿದನು.

ಹತೇ ಚಿತ್ರಾಂಗದೇಭೀಷ್ಮೋಬಾಲೇಭ್ರಾತರಿಚಾನಘ
ಪಾಲಯಾಮಾಸತದ್ರಾಜ್ಯಂ ಸತ್ಯವತ್ಯಾಮತೇಸ್ಥಿತಃ.

ಹೀಗೆ ತಮ್ಮನು ರಾಜನಾಗಿರುತ್ತ ಭೀಷ್ಮನು ಮಲತಾಯಿ ಸತ್ಯವತಿಯ ಇಷ್ಟವನ್ನನುಸರಿಸಿ ರಾಷ್ಟ್ರವನ್ನು ಕಾಪಾಡಿದನು. ದಿನಕಳೆದು ವಿಚಿತ್ರವೀರ್ಯನಿಗೆ ಯೌವನಬರಲು ಭೀಷ್ಮನು ಅವನಿಗೆ ಮದುವೆ ಮಾಡಲು ಯೋಚಿಸಿದನು. ಕಾಶೀರಾಜನ ಹೆಣ್ಣುಮಗಳಿಗೆ ಸ್ವಯಂವರ ವಾಗುವುದೆಂದು ತಿಳಿದು ತಾಯ ಅಪ್ಪಣೆಯನ್ನು ಪಡೆದು ಅಲ್ಲಿಗೆ ಹೋದನು. ಸ್ವಯಂವರಮಂಟಪವನ್ನು ಸೇರಿ ಆ ಮೂವರು ಹೆಣ್ಣು ಮಕ್ಕಳನ್ನೂ ತನ್ನ ರಥಕ್ಕೆ ಏರಿಸಿಕೊಂಡು, "ಈ ಕನ್ಯೆಯರನ್ನು ನಾನು ತೆಗೆದುಕೊಂಡಿದೇನೆ. ಅಡ್ಡಿಮಾಡುವವರು ನನ್ನೊಡನೆ ಯುದ್ಧಮಾಡ

ಬಹುದು,'' ಎಂದು ಸಾರಿದನು. ಸ್ವಯಂವರಕ್ಕೆಂದು ನೆರೆದಿದ್ದ ಅರಸರು ಯುದ್ಧಕ್ಕೆ ಸಿದ್ಧರಾಗಿ ಇವನ ಹಿಂದೆ ಬಂದರು. ಅವರಿಗೂ ಭೀಷ್ಮನಿಗೂ ಯುದ್ಧವಾಯಿತು. ಸರ್ವಶಸ್ತ್ರವಿಶಾರದನಾದ ಭೀಷ್ಮನು ಅವರನ್ನೆಲ್ಲ ಸೋಲಿಸಿ ಕನ್ಯೆಯರ ಸಹಿತ ಹೊರಟುಬಂದನು. ಸಾಲ್ವನೆಂಬ ಒಬ್ಬ ರಾಜನು ಅಷ್ಟಕ್ಕೆ ನಿಲ್ಲದೆ ಇವನನ್ನು ಹಿಂಬಾಲಿಸಿದನು. ಅವನಿಗೂ ಭೀಷ್ಮನಿಗೂ ಯುದ್ಧವಾಯಿತು. ಭೀಷ್ಮನು ಸಾಲ್ವನನ್ನು ಸೋಲಿಸಿ ಅವನನ್ನು ಜೀವ ತೆಗೆಯದೆ ಬಿಟ್ಟು ಕಳುಹಿಸಿದನು. ಸೊಸೆಯರು, ಸೋದರಿಯರು, ತನ್ನ ಮಕ್ಕಳು, ಎಂಬಂತೆ ಈ ಮೂವರು ಕನ್ಯೆಯರನ್ನು ಕರೆತಂದು ಅವರನ್ನು ತಮ್ಮನಿಗೆ ಕೊಟ್ಟನು; ಮತ್ತು ಅವನ ಮದುವೆಗೆ ಏರ್ಪಾಡು ಮಾಡಿದನು. ಆ ಹೊತ್ತಿನಲ್ಲಿ ಕಾಶೀರಾಜನ ಹಿರಿಯಮಗಳು ಭೀಷ್ಮನನ್ನು ಕುರಿತು, "ನಾನು ಈ ಮೊದಲೆ ಸೌಭರಾಜ ಸಾಲ್ವನನ್ನು ಮನಸ್ಸಿನಲ್ಲಿ ಪತಿಯಾಗಿ ವರಿಸಿದೆನು. ಅವನೂ ನನ್ನನ್ನು ವರಿಸಿದ್ದನು. ಇದು ನಮ್ಮ ತಂದೆಯ ಅಪೇಕ್ಷೆಯೂ ಆಗಿದ್ದಿತು. ಹೀಗೆ ನನಗೆ ಸ್ವಯಂವರದಲ್ಲಿ ಸಾಲ್ವನನ್ನು ವರಿಸುವ ಅಭಿಪ್ರಾಯವಿದ್ದಿತು. ಇದನ್ನು ತಿಳಿಸಿದೇನೆ. ನೀನು ಧರ್ಮದಂತೆ ನಡೆಸು,'' ಎಂದಳು. ವಿಪ್ರಸಭೆಯಲ್ಲಿ ಆ ಕನ್ಯೆ ಹೀಗೆ ಹೇಳಲು ಭೀಷ್ಮನು ವೇದಪಾರಗರಾದ ಬ್ರಾಹ್ಮಣರೊಂದಿಗೆ ವಿಚಾರಮಾಡಿ ಆಕೆಗೆ ಹಿಂದಿರುಗಿಹೋಗಲು ಅನುಜ್ಞೆಯಿತ್ತು ಉಳಿದ ಇಬ್ಬರು ಸೋದರಿಯರನ್ನು ತಮ್ಮನಿಗೆ ಮದುವೆಮಾಡಿದನು. ವಿಚಿತ್ರವೀರ್ಯನು ಆಗತಾನೆ ಯೌವನವನ್ನು ಸಾರಿದ್ದನು. ರೂಪವತಿಯರಾದ ಈ ಇಬ್ಬರು ಹೆಂಡಿರನ್ನು ಪಡೆದು ಏಳುವರ್ಷ ಅವರೊಂದಿಗೆ ಸಂಸಾರಮಾಡಿದನು. ಅವನಿಗೆ ಕ್ಷಯ ಬಂದಿತು. ಸಾಧ್ಯವಾದ ಚಿಕಿತ್ಸೆಗಳನ್ನು ಮಾಡಿದರೂ ಪ್ರಯೋಜನ ಇಲ್ಲದೆ ಅವನು ಮೃತನಾದನು. ಭೀಷ್ಮನು ತಾಯಿ ಸತ್ಯವತಿಯ ಅಭಿಪ್ರಾಯವನ್ನು ಪಡೆದು ಅವನ ಪ್ರೇತ ಕಾರ್ಯಗಳನ್ನು ನಡೆಸಿದನು.

**ಪ್ರೇತಕಾರ್ಯಾಣಿ ಸರ್ವಾಣಿ ತಸ್ಯ ಸಮ್ಯಗಕಾರಯತ್**
**ರಾಜ್ಞೋ ವಿಚಿತ್ರವೀರ್ಯಸ್ಯ ಸತ್ಯವತ್ಯಾ ಮತೇಸ್ಥಿತಃ**
**ಋತ್ವಿಗ್ಭಿಃ ಸಹಿತೋ ಭೀಷ್ಮಃ ಸರ್ವೈಶ್ಚ ಕುರುಪುಂಗವೈಃ.**

ಮಕ್ಕಳಿಬ್ಬರೂ ಮಡಿದು ಪತಿಯ ವಂಶ ಅಳಿಯುವ ಸ್ಥಿತಿಗೆ ಬಂದದ್ದರಿಂದ ಸತ್ಯವತಿ ತುಂಬ ವ್ಯಥೆಗೊಂಡಳು. ಭೀಷ್ಮನನ್ನು ಕುರಿತು, "ಶಂತನುವಿನ ಪಿಂಡ, ಕೀರ್ತಿ, ಸಂತಾನ ಮೂರೂ ಈಗ ನಿನ್ನನ್ನು ಅವಲಂಬಿಸಿದೆ. ನೀನು ಧರ್ಮಿಷ್ಠನು. ಧರ್ಮವನ್ನು ಯೋಚಿಸು. ನಾನು ಹೇಳುವ ಮಾತನ್ನು ನಡೆಸು. ಮಕ್ಕಳಿಲ್ಲದೆ ತೀರಿಕೊಂಡ ನಿನ್ನ ತಮ್ಮನ ಪತ್ನಿಯರಲ್ಲಿ ಮಕ್ಕಳನ್ನು ಪಡೆ. ರಾಜನಾಗಿ ಅಭಿಷೇಕ ಮಾಡಿಕೊ. ರಾಜ್ಯವನ್ನು ಆಳು," ಎಂದಳು.

ಭೀಷ್ಮನು, "ತಾಯಿ, ನೀನು ತಿಳಿಯದವಳಲ್ಲ, ಧರ್ಮವನ್ನೇ ಹೇಳಿದೆ. ಆದರೆ ನೀನೇ ಬಲ್ಲೆ. ನಿನಗಾಗಿ ನಾನು ಒಂದು ಶುಲ್ಕ ಕೊಟ್ಟೆ. ಅಂದು ಕೊಟ್ಟಮಾತು ಯಾವುದು, ಅದನ್ನೇ ಇಂದೂ ಕೊಡುತ್ತೇನೆ. ನಾನು ಮೂರು ಲೋಕದ ರಾಜ್ಯವನ್ನೂ ಪರಿತ್ಯಜಿಸುವೆನು; ದೇವರಾಜ್ಯವನ್ನೂ ತೊರೆಯುವೆನು; ಅವಕ್ಕೆ ಹೆಚ್ಚಿನದು ಏನಿದ್ದರೆ ಅದನ್ನು ನಾನೊಲ್ಲೆನು; ಸತ್ಯವನ್ನು ಮಾತ್ರ ಬಿಡಲಾರೆ. ಪೃಥಿವಿ ಗಂಧವನ್ನು ನೀಗಿಕೊಳ್ಳಲಿ; ನೀರು ನೀರ್ಮೆಯನ್ನು ಬಿಟ್ಟುಕೊಡಲಿ; ಜ್ಯೋತಿ ತನ್ನ ರೂಪವನ್ನು ಕಳೆದುಕೊಳ್ಳಲಿ; ವಾಯು ಸ್ಪರ್ಶವನ್ನು ತೊರೆಯಲಿ; ಅರ್ಕನು ಪ್ರಭೆಯನ್ನು ನೀಗಿಕೊಳ್ಳಲಿ; ಧೂಮಕೇತು ಹಾಗೆಯೆ ಉಷ್ಣತೆಯನ್ನು ಕಳೆದುಕೊಳ್ಳಲಿ: ನಾನು ಮಾತ್ರ ಸತ್ಯವನ್ನು ಬಿಡುವ ಯೋಚನೆಯನ್ನು ಮಾಡಲಾರೆನು," ಎಂಬ ಉತ್ತರಕೊಟ್ಟನು.

ಪರಿತ್ಯಜೇಯಂ ತ್ರೈಲೋಕ್ಯಂ ರಾಜ್ಯಂ ದೇವೇಷು ವಾ ಪುನಃ
ಯದ್ವಾಪ್ಯಧಿಕಮೇತಾಭ್ಯಾಂ ನ ತು ಸತ್ಯಂ ಕಥಂಚನ;
ನತ್ವಹಂ ಸತ್ಯಮುತ್ಸ್ರಷ್ಟುಂ ವ್ಯವಸೇಯಂ ಕಥಂಚನ.

ಮಗನ ಮನಸ್ಸಿನ ಈ ನಿಶ್ಚಯವನ್ನು ತಿಳಿದು ಸತ್ಯವತಿ ತನ್ನ ಮತ್ತೊಬ್ಬ ಮಗ ವ್ಯಾಸನನ್ನು ಬರಮಾಡಿ ಅವನಿಂದ ವಿಚಿತ್ರವೀರ್ಯನ ಪತ್ನಿಯರಲ್ಲಿ ಮಕ್ಕಳನ್ನು ಪಡೆಯುವ ಯೋಚನೆಯನ್ನು ಮಾಡಿದಳು.

ಇದು ನಡೆಯುವ ಕಾಲಕ್ಕೆ ಭೀಷ್ಮನಿಗೆ ಸುಮಾರು ಐವತ್ತುವರ್ಷ ವಯಸ್ಸಿದ್ದಿರಬಹುದು. ಪಾಂಡು ಧೃತರಾಷ್ಟ್ರ ವಿದುರರು ಹುಟ್ಟಿ ದೊಡ್ಡವರಾಗುವವರೆಗೂ ಇವನೇ ರಾಜ್ಯವನ್ನಾಳಿದನು. ಆದರೆ ಸುಮಾರು

ಆ ಇಪ್ಪತ್ತು ವರ್ಷದ ಕಾಲದಲ್ಲಿ ಎಂದೇ ಆಗಲಿ ಅವನಿಗೆ ತಾನೇ ಏಕೆ ರಾಜನಾಗಬಾರದೆಂಬ ಯೋಚನೆ ಹುಟ್ಟಲಿಲ್ಲ. ತನ್ನ ತಮ್ಮನ ಮಕ್ಕಳಿಗಾಗಿ ಅವನು ರಾಜ್ಯವನ್ನು ರಕ್ಷಿಸಿ ಉಳಿಸಿದನು. ಹುಡುಗರು ದೊಡ್ಡವರಾದರು. ಹಿರಿಯವನಾದ ಧೃತರಾಷ್ಟ್ರ ಕುರುಡ: ಅವನು ರಾಜನಾಗಲು ಅರ್ಹನಲ್ಲ. ಪಾಂಡು ರಾಜನಾದನು; ಆದರೂ ಪ್ರೇಮದಿಂದ ಧೃತರಾಷ್ಟ್ರನನ್ನೇ ರಾಜನೆನ್ನುತ್ತ ಮುಂದೆ ಇಟ್ಟುಕೊಂಡು ತಾನು ಕೆಲಸದಲ್ಲಿ ತೊಡಗಿದನು. ವಿದುರನು ಮಂತ್ರಿ. ಭೀಷ್ಮನು ಈ ಮೂವರು ಕುಮಾರರನ್ನು ಒಂದೇ ತೆರದ ಪ್ರೀತಿಯಿಂದ ನೋಡಿಕೊಂಡನು. ದೈವವಶಾತ್ ಪಾಂಡು ರಾಜ್ಯವನ್ನು ಬಿಟ್ಟು ತಪೋವನಕ್ಕೆ ಹೋಗುವ ಸಂದರ್ಭ ಒದಗಿದಾಗ ಮತ್ತೆ ರಾಜ್ಯದ ಹೊರೆ ಒಂದು ಅರ್ಥದಲ್ಲಿ ಇವನ ಕೈಗೆ ಬಂದಿತು. ಧೃತರಾಷ್ಟ್ರನಿಗೆ ಮಕ್ಕಳಾಗಿ ಬೆಳೆದು, ಪಾಂಡುವಿನ ಮಕ್ಕಳು ವನದಲ್ಲಿ ಹುಟ್ಟಿ ಬೆಳೆದು ಹಸ್ತಿನಾವತಿಗೆ ಬಂದು, ಇವರೆಲ್ಲರ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡುವ ಕಾಲಕ್ಕೆ ಸಂಸಾರದ ಸೂತ್ರ ಭೀಷ್ಮನ ಕೈಯಲ್ಲಿಯೇ ಇದ್ದಿತು: ವಿದುರ ಅವನಿಗೆ ಸಹಾಯಕ. ಸೊಸೆಯರಾದ ಗಾಂಧಾರಿ ಕುಂತಿ ದಕ್ಷೆಯರು: ಪಿತಾಮಹನಿಗೆ ಅವರ ನೆರವೂ ಇದ್ದಿತು. ಮೊಮ್ಮಕ್ಕಳು ಪ್ರವರ್ಧಮಾನರಾಗಿ ರಾಜ್ಯವನ್ನು ನೋಡಿಕೊಳ್ಳಬಲ್ಲರು ಎಂಬ ಸ್ಥಿತಿ ಬರುವವೇಳೆಗೆ ಭೀಷ್ಮನಿಗೆ ಹತ್ತಿರಹತ್ತಿರ ಎಂಬತ್ತು ವರ್ಷ ಆಗಿದ್ದಿರಬೇಕು. ದುರ್ಯೋಧನ ದುಶ್ಶಾಸನರು ಇತ್ತ, ಐದು ಜನ ಪಾಂಡವರು ಅತ್ತ, ಎರಡು ಪಕ್ಷವಾಗಿ ನಿಂತುಕೊಂಡ ದುಸ್ಥಿತಿಯನ್ನು ಈ ಮುದುಕ ನೋಡಬೇಕಾಯಿತು. ಮನೆಗೆ ಹಿರಿಯ; ಆದರೆ, ತನ್ನ ಮಾತಿನಂತೆ ನಡೆಯಬೇಕೆಂದು ಹಟ ಮಾಡುವವನಲ್ಲ. ಮನೆ ತನ್ನದಲ್ಲ; ಮಕ್ಕಳದು ಮೊಮ್ಮಕ್ಕಳದು; ಅವರು ತಮಗೆ ಸರಿಯೆಂದು ಕಂಡಂತೆ ಬಾಳಬೇಕು. ಎಲ್ಲವನ್ನೂ ಬಿಟ್ಟು ಸಂನ್ಯಾಸಿಕಲ್ಪನಾಗಿನಿಂತ ತಾನು ಯಾರಿಗೆ ಯಾವ ಶಾಸನವನ್ನು ಮಾಡಬಹುದು? ಭೀಷ್ಮನ ಈ ಮನೋಧರ್ಮವನ್ನು ಅರಿಯದೆ ಇದ್ದರೆ, ಅಲ್ಲದೆ ಅವನಿಗೆ ಎಷ್ಟು ವಯಸ್ಸಾಗಿತ್ತು ಎನ್ನುವುದನ್ನು ನೆನೆಯದೆ ಇದ್ದರೆ, ಪಾಂಡವ ಕೌರವರ ಮಧ್ಯೆ ಬೆಳೆದ ವಿದ್ವೇಷದ ವೃದ್ಧಿಯ ರೀತಿ ವಿಚಿತ್ರವೆಂದು ಕಾಣುತ್ತದೆ. ದುರ್ಯೋಧ

ನನು ಪಾಂಡವರನ್ನು ಅರಗಿನಮನೆಯಲ್ಲಿ ಸುಡುವುದಕ್ಕೆ ಯತ್ನಮಾಡಿದ್ದು ಭೀಷ್ಮನಿಗೆ ತಿಳಿಯಲಿಲ್ಲ; ವಿದುರನಿಗೆ ತಿಳಿದಿದ್ದಿತು. ಮನೆಸುಟ್ಟು ಅದರಲ್ಲಿ ಪಾಂಡವರೂ ಅವರ ತಾಯೂ ಸುಟ್ಟುಹೋದರೆಂದು ಸುದ್ದಿ ಬಂದಾಗ ಭೀಷ್ಮನು ಬಹಳವಾಗಿ ಪರಿತಪಿಸಿದನು. ವಿದುರನು ಅವನನ್ನು ಒಂದು ಕಡೆ ಕರೆದು ಪಾಂಡವರ ನಿಜದ ಸ್ಥಿತಿಯನ್ನು ತಿಳಿಸಲು ಈ ತಾತನಿಗೆ ಸ್ವಲ್ಪ ಸಮಾಧಾನವಾಯಿತು. ಪಾಂಡವರು ಮದುವೆ ಮಾಡಿಕೊಂಡು ಮರಳಿ ಬಂದಾಗ ಇವನಿಗೆ ತುಂಬ ಸಂತೋಷ.

ಯಥಾಚಧೃತರಾಷ್ಟ್ರೋಮೇತಥಾ ಪಾಂಡುರಸಂಶಯಂ
ಗಾಂಧಾರ್ಯಾಶ್ಚಯಥಾಪುತ್ರಾಃ ತಥಾಕುಂತೀಸುತಾಮತಾಃ.

*　　　*　　　*

ದಿಷ್ಟ್ಯಾಧರಸ್ತೇವೀರಾಃ ದಿಷ್ಟ್ಯಾಜೀವತಿಸಾಪೃಥಾ
ದಿಷ್ಟ್ಯಾಪುರೋಚನಃ ಪಾಪೋನಸಕಾಮೋಽತ್ಯಯಂ ಗತಃ.

ಯುಧಿಷ್ಠಿರನು ವಾರಣಾವತದಲ್ಲಿ ಮತ್ತೆ ಆಳಲು ಮೊದಲುಮಾಡಿ, ರಾಜಸೂಯಯಾಗವನ್ನು ನಡೆಸಿದಾಗ ಭೀಷ್ಮನು ತನ್ನ ಪ್ರಾಯದ ದಿನದ ಮತ್ತು ಪಾಂಡುವಿನ ತಾರುಣ್ಯದ ವಿಜಯವೈಭವದ ದಿನಗಳನ್ನು ಮತ್ತೆ ಕಂಡನು. ಮನೆಗೆ ಹಿರಿಯನಾಗಿ ಯಾಗದಲ್ಲಿ ಸೇರಿ ಆಗ್ಗೆ ಸತ್ಯವಂತರಿಗೆ ಶ್ರೇಷ್ಠನೆಂದು ಹೆಸರು ಪಡೆದಿದ್ದ ಕೃಷ್ಣನಿಗೆ ಅಗ್ರಪೂಜೆ ನಡೆಯುವುದಕ್ಕೆ ಸಹಾಯವಾದನು.

ಸವೃದ್ಧಬಾಲೇಷ್ವಥವಾ ಪಾರ್ಥಿವೇಷುಮಹಾತ್ಮಸು
ಕೋನಾರ್ಹಂ ಮನ್ಯತೇಕೃಷ್ಣಂ ಕೋವಾಪ್ಯೇನಂನಪೂಜಯೇತ್ ?

ಈ ವೇಳೆಗೆ ಕೃಷ್ಣನು ಪಾಂಡವರ ಪಕ್ಷಪಾತಿಯೆನ್ನುವುದು ಸಿದ್ಧಾಂತ ವಾಗಿತ್ತು. ಕೌರವರ ಮನೆಯಲ್ಲಿ ಹಿರಿಯನಾಗಿ ನಿಂತಿದ್ದರೂ ಭೀಷ್ಮನು ಪಾಂಡವರ ವಿಷಯಕ್ಕೆ ತನಗೆ ಎಂಥ ದೃಢವಾದ ಪ್ರೇಮ ಇದೆ ಎನ್ನು ವುದನ್ನು ಸುಸ್ಪಷ್ಟವಾಗಿ ವ್ಯಕ್ತಪಡಿಸಿದನು.

ಧರ್ಮತಶ್ಚೈವಗುಪ್ತಾಸ್ತೇಸ್ವವೀರ್ಯೇಣಚಪಾಂಡವಾಃ
ನನಾಶಮಧಿಗಚ್ಛೇಯುರಿತಿಮೇಧೀಯತೇಮತಿಃ

*　　　*　　　*

ಯಸ್ಮಿನ್ ಸತ್ಯಂ ಧೃತಿರ್ದಾನಂಪರಾಶಾಂತಿರ್ಧ್ರುವಾಕ್ಷಮಾ
ಹ್ರೀಃ ಶ್ರೀಃ ಕೀರ್ತಿಃ ಪರಂತೇಜ ಅನೃಶಂಸ್ಯಮಥಾರ್ಜವಂ.

ಜ್ಞಾತಿಗಳ ಮಧ್ಯೆ ಅನುವರೆಗೆ ಹೊಗೆಯುತ್ತಿದ್ದ ದ್ವೇಷ ರಾಜಸೂಯಯಾಗದನಂತರ ಉರಿಯಾಗಿ ಎದ್ದಿತು. ದುರ್ಯೋಧನನು ದ್ಯೂತದ ಮಾತನ್ನು ಎತ್ತಿದಾಗ ಭೀಷ್ಮನಿಗೆ, ಎಲ್ಲರಿಗೆ ಹೇಗೊ ಹಾಗೆ, ಇದು ಯಾವುದೊ ಅನರ್ಥಕ್ಕೆ ಕಾರಣ ಆಗುತ್ತದೆಯೆಂಬ ಭಯ ಹುಟ್ಟಿರಬೇಕು. ದ್ಯೂತ ನಡೆಯಿತು. ಯುಧಿಷ್ಠಿರನ ಅವಿವೇಕ ಪಂಥಗಳು ನಿಜವಾಗಿ ಒಡ್ಡಿದುವಾದರೆ ಅವನ್ನು ಕೇಳುತ್ತ ಇವರೆಲ್ಲ ಸುಮ್ಮನೆ ಕುಳಿತಿದ್ದುದು ದೊಡ್ಡದೊಂದು ಆಶ್ಚರ್ಯ. ವನವಾಸ ಅಜ್ಞಾತವಾಸಗಳ ಪಂಥವನ್ನು ಒಡ್ಡಿದಾಗಂತೂ ಈ ಹಿರಿಯರೆಲ್ಲ ಸುಮ್ಮನಿದ್ದರೆನ್ನುವುದು ತೀರ ವಿಚಿತ್ರ. ಆದರೆ ಆಗಿನ ಕಾಲಕ್ಕೆ ಇಂಥ ಪಂಥಗಳು ಅಪೂರ್ವವಾಗಿದ್ದುವು ಅಥವಾ ಅನುಚಿತವೆಂದು ಪರಿಗಣಿತವಾಗುತ್ತಿದ್ದುವು ಎಂದು ತೋರುವುದಿಲ್ಲ. ಸಾಲದ್ದಕ್ಕೆ ಭೀಷ್ಮನ ಆ ತಟಸ್ಥ ಮನೋಧರ್ಮ. ಅಜ್ಞಾತವಾಸ ಮುಗಿಯುವ ಕಾಲಕ್ಕೆ ಕೌರವನು ವಿರಾಟನ ಗೋವುಗಳನ್ನು ಹಿಡಿಯ ಹೋದಾಗ ಭೀಷ್ಮನೂ ಒಬ್ಬ ಸೇನಾಪತಿ. ಕೌರವನ ಮನೆಯಲ್ಲಿ ಊಟಮಾಡುತ್ತಿದ್ದನು; ಕೌರವನು ಒಪ್ಪಿಸಿದ ಕೆಲಸವನ್ನು ಮಾಡಿದನು. ಪ್ರತಿಪಕ್ಷದಲ್ಲಿ ವಿಶ್ವಾಸವಿದ್ದಿತಲ್ಲ, ಅದರಿಂದ ಯುದ್ಧದಲ್ಲಿ ಶ್ರದ್ಧೆಯೇನಾದರೂ ತಗ್ಗಿತೆ? ಇಲ್ಲ. ಅಂಥ ಮುಪ್ಪಿನಲ್ಲೂ ಇವನ ಯುದ್ಧ ಕರ್ಣನಂಥ ಮಧ್ಯವಯಸ್ಸಿನ ವೀರರ ಯುದ್ಧಕ್ಕಿಂತ ಒಂದು ಕೈ ಮೇಲು. ಅಜ್ಞಾತವಾಸಮುಗಿದಮೇಲೆ ಈ ತಾತ ದುರ್ಯೋಧನನಿಗೆ, ಪಾಂಡವರೊಡನೆ ಯುದ್ಧಬೇಡವೆಂದು, ಯುಧಿಷ್ಠಿರನಿಗೆ ಧರ್ಮನಿಶ್ಚಯ ಎಂದು, ಜ್ಞಾತಿಗಳಿಗೆ ಅರ್ಧರಾಜ್ಯ ಕೊಟ್ಟು ಬಾಳು ಎಂದು, ಮತ್ತೆ ಮತ್ತೆ ಬುದ್ಧಿ ಹೇಳಿದನು. ಅವನು ಕೇಳಲಿಲ್ಲ. ಭೀಷ್ಮನು ಧೃತರಾಷ್ಟ್ರನಿಗೆ ಹೇಳಿದನು. ಅದೂ ವ್ಯರ್ಥವಾಯಿತು. ಭಾರತದ ಯುದ್ಧವೇ ಆರಂಭವಾದಾಗಲೂ ಕೌರವನ ಪಕ್ಷಕ್ಕೆ ಭೀಷ್ಮನು ಮೊದಲ ಸೇನಾಪತಿ. ಈ ಸಂದರ್ಭದಲ್ಲಿ ಸಮರಥ ಮಹಾರಥರ ಮಾತುಗಳನ್ನಾಡುತ್ತ ಭೀಷ್ಮನು ಕರ್ಣನನ್ನು ಸಮರಥರ ಮಟ್ಟಕ್ಕೆ ಮುಟ್ಟುವವನಲ್ಲ ಎಂದು ವರ್ಣಿಸಿ ಆ ವೀರನ ಅಭಿಮಾನವನ್ನು ಕೆಣಕಿದನು. ಕರ್ಣನಿಗೆ ಇವನಿಗೆ ಕೆಟ್ಟ ಮಾತು ನಡೆಯಿತು. ಭೀಷ್ಮನು ಸೇನಾಪತಿಯಾಗಿರುವಾಗ ತಾನು

ಯುದ್ಧಮಾಡುವುದಿಲ್ಲ ಎಂದು ಕರ್ಣನು ಶಪಥಮಾಡಿದನು. ಆದರೂ ಭೀಷ್ಮನ ಯುದ್ಧ ಮುಗಿದ ಮೇಲೆ ಅವನು ಈ ಹಿರಿಯನ ಬಳಿಗೆ ಬಂದು ಇವನ ಆಶೀರ್ವಾದವನ್ನು ಬೇಡಿದನು. ಆ ಬೇಡಿಕೆಯಲ್ಲಿ ಛದ್ಮವಿರಲಿಲ್ಲ. ಅಕುಟಿಲವಾಗಿ ಕರ್ಣನು ಆಶೀರ್ವಾದವನ್ನು ಬೇಡಿದಂತೆ ಭೀಷ್ಮನು ನಿಷ್ಕಲ್ಮಷವಾದ ಮೆಚ್ಚುಗೆಯಿಂದ ಅವನಿಗೆ ಆಶೀರ್ವಾದ ಮಾಡಿದನು. ಕರ್ಣನು ಗೆಲ್ಲುವನೆಂದಲ್ಲ; ಗೆಲ್ಲಬೇಕು ಎಂದಲ್ಲ. ವೀರನಿಗೆ ತಕ್ಕಂತೆ ಕಾದುವನು; ವಿಧಿ ಹಾಗೆ ಇದ್ದರೆ ಮಡಿಯುವನು. ಆದರೆ ಇದು ಯಾವುದನ್ನೂ ವೀರನಿಗೆ ತಕ್ಕಂತೆ ಮಾಡುವನು. ಇದೇ ಹಿರಿಯನ ಆಶೀರ್ವಾದ. ಕಿರಿಯನು ಕೇಳಿದ್ದಾದರೂ ಇಷ್ಟನ್ನೇ. ದುರ್ಯೋಧನನಿಗೆ ಕೂಡ ತಾನು ಗೆದ್ದೇನು ಎಂಬ ಆಸೆ ಬಹಳ ಇದ್ದಿರಲಾರದು. ರಾಮಾಯಣದಲ್ಲಿ ರಾಮರಾವಣರ ಯುದ್ಧಸಮಯದ ಮನೋಧರ್ಮವನ್ನು ವರ್ಣಿಸುತ್ತ ವಾಲ್ಮೀಕಿ, ಒಬ್ಬನು "ಜೇತವ್ಯ" ಎಂದುಕೊಂಡನೆಂದೂ ಮತ್ತೊಬ್ಬನು "ಮರ್ತವ್ಯ" ಎಂದುಕೊಂಡನೆಂದೂ ಹೇಳಿದ್ದಾನೆ. ಎಷ್ಟೇ ಕಷ್ಟವಾಗಲಿ ಗೆದ್ದೇಗೆದ್ದೇನು ಎಂದು ರಾಮ; ಸತ್ತಾದರೂ ಸಾಯುವೆನು, ಹಟವನ್ನು ಬಿಡುವುದಿಲ್ಲ, ಎಂದು ರಾವಣ. ಪ್ರಾಯಶಃ ಅಭಿಮಾನವೆ ಧನ ಎಂಬ ವೀರ ಚೇತನದ ಜೀವನದಲ್ಲಿ ಇದು ಹೊರತು ಬೇರೆಯ ಮನೋವೃತ್ತಿ ಸಾಧ್ಯವಲ್ಲ. ದುರ್ಯೋಧನನ ಪಕ್ಷ ಧರ್ಮವನ್ನು ಬಿಟ್ಟು ನಡೆಯುತ್ತಿದೆಯೆಂದು ತಿಳಿದೂ ಭೀಷ್ಮನು ತನ್ನ ಕರ್ತವ್ಯದ ದೃಷ್ಟಿಯಿಂದ ಆ ಪಕ್ಷಕ್ಕಾಗಿ ಹತ್ತು ದಿನ ಅಪ್ರತಿಮವೀರ್ಯದಿಂದ ಯುದ್ಧ ನಡೆಸಿದನು. ಕೊನೆಗೆ ಇವನನ್ನು ಸೋಲಿಸುವ ದಾರಿಯನ್ನು ಕಾಣದೆ, ಆಯುಧವನ್ನು ಹಿಡಿಯುವುದಿಲ್ಲವೆಂದು ಶಪಥಮಾಡಿದ್ದ ಕೃಷ್ಣನು ಕೂಡ ಒಮ್ಮೆ ಚಕ್ರವನ್ನು ಕೈಗೆ ತೆಗೆದುಕೊಂಡನಂತೆ. ನೀನು ಧರ್ಮವನ್ನು ಬಿಟ್ಟು ನಡೆಯುವುದು ಬೇಡ ಎಂದು ಬೇಡಿ ಪಾರ್ಥನು ಅವನನ್ನು ತಡೆದನು. ಭೀಷ್ಮನ ಯುದ್ಧವನ್ನು ನಿಲ್ಲಿಸುವುದು ಹೇಗೆ ಎಂದು ಧರ್ಮರಾಯನು ಭೀಷ್ಮನನ್ನೇ ಕೇಳಿ ತಿಳಿಯಬೇಕಾಯಿತು. ಭೀಷ್ಮನು, "ನಾನು ಶಿಖಂಡಿಯೊಂದಿಗೆ ಯುದ್ಧಮಾಡುವುದಿಲ್ಲ ಎಂದು ಲೋಕ ಬಲ್ಲದು. ಅವನನ್ನು ತಂದು ಎದುರಿಗೆ ನಿಲ್ಲಿಸಿ. ನಾನು ಶಸ್ತ್ರಸಂನ್ಯಸನ

ಮಾಡುತ್ತೇನೆ,'' ಎಂದನು. ಈ ಸೂಚನೆಯನ್ನು ಕೊಡುವುದರಲ್ಲಿ ಭೀಷ್ಮನು ಪಾಂಡವರ ಪಕ್ಷಪಾತಿಯಾಗಿ ನಡೆದುಕೊಂಡನು ಎಂದು ಒಮ್ಮೊಮ್ಮೆ ಧ್ವನಿ ಬರುತ್ತದೆ. ಕಥೆಯನ್ನು ಸಾವಧಾನವಾಗಿ ನೋಡಿದರೆ ಇಲ್ಲಿ ಪಕ್ಷಪಾತ ಕಾಣುವುದಿಲ್ಲ. ಊರಿಗೆ ತಿಳಿದ ಸಂಗತಿಯನ್ನು ಕಿವಿಯಲ್ಲಿ ಹೇಳಬೇಕಾಗಿದ್ದದೇನು? ''ಕ್ರಮವಾಗಿ ಸೋಲಿಸಲು ಆಗಿಲ್ಲ; ಸೋಲಿಸುವುದು ಸಾಧ್ಯವಲ್ಲ; ನೀವು ಬದುಕಬೇಕು; ಅದಕ್ಕಾಗಿ ಕ್ರಮವಲ್ಲದ ಈ ಕ್ರಮವನ್ನು ಹಿಡಿಯುವುದಾದರೆ ನೋಡಿ,'' ಎಂದು ವೃದ್ಧವೀರನು ಹೇಳಿದನು. ವಿಧಿಯಿಲ್ಲದೆ ವೀರಪೌತ್ರರು ಆ ಮಾತನ್ನು ಉಪಯೋಗಿಸಿದರು. ತಾತನನ್ನು ಯುದ್ಧಮುಖದಿಂದ ಆಚೆಗೆ ಸರಿಸಿಇಟ್ಟರು.

ಈ ಸಂದರ್ಭದಲ್ಲಿ ಭೀಷ್ಮನು ''ಹತ''ನಾದನೆಂದೇ ಭಾರತದಲ್ಲಿ ಹೇಳಿದೆ. ಹಾಗೆಯೇ ಯುದ್ಧದಿಂದ ಸರಿದು ನಿಲ್ಲಬೇಕಾದ ಸಮಯ ಬಂದಾಗ ದಕ್ಷಿಣಾಯನ ಆಗಿದ್ದುದರಿಂದ ಅವನು ಸ್ವಲ್ಪಕಾಲ ಜೀವದಿಂದ ಇರಬಯಸಿ ತಂದೆಯಿಂದ ಪಡೆದಿದ್ದ ಇಚ್ಛಾಮರಣದ ವರವನ್ನು ಬಳಸಿದನು ಎಂದೂ ಹೇಳಿದೆ. ಪಾಂಡವರಿಗೆ ಜಯವಾಗಿ ಯುಧಿಷ್ಠಿರನು ರಾಜ್ಯವನ್ನು ವಹಿಸಿಕೊಳ್ಳುವ ವೇಳೆ ತಾತನ ಬಳಿಗೆ ಬಂದನು; ಅವನಿಂದ ರಾಜಧರ್ಮವನ್ನು ತಿಳಿಯಲು ಬಯಸಿದನು. ಶಾಂತಿಪರ್ವ ಅನುಶಾಸನಿಕ ಪರ್ವಗಳು ಭೀಷ್ಮನು ಆಗ ಮಾಡಿದ ಉಪದೇಶವನ್ನು ಒಳಗೊಂಡಿವೆ. ಈ ಪರ್ವಗಳ ಬಹು ಭಾಗ ಭಾರತದಲ್ಲಿ ಆಮೇಲೆ ಸೇರಿದ ಕೃತಿಯೆಂದು ಸ್ಪಷ್ಟವಾಗಿ ಕಾಣುತ್ತದೆ. ಆದರೆ, ಅದರಲ್ಲಿ ತಕ್ಕಷ್ಟು ಭಾಗ ಭೀಷ್ಮ ಪಿತಾಮಹನ ಉಪದೇಶವೆಂದು ಪ್ರತೀತಿಯಾಗಿ ಹಿಂದಿನಿಂದ ಕೇಳಿ ಬಂದಿದ್ದ ಕೃತಿಯೆನ್ನುವುದರಲ್ಲಿ ಸಂದೇಹವಿಲ್ಲ. ಅದರಲ್ಲಿ ಭೀಷ್ಮನ ಪರಿಣತಮತಿಯ ಧರ್ಮವಿಜ್ಞಾನ ಸುಂದರವಾಗಿ ರೂಪುಗೊಂಡಿದೆ.

ಉತ್ತರಾಯಣ ಉದಿಸಿದೊಡನೆ ಭೀಷ್ಮನು ತನ್ನ ದೇಹವನ್ನು ತ್ಯಜಿಸಿದನು. ಆ ವೇಳೆಗೆ ಇವನು ಮನುಷ್ಯನು ನೋಡಬಹುದಾದ ದುಃಖವನ್ನೆಲ್ಲ ನೋಡಿದ್ದನು. ಷೇಕ್ಸ್‌ಪಿಯರ್ ಕವಿಯ ಮ್ಯಾಕ್ಬೆತ್ I have supped full of horrors ಎಂದು ಹೇಳಿದನಂತೆ. ದುಃಖವನ್ನೆ

ಕೊನೆಯ ಊಟವಾಗಿ ಉಂಡ ಮ್ಯಾಕ್ಬೆತ್ ಭೀಷ್ಮನ ಸ್ಥಿತಿಯನ್ನು ಊಹಿಸಿದ್ದಿರಲಾರನು. ಮ್ಯಾಕ್ಬೆತ್ತಿನ 'ಡಿನ್ನರ್' (ಹಗಲ ಊಟ) ಆದರೂ ಸ್ವಲ್ಪ ರುಚಿಯಾಗಿದ್ದಿತು. ಭೀಷ್ಮನ ಮಾತನ್ನು ಷೇಕ್ಸ್‌ಪಿಯರ ಶಬ್ದಗಳಲ್ಲಿ ಹೇಳುವುದಾದರೆ, ಇವನ ಹಗಲೂಟ ಇರುಳೂಟ ಇನ್ನೆಲ್ಲ ಆಹಾರ ದುಃಖದಿಂದಲೆ ತುಂಬಿ ಕಹಿಕವಳವಾಯಿತು.

ಭಾರತ ಗ್ರಂಥದ ಭೀಷ್ಮನು ಮೇರುಮಂದರಗಳಂತೆ, ವಿಂಧ್ಯ ಹಿಮಾಚಲಗಳಂತೆ ಭೂಮ್ಯಂತರಿಕ್ಷಗಳ ಮಧ್ಯದ ಸ್ಥಳವನ್ನು ತುಂಬಿ ನಿಲ್ಲುವ ಮಹಾವ್ಯಕ್ತಿ. ಈ ಕಾವ್ಯದ ಮಹಾ ಪುರುಷರ ಪಂಕ್ತಿಯಲ್ಲಿ ಭೀಷ್ಮನ ಮೂರ್ತಿ ನಮಗೆ ಮೊದಲು ಕಣ್ಣೆದುರಿಗೆ ಬರುತ್ತದೆ. ಆ ಕಾರಣದಿಂದ ಮೊದಲ ಸ್ಥಾನವನ್ನು ಹಿಡಿದ ಈ ಮೂರ್ತಿಯನ್ನು ಬೆಲೆಯ ದೃಷ್ಟಿಯಿಂದ ಕೂಡ ಎರಡನೆಯ ಸ್ಥಾನಕ್ಕೆ ತೆಗೆದಿರಿಸಬಹುದೆಂದು ಯಾರಿಗೂ ತೋರುವುದಿಲ್ಲ. ದೇವವ್ರತನ ಚರಿತೆ ಭೀಷ್ಮವಾದ ಪ್ರತಿಜ್ಞೆಯಿಂದ ಅಸ್ಪೃಶ್ಯ ಸ್ವರ್ಣ ಪಾಕಕ್ಕೆ ಬಂದು ಅದೇ ಪಾಕದ ವಿಭವದಲ್ಲಿ ಕೊನೆಯನ್ನು ಸಾರುತ್ತದೆ.

## ೬
## ವಿದುರ, ಧೃತರಾಷ್ಟ್ರ

ಭೀಷ್ಮನ ಜೀವನದ ಸ್ವಲ್ಪ ಕಥೆ ರೂಪುಗೊಳ್ಳುವ ಹೊತ್ತಿಗೆ ನಮಗೆ ಅವನಂಥದೆ ಬೇರೊಂದು ಬೃಹನ್ಮೂರ್ತಿ ಎದುರಿಗೆ ಸರಿದು ಬರುತ್ತದೆ. ಆ ಮೂರ್ತಿ ವಿದುರನದು. ವಿದುರನು ದಾಸಿಯ ಮಗ. ಆದರೆ ದಾಸಿ ಎಂಬವಳು ಶಾಸ್ತ್ರೋಕ್ತವಾಗಿ ಹಸೆಯ ಮೇಲೆ ಕುಳಿತು ಮದುವೆಯಾದ ಹೆಂಡಿರಲ್ಲ ಎನ್ನುವುದು ಹೊರತಾಗಿ ಅವಳು ರಾಜನಿಗೆ ಅಂಬಿಕೆ ಅಂಬಾಲಿಕೆಯರಂತೆ ಒಬ್ಬ ಪತ್ನಿಯೇ ಹೌದು. ಆಗಿನ ಕಾಲಕ್ಕೆ ಇಂಥ ಸಂಬಂಧ ವಾಡಿಕೆ. ಆದಕಾರಣ ದಾಸೀ ಪುತ್ರನಾದರೂ ವಿದುರನು ಒಬ್ಬ ರಾಜಕುಮಾರನಂತೆಯೆ ಬೆಳೆದನು.

ಸಜಜ್ಞೇ ವಿದುರೋ ನಾಮ ಕೃಷ್ಣದ್ವೈಪಾಯನಾತ್ಮಜಃ
ಧೃತರಾಷ್ಟ್ರಸ್ಯ ಚ ಭ್ರಾತಾ ಪಾಂಡೋಶ್ಚಾಮಿತಬುದ್ಧಿಮಾನ್.

ಧೃತರಾಷ್ಟ್ರ ಪಾಂಡುಗಳಿಗೆ ಇವನು ಒಪ್ಪುಗೆಯ ತಮ್ಮ. ವರ್ಣ ಬೇರೆಯೆಂಬ ಕಾರಣದಿಂದ ಬಾಂಧವ್ಯ ಕಡಿಮೆಯಾಯಿತೆಂಬ ಭಾವ ಇವರ ಸಂಬಂಧದಲ್ಲಿ ಎಂದೂ ತಲೆಯಿಕ್ಕಿದಂತೆ ಕಾಣುವುದಿಲ್ಲ. ಪಾಂಡು ದಿಗ್ವಿಜಯಕ್ಕೆ ಹೊರಟನು: ವಿದುರನು ರಾಜ್ಯವನ್ನು ನಡೆಸಿದನು. ಪಾಂಡು ತಪಸ್ಸಿಗೆ ವನವನ್ನು ಸಾರಿದನು: ವಿದುರನೇ ಧೃತರಾಷ್ಟ್ರನ ಸಹಾಯಕ್ಕೆ ನಿಂತು ರಾಷ್ಟ್ರವನ್ನು ನೋಡಿಕೊಂಡನು. ಆಶ್ರಮಕ್ಕೆ ಹೋದ ಆ ಅಣ್ಣ ಸತ್ತು ಅವನ ಎರಡನೆಯ ಹೆಂಡತಿ ಸಹಗಮನ ಮಾಡಿ ಹಿರಿಯ ಅತ್ತಿಗೆ ಕುಂತಿ ಮಕ್ಕಳೊಂದಿಗೆ ಹಸ್ತಿನಾವತಿಗೆ ಬಂದಾಗ ವಿದುರನೇ ಅವರನ್ನೆಲ್ಲ ಕರೆದುಕೊಂಡನು. ಧೃತರಾಷ್ಟ್ರನ ಅಪ್ಪಣೆಯಿಂದ ಈ ಸೋದರನು ಪಾಂಡುವಿಗೆ ಮತ್ತು ಮಾದ್ರಿಗೆ ಅಪರ ಕ್ರಿಯೆಗಳನ್ನು ನಡೆಸಿದನು.

> ತತಃ ಕ್ಷತ್ತಾ ಚ ರಾಜಾ ಚ ಭೀಷ್ಮಶ್ಚ ಸಹಬಂಧುಭಿಃ
> ದದುಃ ಶ್ರಾದ್ಧಂ ತದಾ ಪಾಂಡೋಃ ಸ್ವಧಾಮೃತಮಯಂ ತದಾ.

ಇಬ್ಬರು ಅಣ್ಣಂದಿರ ಮಕ್ಕಳೂ ಜೊತೆಯಾಗಿ ಬೆಳೆಯುತ್ತಿರಲು ವಿದುರನು ಅವರನ್ನು ನೋಡಿಕೊಂಡನು. ಅವರು ಎರಡು ಗುಂಪಾಗಿ ದುರ್ಯೋಧನಾದಿಗಳಿಗೆ ಪಾಂಡವರನ್ನು ಕುರಿತು ಅಸೂಯೆ ಹುಟ್ಟಿದಾಗ ವಿದುರನು ಇದು ಮುಂದೆ ಅನರ್ಥಕ್ಕೆ ಕಾರಣವಾಗುತ್ತದೆಯೆಂದು ಹೆದರಿದನು. ಅನರ್ಥ ಬಂದೀತೆಂದು ತೋರಿತಾದರೂ ಇವನಿಗೆ ಅದನ್ನು ತಪ್ಪಿಸುವ ದಾರಿ ಕಾಣಲಿಲ್ಲ. ಧೃತರಾಷ್ಟ್ರನು ಪಾಂಡುವಿನ ವಿಷಯಕ್ಕೆ ಮರುಕವನ್ನೇ ತಳೆದಿದ್ದನು. ಪಾಂಡುವಿನ ಮಕ್ಕಳೆಂದರೆ ಅವನಿಗೆ ಪ್ರೀತಿ ಉಂಟು. ತನ್ನ ಮಗ ದುರ್ಯೋಧನನು ಅಷ್ಟೇನೂ ಯೋಗ್ಯನಲ್ಲ ಎಂದು ಅವನಿಗೆ ತಿಳಿದಿದ್ದಿತು. ಆದರೂ ತಂದೆಯಾದವನು ಮಗನನ್ನು ಏನು ಮಾಡಬಹುದು? ತೊರೆಯುವುದು ಸಾಧ್ಯವೆ? ತೊರೆಯಲಿಲ್ಲ. ತಿದ್ದುವುದು ಸಾಧ್ಯವೆ? ಸಾಧ್ಯವಾಗಿರಲಿಲ್ಲ. ಹೀಗಾಗಿ ಧೃತರಾಷ್ಟ್ರನು ಪುತ್ರಪ್ರೇಮಕ್ಕೆ ಕಟ್ಟುಬಿದ್ದು ವಿಧಿಯಿಲ್ಲದೆ, ಮನಸ್ಸಿಲ್ಲದೆ, ದುರ್ಯೋಧನನ ಅನ್ಯಾಯಕ್ಕೆ ಸಮ್ಮತಿಸುತ್ತಿದ್ದನು. ವಿದುರನು ಅಣ್ಣನಿಗೆ ಹೀಗೆ ಮಾಡುವುದು ಸರಿಯಲ್ಲ ಎಂದು ಎಚ್ಚರ ಹೇಳಿದನು: ಎಚ್ಚರಿಕೆಯ ಮಾತು ಪ್ರಯೋಜನಕ್ಕೆ ಬರಲಿಲ್ಲ. ಧರ್ಮರಾಯನನ್ನು ತಾಯಿ ತಮ್ಮಂದಿ

ರೊಂದಿಗೆ ವಾರಣಾವತಕ್ಕೆ ಕಳುಹಿಸುವ ಏರ್ಪಾಡು ರೂಪುಗೊಂಡಿತು. ಅಲ್ಲಿ ಇವರನ್ನು ಅರಗಿನ ಮನೆಯಲ್ಲಿ ಸುಡಲು ಆದ ಸಂಚನ್ನು ವಿದುರನು ತಿಳಿದುಕೊಂಡನು. ಪಾಂಡವರು ಹೊರಟ ಸಮಯದಲ್ಲಿ ಅದು ಇವನಿಗೆ ತಿಳಿಯಿತೆಂದು ಕಾಣುತ್ತದೆ. ಅವರನ್ನು ಕಳುಹಿಸಿಕೊಡುವುದಕ್ಕಾಗಿ ಸ್ವಲ್ಪ ದಾರಿ ಜೊತೆಗೆ ಬಂದು, ಅವರನ್ನು ಮುಂದಕ್ಕೆ ಕಳುಹಿಸಿ ಹಿಂದಿರುಗುವ ಕ್ಷಣದಲ್ಲಿ ಇವನು ಇತರರಿಗೆ ತಿಳಿಯದ ಒಂದು ಭಾಷೆಯಿಂದ ಮಾತನಾಡಿ ಸಂಕೇತದಿಂದ ಈ ಸಂಗತಿಯನ್ನು ಧರ್ಮರಾಯನಿಗೆ ತಿಳಿಸಿದನು.

> ವಿಷಾದಗ್ನೇಶ್ಚ ಬೋದ್ಧವ್ಯಮಿತಿ ಮಾಂ ವಿದುರೋಽಬ್ರವೀತ್
> ಪಂಥಾಶ್ಚ ವೋ ನಾವಿದಿತಃ ಕಶ್ಚಿತ್‌ಸ್ಯಾದಿತಿ ಚಾಬ್ರವೀತ್.

ಅವನು ತಾಯಿಗೆ ತಮ್ಮಂದಿರಿಗೆ ಸಂಗತಿಯನ್ನು ಹೇಳಿದನು. ಯಾವ ದಿನ ಮನೆ ಸುಡುವುದೆಂಬುದನ್ನೂ ತನ್ನ ಕಡೆಯ ಚಾರರಿಂದ ಗುಪ್ತವಾಗಿ ತಿಳಿದು ಈ ಚಿಕ್ಕಪ್ಪ ಆ ವಿವರವನ್ನೂ ಯುಧಿಷ್ಠಿರನಿಗೆ ಮುಂದಾಗಿ ಅರಿಯಿಸಿದನು. ಇದರಿಂದ ಪಾಂಡವರು ಮತ್ತು ಅವರ ತಾಯಿಯ ಜೀವ ಉಳಿಯಿತು. ಪಾಂಡವರಿಗೆ ಮದುವೆಯಾದ ನಂತರ ಅವರನ್ನು ಹಿಂದಕ್ಕೆ ಬರಮಾಡಿಕೊಳ್ಳುವುದಕ್ಕೆ ವಿದುರನು ಕಾರಣನಾದನು. ಅದಾದನಂತರ ಖಾಂಡವಪ್ರಸ್ಥದಲ್ಲಿ ಅವರು ನೆಲಸುವ ಏರ್ಪಾಡಿಗೆ ಇವನು ಸಹಾಯವಾದನು.

> ಶ್ರುತ್ವಾ ಚ ಜೀವತಃ ಪಾರ್ಥಾನ್ ಪೌರಜಾನಪದೋ ಜನಃ
> ಬಲವದ್ದರ್ಶನೇ ಗೃಧ್ನುಃ ತೇಷಾಂ ರಾಜನ್ ಕುರುಪ್ರಿಯಂ.

ದುರ್ಯೋಧನನು ದ್ಯೂತದ ಮಾತನ್ನೆತ್ತಿದಾಗ ವಿದುರನು ಅಣ್ಣನಿಗೆ ಮತ್ತೆ ಎಚ್ಚರಿಕೆ ಹೇಳಿದನು. ಎಂದಿನಂತೆ ಮಾಡುವ ಬಿನ್ನಹ ಸಾಲದೆಂದು ಅಣ್ಣನ ಪಾದಗಳನ್ನು ಹಿಡಿದು ನಮಸ್ಕರಿಸಿ, "ಈ ಪ್ರಯತ್ನ ನನಗೆ ಸ್ವಲ್ಪವಾದರೂ ಸಮ್ಮತವಲ್ಲ. ಇದರಿಂದ ಸೋದರರಲ್ಲಿ ದ್ವೇಷ ಹೆಚ್ಚುವುದು. ಇದಕ್ಕೆ ನೀನು ಅವಕಾಶ ಕೊಡಬೇಡ," ಎಂದನು. ಧೃತರಾಷ್ಟ್ರನು ದ್ಯೂತ ನಡೆಯಬೇಕೆಂದು ಆ ವೊದಲೆ ದುರ್ಯೋಧನನಿಗೆ ಸೋತಿದ್ದನು. ವಿದುರನ ಪ್ರಾರ್ಥನೆ ವ್ಯರ್ಥವಾಯಿತು. ವಿದುರನು,

"ನಮ್ಮ ಕುಲಕ್ಕೆ ಮೃತ್ಯು ಸಮೀಪಿಸಿದೆ," ಎಂದುಕೊಂಡು ಭೀಷ್ಮನ ಬಳಿಗೆ ಹೋದನು. ಭೀಷ್ಮನು ಈ ಸಂದರ್ಭದಲ್ಲಿ ಏನು ಹೇಳಿದನೊ ಉಕ್ತವಾಗಿಲ್ಲ. ಧೃತರಾಷ್ಟ್ರನು ವಿದುರನಿಗೆ ಯುಧಿಷ್ಠಿರನನ್ನು ಕರೆತರುವಂತೆ ಆಜ್ಞೆಮಾಡಿದ್ದನು; ವಿದುರನು ಹೋಗಿ ಯುಧಿಷ್ಠಿರನಿಗೆ ದೊಡ್ಡಪ್ಪನ ಆಜ್ಞೆಯನ್ನು ತಿಳಿಸಿದನು. ಯೋಚನೆ ಯುಧಿಷ್ಠಿರನಿಗಾಗಲಿ ಸರಿಯೆಂದು ತೋರಲಿಲ್ಲ; ಆದರೂ ಹಿರಿಯನ ಮಾತು ಎಂದು ಅವನು ಅದಕ್ಕೆ ಸಮ್ಮತಿಸಿದನು. ದ್ಯೂತ ನಡೆದು ದುರ್ಯೋಧನನ ಪಕ್ಷ ಅವಿವೇಕದಿಂದ ನಡೆದುಕೊಂಡಾಗ ವಿದುರನು ಎದ್ದು ನಿಂತು ಅಣ್ಣನಾದ ಧೃತರಾಷ್ಟ್ರನನ್ನು ದ್ಯೂತವನ್ನು ನಿಲ್ಲಿಸು ಎಂದು ಬೇಡಿದನು. ಆ ಪ್ರಾರ್ಥನೆಯೂ ವ್ಯರ್ಥವಾಯಿತು. ದ್ಯೂತ ಮುಗಿದು ಪಾಂಡವರು ಕಾಡಿಗೆ ಹೊರಟರು. ಆಮೇಲೆ ವಿದುರನು ಅವರ ವಿಷಯದಲ್ಲಿ ಕೌರವರು ನಡೆದುಕೊಂಡ ರೀತಿ ತಪ್ಪಾಯಿತು ಎಂದು ಮನಬಿಚ್ಚಿ ಮಾತನಾಡಿರಬೇಕು. ಧೃತರಾಷ್ಟ್ರನಿಗೆ ಅವನ ಮೇಲೆ ಕೋಪ ಬಂದು ಅವನು ವಿದುರನನ್ನು ಗದರಿಸಿದನೆಂದು ಕಾಣುತ್ತದೆ. ವಿದುರನು ಪಾಂಡವರ ಬಳಿಗೆ ಹೋದನು. ಬಹುಬೇಗನೆ ಧೃತರಾಷ್ಟ್ರನಿಗೆ ತನ್ನ ಮಾತು ತಪ್ಪಾಯಿತೆಂದು ಕಂಡಿತು. ಅವನು ವಿದುರನಿಗೆ ಹೇಳಿಕಳುಹಿಸಿ ಅವನನ್ನು ಸಮಾಧಾನಪಡಿಸಿ ಹಿಂದಕ್ಕೆ ಕರೆಸಿಕೊಂಡನು.

> ಸೋಽಂಕಮಾದಾಯ ವಿದುರಂ ಮೂರ್ಧ್ನ್ಯುಪಾಘ್ರಾಯ ಚೈವಹ
> ಕ್ಷಮ್ಯತಾಮಿತಿ ಚೋವಾಚ ಯದುಕ್ತೋಽಸಿ ಮಯಾರುಷಾ.
>
> ವಿದುರ ಉವಾಚ
>
> ಕ್ಷಾಂತಮೇವ ಮಯಾರಾಜನ್ ಗುರುರ್ನಃ ಪರಮೋಭವಾನ್. . . .
> ಪಾಂಡೋಃ ಸುತಾಃ ಯಾದೃಶಾ ಮೇ ತಾದೃಶಾ ಮೇ ಸುತಾಸ್ತವ.

ವಿದುರನು ತನ್ನಕಾಲಕ್ಕೆ ಬಹುಹಿರಿಯ ನೀತಿಜ್ಞನೆಂದು ಹೆಸರಾದನು. ಮತ್ತೊಬ್ಬರಿಗಾದರೆ ಅವನ ನೀತಿ ಒಂದು ಉಪಯುಕ್ತ ವಸ್ತು ಆಗುತ್ತಿದ್ದಿತು. ದುರ್ಯೋಧನನಿಗೆ ಅದು ಉಪಯುಕ್ತ ವಸ್ತು ಅಲ್ಲ; ಪ್ರತಿಬಂಧಕ ವಸ್ತು ಆಯಿತು. ಧೃತರಾಷ್ಟ್ರನು ಯಾವ ಮಾತಿಗೇ ಆಗಲಿ. ವಿದುರನನ್ನು ಕೇಳೋಣ, ಎನ್ನುವನು. ದುರ್ಯೋಧನನು "ಬೇಡ

ಅವನೂ ವ್ಯಾಸನೂ ಯಾವಾಗಲೂ ಧರ್ಮದ ಮಾತನ್ನೆತ್ತುತ್ತಾರೆ. ನಮಗೆ ಬೇಕಾದದ್ದು ಜಯ; ಧರ್ಮಕ್ಕೂ ಜಯಕ್ಕೂ ಬಹುದೂರ," ಎನ್ನುವನು. ಅಜ್ಞಾತವಾಸ ಮುಗಿದು ಪಾಂಡವರಿಗೆ ರಾಜ್ಯದ ಅರ್ಧ ವನ್ನು ಕೊಡುವ ಮಾತುಬಂದಾಗ ವಿದುರನು ತನ್ನ ಅಣ್ಣನಿಗೆ ತತ್ಕಾಲ ವಿಹಿತವಾಗಿ ತಕ್ಕಷ್ಟು ವಿಸ್ತಾರವಾಗಿಯೆ ನ್ಯಾಯವನ್ನು ವಿವರಿಸಿದನು. "ಅಭಿಮಾನಶಾಲಿ ಅಪ್ರಾರ್ಥಿತನಾಗಿ ಬುದ್ಧಿವಾದ ಹೇಳುವುದಕ್ಕೆ ಹೋಗಬಾರದು. ಈಗ ನೀನಾಗಿ ನನ್ನ ಅಭಿಪ್ರಾಯವನ್ನು ಕೇಳಿರುವುದ ರಿಂದ ನನಗೆ ತೋರಿದ ಮಾತನ್ನು ಹೇಳುತ್ತೇನೆ. ಮೊದಲಾಗಿ ಮನುಷ್ಯನು ಯಾವುದನ್ನೂ ಧರ್ಮದಿಂದ ಸಾಧಿಸಬೇಕು; ಕಪಟದಿಂದ ಸಿದ್ಧಿಸುವ ಪ್ರಯೋಜನವನ್ನು ಬಯಸಬಾರದು. ಇತರರ ಧನಕ್ಕೆ ರೂಪಕ್ಕೆ ಸುಖ ಸೌಭಾಗ್ಯ ಮಾನ ಮರ್ಯಾದೆಗಳಿಗೆ ಈರ್ಷೆ ಪಡುವವನ ವ್ಯಾಧಿಗೆ ನಿವಾರಣೆಯಿಲ್ಲ. ಸಜ್ಜನನೊಬ್ಬನು ಅಲ್ಪನೊಬ್ಬನನ್ನು ಏನನ್ನೊ ವಿನಯ ದಿಂದ ಬೇಡಿಕೊಂಡರೆ ಆ ಅಲ್ಪನು ತಾನು ಹಿರಿಯನಾದೆನೆಂದು ಅಹಂಕಾರ ಪಡುತ್ತಾನೆ. ಶೀಲವಿದ್ದವನು ಸರ್ವವನ್ನೂ ಜಯಿಸುವನು. ಮನುಷ್ಯ ರಿಗೆ ಶೀಲ ಮುಖ್ಯ. ಪಾನ, ಮದ ಮೊದಲಾದ ಬಹುತರದ ಮದಗಳಲ್ಲಿ ಐಶ್ವರ್ಯಮದ ಎಲ್ಲಕ್ಕಿಂತ ಕೆಟ್ಟದ್ದು. ಮದ್ಯಕುಡಿದು ಬಿದ್ದವನು ಎದ್ದು ನಿಲ್ಲುವ ಆಶೆಯಿದೆ; ಧನಮದದಿಂದ ಬಿದ್ದವನು ಏಳುವ ಸಂಭವವಿಲ್ಲ. ದುಷ್ಟರನ್ನು ದೂರ ನಿಲ್ಲಿಸದೆ ಅವರೊಂದಿಗೆ ಸೇರಿ ನಿರಪರಾಧಿ ನಾಶವಾಗು ತ್ತಾನೆ. ಕೊಡಲಿಯಿಂದ ಕಡಿದ ಮರ ಮರಳಿ ಚಿಗುರುವುದು; ಕೆಟ್ಟ ಮಾತಿನಿಂದ ಕಡಿದ ಸ್ನೇಹ ಮತ್ತೆ ಚಿಗುರಲಾರದು. ದೈವ ಯಾವನ ನ್ನಾದರೂ ಕೆಡಿಸಬೇಕೆಂದರೆ ಮೊದಲು ಅವನ ಬುದ್ಧಿಯನ್ನು ಕೆಡಿಸುತ್ತದೆ. ಹಾಗಾಗಿ ಅವನು ತಪ್ಪಿನಲ್ಲಿ ಮನಸ್ಸನ್ನು ಮಾಡುತ್ತಾನೆ. ಅವನಿಗೆ ಅನ್ಯಾಯವೆಲ್ಲ ನ್ಯಾಯವಾಗಿ ಕಾಣುತ್ತದೆ; ಅನೀತಿ ಹೃದಯದಲ್ಲಿ ಸ್ಥಿರವಾಗುತ್ತದೆ. ನಿನ್ನ ಮಕ್ಕಳಿಗೆ ಪಾಂಡವರ ವಿಷಯದಲ್ಲಿ ಹೀಗೆ ಬುದ್ಧಿ ಕೆಟ್ಟಿದೆ. ನಿಜದಲ್ಲಿ ಯುಧಿಷ್ಠಿರನು ಅತ್ಯಂತ ಗುಣಶಾಲಿ; ರಾಜನಾಗಲು ಅರ್ಹನು; ಅಲ್ಲದೆ ನಿನ್ನ ಇಷ್ಟವನ್ನು ಅನುಸರಿಸಿ ನಡೆಯತಕ್ಕವನು. ಈ ಮೊದಲು ನಿನ್ನಿಂದ ಎಷ್ಟೋ ಕಷ್ಟ ಆಗಿದ್ದರೂ ಅವನು ಇದುವರೆಗೆ

ಎಲ್ಲವನ್ನೂ ಸಹಿಸಿಕೊಂಡಿದ್ದಾನೆ. ರಾಷ್ಟ್ರಕ್ಕೆ ಅವನನ್ನು ರಾಜನಾಗಿ ಮಾಡು.

"ಇದು ಧರ್ಮ. ನ್ಯಾಯ ಹೀಗಿರುತ್ತ ನೀನು ಮಗನಲ್ಲಿ ಮೋಹ ಮಾಡಿ ರಾಜ್ಯಕ್ಕಾಗಿ ತಪ್ಪಿ ನಡೆಯಬೇಡ. ಅದು ಪಾಪವಾಗುತ್ತದೆ. ಅದರಿಂದ ನೀನು, ಮಕ್ಕಳು, ಮಂತ್ರಿವರ್ಗ, ಎಲ್ಲ ಕೆಡಬೇಕಾಗುತ್ತದೆ. ದೇವತೆಗಳು ದನ ಕಾಯುವವರಂತೆ ಕೈಯಲ್ಲಿ ಕೋಲನ್ನು ಹಿಡಿದು ನಮ್ಮನ್ನು ಸನ್ಮಾರ್ಗಕ್ಕೆ ತಿರುಗಿಸುವುದಿಲ್ಲ; ತಾವು ರಕ್ಷಿಸಬಯಸಿದವನಿಗೆ ಅವರು ಸದ್ಬುದ್ಧಿಯನ್ನು ನೀಡುವರು. ಮನುಷ್ಯನ ಬುದ್ಧಿ ಎಷ್ಟು ಎಷ್ಟು ಧರ್ಮವನ್ನು ಅನುಸರಿಸಿ ನಡೆಯುವುದೊ ಅಷ್ಟು ಅಷ್ಟೂ ಅವನಿಗೆ ಅವನ ಆಕಾಂಕ್ಷೆಗಳು ಕೈಗೂಡುತ್ತವೆ. ಯಾವ ಕಾರ್ಯ ರಾತ್ರಿ ನಿದ್ರೆ ಕೆಡಿಸುವುದಿಲ್ಲ ಅಂಥ ಕಾರ್ಯವನ್ನು ಮಾತ್ರ ಮನುಷ್ಯನು ಹಗಲಲ್ಲಿ ಮಾಡಬೇಕು. ತಪ್ಪು ನಡತೆಯಿಂದ ಸತ್ಕುಲ ದುಷ್ಕುಲವಾಗುತ್ತದೆ; ಉತ್ತಮ ವರ್ತನೆಯಿಂದ ಅಲ್ಪ ಕುಲವೂ ಉತ್ತಮ ಕುಲವೆನ್ನಿಸಿಕೊಳ್ಳುತ್ತದೆ. ಮನುಷ್ಯನು ಶೀಲವನ್ನು ಕಾಪಾಡುವುದಕ್ಕೆ ಪ್ರಯತ್ನಮಾಡಬೇಕು; ಧನವನ್ನು ಕಾಪಾಡುವುದಕ್ಕೆ ಮಾಡುವ ಪ್ರಯತ್ನ ಶ್ಲಾಘ್ಯವಲ್ಲ. ಧನ ಕಡಮೆಯಾದವನು ಕೆಟ್ಟನೆನ್ನುವುದು ಸುಳ್ಳು; ಶೀಲ ಕಡಮೆಯಾದವನು ನಿಜವಾಗಿ ಕೆಟ್ಟನು. ನಮ್ಮ ವಂಶದಲ್ಲಿ ವೈರಬುದ್ಧಿಯುಳ್ಳವನು, ದುಷ್ಟರ ಮಾತಿಗೆ ಕಿವಿ ಕೊಡುವವನು, ಕಪಟಿ, ಮಿತ್ರದ್ರೋಹಿ, ಅನೃತವಾದಿ ಯಾವನೂ ಇರಬಾರದು. ಮನಸ್ಸಿನಲ್ಲಿ ಕೊರಗುವುದು ಮನುಷ್ಯನ ರೂಪನ್ನು ಕೆಡಿಸುತ್ತದೆ, ಬಲವನ್ನು ಕುಗ್ಗಿಸುತ್ತದೆ, ತಿಳಿವನ್ನು ಮಂಕು ಮಾಡುತ್ತದೆ. ಮನಸ್ಸಿನ ಸಂತಾಪದಿಂದ ವ್ಯಾಧಿ ಪ್ರಾಪ್ತವಾಗುತ್ತದೆ. ನೀನು ದುಃಖಕ್ಕೆ ಮನಸ್ಸನ್ನು ಕೊಡಬೇಡ. ತನ್ನವರಲ್ಲಿಯ ಭೇದ ಬುದ್ಧಿಯಿಂದ ಬಾಳುವವನು ಎಷ್ಟೇ ಸಂಪತ್ತಿನಿಂದ ಆವೃತನಾಗಿದ್ದರೂ ಸುಖಿಸಲಾರನು. ನೂಲ ಎಳೆ ಒಂದಾದರೆ ಸುಲಭವಾಗಿ ಕಿತ್ತುಹೋಗುತ್ತದೆ; ಹಲವು ನೂಲೆಳೆ ಒಟ್ಟಿಗೆ ಸೇರಿದ್ದರೆ ಬಹುವರ್ಷದ ಎಳೆದಾಟವನ್ನು ತಡೆದುಕೊಳ್ಳುತ್ತವೆ. ಒಂದೇ ಮರ ಗಾಳಿಯ ಪೆಟ್ಟಿಗೆ ಸಿಕ್ಕಿದರೆ ಬಿದ್ದು ಹೋಗುತ್ತದೆ; ಹಲವು ಮರ ಗುಂಪಾಗಿ ನಿಂತರೆ ಎಲ್ಲವೂ ಉಳಿದು

ಕೊಳ್ಳುತ್ತವೆ. ಪ್ರಾಣಿಗಳನ್ನು ಕೊಲ್ಲುವುದು ಮೃತ್ಯು ಅಲ್ಲ: ಅವರನ್ನು ಅಕಾಲದಲ್ಲಿ ಕೊಲ್ಲುವುದು ಅವರ ಅಕಾರ್ಯ. ಲೋಕದಲ್ಲಿ ಪ್ರಿಯವನ್ನು ನುಡಿಯುವ ಜನ ಸುಲಭವಾಗಿ ಸಿಕ್ಕುವರು: ಪ್ರಿಯವಲ್ಲದಿದ್ದರೂ ಹಿತವೆಂಬುದನ್ನು ಹೇಳುವರೂ ಅಪರೂಪ ಕೇಳುವರೂ ಅಪರೂಪ. ಅಪ್ರಿಯವಾದರೂ ಕ್ಷೇಮಕರವಾದ ಆಲೋಚನೆಯನ್ನು ಹೇಳಿದವನನ್ನು ಮಿತ್ರನೆಂದು ತಿಳಿಯಬೇಕು. ಒಂದು ಕುಲವನ್ನು ರಕ್ಷಿಸುವುದಕ್ಕಾಗಿ ಒಬ್ಬ ಮನುಷ್ಯನನ್ನು, ಒಂದು ಗ್ರಾಮವನ್ನು ರಕ್ಷಿಸುವುದಕ್ಕಾಗಿ ಒಂದು ಕುಲವನ್ನು, ಒಂದು ದೇಶವನ್ನು ರಕ್ಷಿಸುವುದಕ್ಕಾಗಿ ಒಂದು ಗ್ರಾಮವನ್ನು, ಆತ್ಮವನ್ನು ಉಳಿಸಿಕೊಳ್ಳುವುದಕ್ಕಾಗಿ ಲೋಕವನ್ನು, ಬಿಡಬೇಕು.

"ಈಗ ಮಹಾಶೂರರಾದ ಪಾಂಡವರೊಡನೆ ಯುದ್ಧಕ್ಕೆ ನಿಲ್ಲುವುದರಿಂದ ಎಷ್ಟು ಕೇಡು, ನೀನು ಯೋಚಿಸು. ಅವರು ನಿನ್ನ ಮಕ್ಕಳು. ಮಕ್ಕಳೊಡನೆ ವೈರವುಂಟಾಗುತ್ತದೆ; ನೀನೇ ಕೊರಗುತ್ತೀಯೆ; ವಂಶಕ್ಕೂ ಅಪಕೀರ್ತಿ. ನಮ್ಮ ಹಗೆಗಳಿಗೆ ನಮ್ಮ ಗತಿಯನ್ನು ನೋಡಿ ಸಂತೋಷ. ಶಕ್ತಿಯ ದೃಷ್ಟಿಯಿಂದಲಾದರೂ ನಿನ್ನ ಮಕ್ಕಳು ಪಾಂಡವರೊಡನೆ ಯುದ್ಧಕ್ಕೆ ಹೋಗುವುದು ಸರಿಯಲ್ಲ. ಎಲ್ಲ ಬಲಕ್ಕಿಂತ ಪ್ರಬಲವಾದ ಬಲ ಪ್ರಜ್ಞಾಬಲ. ಲೋಕೋಪಕಾರಿಯಾದ ಸಾಧುವಿನೊಂದಿಗೆ ವೈರವನ್ನು ಕಟ್ಟಿಕೊಳ್ಳಬಾರದು. ಪಾಂಡವರೊಡನೆ ಸೇರಿ ಬರುವ ಅಭಿವೃದ್ಧಿಯನ್ನೇ ನೀನು ಬಯಸಬೇಕು. ಅಣ್ಣಾ, ಸಾವಿರ ಇದ್ದವನು ಬದುಕುವನು; ನೂರು ಇದ್ದವನೂ ಬದುಕುವನು; ಹೇಗೂ ಜೀವಿಸದೆ ಹೋಗುವುದಿಲ್ಲ; ನೀನು ಅತಿ ಆಸೆಯನ್ನು ಮಾಡಬೇಡ. ಭೂಮಿಯಲ್ಲಿ ಬೆಳೆಯುವ ಎಲ್ಲಾ ವ್ರೀಹಿಯವನ್ನೂ ಸುವರ್ಣ ಪಶು ಸ್ತ್ರೀ ಸಂಪತ್ತನ್ನೂ ಒಬ್ಬ ಮನುಷ್ಯನಿಗೆ ಕೊಟ್ಟರೂ ಸಾಕು ಎನಿಸುವುದಿಲ್ಲ. ನೀನು ನಿನ್ನ ಮಕ್ಕಳನ್ನೂ ಪಾಂಡು ಪುತ್ರರನ್ನೂ ಸಮನಾದ ದೃಷ್ಟಿಯಿಂದ ನೋಡುವೆನೆನ್ನುತ್ತೀಯೆ: ಅದನ್ನು ಕಾರ್ಯದಲ್ಲಿ ತೋರಿಸು. ಕಾಮದಿಂದಲಾಗಲಿ, ಭಯದಿಂದಲಾಗಲಿ, ಲೋಭದಿಂದಲಾಗಲಿ ಉಸಿರನ್ನು ಉಳಿಸಿಕೊಳ್ಳಬೇಕು ಎಂಬ ಸಂದರ್ಭದಲ್ಲಿ ಕೂಡ ಧರ್ಮವನ್ನು ಬಿಡಬಾರದು. ಧರ್ಮ ನಿತ್ಯವಾದದ್ದು: ಸುಖದುಃಖಗಳು ಅನಿತ್ಯ. ಜೀವ ನಿತ್ಯ;

ಅದರ ಹೇತು ಅನಿತ್ಯ. ಈ ಲೋಕಕ್ಕೆ ಮೇಲೆ ಕೆಳಗೆ ಅಂಧಕಾರ ತುಂಬಿ ಕೊಂಡಿದೆ; ಅದೇ ನರಕ; ಅದು ನಮ್ಮ ತಿಳಿವನ್ನು ಮಂಕುಮಾಡುತ್ತದೆ. ನೀನು ತಿಳಿದೂ ತಿಳಿದೂ ಆ ಅಂಧಕಾರಕ್ಕೆ ಬೀಳಬೇಡ. ಇದೊಂದು ನಾನು ನಿನ್ನಲ್ಲಿ ಮಾಡುವ ಪ್ರಾರ್ಥನೆ.''

ಸಹಸ್ರಿಣೋಽಪಿಜೀವಂತಿ ಜೀವಂತಿರತಿನಃ ತಥಾ
ಧೃತರಾಷ್ಟ್ರವಿಮುಂಚೇಚ್ಛಾಂ ನ ಕಥಂ ಚಿತ್ ನ ಜೀವ್ಯತೇ.

ಧೃತರಾಷ್ಟ್ರನು ತಮ್ಮನ ಈ ಎಲ್ಲ ನೀತಿವಚನವನ್ನೂ ಕೇಳಿದನು. ''ತಮ್ಮ, ನೀನು ಹೇಳುವುದೆಲ್ಲ ಸರಿ. ನನಗೂ ಹಾಗೆಯೇ ತೋರುತ್ತದೆ. ಪಾಂಡವರ ವಿಷಯದಲ್ಲಿ ನನ್ನ ಅಭಿಪ್ರಾಯ ಇದಕ್ಕೆ ಅನುಸಾರವಾಗಿಯೇ ಇದೆ. ಆದರೂ ದುರ್ಯೋಧನನನ್ನು ಕಂಡೊಡನೆ ಮರಳಿ ಅದು ವ್ಯತ್ಯಸ್ತವಾಗುತ್ತದೆ.'' ಎಂದನು.

ಏವಮೇತದ್ಯಥಾತ್ವಂ ಮಾಂ ಅನುಶಾಸಸಿ ನಿತ್ಯದಾ
ಮಮಾಪಿ ಚ ಮತಿಃ ಸೌಮ್ಯ ಭವತ್ಯೇವಂ ಯಥಾಽತ್ಥ ಮಾಂ.
ಸಾತುಬುದ್ಧಿಃ ಕೃತಾಪ್ಯೇವಂ ಪಾಂಡವಾನ್ ಪ್ರತಿ ಮೇ ಸದಾ
ದುರ್ಯೋಧನಂ ಸಮಾಸಾದ್ಯ ಪುನರ್ವಿಪರಿವರ್ತತೇ.

ವಿದುರನು ಹೇಳಿದ ನೀತಿಯೆಲ್ಲ ವ್ಯರ್ಥವಾಯಿತು. ಪಾಂಡವರ ಪರವಾಗಿ ಕೃಷ್ಣನು ದೌತ್ಯಕ್ಕೆ ಬಂದು ವಿದುರನ ಮನೆಯಲ್ಲಿ ಇಳಿದನು. ವಿದುರನು ಪಾಂಡವ ಪ್ರೇಮಿ ಎಂಬುದೊಂದು ಕಾರಣ; ಜೊತೆಗೆ ವಿದುರನೂ ಭೀಷ್ಮನಂತೆ ಕೃಷ್ಣನನ್ನು ಮಹಾಪುರುಷನೆಂದು, ಪ್ರಾಯಶಃ ಭಗವದವತಾರವೆಂದು, ಎಣಿಸಿದ್ದನು. ಸಂಧಿಗಾಗಿ ಬಂದ ಇಂಥ ಹಿರಿಯನು ರಾಜನಾದ ತನ್ನಲ್ಲಿ ಇಳಿಯದೆ ವಿದುರನಲ್ಲಿ ಹೋಗಿ ಇಳಿದನೇ ಎಂದು ದುರ್ಯೋಧನನಿಗೆ ಅಸಮಾಧಾನ. ಇಂಥ ಕಾರಣದಿಂದ ದುರ್ಯೋಧನನು ವಿದುರನನ್ನು ಸದಾ ಒಬ್ಬ ವಿರೋಧಿಯಂತೆ ಅಸೂಯೆಯಿಂದಲೇ ಕಾಣುತ್ತಿದ್ದನು. ವಿದುರನು ಅದು ತನ್ನ ಹುಟ್ಟಿದ ಮನೆ ಎಂಬ ಕಾರಣದಿಂದ, ಧೃತರಾಷ್ಟ್ರನು ಅಣ್ಣ, ಭೀಷ್ಮನು ದೊಡ್ಡಪ್ಪ, ಇಬ್ಬರೂ ವಿಶ್ವಾಸಿಗಳಾಗಿದ್ದರು ಎಂಬ ಕಾರಣದಿಂದ, ದುಷ್ಟರಾದ ಶಕುನಿ ದುಶ್ಶಾಸನ ಮುಂತಾದವರ ಆ ಸಾಮೀಪ್ಯದಲ್ಲಿ ಉಸಿರಾಡಿಸುತ್ತ

ನಿಂತಿದ್ದನು. ಕೃಷ್ಣನು ಸಂಧಾನಕ್ಕೆ ಬಂದಾಗ ವಿದುರನು ಅವನಿಗೆ "ನೀನು ಇಲ್ಲಿಗೆ ಬಂದದ್ದು ನನಗೆ ಸಮಾಧಾನವಿಲ್ಲ. ನಿನ್ನಂಥ ಮಹಾತ್ಮನು ಈ ದುಷ್ಟರ ಮಧ್ಯೆ ಕುಳಿತು ಇವರ ವಿಷಯದಲ್ಲಿ ಮಾತನ್ನು ವ್ಯರ್ಥಮಾಡುವುದು ಬೇಡವೆನಿಸುತ್ತದೆ," ಎಂದನು. ಕೃಷ್ಣನು, "ಈ ಸಮಯದಲ್ಲಿ ನಾನು ಮಾಡಬೇಕಾದ ಕೆಲಸ ಇದು. ಆದ್ದರಿಂದ ಇದನ್ನು ಮಾಡುತ್ತಿದ್ದೇನೆ," ಎಂದು ಸಮಾಧಾನ ಹೇಳಿದನು.

ಯುದ್ಧ ನಡೆದು ಕೌರವ ವಂಶ ನಾಶವಾಯಿತು. ಯುಧಿಷ್ಠಿರನು ದೊರೆಯಾದಮೇಲೆ ಧೃತರಾಷ್ಟ್ರ ಗಾಂಧಾರಿ ವಿದುರರು ಹದಿನೈದು ವರ್ಷ ಕಾಲ ಪಾಂಡವರೊಂದಿಗೆ ಇದ್ದು ಜೀವನ ನಡಸಿದರು. ಆಮೇಲೆ ಧೃತರಾಷ್ಟ್ರನು ಆಶ್ರಮವಾಸ ಮಾಡುವುದೆಂದು ನಿಶ್ಚಯಿಸಿದಾಗ ವಿದುರನೂ ಅವನೊಂದಿಗೆ ವನಕ್ಕೆ ಹೋದನು. ಧೃತರಾಷ್ಟ್ರನೂ ಗಾಂಧಾರಿ ಕುಂತಿ ದೇವಿಯರೂ ಒಂದುಕಡೆ ವಸತಿಮಾಡಿಕೊಂಡರು; ವಿದುರನು ಕಠಿನವಾದ ತಪಸ್ಸನ್ನು ಆಚರಿಸುವ ಅಪೇಕ್ಷೆಯಿಂದ ಬೇರೆ ಒಂದುಕಡೆ ನಿಂತನು. ಕೆಲವು ವರ್ಷಗಳನಂತರ ಯುಧಿಷ್ಠಿರನು ಇವರನ್ನು ಕಾಣಬೇಕೆಂಬ ಆಸೆ ಹುಟ್ಟಿ ತಮ್ಮಂದಿರು ರಾಣಿವಾಸದ ಸಮೇತ ವನಕ್ಕೆ ಬಂದನು. ಆಗ ವಿದುರನನ್ನು ಕಾಣದೆ ಅವನ ವಿಷಯವನ್ನು ವಿಚಾರಿಸಿ ಧೃತರಾಷ್ಟ್ರನಿಂದ ವಿದುರನ ಈ ಕಠಿನ ತಪಶ್ಚರ್ಯದ ಸಂಗತಿಯನ್ನು ಅರಿತನು. ಅಷ್ಟರಲ್ಲಿ ವಿದುರನು ಸ್ವಲ್ಪದೂರದಲ್ಲಿ ಕಾಣಿಸಿಕೊಂಡನು; ಆಶ್ರಮದಲ್ಲಿರುವ ಜನ ಸಂದಣಿಯನ್ನು ನೋಡಿ ವಿಮುಖನಾಗಿ ಮತ್ತೆ ದೂರ ಸಾರಿದನು. ಯುಧಿಷ್ಠಿರನು ಚಿಕ್ಕಪ್ಪನನ್ನು ಬಹು ಪ್ರೀತಿಯಿಂದ ಕರೆಯುತ್ತ ಅವನ ಕಡೆಗೆ ಓಡಿಹೋದನು. ಹತ್ತಿರ ಸೇರಿ ನೋಡಿದರೆ ವಿದುರನ ಆಕಾರ ಅಷ್ಟು ಕಾಣುತ್ತಿದೆ, ಮತ್ತೆ ಏನೂ ಉಳಿದಿಲ್ಲ. ಅವನು ಆಚರಿಸುತ್ತಿದ್ದ ತಪಸ್ಸು ಅಷ್ಟು ಕಠಿನವಾಗಿದ್ದಿತು. ಯುಧಿಷ್ಠಿರನು ಚಿಕ್ಕಪ್ಪನಿಗೆ ನಮಸ್ಕಾರ ಮಾಡಿ ನಿಂತನು. ಅವನು ಇವನನ್ನು ಅಪ್ಪಿಕೊಂಡನು; ಅಪ್ಪಿಕೊಂಡು ನಿಂತಂತೆಯೆ ಒಂದು ಮರವನ್ನಾಶ್ರಯಿಸಿ ಒರಗಿದನು. ಅಪ್ಪಿಕೊಂಡ ಭರದಲ್ಲಿ ವಿದುರನ ಮೈ ಯುಧಿಷ್ಠಿರನ ಮೈಗೆ ಅಂಟಿ ಕೊಂಡಿತೋ ಎಂಬಂತಿದ್ದಿತು; ಯುಧಿಷ್ಠಿರನಿಗೆ ಉಸಿರು ಬುದ್ಧಿ ಆತ್ಮ

ಬಹುಗುಣವಾಗಿ ಶಕ್ತಿಪಡೆದಂತೆ ಭಾಸವಾಯಿತು. ಆದೇಕ್ಷಣ ಅವನು ಚಿಕ್ಕಪ್ಪ ತೀರಿಕೊಂಡನೆಂಬುದನ್ನು ಕಂಡುಕೊಂಡನು.

ತಪಸ್ಸಿನಿಂದ ದೇಹ ಕ್ಷೀಣವಾಗಿದ್ದದ್ದೋ; ಯೋಗದಿಂದ ತನ್ನ ಸತ್ವವನ್ನು ಇವನಲ್ಲಿ ಇರಿಸಬೇಕೆಂಬ ಯೋಜನೆಯೊ; ಬಹುಕಾಲದನಂತರ ಹತ್ತಿರಕ್ಕೆ ಬಂದ ಮಗನನ್ನು ನೋಕಿದ ಆನಂದವೊ: ಯಾವುದೋ ವಿದುರನ ಕಣ್ಣನ್ನು ಮುಚ್ಚಿದ್ದಿತು; ಅವನ ದೇಹವನ್ನು ಸುಲಿದು ಜೀವಕ್ಕೆ ಬಿಡುಗಡೆಯನ್ನು ತಂದಿದ್ದಿತು.

ಯುಧಿಷ್ಠಿರನು ಆಶ್ರಮಕ್ಕೆ ಬಂದು ನಡೆದ ಸಂಗತಿಯನ್ನು ಎಲ್ಲರಿಗೂ ತಿಳಿಸಿದನು. ಎಲ್ಲರೂ ಹೋಗಿ ಕಳೇಬರವನ್ನು ವಾಡಿಕೆಯಂತೆ ದಹಿಸಲು ಯೋಚಿಸಿದರು. ಒಂದು ಧ್ವನಿ, "ಈ ಕಳೇಬರವನ್ನು ಎಲ್ಲರ ದೇಹದಂತೆ ದಹನಕ್ರಿಯೆಗೆ ಒಳಪಡಿಸಬೇಡಿ. ವಿದುರನು ಯೋಗಿಯಾಗಿದ್ದನು. ಯೋಗಿಯ ದೇಹಕ್ಕೆ ದಹನಕ್ರಿಯೆ ಇಲ್ಲ," ಎಂದು ಹೇಳಿತು. ಆದಕಾರಣ ಇವರು ಕಳೇಬರವನ್ನು ಯತಿದೇಪವೆಂದು ಕಂಡು ಹಿಂದಿರುಗಿದರು.

ಮನುಷ್ಯನ ಯೋಗ್ಯತೆಗೆ ಹುಟ್ಟು ಮುಖ್ಯ ಕಾರಣವಲ್ಲ, ಗುಣ ಮುಖ್ಯ, ಎನ್ನುವುದನ್ನು ತನ್ನ ಜೀವನದ ಪ್ರತಿಕ್ಷಣವೂ ತೋರಿಸಿ ಬಾಳಿದ ಈ ಮಹಾಪುರುಷನು ಜೀವನದಲ್ಲಿ ಹೇಗೋ ಹಾಗೆ ಸಾವಿನಲ್ಲಿಯೂ ಅನ್ಯರಿಗೆ ಅಸಾಧ್ಯವಾದ ಒಂದು ಮಹಿಮೆಯನ್ನು ಪ್ರಕಟಿಸಿದನು.

ವಿದುರನ ಜೀವನವನ್ನು ಪರಿಶೀಲಿಸುವಲ್ಲಿ ಸಹಜವಾಗಿ ಧೃತರಾಷ್ಟ್ರನ ಜೀವನ ಪರಿಶೀಲನೆಗೆ ಬರುತ್ತದೆ. ಆದ್ದರಿಂದ ಈಗಾಗಲೇ ಧೃತರಾಷ್ಟ್ರನನ್ನು ಕುರಿತು ಎರಡು ಮುಖ್ಯ ಸಂಗತಿಗಳನ್ನು ಹೇಳಿದ್ದಾಗಿದೆ. ತಾನು ಹುಟ್ಟು ಕುರುಡನೆಂದು ಧೃತರಾಷ್ಟ್ರನಿಗೆ ದೊಡ್ಡ ಕೊರಗು ಇದ್ದಿರಬೇಕು. ಮನೆಗೆ ದೊಡ್ಡವನು; ಎಲ್ಲರೂ ದೊಡ್ಡವನೆಂದು ಮರ್ಯಾದೆಯಿಂದ ಕಾಣುತ್ತಿದ್ದರು; ಆದರೆ ಏನಾದ ಹಾಗಾಯಿತು? ಮರ್ಯಾದೆಗೆ ತಾನು ದೊಡ್ಡವನು; ರಾಜ್ಯ ಪಾಂಡುವಿನದು. ಅಂಗವಿಹೀನನಾದ ತನಗೆ ದೊರೆಯಾಗುವ ಅಧಿಕಾರ ಇಲ್ಲ. ಕುರುಡನಾದರೂ ದೊರೆಯೆಂಬ ಕಾರಣ ಇವನಿಗೆ ಮದುವೆಗಳಾದವು. ಗಾಂಧಾರಿ, ಜೊತೆಗೆ ಅವಳ ಒಂಬತ್ತುಜನ ತಂಗಿಯರು, ಏಕಕಾಲದಲ್ಲಿ ಇವನಿಗೆ ಸಂಸಾರ ಮಾಡಲು

ಬಂದರು. ನೂರುಜನ ಮಕ್ಕಳನ್ನೂ ಗಾಂಧಾರಿ ಒಂದು ಗರ್ಭದಲ್ಲಿ ಪಿಂಡವಾಗಿ ಧರಿಸಿದಳೆಂದು ಕತೆ ಹೇಳುತ್ತದೆ. ವಿಚಿತ್ರಗಳನ್ನು ಬಿಟ್ಟು ಮಾತನಾಡುವುದಾದರೆ, ಈ ಹತ್ತು ಜನ ಗಾಂಧಾರಿಯರು—ಗಾಂಧಾರ ರಾಜಪುತ್ರಿಯರು—ಧೃತರಾಷ್ಟ್ರನಿಗೆ ನೂರುಮಂದಿ ಮಕ್ಕಳನ್ನು ಹೆತ್ತರೆನ್ನ ಬೇಕು. ಜೊತೆಗೆ ಒಬ್ಬ ಮಗಳು; ಮತ್ತು ದೊರೆಯ ಬಳಿ ಸೇವೆ ಮಾಡುತ್ತಿದ್ದ ವೈಶ್ಯ ಸ್ತ್ರೀಯೊಬ್ಬಳಲ್ಲಿ ಯುಯುತ್ಸು ಎಂಬ ಒಬ್ಬ ಮಗ. ಕುರುಡನಾದರೂ ಧೃತರಾಷ್ಟ್ರನು ಬಹು ಬಲಿಷ್ಠನು. ಅವನ ಮಕ್ಕಳೂ ಬಲಿಷ್ಠರು, ದೃಢಕಾಯರು. ಶಾಸ್ತ್ರದೃಷ್ಟಿಯಿಂದ ಪಾಂಡು ರಾಜ್ಯಕ್ಕೆ ಪೂರ್ಣಾಧಿಕಾರಿಯಾದರೂ ತನ್ನ ವಿಷಯದಲ್ಲಿ ದಾಕ್ಷಿಣ್ಯದಿಂದ ನಡೆದು ಕೊಂಡನೆಂದು ಈ ಅಣ್ಣನಿಗೆ ಆ ತಮ್ಮನ ವಿಷಯದಲ್ಲಿ ಕೃತಜ್ಞತೆಯೊಡನೆ ಬೆರೆತ ಒಂದು ಗಾಢವಾದ ಸ್ನೇಹಭಾವ ಇದ್ದಿತು. ಮಧ್ಯೆ ಪಾಂಡು ವಿರಕ್ತನಾಗಿ ಕಾಡಿಗೆ ಹೋಗಿ ಮಡಿದನು. ಮಾದ್ರಿಯೂ ಮಡಿದು ಕುಂತಿ ಐವರು ಮಕ್ಕಳೊಂದಿಗೆ ಹಸ್ತಿನಾವತಿಗೆ ಬಂದಾಗ ಧೃತರಾಷ್ಟ್ರನು ಅವರನ್ನು ಪ್ರೀತಿಯಿಂದ ಕರೆದುಕೊಂಡನು; ಎಲ್ಲ ಮಕ್ಕಳನ್ನೂ ತನ್ನವರೇ ಎಂಬ ಭಾವನೆಯಿಂದ ನೋಡಿಕೊಂಡನು. ಆದರೆ ಪರಿಸ್ಥಿತಿಯ ಫಲವಾಗಿ ಅವನ ಮಕ್ಕಳು ಪಾಂಡುವಿನ ಮಕ್ಕಳ ವಿಷಯದಲ್ಲಿ ಈರ್ಷೆಪಟ್ಟರು. ಈ ಹುಡುಗರು ಬಾರದೆ ಇದ್ದರೆ ದುರ್ಯೋಧನನು ರಾಜನಾಗಬೇಕು. ಇವರು ಬಂದದ್ದರಿಂದ ಅವನಿಗೆ ರಾಜ್ಯ ತಪ್ಪಿತು; ಅವನನ್ನು ಆಶ್ರಯಿಸಿ ಸುಖಿಗಳಾಗುವೆವೆಂದು ತಿಳಿದಿದ್ದ ಹಲವರ ಆಶೆ ಕರಗಿಹೋಯಿತು. ಯಾರೇ ಆಗಲಿ ಊಹಿಸುವ ಮುನ್ನ ಹುಡುಗರು ಎರಡು ತಂಡವಾಗಿ ನಿಂತರು. ಧೃತರಾಷ್ಟ್ರನಿಗೆ ತನ್ನ ಮಗನಮೇಲೆ ಪ್ರೇಮವಷ್ಟೇ ಅಲ್ಲ, ಸ್ವಲ್ಪ ಕನಿಕರವೂ ಇದ್ದಿತೆಂದು ಕಾಣುತ್ತದೆ. ತಾನು ಕುರುಡನಾದ ಕಾರಣದಿಂದ ತನ್ನ ಈ ಮಗನು ಎಷ್ಟು ದಕ್ಷನಾದರೂ ರಾಜ್ಯಕ್ಕೆ ಅನಧಿಕಾರಿ. ಈ ಭಾವ ಇವನನ್ನು ಬಾಧಿಸುತ್ತಿದ್ದದರಿಂದಲೆ ತನ್ನಿಂದ ಮಗನಿಗೆ ಅಡಸಿದ ನಷ್ಟಕ್ಕೆ ಪರಿಹಾರವನ್ನು ಕೊಡುವ ಮನೋಧರ್ಮದಿಂದ ಈ ತಂದೆ ಮಗನು ಬೇಡಿದ್ದಕ್ಕೆಲ್ಲ ಒಪ್ಪಿಗೆ ಕೊಡುತ್ತಿದ್ದನು. ಸರಿತಪ್ಪನ್ನು ಬಲ್ಲವನಾದ ಕಾರಣ ಆ ಒಪ್ಪಿಗೆಕೊಡುವ ಮೊದಲು ಸರಿಯಾವುದು ಎನ್ನು

ವುದನ್ನು ಆ ಮಗನಿಗೆ ಒಂದು ಸಲ ಹೇಳುವನು. ಯಾವ ಸಲವೂ ಇವನು ಹೇಳಿದ ನೀತಿಯ ಮಾತು ದುರ್ಯೋಧನನಿಗೆ ಒಪ್ಪಿಗೆಯಾಗಲಿಲ್ಲ. ಒಂದೊಂದು ಸಲವೂ ಚರ್ಚೆಯ ಕೊನೆಯಲ್ಲಿ ದುರ್ಯೋಧನನ ಇಷ್ಟ ಸಾಧನೆಯಾಗುತ್ತಿದ್ದಿತು. ಇವರು ದ್ಯೂತವಾಡುವುದು ಧೃತರಾಷ್ಟ್ರನಿಗೆ ಇಷ್ಟವಿಲ್ಲ; ಆದರೂ ಇವನು ದ್ಯೂತಕ್ಕೆ ಸಮ್ಮತಿಸಿದನು; ಆಟಕ್ಕಾಗಿ ಭವನವನ್ನು ನಿರ್ಮಿಸಲು ತಾನೆ ಅಪ್ಪಣೆಮಾಡಿದನು; ಯುಧಿಷ್ಠಿರನಿಗೆ ಹೇಳಿ ಕಳುಹಿಸಿದನು. ಪಾಂಡವರಿಗೆ ಅವಮಾನವಾದಾಗ ತುಂಬ ದುಃಖಪಟ್ಟನು; ಆದರೆ ಅವಮಾನವನ್ನು ತಪ್ಪಿಸುವುದು ಹೇಗೆ ಎಂದು ಯೋಚಿಸಲಿಲ್ಲ. ಯೋಚಿಸಿದ್ದನೇ, ದಾರಿ ತಿಳಿಯಲಿಲ್ಲ; ಅದು ತಿಳಿದಿದ್ದರೆ ಅದನ್ನು ಹಿಡಿಯಲಿಲ್ಲ. ಪ್ರಾಯಶಃ ಅಂಥ ದಾರಿಯನ್ನು ಹಿಡಿಯುವುದಕ್ಕೆ ಆವಶ್ಯಕವಾದ ಸ್ಥೈರ್ಯ ಇವನ ಸ್ವಭಾವದಲ್ಲಿ ಇರಲಿಲ್ಲ. ಅನರ್ಥ ಆಗುವಷ್ಟು ಆಗಿ ಜ್ಞಾತಿಗಳಲ್ಲಿ ದ್ವೇಷ ಬೆಂಕಿಯಾಗಿ ಹೊತ್ತಿದ ಮೇಲೆ ಇವನು ಭಯವನ್ನು ಅನುಭವಿಸಿದನು; ಆಗ ಎಷ್ಟೋ ಅಷ್ಟು ಹಟಮಾಡಿ ಕೇಡು ಸದ್ಯದಲ್ಲೆ ಕೊನೆಮುಟ್ಟದಂತೆ ತಡೆದನು. ಕೃಷ್ಣನು ಸಂಧಾನಕ್ಕೆ ಬಂದಾಗ ಧೃತರಾಷ್ಟ್ರನು, "ಆ ಪೂಜ್ಯನ ಮಾತಿನಂತೆ ನಡೆ," ಎಂದು ದುರ್ಯೋಧನನಿಗೆ ಬಹಳವಾಗಿ ಹೇಳಿದನು; ದುರ್ಯೋಧನನು ಕೇಳಲಿಲ್ಲ. ಧೃತರಾಷ್ಟ್ರನು ಆಗ ವಿದುರನಿಗೆ, "ಗಾಂಧಾರಿಯನ್ನು ಕರೆದು ತಾ. ಅವಳು ತನ್ನ ಮಗನಿಗೆ ಬುದ್ಧಿ ಹೇಳಲಿ," ಎಂದು ಅಪ್ಪಣೆ ಮಾಡಿದನು. ಗಾಂಧಾರಿ ಬಂದಳು; ಮಗನಿಗೆ ಬುದ್ಧಿ ಹೇಳಿದಳು; ಅವನು ಅವಳ ಮಾತನ್ನು ಕೇಳಲಿಲ್ಲ. ಕೊನೆಗೆ ಯುದ್ಧ ತಪ್ಪುವಂತಿಲ್ಲ ಎಂದು ಸಿದ್ಧಾಂತವಾಯಿತು. ಕೃಷ್ಣನು ಪಾಂಡವರ ಬಳಿಗೆ ಹೊರಟನು; ಆಗ ಧೃತರಾಷ್ಟ್ರನು ಅವನಿಗೆ, "ಕೃಷ್ಣ, ನೀನೇ ನೋಡು; ನಾನು ಎಷ್ಟು ಅಸಹಾಯನಾಗಿದ್ದೇನೆ, ಸೋದರರಲ್ಲಿ ಕಲಹ ಬೇಡವೆಂದು ನಾನು ಹೇಳುವುದೆಲ್ಲ ವೃಥಾಲಾಪವಾಗಿದೆ. ದುರ್ಯೋಧನನು ಹಟಮಾಡುತ್ತಿದ್ದಾನೆ," ಎಂದನು. ಗ್ರಂಥವನ್ನು ಓದುತ್ತ ನಮಗೆ ಈ ಸನ್ನಿವೇಶದಲ್ಲಿ ಈ ವೃದ್ಧ ಜಾತ್ಯಂಧನು ಏಕೆ ಒಂದು ಮಾತನ್ನು ಪಟ್ಟಾಗಿ ಹಿಡಿಯಬಾರದಾಗಿದ್ದಿತು ಎನ್ನಿಸುತ್ತದೆ. ಯುದ್ಧವೇ ಆದರೆ ಹಲವರು ಸಾಯುವುದು ನಿಜ.

ಪಾಂಡವರಲ್ಲಿ ಕೆಲವರು ಸಾಯುಬಹುದು; ತನ್ನ ಮಕ್ಕಳು ಕೆಲವರು ಸಾಯದೆ ಬಿಡುವಂತಿಲ್ಲ. ಪಾಂಡವರು ಇವನಿಗೇನು ಪ್ರಿಯರಲ್ಲದೆ ಇರಲಿಲ್ಲ; ಸ್ವಂತ ಮಕ್ಕಳು ಪ್ರಿಯರೆಂದು ಸ್ವತಸ್ಸಿದ್ಧ. ಇಂಥ ಪ್ರಿಯ ಜೀವಗಳು ಮುಗಿಯುವುವೆಂದು ತಿಳಿದೂ ಇವನು ಏಕೆ ಸಂಧಿಯಾಗ ಬೇಕೆಂದು ಹಟಮಾಡಲಿಲ್ಲ? ಇಷ್ಟೇ ಕಾಣುತ್ತದೆ: ಮೈಯ ಎತ್ತರಕ್ಕೆ ಹೇಗೋ ಹಾಗೆ ಮನಸ್ಸಿನ ಎತ್ತರಕ್ಕೂ ಒಬ್ಬೊಬ್ಬನಿಗೂ ಒಂದು ಮಿತಿ ಇದೆ. ಒಂದು ದೇಹ ಇಷ್ಟು ಅಡಿ ಇಷ್ಟು ಅಂಗುಲಕ್ಕೆ ಹೆಚ್ಚಾಗಿ ಬೆಳೆಯು ವುದಿಲ್ಲ; ಒಂದು ಮನಸ್ಸು ಇಷ್ಟಕ್ಕಿಂತ ಹೆಚ್ಚಾಗಿ ಸ್ಥೈರ್ಯವನ್ನು ತಳೆಯುವುದಿಲ್ಲ. ಒಂದು ಮಾತಿನಿಂದ ಆಮೇಲೆ ಬಂದ ಅನರ್ಥ ಪರಂಪರೆ ಯನ್ನೆಲ್ಲ ನಿಲ್ಲಿಸಬಹುದಾಗಿದ್ದಿತಲ್ಲಾ ಎನ್ನುವ ಮಾತಿಗೆ ಉತ್ತರ, ಆ ಒಂದು ಮಾತನ್ನಾಡುವುದು ಈ ಸ್ವಭಾವಕ್ಕೆ ಸಾಧ್ಯವಲ್ಲ. ಈ ಅರ್ಥದಲ್ಲಿ ಭಾರತದ ಎಲ್ಲ ದುರಂತಕ್ಕೆ ಮೂಲಕಾರಣ ಧೃತರಾಷ್ಟ್ರನ ಸ್ವಭಾವದ ದೌರ್ಬಲ್ಯ. ಯುದ್ಧ ನಡೆಯಿತು. ಧೃತರಾಷ್ಟ್ರನು ಒಬ್ಬರಾದಮೇಲೆ ಒಬ್ಬರು ತನ್ನ ಮಕ್ಕಳೆಲ್ಲ ಸತ್ತ ಸಂಗತಿಯನ್ನು ಆ ಹದಿನೆಂಟು ದಿನವೂ ಕೇಳಿದನು. ಎಲ್ಲ ಮುಗಿದಮೇಲೆ ರಾಷ್ಟ್ರದ ಯಃ ಕಶ್ಚಿತ್ ಗ್ರಾಮ ವಾಸಿಯಂತೆ ತಾನೂ ಆ ಎಲ್ಲ ಕೇಡಿನ ಕೇವಲ ಒಬ್ಬ ಪ್ರೇಕ್ಷಕನಾದನು.

ಯುಧಿಷ್ಠಿರನು ದೊರೆಯಾದಮೇಲೆ ಧೃತರಾಷ್ಟ್ರನು ಅವನ ವಿಷಯಕ್ಕೆ ವಿಶ್ವಾಸದಿಂದ ನಡೆದುಕೊಂಡನು. ಅವನು ಭೀಮನನ್ನು ಕೊಂದುಬಿಡಲು ನೋಡಿದನೆಂದು ಮುಂತಾಗಿ ಮಹಾಭಾರತದಲ್ಲಿ ಕತೆ ದೊರೆಯುತ್ತದೆ. ಇದು ಆಮೇಲೆ ಸೇರಿದ ಸಂಗತಿಯೆಂದು ಅಲ್ಲಿಯೇ ಕಾಣುತ್ತದೆ. ಯುಧಿಷ್ಠಿರನು ದೊಡ್ಡಪ್ಪನನ್ನು ಭಕ್ತಿಯಿಂದ ಪ್ರೀತಿಯಿಂದ ನೋಡಿಕೊಂಡನು. ಭೀಮಸೇನನು ಧೃತರಾಷ್ಟ್ರನನ್ನು ಸರಿಯಾಗಿ ಕಾಣಲಿಲ್ಲ ಎಂದೂ ಈ ಭಾಗದಲ್ಲಿ ಉಕ್ತವಾಗಿದೆ: ಇದನ್ನು ಹೇಳುವ ಕಥಾಭಾಗ ಕೂಡ ಆಮೇಲೆ ಸೇರಿದ್ದು ಎಂದು ಕಾಣುತ್ತದೆ. ಹದಿನೈದು ವರ್ಷ ಯುಧಿಷ್ಠಿರನ ರಾಜ್ಯಭಾರವನ್ನು ನೋಡಿಕೊಂಡಿದ್ದು ಆಮೇಲೆ ಧೃತರಾಷ್ಟ್ರನು ಅವನ ಒಪ್ಪಿಗೆಯನ್ನು ಪಡೆದು ಆಶ್ರಮವಾಸಕ್ಕೆ ಹೊರಟನು. ಆಗ ಅವನು ಆಡಿದ ಮಾತು, ಯುಧಿಷ್ಠಿರ ಭೀಮರು ಆಡಿದ ಮಾತು,

ಈ ತಂದೆ ಮಕ್ಕಳಲ್ಲಿ ಎಷ್ಟು ಸಹಜವಾದ ಪ್ರೀತಿ ಬೆಳೆದಿದ್ದಿತು ಎಂಬುದನ್ನು ತೋರಿಸುತ್ತವೆ. ಪುರವಾಸಿಗಳು ಆಶ್ರಮಕ್ಕೆ ಹೊರಟ ಹಿರಿಯರನ್ನು ಕಳುಹಿಸಿಕೊಡಲು ಸ್ವಲ್ಪದೂರ ಜೊತೆಗೆ ನಡೆದರು. ಆಗ ಧೃತರಾಷ್ಟ್ರನು ಅವರಿಗೆ, "ಅಯ್ಯಾ, ನಿಮ್ಮ ಪ್ರೀತಿಯಿಂದ ನಾನು ಬಹಳ ಸಂತುಷ್ಟನಾಗಿದ್ದೇನೆ. ಇನ್ನು ನೀವು ಹಿಂದಿರುಗಿ. ಯುಧಿಷ್ಠಿರನು ಗುಣಶಾಲಿ; ನಿಮ್ಮನ್ನು ಧರ್ಮದಿಂದ ಕಾಪಾಡಿಕೊಳ್ಳುತ್ತಾನೆ. ನಾನು ನಿಮ್ಮನ್ನು ಅವನ ಕೈಯಲ್ಲಿ ಇಟ್ಟು ಹೋಗುತ್ತಿದೇನೆ; ನೀವೂ ಅವನ ವಿಷಯಕ್ಕೆ ಭಕ್ತಿ ಪ್ರೀತಿಯಿಂದ ನಡೆದುಕೊಳ್ಳಿ," ಎಂದು, "ನನ್ನ ಮಗ ದುರ್ಯೋಧನನು ರಾಜ್ಯವನ್ನು ನಡೆಸಿದ ಕಾಲದಲ್ಲಿ ನಿಮ್ಮ ವಿಷಯಕ್ಕೆ ಯಾವುದೇ ವಿವರದಲ್ಲಿ ತಪ್ಪಿನಡೆದಿರಬಹುದು. ನಾನಾದರೂ ನಿಮ್ಮ ವಿಷಯದಲ್ಲಿ ಅಚಾತುರ್ಯದಿಂದ ನಡೆದುಕೊಂಡಿದ್ದೇನು. ಅದನ್ನು ನೀವು ಮನಸ್ಸಿನಲ್ಲಿಟ್ಟುಕೊಳ್ಳಬೇಡಿ. ಈಗ ಹೋಗಿ, ಸುಖವಾಗಿ ಬಾಳಿರಿ," ಎಂದನು. ಆಶ್ರಮಕ್ಕೆ ಹೋಗುತ್ತ ಇವನು ಕುಂತಿಯನ್ನು ಮುಂದೆ ಬಿಟ್ಟುಕೊಂಡು ಅವಳ ಭುಜದಮೇಲೆ ಒಂದು ಕೈಯಿಟ್ಟು, ಗಾಂಧಾರಿಯನ್ನು ಪಕ್ಕದಲ್ಲಿ ಕರೆದುಕೊಂಡು ಅವಳ ಭುಜದ ಮೇಲೆ ಒಂದು ಕೈಯನ್ನು ಹಾಕಿ, ದಾರಿ ನಡೆದನು. ಇದೊಂದು ವಿವರ ಸಾಕು, ಸಾಯದೆ ಬದುಕಿದ ಈ ಹಿರಿಯರ ಮಧ್ಯೆ ಭಾವ ವೈಷಮ್ಯ ಇರಲಿಲ್ಲ ಎಂದು ತೋರುವುದಕ್ಕೆ. ಆಶ್ರಮದಲ್ಲಿ ಧೃತರಾಷ್ಟ್ರನು ಆಶ್ರಮವಾಸದ ನಿಯಮದಂತೆ ನಡೆದುಕೊಂಡನು. ತನ್ನನ್ನು ನೋಡುವುದಕ್ಕೆಂದು ಯುಧಿಷ್ಠಿರನು ಸೋದರರು ರಾಣಿವಾಸದವರೊಂದಿಗೆ ಬಂದಾಗ ಎಲ್ಲರನ್ನೂ ಪ್ರೀತಿಯಿಂದ ಬರಮಾಡಿಕೊಂಡನು; ಸಹಜವಾದ ಪ್ರೇಮದಿಂದ ಅವನ ಆಳ್ವಿಕೆ ಚೆನ್ನಾಗಿ ನಡೆಯುತ್ತ ಇದ್ದಿತೆ ಎಂದು ವಿವರವಾಗಿ ಪ್ರಶ್ನೆಮಾಡಿ ತಿಳಿದನು. ಬಂದವರು ಹಿಂದಿರುಗಿದ ಸ್ವಲ್ಪಕಾಲದ ಮೇಲೆ ಇವರ ಕಾಡಿಗೆ ಬೆಂಕಿ ಹೊತ್ತಿತೆಂದು ಕಾಣುತ್ತದೆ; ಆ ಕಿಚ್ಚಿನಲ್ಲಿ ಧೃತರಾಷ್ಟ್ರ, ಗಾಂಧಾರಿ, ಕುಂತಿ ಇವರ ದೇಹತ್ಯಾಗ ಆಯಿತು.

ಭೀಷ್ಮನಂತೆ ವಿದುರ ಧೃತರಾಷ್ಟ್ರರೂ ಹೊಟ್ಟೆತುಂಬ ದುಃಖವನ್ನುಂಡರು. ಭೀಷ್ಮನಿಗೆ ಮೇರುಮಂದರದ ಸ್ಥೈರ್ಯವಿದ್ದಿತು;

ಜೊತೆಗೆ ಸಾವಿರ ಹೇಳಿದರೂ ನೋಯುವವರ ವಿಷಯದಲ್ಲಿ ಒಂದು ರೀತಿಯ ಪೃಥಗ್ಭಾವ ಇದ್ದಿರಬೇಕು. ವಿದುರನಿಗೆ ಸ್ಥೈರ್ಯವಲ್ಲ, ವಿವೇಕ ಇದ್ದಿತು. ಜೊತೆಗೆ, ತಾನು ಹೊಣೆಯಲ್ಲ, ಎಂಬ ಒಂದು ಸಾಕ್ಷಿಕ ಮನೋಧರ್ಮವಿದ್ದಿತು. ಧೃತರಾಷ್ಟ್ರನಿಗೆ ಆ ಸ್ಥೈರ್ಯ ಇರಲಿಲ್ಲ; ಈ ವಿವೇಕ ಇರಲಿಲ್ಲ; ಸಾಲದ್ದಕ್ಕೆ ದುರಂತದ ನಾಯಕರು ತೀರ ತನ್ನವರಾದಕಾರಣ ಗಾಢವಾದ ಮಮಭಾವವಿದ್ದಿತು. ದುಃಖದ ಊಟದ ಬಹುಭಾಗ ಈ ಕಾರಣದಿಂದ ಇವನ ಹೊಟ್ಟೆಯನ್ನು ಮುಟ್ಟಿತು. ಎಲ್ಲ ದುರಂತಕ್ಕೆ ಹೊಣೆ ಇವನು ಎನ್ನುವುದಾದರೆ ಅದರ ನೋವಿನ ಬಹು ಭಾಗವನ್ನು ತಾನೇ ಉಂಡು ಇವನು ಆ ಹೊಣೆಗೆ ಅನುಗುಣವಾಗಿ ಶಿಕ್ಷೆ ಯನ್ನು ಪಡೆದನೆಂದು ಹೇಳಬೇಕಾಗುತ್ತದೆ.

೭

## ಸತ್ಯವತಿ, ಕುಂತಿ, ಗಾಂಧಾರಿ

ಈಗ ಈ ಹಿರಿಯರ ತಲೆಮಾರಿನ ಮೂವರು ಸ್ತ್ರೀಯರನ್ನು ಕೃತಿ ಹೇಗೆ ಚಿತ್ರಿಸಿದೆ ಎಂದು ನೋಡಬಹುದು. ಇವರಲ್ಲಿ ಮೊದಲಾಕೆ ಸತ್ಯವತಿ. ಇವಳು ದಾಶರಾಜನ ಮಗಳು. ಇವಳು ಚಿಕ್ಕಂದು ಒಂದುಸಲ ಗಂಗೆಯಮೇಲೆ ಓಡೆಯನ್ನು ನಡೆಸುತ್ತಿದ್ದಾಗ ಪರಾಶರ ಋಷಿ ನದಿಯನ್ನು ದಾಟಲು ಬಂದನು; ಓಡೆಯಲ್ಲಿ ಕುಳಿತನು. ಹುಡುಗಿ ಬಹು ಚೆಲುವೆ ಯಾಗಿದ್ದಿರಬೇಕು: ಋಷಿ ಅವಳ ರೂಪಕ್ಕೆ ಮೋಹಗೊಂಡು ಅವಳ ಸಹವಾಸವನ್ನು ಬೇಡಿದನು. ಅವಳು, "ನಾನು ನಿನ್ನನ್ನು ಕೂಡಿ ಕನ್ಯಾ ತನವನ್ನು ಕಳೆದುಕೊಂಡರೆ ನನಗೆ ಗತಿಯೇನು," ಎಂದಳು. ಋಷಿ, "ನಾನು ವರ ಕೊಡುತ್ತೇನೆ. ನನ್ನೊಡನೆ ಸೇರಿಯೂ ನೀನು ಕನ್ಯೆ ಯಾಗಿಯೇ ಉಳಿಯುವೆ," ಎಂದು ಒಡಂಬಡಿಸಿದನು. ನದಿಯ ಅತ್ತ ಇತ್ತಣ ದಂಡೆಯಲ್ಲಿ ಜನ ನಿಂತಿದ್ದರು. ಹುಡುಗಿ, "ಎರಡು ಕಡೆ ಯಿಂದಲೂ ಜನ ನೋಡುತ್ತಿರುವಾಗ ನಾನು ನಿನ್ನನ್ನು ಸೇರುವುದು ಹೇಗೆ?" ಎಂದಳು. ಋಷಿ ತನ್ನ ಪ್ರಭಾವದಿಂದ ಹಿರಿದೊಂದು ಮಂಜು ಕವಿಯುವ ಹಾಗೆ ಮಾಡಿದನು; ಇವರ ಓಡೆ ದಡದ ಜನರ ದೃಷ್ಟಿಗೆ

ಕಾಣದಂತಾಯಿತು. ಪರಾಶರನು ಇವಳ ಸಹವಾಸಮಾಡಿದನು; ಹೊರಟುಹೋದನು. ಸತ್ಯವತಿ ಒಬ್ಬ ಮಗನನ್ನು ಹೆತ್ತಳು. ಆ ಮಗನೇ ವ್ಯಾಸ. ಹುಡುಗಿಯ ಮೈ ಅದಕ್ಕೆ ಮೊದಲು ಮೀನಿನ ವಾಸನೆಯನ್ನು ಕೊಡುತ್ತಿದ್ದಿತೆಂದೂ ಋಷಿಯು ಸಹವಾಸ ಮಾಡಿದಮೇಲೆ ಅವನ ವರದಿಂದ ಅದು ಸುಂದರವಾದ ಸುಗಂಧವನ್ನು ಪಡೆಯಿತೆಂತಲೂ ಕಥೆ ಹೇಳುತ್ತದೆ. ಹುಟ್ಟಿದ ಮಗನು ತಾಯಿಗೆ ನಮಸ್ಕರಿಸಿ ತಾನು ತಪಸ್ಸಿಗೆ ಹೋಗುವುದಾಗಿಯೂ ಅವಳು ನೆನೆದಾಗ ಮತ್ತೆ ಬರುವುದಾಗಿಯೂ ತಿಳಿಸಿ ಹೊರಟುಹೋದನು. ಇದಾದಮೇಲೆ ಕೆಲವುವರ್ಷ ಕಳೆದಿರಬೇಕು; ಆಗ ಶಂತನು ಇವಳನ್ನು ಕಂಡು ಮೋಹಿಸಿದನು. ಆ ಮೇಲೆ ನಡೆದ ಕತೆ ಈ ಮೊದಲೆ ಉಕ್ತವಾಗಿದೆ. ಸತ್ಯವತಿ ಈ ಸಲ ಒಬ್ಬ ಗಂಡು ತನ್ನ ಸಹವಾಸವನ್ನು ಬಯಸಿದಾಗ ಮೊದಲಸಲದಂತೆ ತಾನೆ ಹೊಣೆ ಹೊತ್ತು ಒಪ್ಪಿಕೊಳ್ಳಲಿಲ್ಲ; ತನ್ನ ತಂದೆಯನ್ನು ಕೇಳಬೇಕು ಎಂದಳು. ಮಧ್ಯೆ ಕೆಲವು ವರ್ಷ ಕಳೆದು ಪ್ರಪಂಚಜ್ಞಾನ ಸ್ವಲ್ಪ ಬಂದಿದ್ದುದರಿಂದಲೋ, ಇಲ್ಲವೆ ಮೊದಲಸಲ ಕೇಳಿದವನು ಋಷಿ, ಎರಡನೆಯಸಲ ಕೇಳಿದವನು ರಾಜ, ಎಂಬ ಕಾರಣದಿಂದಲೊ, ಎಂಬ ವಿವರ ಇಲ್ಲಿ ಸ್ಪಷ್ಟವಾಗಿಲ್ಲ. ಶಂತನು ದಾಶರಾಜನನ್ನೇ ಹೋಗಿ ಕೇಳಿದನು. ದಾಶನು ಸೂಚಿಸಿದ ಸಮಯದ ಬಗ್ಗೆ ಇವಳ ಅಭಿಪ್ರಾಯವೇನಿದ್ದಿತೊ ತಿಳಿಯದು. ಸತ್ಯವತಿ, ತಂದೆ ಏನೆಂದು ಗೊತ್ತುಮಾಡಿದರೆ ತಾನು ಅದರಂತೆ ನಡೆಯುವಳು, ಎಂದು ನಿಶ್ಚಯಿಸಿದ್ದಂತೆ ತೋರುತ್ತದೆ. ತನ್ನ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ರಾಜ್ಯವಾಗಬೇಕೆನ್ನುವುದು ಅವಳಿಗೆ ಇಷ್ಟವೇ ಇದ್ದಿರಬೇಕು. ಅದಿಲ್ಲದಿದ್ದರೆ ಅವಳು ಶಂತನುವನ್ನು ಸೇರುತ್ತಿರಲಿಲ್ಲ; ರಾಣಿಯಾಗುತ್ತಿರಲಿಲ್ಲ. ಅವಳ ತಂದೆಗೂ ಅವಳಿಗೂ ಅವಳ ಮಕ್ಕಳು ರಾಜರಾಗಬೇಕೆನ್ನುವುದು ಮುಖ್ಯ ವಿಷಯ; ಅವಳು ರಾಣಿಯಾಗುವುದು ಅಷ್ಟು ದೊಡ್ಡ ಮಾತಲ್ಲ. ಆಗ್ಗೆ ಇದು ಹೆಣ್ಣಿನ ಮತ್ತು ಹೆಣ್ಣನ್ನು ಹೆತ್ತವರ ಮನೋಧರ್ಮವಾಗಿದ್ದಿತೆಂದು ಕಾಣುತ್ತದೆ. ದುಷ್ಯಂತನು ಸಹವಾಸವನ್ನು ಬಯಸಿದಾಗ ಶಕುಂತಲೆ ತನ್ನ ಮಗ ರಾಜನಾಗಬೇಕೆಂಬ ಸಮಯವನ್ನು ತಾನೇ ಸೂಚಿಸಿದಳು; ಅವಳ ಮಗ ಚಕ್ರವರ್ತಿಯಾಗುವನೆಂದು ಅವಳ

ಸಾಕುತಂದೆ ಕಣ್ವನೂ ಆನಂದಿಸಿದನು. ಇಲ್ಲಿ ಅಲ್ಲಿ ಬಹು ವಿವರದಲ್ಲಿ ಮನೋಧರ್ಮ ಒಂದೇ ಆಗಿ ಕಾಣುತ್ತದೆ. ಅಂತೂ ಸತ್ಯವತಿ ಶಂತನುವಿನ ರಾಣಿಯಾಗಿ ಬಂದಳು.

ಆದರೆ ಅವಳ ಜೀವನ ಅವಳೂ ಅವಳ ತಂದೆಯೂ ನಿರೀಕ್ಷಿಸಬಹುದಾಗಿದ್ದಂತೆ ಬೆಳೆಯಲಿಲ್ಲ. ಅವಳಿಗೆ ಇಬ್ಬರು ಮಕ್ಕಳಾದ ಮೇಲೆ ಶಂತನು ತೀರಿಕೊಂಡನು. ಮಕ್ಕಳು ಬೆಳೆಯುವವರೆಗೆ ಅವಳು ಅವರ ಆಸ್ತಿಯನ್ನು ಕಾಯುವುದಕ್ಕೆ ಭೀಷ್ಮನ ಸಹಾಯವನ್ನು ಪಡೆಯಬೇಕಾಯಿತು. ಸಂದರ್ಭ ಸ್ವಲ್ಪ ಬೇರೆಯಾಗಿದ್ದಿತೇ ಅವಳು ಭೀಷ್ಮನ ರಾಣಿಯಾಗಿ ಅರಮನೆಗೆ ಬಂದಿರಬಹುದಾಗಿದ್ದಿತು. ಆದರೆ ವಿಧಿಯ ಇಚ್ಛೆ ಹೀಗೆ ಇದ್ದಿತು. ಈ ಸಂದರ್ಭದಲ್ಲಿ ಈ ಮಲತಾಯಿ ಮಲಮಗ ಒಬ್ಬರಿಗೊಬ್ಬರು ನಡೆದುಕೊಂಡರೀತಿ ಭಾವಿಸಲು ಬಹು ಸುಂದರವಾಗಿದೆ. ಭೀಷ್ಮನು ಬ್ರಹ್ಮಚಾರಿ. ಸತ್ಯವಂತ, ನಿಜ; ನೀರು ನೀರ್ಮೆಯನ್ನು ಬಿಟ್ಟರೂ ಸೂರ್ಯನು ತಣ್ಣಗಾದರೂ ತನ್ನ ನಿಶ್ಚಯದಿಂದ ಕದಲಲಾರದ ಧೀರ. ಆದರೂ ತರುಣನಾದ ಇವನನ್ನು ಮಲಮಗನಾಗಿ ಪಡೆದು ಹತ್ತಿರದಲ್ಲಿ ನಿಂತ ಮಲತಾಯಿ ಅವನ ವಿಷಯದಲ್ಲಿ ಸ್ವಲ್ಪ ಸಂಕೋಚದಿಂದ ನಡೆದುಕೊಂಡಿದ್ದರೆ ಆಶ್ಚರ್ಯಪಡಬೇಕಾಗಿರಲಿಲ್ಲ. ಹೆಸರಿಗೆ ಮಗ; ವಾಸ್ತವವಾಗಿ ಗಂಡನ ಮಗ, ಮತ್ತೊಬ್ಬಳ ಮಗ; ಎಷ್ಟು ಹೇಳಿದರೂ ಪರಪುರುಷ. ಹೀಗೆ ನಮಗೆ ತೋರುತ್ತದೆ: ಸತ್ಯವತಿ ಭೀಷ್ಮನನ್ನು ಹೀಗೆ ಕಾಣಲಿಲ್ಲ. ಪ್ರಾಯದ ಹೆರಗಂಡನ್ನು ಮಗನೆಂದು ಕರೆಯುತ್ತ ಮನೆಗೆ ಬಂದ ಈ ತಾಯಿ ಅವನನ್ನು ಹೆತ್ತು ತೊಡೆಯಮೇಲಿಟ್ಟುಕೊಂಡು ಎದೆಗಿಕ್ಕಿ ಹಾಲುಣಿಸಿದ ತಾಯಿ ಎಂಬಂತೆ ಗುರುಭಾವದಿಂದ ನಡೆದುಕೊಂಡಳು. ವಯಸ್ಸಿನಿಂದ ಕೂಡ ಅವನೇ ಹಿರಿಯನಿದ್ದಿರಬಹುದು. ನಡೆಯಿಂದ ಇವಳು ಹಿರಿಯಳಂತಾದಳು. ಭೀಷ್ಮನು ಎಲ್ಲ ಕೆಲಸವನ್ನೂ ತಾಯಿ ಸತ್ಯವತಿಯ ಮತದಂತೆ ನಡೆಸಿದನಂತೆ! ಈ ಪವಿತ್ರವರ್ತನೆಯ ಮಹತ್ಪುಣ್ಯಕ್ಕೆ ಇವರಿಬ್ಬರೂ ಅಧಿಕಾರಿಗಳು.

ಬೆಳೆದು ದೊಡ್ಡವರಾದ ಮಕ್ಕಳು ತೀರಿಕೊಂಡು ಸತ್ಯವತಿಯ ಆಶೆಯೆಲ್ಲ ಬರಿದಾಗಿ ಹೋಯಿತು. ಅವಳು ಬರುವ ಹೊತ್ತಿನಲ್ಲಿ ಅವಳ

ಮಕ್ಕಳ ಸಲುವಾಗಿ ಭೀಷ್ಮನು ರಾಜ್ಯ ಬೇಡವೆಂದದ್ದು, ತನ್ನಿಂದ ಉತ್ತರಾಧಿಕಾರಿಗಳು ಹುಟ್ಟದಂತೆ ಬ್ರಹ್ಮಚರ್ಯವನ್ನು ನಿಶ್ಚಯಿಸಿದ್ದು, ಇವಳಿಗೆ ಸಂತೋಷಕ್ಕೆ ಕಾರಣ; ಈಗ ಅವನ ಆ ಶಪಥಗಳು ದುಃಖಕ್ಕೆ ಕಾರಣವಾದುವು. ಇದು ಜೀವನದಲ್ಲಿ ಆಗಾಗ ಕಾಣುವ ವಿಧಿವಿಲಾಸ. ವಿಧಿಯ ಈ ವಿಲಾಸಕ್ಕೆ ಸತ್ಯವತಿ ವಸ್ತುವಾದಳು. ರಾಜ್ಯವನ್ನು ಆಳು ಎಂದು, ಬ್ರಹ್ಮಚರ್ಯವನ್ನು ಬಿಟ್ಟು ವಿಚಿತ್ರವೀರ್ಯನ ಹೆಂಡಿರಲ್ಲಿ ಮಕ್ಕಳನ್ನು ಪಡೆ ಎಂದು, ಭೀಷ್ಮನನ್ನು ಅವಳೇ ಬೇಡಬೇಕಾಯಿತು. ಮನುಷ್ಯನು ಸ್ವಾರ್ಥದಿಂದ ತನಗಾಗಿ ಇತರರು ನಷ್ಟಪಡುವಂತೆ ಮಾಡುವುದು ಒಳಿತಲ್ಲವೆಂದು ಅವಳು ಮನಗಂಡಿರಬೇಕು. ಭೀಷ್ಮನು ತನ್ನ ನಿಶ್ಚಯದಿಂದ ಅಲುಗದೆ ನಿಲ್ಲಲು ಸತ್ಯವತಿ ಮೊಮ್ಮಕ್ಕಳನ್ನು ಪಡೆಯುವುದಕ್ಕೆ ತನ್ನ ಇನ್ನೊಬ್ಬ ಮಗನನ್ನು ಕರೆಯಬೇಕಾಯಿತು. ಅಂತೂ ಆ ಮಗನಿಂದ ಮೊಮ್ಮಕ್ಕಳನ್ನು ಪಡೆದು ತಾನು ಹೆತ್ತಮಕ್ಕಳ ವಂಶವನ್ನು ಉಳಿಸಿ, ತನ್ನನ್ನು ಮದುವೆಯಾದ ಕಾರಣ ಶಂತನುರಾಯನ ವಂಶ ಅಳಿಯಿತೆಂಬ ಅಪಪ್ರಥೆಯಿಂದ ತಪ್ಪಿಸಿಕೊಂಡಳು.

ಮೊಮ್ಮಕ್ಕಳು ಹಿರಿಯರಾಗಿ ಅವರಿಗೆ ಮಕ್ಕಳಾದಾಗ ಈ ಮರಿಮಕ್ಕಳು ಒಬ್ಬರೊಡನೊಬ್ಬರು ಕಾದಿ ಕುಲ ಕ್ಷಯವಾಗುವುದೆಂದು ವ್ಯಾಸನು ತಾಯಿಗೆ ತಿಳಿಸಿದನು. ಇದನ್ನು ನೋಡುವುದು ಬೇಡ ಎಂದು ಸತ್ಯವತಿ ಇಬ್ಬರು ಸೊಸೆಯರನ್ನು ಕರೆದುಕೊಂಡು ವನಕ್ಕೆ ಹೋದಳು. ಅಲ್ಲಿ ಸುಘೋರವಾದ ತಪಸ್ಸನ್ನು ನಡೆಸಿ ಮೂವರೂ ದೇಹತ್ಯಾಗ ಮಾಡಿದರು.

ಶ್ರಾದ್ಧಾವಸಾನೇಷು ತದಾ ದೃಷ್ಟ್ವಾ ತಂ ದುಃಖಿತಂ ಜನಂ
ಸಂಮೂಢಾಂ ದುಃಖ ಶೋಕಾರ್ತಾಂ ವ್ಯಾಸೋ ಮಾತರಮಬ್ರವೀತ್.
“ಅತಿಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತ ದಾರುಣಾಃ
ಶ್ವಃ ಶ್ವಃ ಪಾಪೀಯ ದಿವಸಾಃ ಪೃಥಿವೀ ಗತಯೌವನಾ. . . .
ಗಚ್ಛತ್ವಂ ತ್ಯಾಗಮಾಸ್ಥಾಯ ಯುಕ್ತಾ ವಸ ತಪೋವನೇ.
ಮಾದ್ರಕ್ಷ್ಯಸಿ ಕುಲಸ್ಯಾಸ್ಯ ಘೋರಂ ಸಂಕ್ಷಯಮಾತ್ಮನಃ.”
ತಥೇತಿಸಮನುಜ್ಞಾಯ. . . . ಭೀಷ್ಮಮಾಮಂತ್ರ್ಯ ಸುವ್ರತಾ
ವನಂ ಯಯೌ ಸತ್ಯವತೀ ಸ್ನುಷಾಭ್ಯಾಂ ಸಹ ಭಾರತ.

ತಾಃ ಸುಘೋರಂ ತಪಃ ಕೃತ್ವಾ ದೇವ್ಯೋ ಭರತಸತ್ತಮ
ದೇಹಂ ತ್ಯಕ್ತ್ವಾ ಮಹಾರಾಜ ಗತಿಮಿಷ್ಟಾಂ ಯಯುಸ್ತದಾ.

ಧೃತರಾಷ್ಟ್ರನ ಪತ್ನಿ ಗಾಂಧಾರಿ ಇನ್ನೊಂದು ರೀತಿಯಲ್ಲಿ ಬಹು ಹಿರಿಯಜೀವವಾಗಿ ನಮಗೆ ಕಾಣುತ್ತಾಳೆ. ಇವಳು ಗಾಂಧಾರರಾಜನ ಮಗಳು. ಏನು ಕಾರಣವೋ ಇವಳ ತಂದೆ ಇವಳನ್ನು ಧೃತರಾಷ್ಟ್ರನಿಗೆ ಕೊಡಲು ಒಪ್ಪಿಕೊಂಡನು. ಧೃತರಾಷ್ಟ್ರನು ದೊಡ್ಡ ಮನೆತನದವನು ಸರಿ; ಆದರೆ ಕುರುಡ. ಕುರುಡನಾದರೆ ಆಗಲಿ, ಇವಳು ರಾಣಿಯಾಗುತ್ತಾಳೆ, ಎಂಬಂತೆ ಇರಲಿಲ್ಲ. ಧೃತರಾಷ್ಟ್ರನಿಗೆ ಒಬ್ಬ ತಮ್ಮನುಂಟು; ಶಾಸ್ತ್ರಪ್ರಕಾರ ಅವನು ರಾಜನಾಗುವನು. ಅನ್ನಕ್ಕೆ ವಸ್ತ್ರಕ್ಕೆ ಸುಖವಾಗಿರುತ್ತದೆ, ಮನೆತನ ನಮ್ಮದಕ್ಕಿಂತ ಹಿರಿದು, ಇವಳ ಮಕ್ಕಳಿಗೆ ಸ್ಥಾನಮಾನ ಇರುತ್ತದೆ, ಎಂದು ತಂದೆ ಯೋಚಿಸಿರಬೇಕು. ಹೆಣ್ಣಿನ ಸುಖ ಅಲ್ಲ, ಅವಳ ಮಕ್ಕಳ ಭಾಗ್ಯ, ಆಗಿನ ಜನರಿಗೆ ಮುಖ್ಯವೆಂದು ಕಾಣುತ್ತಿದ್ದಿತು. ಸಮಾಜ ಬೆಳಸಿಕೊಂಡ ಮನೋಧರ್ಮ ಆದರ ವ್ಯಕ್ತಿಗಳಲ್ಲಿ ಸಹಜವಾಗಿ ಮೂಡುತ್ತದೆ. ತಂದೆ ಸರಿಯೆಂದು ಭಾವಿಸಿದ್ದನ್ನು ಈ ಮಗಳು ಸರಿಯೆಂದು ಭಾವಿಸಿದ್ದರೆ ಆಶ್ಚರ್ಯವಿಲ್ಲ. ಕುರುಡುಗಂಡ ಬೇಕು ಎಂದಲ್ಲ; ಆದರೆ ತನ್ನ ಪಾಲಿಗೆ ಒಬ್ಬ ಕುರುಡನು ಗಂಡನಾಗಿ ಬಂದರೆ ಅದಕ್ಕೆ ಇವಳ ಒಪ್ಪಿಗೆ ಉಂಟು. ಗಾಂಧಾರಿ ಕುರುಡನ ಹೆಂಡತಿಯಾದಳು; ಮದುವೆಯಾಗಲು ಬರುತ್ತ ಅವನಿಗೆ ತಕ್ಕ ಹೆಂಡತಿಯಾಗಿರಲು ಕಣ್ಣಿಗೆ ಭದ್ರವಾಗಿ ಬಟ್ಟೆಯ ಪಟ್ಟಿಯನ್ನು ಕಟ್ಟಿಕೊಂಡು ತಾನೂ ಕುರುಡಾದಳು. ಮತ್ತೆ ಆ ಪಟ್ಟಿಯನ್ನು ಅವಳು ಬಿಚ್ಚಲಿಲ್ಲ; ಲೋಕವನ್ನು ನೋಡಲಿಲ್ಲ. ಅವನು ಹುಟ್ಟಿನಿಂದ ಕುರುಡ; ಇವಳು ಸಮ್ಮತಿಯಿಂದ ಕುರುಡು. ಇದು ಎಂಥ ಮನೋ ನಿಶ್ಚಯ! ಇನ್ನೆಂಥ ದೃಢ ಸಂಕಲ್ಪ! ಹೇಳಿದರೆ ನಂಬುವುದು ಕಷ್ಟ; ಆದರೆ ತಾರುಣ್ಯದಲ್ಲಿ ಗಾಂಧಾರಿಗೆ ಈ ನಿಶ್ಚಯ, ಈ ಸಾಮರ್ಥ್ಯ, ಸಹಜವಾಗಿದ್ದವು. ತನ್ನ ಗಂಡನಿಗೆ ಇಲ್ಲದ ಒಂದು ಸಂತೋಷ ತನಗೆ ಬೇಡ.

ನಾತ್ಯಶ್ನೀಯಾಂ ಪತಿಮಹಂ ಇತ್ಯೇವ ಕೃತನಿಶ್ಚಯಾ.

ಹೀಗೆ ಮನಃಪೂರ್ವಕವಾಗಿ ಕುರುಡಿಯಾದದ್ದು ಗಾಂಧಾರಿಯ ಧರ್ಮ

ಪಕ್ಷಪಾತವನ್ನು ಪ್ರಕಟಿಸುತ್ತದೆ. ಕುಂತಿಗೆ ಮಕ್ಕಳಾದುವೆಂದು ಇವಳು ಈರ್ಷೆಯಿಂದ ತನ್ನ ಗರ್ಭವನ್ನು ಕುಟ್ಟಿಕೊಂಡು ಅಕಾಲದಲ್ಲಿ ಭ್ರೂಣವನ್ನು ಪ್ರಸವಿಸಿದಳೆಂದು ಗ್ರಂಥದಲ್ಲಿ ಕಥೆಯಿದೆ. ಇದು ಪಕ್ಷಪಾತಿಗಳು, ವಿರೋಧಿಗಳು, ಆಮೇಲೆ ಸೇರಿಸಿದ ಕಥಾಭಾಗಗಳಲ್ಲಿ ಒಂದು ಎಂದು ಕಾಣುತ್ತದೆ. ಕುಂತಿ ತನ್ನ ಮಕ್ಕಳೊಂದಿಗೆ ಹಸ್ತಿನಾವತಿಗೆ ಬಂದಾಗ ಗಾಂಧಾರಿ ಅವಳನ್ನು ಸರಿಯಾಗಿ ಕಾಣಲಿಲ್ಲ ಎಂದು ಎಲ್ಲೂ ಸೂಚನೆಯಿಲ್ಲ. ಪಾಂಡವ ಕೌರವ ಬಾಲರು ಬೆಳೆಯುತ್ತಿದ್ದ ಕಾಲದಲ್ಲಿ ಗಾಂಧಾರಿಯ ಸಂಗತಿ ಗ್ರಂಥದಲ್ಲಿ ಏನೂ ಬರುವುದಿಲ್ಲ. ಮತ್ತೆ ನಮಗೆ ಗಾಂಧಾರಿ ಸ್ಪಷ್ಟವಾಗಿ ಕಾಣುವುದು ಕೃಷ್ಣನು ಸಂಧಾನಕ್ಕೆ ಬಂದ ಹೊತ್ತಿನಲ್ಲಿ. ಏನು ಹೇಳಿದರೂ ದುರ್ಯೋಧನನು ತನ್ನ ಛಲವನ್ನೇ ಹಿಡಿದು ನಿಂತಿರಲು ಧೃತರಾಷ್ಟ್ರನು ವಿದುರನಿಗೆ, 'ಗಾಂಧಾರಿಯನ್ನು ಕರೆತಾ' ಎಂದನು.

> ಗಚ್ಛ ತಾತ ಮಹಾಪ್ರಾಜ್ಞಾಂ ಗಾಂಧಾರೀಂ ದೂರದರ್ಶಿನೀಂ
> ಆನಯೇಹ ತಯಾಸಾರ್ಧಂ ಅನುನೇಷ್ಯಾಮಿ ದುರ್ಮತಿಂ.

ವಿದುರನು ಗಾಂಧಾರಿಯನ್ನು ಕರೆತಂದನು. ಅವಳು, "ಧರ್ಮಾರ್ಥಲೋಪಿಯಾದ ಅಶಿಷ್ಟನು ರಾಜ್ಯವನ್ನು ಹೇಗೆ ಆಳಬಲ್ಲನು? ದೊರೆಯೆ, ಮಗನೆಂದರೆ ಮಿತಿಯಿಲ್ಲದ ಪ್ರೀತಿಯನ್ನು ತೋರಿ ಅವನನ್ನು ಈ ಸ್ಥಿತಿಗೆ ಇಳಿಸಿದೆ. ಇದಕ್ಕೆ ಇಲ್ಲಿ ನಿಜವಾಗಿ ನಿನ್ನನ್ನೇ ದೂರಬೇಕು. ಅವನ ತಪ್ಪನ್ನು ತಿಳಿದೂ ತಿಳಿದೂ ಅವನನ್ನೇ ಅನುಸರಿಸುತ್ತೀಯೆ. ಅವನೋ ಕಾಮಮನ್ಯುಗಳಿಗೆ ಸಿಕ್ಕಿಕೊಂಡಿದ್ದಾನೆ; ಮೋಹಕ್ಕೆ ಸೆರೆಯಾಗಿದ್ದಾನೆ. ಈಗ ಬಲವಂತವಾಗಿ ಅವನನ್ನು ಹಿಂತಿರುಗಿಸಲು ಅಸಾಧ್ಯವಾಗಿದೆ. ಮೂರ್ಖ, ಬಾಲಕ, ದುರಾತ್ಮನಿಗೆ, ದುಸ್ಸಹಾಯ ಲೋಭಿಗೆ ರಾಜ್ಯವನ್ನು ಕೊಟ್ಟದ್ದರ ಫಲವನ್ನು ಈಗ ಅನುಭವಿಸುತ್ತಿದ್ದೀಯೆ. ಬುದ್ಧಿಯುಳ್ಳ ಯಾವನೆ ಆಗಲಿ ತನ್ನವರಲ್ಲೇ ಭೇದವನ್ನು ಹೇಗೆ ಬೆಳೆಯ ಬಿಟ್ಟಾನು?" ಎಂದು ಪರಿತಪಿಸಿದಳು; ರಾಜ್ಯಕಾಮುಕನಾಗಿ ಒಂದು ವ್ಯಾಧಿಯಂತೆ ಆಗಿದ್ದ ಆ ಮಗನನ್ನು ಕರೆದು ತಾ ಎಂದು ವಿದುರನಿಗೆ ಹೇಳಿದಳು. ವಿದುರನು ಹೋಗಿ ದುರ್ಯೋಧನನನ್ನು ಕರೆತಂದನು. ದುರ್ಯೋಧನನಿಗೆ

ಕೋಪ; ಅವನು ತಾಯಿ ಏನು ಹೇಳುವಳೋ ಕೇಳಲು ಬಂದನು. ತಾಯಿ, "ದುರ್ಯೋಧನ, ಮಗನೆ, ನನ್ನ ಮಾತನ್ನು ಕೇಳಪ್ಪ. ನಿನಗೆ ನಿನ್ನ ಬಂಧುಗಳಿಗೆ ಹಿತ ಇದು. ನೀನು ಬಲ್ಲವನು. ನಿನ್ನ ಆಸೆಯಷ್ಟರಿಂದ ರಾಜ್ಯವನ್ನು ಪಡೆಯುವುದಕ್ಕಾಗಲಿ, ಉಳಿಸಿಕೊಳ್ಳುವುದಕ್ಕಾಗಲಿ, ಅನುಭವಿಸುವುದಕ್ಕಾಗಲಿ ಸಾಧ್ಯವಾಗುವುದಿಲ್ಲ. ಇಂದ್ರಿಯಗಳು ಯಾವನಿಗೆ ವಶದಲ್ಲಿ ಇಲ್ಲವೊ ಅವನು ಬಹುಕಾಲ ದೊರೆತನವನ್ನು ಅನುಭವಿಸಲಾರನು.

ವಿಜಿತಾತ್ಮಾತು ಮೇಧಾವೀ ಸ ರಾಜ್ಯಂ ಅಭಿಪಾಲಯೇತ್.
ಕಾಮಕ್ರೋಧೋಹಿ ಅರ್ಥಂ ಪುರುಷೇಭ್ಯೋ ವ್ಯಪಕರ್ಷತಃ;
ತೌ ತು ಶತ್ರೂ ವಿಸರ್ಜಿತ್ಯ ರಾಜಾ ವಿಜಯತೇ ಮಹೀಂ.
ಲೋಕೇಶ್ವರ ಪ್ರಭುತ್ವಂ ಹಿ ಮಹದೇತದ್ದುರಾತ್ಮಭಿಃ
ರಾಜ್ಯಂ ನಾಮೇಪ್ಸಿತಂ ಸ್ಥಾನಂ ನಶಕ್ಯಮಭಿರಕ್ಷಿತುಂ.
ಇಂದ್ರಿಯಾಣಿ ಮಹತ್ಪ್ರೇಪ್ಸುಃ ನಿಯಚ್ಛೇದರ್ಥಧರ್ಮಯೋಃ
ಇಂದ್ರಿಯೈಃ ನಿಯತೈಃ ಬುದ್ಧಿಃ ವರ್ಧತೇ ಅಗ್ನಿರಿವೇಂಧನೈಃ.
ಅವಿಧೇಯಾನಿ ಹೀಮಾನಿ ವ್ಯಾಪಾದಯಿತು ಮಪ್ಯಲಂ
ಅವಿಧೇಯಾ ಇವಾದಾಂತಾ ಹಯಾಃಪಥಿಕುಸಾರಥಿಂ....

ಕಾಮಂ ಕ್ರೋಧಂಚ ಲೋಭಂಚ ದಂಭಂ ದರ್ಪಂಚ ಭೂಮಿಪಃ
ಸಮ್ಯಗ್ ವಿಜೇತುಂ ಯೋ ವೇದ ಸ ಮಹೀಮಭಿಜಾಯತೇ....
ಏಕೀಭೂತೈರ್ಮಹಾಪ್ರಾಜ್ಞೈಃ ಶೂರೈರರಿನಿಬರ್ಹಣೈಃ
ಪಾಂಡವೈಃ ಪೃಥಿವೀಂ ತಾತ ಭೋಕ್ಷ್ಯಸೇ ಸಹಿತಸ್ಸುಖೀ....
ಪ್ರಪದ್ಯಸ್ವ ಮಹಾಬಾಹುಂ ಕೃಷ್ಣಮಕ್ಲಿಷ್ಟಕಾರಿಣಂ
ಪ್ರಸನ್ನೋಹಿ ಸುಖಾಯ ಸ್ಯಾದುಭಯೋರೇವ ಕೇಶವಃ....
ನ ಯುದ್ಧೇ ತಾತ ಕಲ್ಯಾಣಂ ನ ಧರ್ಮಾರ್ಥೌ ಕುತಸ್ಸುಖಂ
ನ ಚಾಪಿ ವಿಜಯೋ ನಿತ್ಯಂ ಮಾ ಯುದ್ಧೇ ಚೇತ ಆಧಿಥಾಃ....
ನಿಗೃಹ್ಯ ಸುಹೃದಾಂ ಮನ್ಯುಂ ಶಾಧಿ ರಾಜ್ಯಂ ಯಥೋಚಿತಂ
ಸ್ವಮಂಶಂ ಪಾಂಡುಪುತ್ರೇಭ್ಯಃ ಪ್ರದಾಯ ಭರತರ್ಷಭ....
ಸಮಂ ಹಿ ರಾಜ್ಯಂ ಪ್ರೀತಿಶ್ಚ ಸ್ಥಾನಂಚ ವಿಜಿತಾತ್ಮನಾಂ
ಪಾಂಡವೇಷ್ವಥ ಯುಷ್ಮಾಸು ಧರ್ಮಸ್ತ್ವಭ್ಯಧಿಕಃ ತತಃ....

ಮೇಧಾವಿಯೂ ಆತ್ಮನಿಗ್ರಹವುಳ್ಳವನೂ ರಾಜ್ಯವನ್ನು ಆಳಬಹುದು. ಕಾಮಕ್ರೋಧಗಳು ಮನುಷ್ಯನನ್ನು ಒಳ್ಳೆಯದರಿಂದ ತಪ್ಪಿಗೆ ಸೆಳೆಯು

ತ್ತವೆ. ಮನುಷ್ಯನಿಗೆ ಅವೇ ಶತ್ರುಗಳು. ಅವನ್ನು ಗೆದ್ದವನು ಭೂಮಿಯನ್ನು ಗೆಲ್ಲುತ್ತಾನೆ. ದುರಾತ್ಮರಾದವರು ಎಷ್ಟೇ ಅಪೇಕ್ಷಿಸಿದರೂ ರಾಜ್ಯವನ್ನು ಉಳಿಸಿಕೊಳ್ಳಲಾರರು. ಹಿರಿತನವನ್ನು ಬಯಸುವವನು ಇಂದ್ರಿಯಗಳನ್ನು ಅರ್ಥಧರ್ಮಗಳಿಗಾಗಿ ಅಂಕೆಯಲ್ಲಿಡಬೇಕು. ಅವನ್ನು ತಡೆದಷ್ಟೂ ಬುದ್ಧಿ, ಕಟ್ಟಿಗೆಯನ್ನು ಸುಟ್ಟಷ್ಟೂ ಅಗ್ನಿ ಹೆಚ್ಚುವಂತೆ, ಹೆಚ್ಚುತ್ತದೆ. ಇಂದ್ರಿಯಗಳನ್ನು ನಮ್ಮ ಅಂಕೆಯಲ್ಲಿ ಸಿಲ್ಲಿಸಿಕೊಳ್ಳದೆ ಅವುಗಳ ಇಷ್ಟದಂತೆ ಹರಿಯಲು ಬಿಟ್ಟರೆ, ಸಾರಥ್ಯವರಿಯದವನನ್ನು ದುರ್ದಾಂತವಾದ ಕುದುರೆಗಳು ಹೇಗೊ ಹಾಗೆ ಅವು ನಮ್ಮನ್ನು ಎಲ್ಲಿಗೊ ಸೆಳೆಯುತ್ತವೆ. ಕಾಮ ಕ್ರೋಧ ಲೋಭ ದಂಭ ದರ್ಪಗಳನ್ನು ಯಾವ ಅರಸು ಚೆನ್ನಾಗಿ ಗೆಲ್ಲಲು ಬಲ್ಲನೊ ಅವನು ಭೂಮಿಯನ್ನು ಹೊಂದುತ್ತಾನೆ. ಮಹಾಪ್ರಾಜ್ಞರೂ ಶೂರರೂ ಶತ್ರು ನಿಬರ್ಹಣರೂ ಆದ ಪಾಂಡವರ ಜೊತೆಗೂಡಿದೆಯಾದರೆ ನೀನು ಸುಖಿಯಾಗುತ್ತೀಯೆ; ದೊರೆತನವನ್ನು ಅನುಭವಿಸುತ್ತೀಯೆ. ಕೃಷ್ಣನು ಮಹಾಬಾಹು; ವ್ಯವಹಾರವನ್ನು ಸರಳವಾಗಿ ನಡಸತಕ್ಕವನು. ಅವನನ್ನು ಆಶ್ರಯಿಸು. ಅವನು ಪ್ರಸನ್ನನಾಗಲಿ; ನಿಮ್ಮ ಎರಡು ಪಕ್ಷಕ್ಕೂ ಶುಭವಾಗುತ್ತದೆ. ಮಗು, ಯುದ್ಧದಿಂದ ಒಳಿತಾಗುವುದಿಲ್ಲ; ಧರ್ಮವಾಗಲಿ ಅರ್ಥವಾಗಲಿ ಸಾಧಿಸುವುದಿಲ್ಲ; ಸುಖದಮಾತೇನು? ಅಲ್ಲದೆ ಜಯಿಸುತ್ತೇವೆಂಬುದು ಯಾರಿಗೂ ಖಂಡಿತವಲ್ಲ. ಯುದ್ಧದಲ್ಲಿ ಮನಸ್ಸನ್ನಿಡಬೇಡ. ಬಂಧುಗಳ ವಿಷಯದಲ್ಲಿ ಕೋಪವನ್ನು ನಿಗ್ರಹಿಸಿ ಯಥೋಚಿತವಾಗಿ ಭೂಮಿಯನ್ನು ಆಳು. ಅವರಿಗೆ ಅವರ ಭಾಗವನ್ನು ಕೊಡು. ರಾಜ್ಯಾಧಿಕಾರ, ಪ್ರೀತಿ, ಸ್ಥಾನ ಇವುಗಳಲ್ಲಿ ಪಾಂಡವರು ನಿನಗೆ ಸಮಾನರು. ಧರ್ಮವಾದರೆ ಅವರ ಕಡೆ ಸ್ವಲ್ಪ ಹೆಚ್ಚಾಗಿದೆ.''

ಧೃತರಾಷ್ಟ್ರನು ಹೆಂಡತಿಯನ್ನು ಮಹಾ ಪ್ರಾಜ್ಞಳೆಂದೂ ದೂರದರ್ಶಿನಿಯೆಂದೂ ವರ್ಣಿಸಿದ್ದು ತುಂಬ ಉಚಿತವೆನ್ನುವುದು ಈ ಮಾತುಗಳಿಂದ ಕಾಣುತ್ತದೆ. ಯುದ್ಧ ನಿಶ್ಚಯವಾಗಿ ದುರ್ಯೋಧನನು ಯುದ್ಧಕ್ಕೆ ಹೊರಡುವ ಮೊದಲು ತಾಯ ಸನ್ನಿಧಿಗೆ ಬಂದು ಆಶೀರ್ವಾದ ಬೇಡಿದಾಗ ಗಾಂಧಾರಿ ''ಯತೋ ಧರ್ಮಃ ತತೋ ಜಯಃ'' ಎಂದು ಹೇಳಿದಳಂತೆ. ಧರ್ಮ ಯಾವ ಪಕ್ಷದಲ್ಲಿ ಇದೆಯೋ ಆ ಪಕ್ಷಕ್ಕೆ ಜಯ ಎಂದು ಈ ವಾಕ್ಯಕ್ಕೆ

ಅರ್ಥ ಹೇಳುವುದು ವಾಡಿಕೆ. ಗಾಂಧಾರಿ ಈ ಅರ್ಥದಿಂದ ನುಡಿದಿದ್ದರೂ ತಪ್ಪಲ್ಲ; ಆದರೆ ಅವಳ ವಾಕ್ಯದ ಅರ್ಥ ಬೇರೆಯೆಂದು ಕಾಣುತ್ತದೆ. "ಯಾವುದು ಧರ್ಮದಲ್ಲಿ ಪ್ರೇರಿಸುತ್ತದೆಯೊ ಅದು ಜಯವನ್ನು ಅನುಗ್ರಹಿಸುತ್ತದೆ," ಎಂದು ಈ ಶಬ್ದಗಳಿಂದ ಸಹಜವಾಗಿ ಬರುವ ಭಾವ. ಎಂದರೆ? "ಜಯವಾಗಲೆಂದು ನಾನು ಆಶೀರ್ವಾದ ಮಾಡಿ ಏನು ಫಲ? ಧರ್ಮದಲ್ಲಿ ನಡೆಯುವುದು ಮೊದಲಮಾತು. ಹಾಗೆ ನಡೆದವನಿಗೆ ಜಯ ನಿಶ್ಚಯ. ಧರ್ಮದಲ್ಲಿ ನಡೆಯೆಂದು ನಾನು ನಿನಗೆ ಹೇಳಿದ್ದಾಯಿತು; ನೀನು ನಡೆಯಲಿಲ್ಲ. ಇನ್ನು ಅದರ ಫಲ ಮಾತ್ರ ಹೇಗೆ ಬಂದೀತು?" ಧರ್ಮ ಇರುವ ಕಡೆಗೆ ಜಯವಾಗಲಿ ಅಥವಾ ಆಗುತ್ತದೆ ಎಂಬುದಲ್ಲ ಈ ತಾಯ ಭಾವ: ಜಯವನ್ನು ಬಯಸುವ ಮಗ ಅದರ ಸಾಧನವನ್ನು ಬಿಟ್ಟನಲ್ಲ ಎನ್ನುವ ವ್ಯಥೆ. ಮಗನ ವಿಷಯದಲ್ಲಿ ಇಲ್ಲಿ ಕಾಣುವುದು ಪ್ರಾಜ್ಞಳಾದ ತಾಯ ಮರುಕ. ಮಕ್ಕಳೆಲ್ಲ ತೀರಿಕೊಂಡರು. ಯುಧಿಷ್ಠಿರನ ಪರವಾಗಿ ಧೃತರಾಷ್ಟ್ರ ಗಾಂಧಾರಿಯರಿಗೆ ಅನುನಯವನ್ನು ಹೇಳುವುದಕ್ಕೆ ಕೃಷ್ಣನು ಬಂದನು. ಗಾಂಧಾರಿ, "ಯುದ್ಧ ಎನ್ನುವುದು ನಡೆದದ್ದೇ ಆದರೆ ಜೀವಗಳು ಹೋಗುವುದು ಅನಿವಾರ್ಯ. ಯುದ್ಧ ನಡೆಯುವಂತೆ ಹಟಮಾಡಿದವನು ದುರ್ಯೋಧನ, ಉಳಿದ ನನ್ನ ಮಕ್ಕಳು, ಅವರ ಗೆಳೆಯರು. ಇದರಲ್ಲಿ ಪಾಂಡವರ ತಪ್ಪೇನಿದೆ? ನನ್ನ ಮಕ್ಕಳು ಹೋದರು ಎಂಬ ಕಾರಣದಿಂದ ಮನಸ್ಸು ಕ್ಷೋಭೆಗೊಳ್ಳುತ್ತದೆ. ಆದರೆ ಕುಂತಿಯ ಮಕ್ಕಳೂ ನನಗೆ ನನ್ನ ಮಕ್ಕಳಂತೆಯೇ ಪ್ರಿಯರು. ಅವರಿಗೆ ಸಂಕೋಚ ಬೇಡ, ನಮ್ಮಲ್ಲಿ ಸಮಾಧಾನವಾಗಿ ಬರಲಿ," ಎಂದಳು. ಇಲ್ಲಿ ಈ ತಾಯಿ ಕೃಷ್ಣನ ಮೇಲೆ ಕೋಪಮಾಡಿ ಶಾಪಕೊಟ್ಟಳೆಂದೂ, ಯುಧಿಷ್ಠಿರನು ಹತ್ತಿರ ಬಂದಾಗ ಅವಳ ಕಣ್ಣದೃಷ್ಟಿ ಕೆಳಮುಖವಾಗಿ ಅವನ ಕಾಲಬೆರಳ ಮೇಲೆ ಬಿದ್ದು ಅವಳ ಕ್ರೋಧದಿಂದ ಅವನ ಬೆರಳ ಉಗುರು ಸುಟ್ಟವೆಂದೂ, ಕಥೆ ಇದೆ. ಇದು ಉಳಿದ ವಿಷಯದೊಂದಿಗೆ ಹೊಂದುವುದಿಲ್ಲ; ಆಮೇಲೆ ಸೇರಿದ ಕಥೆ ಎಂದು ತೋರುತ್ತದೆ. ಪಾಂಡವರು ಬಂದಾಗ ಜೊತೆಗೆ ದ್ರೌಪದಿ ಈ ಅತ್ತೆಯ ಬಳಿಗೆ ಬಂದು ನಮಸ್ಕಾರಮಾಡಿದಳು. ಗಾಂಧಾರಿ ಅವಳನ್ನು ಪ್ರೀತಿಯಿಂದ ಹಾಗೆಯೆ ಕನಿಕರದಿಂದ ಮಾತನಾಡಿಸಿದಳು.

"ಎಲ್ಲ ಮಕ್ಕಳನ್ನೂ ಕಳೆದುಕೊಂಡು, ಮಗಳೆ, ನಾನೂ ನಿನ್ನ ಸ್ಥಿತಿಯಲ್ಲೇ ಇದ್ದೇನೆ. ನಮ್ಮ ಸ್ಥಿತಿ ಸಮನಾಯಿತು. ಜೀವನವೇ ಹೀಗೆ ಎಂದು ತಿಳಿದು ಸಮಾಧಾನತಂದುಕೊ," ಎಂದಳು. ಆಮೇಲೆ ಗಾಂಧಾರಿ ತನ್ನ ಗಂಡನೊಂದಿಗೆ ಪಾಂಡವರ ಅರಮನೆಯ ಹಿರಿಯಳಾಗಿದ್ದು ಸಕಾಲದಲ್ಲಿ ಧೃತರಾಷ್ಟ್ರನೊಂದಿಗೆ, ಕುಂತಿಯೊಂದಿಗೆ, ವನವನ್ನು ಸಾರಿದಳು. ಅಲ್ಲಿ ಕೆಲವು ಕಾಲ ತಪಶ್ಚರ್ಯೆಯಲ್ಲಿದ್ದು ಅವರು ದಾವಾಗ್ನಿಯಲ್ಲಿ ಜೀವ ತೊರೆದಾಗ ತಾನೂ ಇಹ ಜೀವನವನ್ನು ಮುಗಿಸಿದಳು.

ಗಾಂಧಾರಿಯ ಓರಗಿತಿ ಕುಂತಿ ಗ್ರಂಥದಲ್ಲಿ ಇನ್ನಷ್ಟು ವಿವರವಾಗಿ ಚಿತ್ರಿತಳಾಗಿದ್ದಾಳೆ. ಇವಳು ಕೃಷ್ಣನ ತಂದೆಯ ಸೋದರಿ; ಚಿಕ್ಕಂದು ತಾಯ ತಂದೆಗೆ ದತ್ತವಾದಳು. ಹುಡುಗಿ ಬಹು ಸುಟಿಯಾಗಿದ್ದಿರಬೇಕು. ಒಮ್ಮೆ ದುರ್ವಾಸ ಋಷಿ ಕುಂತಿಭೋಜನ ಅರಮನೆಗೆ ಬಂದಾಗ ಈ ಬಾಲಕಿ ಅವನನ್ನು ಬಹು ಚೆನ್ನಾಗಿ ನೋಡಿಕೊಂಡಳು. ಋಷಿ ಕೆಲವು ಮಂತ್ರಗಳನ್ನು ಹೇಳಿ ಕೊಟ್ಟನು. ಅವನ್ನು ಪಠಿಸಿ ಯಾವನೆ ದೇವತೆಯನ್ನು ಸ್ಮರಿಸಿದರೆ ಆ ದೇವತೆ ಬಂದು ಇವಳ ಸಹವಾಸಮಾಡಿ ಮಗನನ್ನು ಕೊಡುವನು ಎಂದು ಹೇಳಿದನು. ಏನೂ ಅರಿಯದ ಹುಡುಗಿ ತಾನು ಮಾಡುತ್ತಿರುವ ಸಾಹಸ ಎಂಥದೆಂದು ಗ್ರಹಿಸದೆ ಒಂದು ಮಂತ್ರವನ್ನು ಹೇಳಿದಳು, ಸೂರ್ಯನನ್ನು ಕರೆದಳು. ಸೂರ್ಯನು ಬಂದನು. ಇವಳು ತನ್ನ ತಪ್ಪನ್ನು ಆಗ ಕಂಡುಕೊಂಡಳು; ಅವನನ್ನು ಕೂಡಲು ತನಗೆ ಇಷ್ಟವಿಲ್ಲ ಎಂದಳು. ಆದರೆ ಮಂತ್ರ ಮೋಘವಾಗುವಂತಿಲ್ಲ. ಸೂರ್ಯನು ಅವಳನ್ನು ಒಪ್ಪಿಸಿದನು; ಅವಳೊಡನೆ ಕೂಡಿದನು. ಕುಂತಿ ಒಬ್ಬ ಮಗನನ್ನು ಹೆತ್ತಳು; ಅಪವಾದದ ಭಯದಿಂದ ಅವನನ್ನು ಗಂಗೆಯಲ್ಲಿ ತೇಲಬಿಟ್ಟಳು. ಸೂತನೊಬ್ಬನು ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದ ಮಗುವನ್ನು ಕಂಡು ಅದನ್ನು ತೆಗೆದುಕೊಂಡು, ಮಕ್ಕಳಿಲ್ಲದ ತನ್ನ ಹೆಂಡತಿಗೆ ಕೊಟ್ಟನು. ಸೂತನ ಪತ್ನಿ ರಾಧೆ ಸಾಕಿದ್ದರಿಂದ ಹುಡುಗ ರಾಧೇಯ, ಎನಿಸಿಕೊಂಡನು. ಹುಟ್ಟುವಾಗಲೆ ಕವಚ ಕುಂಡಲ ಇದ್ದ ಈ ಮಗುವೆ ಭಾರತದಲ್ಲಿ ಆಮೇಲೆ ಪ್ರಸಿದ್ಧನಾದ ಕರ್ಣ. ಮಗನನ್ನು ಪಡೆದೂ ಕುಂತಿ ಕನ್ಯೆಯಾಗಿಯೇ ಉಳಿದಳು. ಪ್ರಾಯ ಬಂದ ಹುಡುಗಿ

ಯನ್ನು ಪಾಂಡುವಿಗೆ ಕೊಟ್ಟು ಮದುವೆಯಾಗಿ ಮಾದ್ರಿ ಇವಳಿಗೆ ಸವತಿಯಾಗಿ ಬಂದಳು. ಮಕ್ಕಳಾಗುವ ಮುನ್ನ ಪಾಂಡುವಿಗೆ ಶಾಪ ಬಂದು ಅವನು ಆಶ್ರಮವಾಸವನ್ನು ನಿಶ್ಚಯಿಸಿದನು; ಹೆಂಡಿರು ಜೊತೆಗೆ ಬರುವುದು ಬೇಡ ಎಂದನು. ಕುಂತಿ ಅವನನ್ನು ಬಿಟ್ಟು ತಾವು ಜೀವದೊಂದಿಗೂ ಇರುವವರಲ್ಲ ಎಂದು ತಮ್ಮಿಬ್ಬರ ಪರವಾಗಿಯೂ ಹಟಮಾಡಿದಳು; ಸಪತ್ನೀ ಸಮೇತ ಗಂಡನೊಡನೆ ಆಶ್ರಮವಾಸಿಯಾದಳು. ಶಾಪದ ಫಲವಾಗಿ ಪಾಂಡು ಮಕ್ಕಳನ್ನು ಪಡೆಯುವುದು ಅಸಾಧ್ಯವಾಗಿದ್ದಿತು. ಮಕ್ಕಳಿಲ್ಲದೆ ಸಾಯುವುದು ಅವನಿಗೆ ಇಷ್ಟವಿರಲಿಲ್ಲ. ಅವನು ಆಗ್ಗೆ ವಾಡಿಕೆಯಿದ್ದ ರೀತಿಯಲ್ಲಿ ಬೇರೊಬ್ಬರಿಂದ ತನಗಾಗಿ ಮಕ್ಕಳನ್ನು ಪಡೆಯಬೇಕೆಂದು ಕುಂತಿಯನ್ನು ಬೇಡಿದನು. ಇದು ಪದ್ಧತಿಯೇ ಆಗಿದ್ದರೂ ಕುಂತಿ ಇದರಂತೆ ನಡೆಯಲು ಒಪ್ಪಲಿಲ್ಲ. ಪಾಂಡು ಬಹು ವಿಧವಾಗಿ ಒತ್ತಾಯಮಾಡಿದ್ದರ ಮೇಲೆ ಅವಳು ತಾನು ದುರ್ವಾಸನಿಂದ ಮಂತ್ರೋಪದೇಶ ಪಡೆದ ಸಂಗತಿಯನ್ನು ತಿಳಿಸಿ ಅವನು ಅನುಮತಿಸಿದರೆ ತಾನು ದೇವತೆಗಳನ್ನು ಕರೆದು ಮಕ್ಕಳನ್ನು ಪಡೆಯುವುದಾಗಿ ಹೇಳಿದಳು. ಪಾಂಡು ಅನುಮತಿಕೊಟ್ಟನು. ಇವಳು ಮೊದಲು ಧರ್ಮದೇವತೆಯನ್ನು, ಆ ಮೇಲೆ ವಾಯುವನ್ನು, ಆ ಮೇಲೆ ಇಂದ್ರನನ್ನು ಆಹ್ವಾನಿಸಿ ಯುಧಿಷ್ಠಿರ, ಭೀಮ, ಅರ್ಜುನರನ್ನು ಹಡೆದಳು. ಪಾಂಡು ಮತ್ತೂ ಮಕ್ಕಳನ್ನು ಪಡೆ ಎಂದನು. ಕುಂತಿ, ಮೂರಕ್ಕೆ ಹೆಚ್ಚಾಗಿ ಮಕ್ಕಳನ್ನು ಬಯಸುವುದು ಸ್ತ್ರೀಗೆ ಸಲ್ಲದು, ಇನ್ನು ನೀನು ನನ್ನನ್ನು ಒತ್ತಾಯಪಡಿಸಬೇಡ, ಎಂದಳು. ಈ ದೇವತೆಗಳ ಆಹ್ವಾನವೆನ್ನುವುದು, ಅವರು ಈ ಸ್ತ್ರೀಯ ಜೊತೆಗೆ ಕೂಡಿದರು ಎನ್ನುವುದು, ಈ ಮಾತುಗಳ ಅರ್ಥ ಏನೇ ಇದ್ದರೂ ಒಂದು ಸಂಗತಿ ಇಲ್ಲಿ ಸ್ಪಷ್ಟವಾಗುತ್ತದೆ. ಕುಂತಿ ದೇಹದ ಸುಖಕ್ಕಾಗಿ ದೈವದ ಅಥವಾ ಪುರುಷನ ಸಹವಾಸವನ್ನು ಬಯಸಲಿಲ್ಲ; ಮಕ್ಕಳು ಬೇಕು ಎನ್ನುವುದಕ್ಕಾಗಿ ಅದನ್ನು ಸಹಿಸಿದಳು. ಸವತಿಗೆ ಮಕ್ಕಳಾಗಿ ತಾನು ಮಾತ್ರ ಬಂಜೆಯಾದೆನೆಂದು ಮಾದ್ರಿ ಖಿನ್ನಳಾದಳು; ತನಗೆ ಮಂತ್ರೋಪದೇಶ ಮಾಡುವಂತೆ ಕುಂತಿಯನ್ನು ಪ್ರೇರಿಸಬೇಕೆಂದು ಗಂಡನನ್ನು ಕೇಳಿಕೊಂಡಳು. ಪಾಂಡುವಿಗೆ ಮಾದ್ರಿಯ ವಿಷಯಕ್ಕೆ

ಸ್ವಲ್ಪ ಹೆಚ್ಚಿನ ಒಲವು ಇದ್ದಿತೆಂದು ಕಾಣುತ್ತದೆ. ಮಾದ್ರಿ ವಯಸ್ಸಿನಿಂದ ಕಿರಿಯಳು; ರೂಪಿನಿಂದ ಕುಂತಿಗಿಂತ ಸ್ವಲ್ಪ ಹೆಚ್ಚು ಚೆಲುವೆ ಎಂದು ತೋರುತ್ತದೆ; ಕುಂತಿಗಿಂತ ಹೆಚ್ಚು ಸರಸಿಯೂ ಆಗಿದ್ದಿರಬೇಕು. ಕುಂತಿಯ ಸ್ವಭಾವ ಪ್ರಾಯಶಃ ಗಂಭೀರ. ಪಾಂಡು ಮಾದ್ರಿಯ ಪರವಾಗಿ ಕುಂತಿಯಲ್ಲಿ ಒಂದು ಪ್ರಾರ್ಥನೆಯನ್ನು ಮಾಡಿದನು; ಅವಳು ಮಾದ್ರಿಗೆ ಮಂತ್ರವನ್ನು ಹೇಳಿಕೊಟ್ಟಳು. ಮಾದ್ರಿ ಮಂತ್ರವನ್ನು ಹೇಳಿ ಅಶ್ವಿನೀದೇವತೆಗಳನ್ನು ಕರೆದಳು; ಆ ಯಮಳರನ್ನು ಕೂಡಿ ನಕುಲ ಸಹದೇವರನ್ನು ಯಮಳರಾಗಿ ಹೆತ್ತಳು. ಸ್ವಲ್ಪ ಕಾಲ ಕಳೆದು ಪಾಂಡು ಕುಂತಿಯನ್ನು ಕುರಿತು, "ಮಾದ್ರಿಗೆ ಇನ್ನೊಂದು ಸಲ ಮಂತ್ರೋಪದೇಶ ಮಾಡು," ಎಂದನು. ಕುಂತಿ ಇದಕ್ಕೆ ಒಪ್ಪಲಿಲ್ಲ. "ಒಂದು ಸಲ ಮಂತ್ರವನ್ನು ಹೇಳಿಕೊಟ್ಟರೆ ಎರಡು ಮಕ್ಕಳನ್ನು ಪಡೆದಳು. ಇನ್ನೊಂದು ಸಲ ಹೇಳಿಕೊಟ್ಟರೆ ಈ ಉಪಾಯಗಾತಿ ನನಗಿಂತ ಹೆಚ್ಚು ಮಕ್ಕಳನ್ನು ಪಡೆಯಬಹುದು. ಸವತಿ ಹೀಗೆ ತನ್ನನ್ನು ಮೀರುವುದಕ್ಕೆ ತಾನು ಸಮ್ಮತಿಸಲಾರೆನು," ಎಂದು ಕುಂತಿ ಹೇಳಿದಳಂತೆ. ಪಾಂಡು ಸುಮ್ಮನಾದನು. ಇದು ನಿಜವೊ ಅಲ್ಲವೊ; ಪ್ರಾಯಶಃ ಅಲ್ಲವೆಂದು ಕಾಣುತ್ತದೆ. ಕುಂತಿ ದುರ್ವಾಸನಿಂದ ಕಲಿತದ್ದು ಬೇರೆ ಬೇರೆ ಮಂತ್ರಗಳನ್ನಲ್ಲ; ಮಂತ್ರವನ್ನು ಅಥವಾ ಮಂತ್ರಗ್ರಾಮವನ್ನು. ಸವತಿಯ ಮತ್ಸರ ಇಲ್ಲದೆ ಕುಂತಿ ಉಪದೇಶ ಮಾಡುವುದಕ್ಕೆ ಒಪ್ಪಿದ್ದರೂ ಉಪದೇಶಿಸಲು ಬೇರೆ ಮಂತ್ರ ಇರಲಿಲ್ಲ. ಇದ್ದ ಮಂತ್ರ ಅಥವಾ ಮಂತ್ರಗ್ರಾಮವನ್ನು ಆ ಮೊದಲೇ ಹೇಳಿಕೊಟ್ಟಿದ್ದಳು. ಈ ಕಾರಣದಿಂದ ಈ ಸವತಿಯ ಮಾತ್ಸರ್ಯದ ಮಾತು ಆಮೇಲಣ ಕಥನಕಾರರ ಪ್ರಪಂಚಜ್ಞಾನದ ಕಲ್ಪನೆಯೆಂದು ಕಾಣುತ್ತದೆ. ಪಾಂಡು ತೀರಿಕೊಂಡಾಗ ಕುಂತಿ ಮಾದ್ರಿಯನ್ನು ಕುರಿತು, "ಎಂಥ ಕೆಲಸವನ್ನು ಮಾಡಿದೆ!" ಎಂದು ಆಕ್ಷೇಪ ನುಡಿದಳು. ಮತ್ತೆ, "ಒಲಿದು ಕೂಡಿದ ಸುಖದಿಂದ ಅರಳಿದ ಇನಿಯನ ಮುಖವನ್ನು ನೀನು ನೋಡಿದೆ. ನೀನು ಭಾಗ್ಯವತಿ. ಆ ಭಾಗ್ಯ ನನಗೆ ಇಲ್ಲದೆ ಹೋಯಿತು," ಎಂದಳು. ತಾನು ಮೊದಲ ಹೆಂಡಿರು ಎಂಬ ಕಾರಣದಿಂದ ಕುಂತಿ ಗಂಡನೊಂದಿಗೆ ಸಹಗಮನ ಮಾಡುವೆನೆಂದಳು.

ಇದಕ್ಕೆ ಮಾದ್ರಿ ಒಪ್ಪಲಿಲ್ಲ; ತಾನೇ ಸಹಗಮನಮಾಡಬೇಕೆಂದು ಹಟ ಮಾಡಿದಳು. ಕೊನೆಗೆ ಕುಂತಿ ಅವಳ ಹಟವನ್ನು ಒಪ್ಪಿದಳು. ಪಾಂಡುವಿಗೆ ತನ್ನ ಮೇಲೆ ಇದ್ದುದಕ್ಕಿಂತ ಮಾದ್ರಿಯ ಮೇಲೆ ಹೆಚ್ಚು ಪ್ರೀತಿ ಇದ್ದಿತು ಎಂದಲ್ಲ; ಪ್ರಾಣ ಹೋದರೆ ಹೋಗಲಿ, ಇವಳನ್ನು ಕೂಡಬೇಕು, ಎಂದು ಅವನಿಗೆ ತೋಚಿದ್ದು ಮಾದ್ರಿಯನ್ನು ಕಂಡು; ತನ್ನನ್ನು ಕಂಡು ಅಲ್ಲ. ಸುಖದಿಂದ ಅರಳಿದ ಇನಿಯನ ಮುಖದ ಮಾತು ಕುಂತಿಯ ಸ್ತ್ರೀ ಸ್ವಭಾವದ ಮುಗಿಲ ಮಟ್ಟವನ್ನು ಸೂಚಿಸುತ್ತದೆ. ಕುಂತಿಗೆ ತನಗಾಗಿ ದೇಹಸುಖ ಬೇಕಾಗಿರಲಿಲ್ಲ. ಅದು ತನ್ನ ಗಂಡನಿಗೆ ಬೇಕೆನಿಸಿದರೆ ಅವನು ಅದನ್ನು ತನ್ನಿಂದ ಪಡೆಯಬೇಕೆಂಬ ಅಪೇಕ್ಷೆಯಿದ್ದಿತು. ಮಾದ್ರಿಯ ಹಟವೇ ಗೆದ್ದು ಕುಂತಿ ಮಕ್ಕಳೊಂದಿಗೆ ಹಸ್ತಿನಾವತಿಗೆ ಬಂದು, ಮಾವ ಭಾವನವರ ನೆರಳಿನಲ್ಲಿ ಮಕ್ಕಳನ್ನು ಸಾಕಿದಳು. ನೂರು ಜನರನ್ನು ಕುರಿತ ನೂರು ವರ್ಷದ ಚರಿತ್ರೆಯಲ್ಲಿ ಒಬ್ಬ ವ್ಯಕ್ತಿಯ ದಿನದಿನದ ಕಷ್ಟಸುಖ ಚಿತ್ರವಾಗುವುದು ಸಾಧ್ಯವಲ್ಲ. ಆದರೆ ಪ್ರೀತಿಯಿದ್ದರೂ ತಟಸ್ಥನಾಗಿದ್ದ ಭೀಷ್ಮ, ಪ್ರೀತಿಯಿದ್ದರೂ ಅಶಕ್ತನಾಗಿದ್ದ ವಿದುರ, ಪ್ರೀತಿಯಿದ್ದಂತೆ ಕಂಡರೂ ಅರ್ಧ ತನ್ನ ಕುರುಡಿನ ಕಾರಣದಿಂದ, ಅರ್ಧ ತನ್ನ ಮಕ್ಕಳನ್ನು ಕುರಿತ ಮಾಲ್ಮೆಯ ಕಾರಣದಿಂದ, ಸತ್ತ ತಮ್ಮನ ಈ ಮಕ್ಕಳ ವಿಷಯದಲ್ಲಿ ಏನಿಲ್ಲವೆಂದರೂ ಉದಾಸೀನನಾಗಿದ್ದ ಧೃತರಾಷ್ಟ್ರ, ಇವರ ಆಶ್ರಯದಲ್ಲಿ ಪಾಂಡುವಿನ ಸಂತಾನವನ್ನು ಕಾಯುವುದು ಈ ತಾಯಿಗೆ ತಕ್ಕಷ್ಟು ಶ್ರಮ ವಾಗಿದ್ದಿರಬೇಕು. ಪಾಂಡುವೇ ರಾಜನಾಗಿದ್ದು ಅವನ ಮಕ್ಕಳೇ ನಿಜವಾಗಿ ರಾಜ್ಯಕ್ಕೂ ಅಧಿಕಾರಿಗಳಾಗಿದ್ದರೂ ಈ ಮಕ್ಕಳನ್ನು ವಾರಣಾ ವತಕ್ಕೆ ಕಳುಹಿಸುವ ನಿರ್ಧರವಾದದ್ದರಲ್ಲಿ ಕುಂತಿಯ ಅಸಹಾಯ ಸ್ಥಿತಿ ಸ್ಪಷ್ಟವಾಗುತ್ತದೆ. ಪಾಂಡುವಿನ ಮಕ್ಕಳನ್ನು ಇಲ್ಲವೆನ್ನುವಂತಿಲ್ಲ. ಅದಕ್ಕಾಗಿ ರಾಷ್ಟ್ರದ ಒಂದು ಭಾಗವನ್ನು ಅವರಿಗೆ ಕೊಟ್ಟು ಮನೆಯ ಹಿರಿಯರು ಅವರನ್ನು ಎತ್ತಲೋ ಕಳುಹಿಸಿದರು. ಪೂರ್ವದಿಂದ ಬಂದ ಅರಮನೆ ಧೃತರಾಷ್ಟ್ರನಿಗೆ ಅವನ ಮಕ್ಕಳಿಗೆ. ಪಾಂಡುವಿನ ಮಕ್ಕಳಿಗೆ ವಾರಣಾವತದಲ್ಲಿ ಆಗಲೆ ಕಟ್ಟಿಸಿದ ಹೊಸ ಮನೆ. ಮಕ್ಕಳಿಗೆ ಕಟ್ಟುವ ಹೊಸಮನೆಯ ವಿಷಯದಲ್ಲಿ ಎಷ್ಟು ಜನ ಎಷು ಶ ದ ವಹಿಸಿದರೆಂದು

ಕೇಳಿದರೆ, ದುರ್ಯೋಧನನಂಥ ಒಬ್ಬ ಕುಟಿಲನು ಅದನ್ನು ಅರಗಿನಿಂದ ನಿರ್ಮಿಸುವುದಕ್ಕೆ ಸಾಧ್ಯವಾಯಿತು. ನಿಜವಾಗಿ ಪಾಂಡವರು ಮನೆಯ ಈ ಹಿರಿಯರಿಗೆ ಬೇಕಾಗಿರಲಿಲ್ಲ; ದೈವ ಅವರ ಜೊತೆಗಿತ್ತು, ಅವರು ಉಳಿದುಕೊಂಡರು. ಅವರ ಬಾಲ್ಯದಲ್ಲಿ ಆ ದೈವ ಅವರ ಪಕ್ಷದಲ್ಲಿದ್ದದ್ದು ಕುಂತಿಯ ರೂಪದಲ್ಲಿ. ಕುಂತಿ ಮಕ್ಕಳನ್ನು ಬಹು ಪ್ರೀತಿಯಿಂದ ನೋಡಿ ಕೊಂಡಳೆನ್ನುವುದು ಚೆನ್ನಾಗಿ ಕಾಣುತ್ತದೆ. ಹೊತ್ತು ಹೊತ್ತಿನ ಊಟ ದಲ್ಲಿ ಭೀಮನಿಗೆ ಹೆಚ್ಚು ಆಹಾರ ಬೇಕು ಎನ್ನುವುದನ್ನು ತಿಳಿದು ಮೊದಲಿ ನಿಂದಲೂ ಅವಳು ಅವನ ಹೊಟ್ಟೆಯನ್ನು ನೋಡಿಕೊಂಡಳು. ಒಳ್ಳೆಯ ತಾಯಲ್ಲಿ ಇದು ಮೊದಲ ಲಕ್ಷಣ. ತಾಯಿ ಮಾಡಿದ ಹೊಟ್ಟೆ ಎನ್ನುವುದು ಕನ್ನಡದಲ್ಲಿ ಗಾದೆ. ಹೊರಗಿನವರಿಗೆ ಹೊಟ್ಟೆ ತಾಯಿ ಮಾಡಿದ್ದಾಗಿ ಕಾಣುವುದು ಸಹಜ. ಮಗುವಾದದ್ದಕ್ಕೆ ಅದೇ ಹೊಟ್ಟೆ ತಾಯಿ ನೋಡಿದ್ದು, ನೋಡಿಕೊಂಡದ್ದು. ಹಾಗೆಯೆ ಇವಳು ಸಹದೇವನನ್ನು ತುಂಬ ಮುದ್ದಿಸಿ ಸಾಕಿದಳು. ಸಹದೇವ ಸವತಿಯ ಮಗ ಹೌದು; ಆದರೆ ಈ ತಾಯ ಕರುಳಿಗೆ ಮಲಮಗುವಿನ ಮಗುತನ ಮುಖ್ಯ ವಾಯಿತು, ಮಲತನಮರೆಯಾಯಿತು. ತಾನು ಸಾಕಿದ ಮಕ್ಕಳ ವಿಷಯದಲ್ಲಿ ಕುಂತಿ ಬೇಸರವಾದಾಗ ಸ್ವಲ್ಪ ಅನ್ಯಾಯವಾಗಿ ಮಾತ ನಾಡುವುದಕ್ಕೂ ಹಿಂತೆಗೆಯುತ್ತಿರಲಿಲ್ಲ. ಅರಗಿನ ಮನೆಯಿಂದ ತಪ್ಪಿಸಿ ಕೊಂಡು ಇವರೆಲ್ಲ ಕಾಡಿನಲ್ಲಿ ತಕ್ಕಷ್ಟು ದೂರ ನಡೆದಮೇಲೆ ಭೀಮನು, "ಇನ್ನು ಸ್ವಲ್ಪದೂರ ಹೋಗೋಣ. ಇಲ್ಲಿಯೆ ನಿಂತರೆ ಶತ್ರುಗಳು ಹಿಂದಟ್ಟಿಕೊಂಡು ಬಂದಾರು," ಎಂದನು. ಕುಂತಿಗೆ ನಡೆದು ಸಾಕಾ ಗಿತ್ತು. ಅವಳು ಅಲ್ಲಿಯೇ ಕುಳಿತಳು. "ನನಗೆ ಶತ್ರುಗಳು ಕೌರವರಲ್ಲ. ನನ್ನ ಮಕ್ಕಳೇ ನನಗೆ ಶತ್ರುಗಳಾಗಿದ್ದಾರೆ. ನನ್ನನ್ನು ನಡಸಿ ಕೊಲ್ಲ ಬೇಕೆಂದಿರುವ ಇವನೇ ನನಗ ಶತ್ರು," ಎಂದಳು. ನೂರು ಜನರನ್ನು ಕುರಿತ ನೂರು ವರ್ಷದ ಚರಿತ್ರೆಯಲ್ಲಿ ಇಂಥ ಒಂದು ಸಂಗತಿಯನ್ನು ಗುರುತಿಸಿರುವುದು ಮಹರ್ಷಿಯ ಮಾನವ ಸ್ವಭಾವ ವಿಜ್ಞಾನವನ್ನು ಬೆಳಗಿ ತೋರುತ್ತದೆ. ಚೆನ್ನಾಗಿ ಊಟಮಾಡುವನೆಂಬ ಕಾರಣದಿಂದ ಈ ತಾಯಿಗೆ ಭೀಮನಮೇಲೆ ವಿಶೇಷ ಪ್ರೀತಿ. ಇವನ ಶಕ್ತಿಯ ವಿಷಯ

ದಲ್ಲಿ ಅವಳಿಗೆ ತುಂಬ ವಿಶ್ವಾಸ ಮತ್ತು ಹೆಮ್ಮೆ. ಏಕಚಕ್ರಪುರದಲ್ಲಿ ಅವನನ್ನು ಬಕನ ಬಳಿಗೆ ಕಳುಹಿಸುವುದಕ್ಕೆ ಅವಳ ಜೀವ ಸ್ವಲ್ಪವೂ ಹಿಂತೆಗೆಯಲಿಲ್ಲ. ಸ್ವಯಂವರದಲ್ಲಿ ಪಾರ್ಥನ ಪಾಲಾಗಿ ಬಂದ ದ್ರೌಪದಿಯನ್ನು ಒಂದು ಪ್ರಮಾದದಿಂದ ನೀವೈವರೂ ಹಂಚಿಕೊಳ್ಳಿ ಎಂದು ಕುಂತಿ ಹೇಳಿದಳೆಂಬುದು ಕಲ್ಪನೆಯ ಕಥೆ. ಮಕ್ಕಳು ಏನನ್ನು ತಂದರೂ ಇವಳು ಅದನ್ನು ತೆಗೆದುಕೊಂಡು ಅರ್ಧವನ್ನು ಭೀಮನಿಗೆ ಕೊಟ್ಟು, ಮಿಕ್ಕುದನ್ನು ಇತರರಿಗೆ ಹಂಚುತ್ತಿದ್ದಳಂತೆ. ತಾಯಿ ಒಳಗಿನಿಂದ ನೀವೈವರೂ ತೆಗೆದುಕೊಳ್ಳಿ, ಎಂದು ಹೇಳಬೇಕಾದರೆ ಸಂಸಾರ ಬೇರೆಯ ರೀತಿಯದಾಗಿರಬೇಕು. ಮಕ್ಕಳು ಇನ್ನೂ ಚಿಕ್ಕವರಾಗಿರಬೇಕಾಗಿತ್ತು. ಸಾಲದ್ದಕ್ಕೆ ಇವರು ಸ್ವಯಂವರಕ್ಕೆ ಹೋಗಿದ್ದಾರೆನ್ನುವುದು ಕುಂತಿಗೆ ತಿಳಿದಿತ್ತು. ಗುರಿಯನ್ನು ಹೊಡೆದು ದ್ರೌಪದಿಯನ್ನು ಗೆಲ್ಲಬಹುದು ಎಂಬ ಆಸೆಯಿಂದ ಹೋಗಿದ್ದಾರೆನ್ನುವುದೂ ತಿಳಿದಿತ್ತು. ಈ ವಿಷಯವನ್ನು ಬೇರೆಯ ಕಡೆ ವಿವರವಾಗಿ ಚರ್ಚಿಸಿದೆ. ಇಲ್ಲಿ ಇಷ್ಟು ಮಾತು ಪ್ರಕೃತ: ಇಂಥ ಮುಖ್ಯ ಪ್ರಸಂಗದಲ್ಲಿ ಕುಂತಿ ಪ್ರಮಾದದಿಂದ ಅಯುಕ್ತವಾದ ಯಾವುದೇ ಮಾತನ್ನು ಹೇಳಿದಳೆನ್ನುವುದು ಕೃತಕ. ಪಾಂಡವರು ಮರಳಿ ಹಸ್ತಿನಾವತಿಗೆ ಬಂದು ಇಂದ್ರಪ್ರಸ್ಥಕ್ಕೆ ಹೋಗಿ ಯುಧಿಷ್ಠಿರನು ದ್ಯೂತದಲ್ಲಿ ಸೋತು ಕಾಡಿಗೆ ಹೊರಡುವವರೆಗೆ ಕುಂತಿಯ ವಿಚಾರ ಕಥೆಯಲ್ಲಿ ಏನೂ ಬರುವುದಿಲ್ಲ. ಮಕ್ಕಳು ಕಾಡಿಗೆ ಹೋದಾಗ ಇವಳು ಹಸ್ತಿನಾಪುರದಲ್ಲಿ ನಿಂತಳು; ಹದಿಮೂರು ವರ್ಷ ಕಳೆದು ಕೃಷ್ಣನು ಸಂಧಾನಕ್ಕೆ ಬಂದಾಗ ಅವನಿಂದ ಮಕ್ಕಳ ವಿಷಯವನ್ನು ಕೇಳಿ ಸಂತೋಷಪಟ್ಟಳು. ಯುಧಿಷ್ಠಿರನು ಜ್ಞಾತಿ ಸೋದರರನ್ನು ಕುರಿತು ದಾಕ್ಷಿಣ್ಯದಿಂದ ಅತಿ ಮೃದುವಾಗಿ ನಡೆಯುತ್ತಿದ್ದಾನೆಂದು ಕುಂತಿಗೆ ತೋರಿತು; ಅವಳು ಕೃಷ್ಣನ ಮೂಲಕ ಮಗನಿಗೆ ಒಂದು ಸಂದೇಶವನ್ನು ಕಳುಹಿಸಿದಳು. ''ಕ್ಷತ್ರಿಯನಾಗಿ ನಡೆದುಕೊ. ಕ್ಷತ್ರಿಯನ ಧರ್ಮವನ್ನು ನಡಸುವುದರಲ್ಲಿ ಬರುವ ಮನಃಕ್ಲೇಶವನ್ನೆಲ್ಲ ಸಹಿಸಿಕೊ. ನೆಂಟನಿಗೆ ಸೋವಾಗಬಾರದೆಂದು ನೀನು ಕ್ಷತ್ರಿಯ ಧರ್ಮದಿಂದ ಚ್ಯುತನಾಗಬೇಡ,'' ಎನ್ನುವುದು ಆ ಸಂದೇಶದ ಸಾರ. ಈ ಮಾತನ್ನು ನೇರವಾಗಿ

ಹೇಳಲಾರದೆ ಕುಂತೀದೇವಿ ಹಿರಿಯ ಮಗನಿಗೆ ವಿದುಲೋಪಾಖ್ಯಾನವನ್ನು ಸಂದೇಶವಾಗಿ ಕೊಟ್ಟು ಕಳುಹಿಸಿದಳು. ಅಪ್ರಿಯವಾದರೂ ಪಥ್ಯವಾದ ಮಾತನ್ನು ಪ್ರಾಜ್ಞನಾದ ಧರ್ಮಿಷ್ಠ ಪುತ್ರನಿಗೆ ಹೇಳುವುದಕ್ಕೆ ಈ ವೀರ ಮಾತೆ ಹಿಂಜರಿಯಲಿಲ್ಲ. ಆದರೂ, ಅವನು ಎಷ್ಟಾದರೂ ವಯಸ್ಸಾದ ಮಗ, ಅವನ ತಪ್ಪು ಕೂಡ ಧರ್ಮ ಲೋಭದಿಂದ ಉದಿಸಿರುವ ತಪ್ಪು, ಎಂಬ ಕಾರಣದಿಂದ ಅವಳು ಅವನ ವಿಷಯದಲ್ಲಿ ದಾಕ್ಷಿಣ್ಯದಿಂದ ವರ್ತಿಸಿದಳು; ಕಟುವಾಗಬಹುದೆಂಬ ಮಾತನ್ನು ಯಾರೊ ಯಾರಿಗೊ ಇಂಥದೇ ಸಂದರ್ಭದಲ್ಲಿ ಹೇಳಿದ ಮಾತು ಎಂಬಂತೆ ಪರ್ಯಾಯದಿಂದ ಒಪ್ಪಿಸಿದಳು. ಕೃಷ್ಣನು ಹೊರಟು ಹೋದಮೇಲೆ ಯುದ್ಧವಾಗಿ ಕೌರವ ವಂಶ ನಾಶವಾಗುವುದಲ್ಲಾ ಎಂದು ವಿದುರನು ಈ ಅತ್ತಿಗೆಯ ಎದುರಲ್ಲಿ ವ್ಯಾಕುಲಪಟ್ಟನು. ಆಗ ಇವಳಿಗೂ ಬಹು ವ್ಯಾಕುಲವಾಯಿತು. ಯುಧಿಷ್ಠಿರನು ಕ್ಷತ್ರಿಯೋಚಿತವಾದ ಶೌರ್ಯದಿಂದ ವರ್ತಿಸಬೇಕು ಎಂಬ ಆಸೆ ನಿಜ; ಬಾಂಧವ್ಯ ನಷ್ಟವಾಗುತ್ತದಲ್ಲ ಎಂಬ ಭಯವೂ ಅಷ್ಟೇ ನಿಜ. ಕ್ಷತ್ರಿಯ ಮಾತೆಗೆ ಈ ಎರಡು ಭಾಗದಲ್ಲಿ ಯಾವುದೂ ತಪ್ಪಿದ್ದಲ್ಲ. ಯುದ್ಧವನ್ನು ನಿಲ್ಲಿಸುವುದಕ್ಕೆ ಆದರೆ ನಿಲ್ಲಿಸೋಣ ಎಂದು ಯೋಚಿಸಿ ಕುಂತೀದೇವಿ ಕರ್ಣನಿಗೆ ತಾನು ಅವನಿಗೆ ತಾಯಿ ಎಂಬುದನ್ನು ತಿಳಿಸಿ ಅವನನ್ನು ರಾಜನಾಗು ಎಂದಳು. ಅವನು ರಾಜನಾದರೆ ಪಾಂಡವರು ತಮ್ಮ ಹಿರಿಯನೆಂದು, ದುರ್ಯೋಧನ ಮತ್ತು ಅವನ ಸೋದರರು ತಮ್ಮ ಗೆಳೆಯನೆಂದು, ಅವನನ್ನು ಒಪ್ಪಿಕೊಂಡಾರು, ಎಂದು ಅವಳ ನಿರೀಕ್ಷೆ. ಕರ್ಣನ ಸಹಜ ಸಂಕೋಚ ಮತ್ತು ಪಾಪ ಭೀತಿಯಿಂದ ಕುಂತಿಯ ಈ ಆಸೆ ಈಡೇರದೆ ಹೋಯಿತು. "ಇದಾಗದಿದ್ದರೆ ಬೇಡ; ನಿನ್ನ ಸೋದರರನ್ನು ಯುದ್ಧದಲ್ಲಿ ಕೊಲ್ಲಬೇಡ. ಒಮ್ಮೆ ತೊಟ್ಟ ಅಸ್ತ್ರವನ್ನು ಮತ್ತೆ ತೊಡುವುದಿಲ್ಲವೆಂದು ಅಭಿವಚನ ಕೊಡು," ಎಂದು ಕುಂತಿ ಕರ್ಣನನ್ನು ಕೇಳಿದಳು; ಅವನಿಂದ ಆ ವಚನವನ್ನು ತೆಗೆದುಕೊಂಡು ಬಂದಳು. ಉಳಿದ ಹಿರಿಯರಂತೆ ತಾನೂ ಯುದ್ಧದ ಘೋರವನ್ನೆಲ್ಲ ನೋಡಿ, ಎಲ್ಲರೊಂದಿಗೆ ತಾನೂ ನೊಂದು, ಕೊನೆಗೆ ವೃದ್ಧ ಯುಧಿಷ್ಠಿರನು ಸಿಂಹಪೀಠವನ್ನು ಏರಿದ್ದನ್ನು ನೋಡಿದಳು; ಮೊಮ್ಮಕ್ಕಳೆಲ್ಲ ಅಳಿದು

ಅಭಿಮನ್ಯುವಿನ ಹೆಂಡತಿ ಗರ್ಭಿಣಿಯಾಗಿದ್ದು ಅವಳು ಹೆರುವ ಮಗುವಿನಿಂದ ವಂಶ ನಡೆಯಬೇಕಾಗಿದೆ ಎನ್ನುವುದನ್ನು ಕಂಡಳು. ಕೃಷ್ಣನು ಆ ಮಗುವನ್ನು ಬದುಕಿಸಿ ವಂಶ ನಡೆಯುವಂತೆ ಮಾಡಿದ್ದನ್ನು ಕಂಡು ತಣಿದಳು; ಕೆಲವು ಕಾಲ ಮಕ್ಕಳ ರಾಜ್ಯವೈಭವವನ್ನು ನೋಡುತ್ತಿದ್ದು ಧೃತರಾಷ್ಟ್ರ ಗಾಂಧಾರಿಯೊಂದಿಗೆ ಆಶ್ರಮವಾಸಿಯಾಗಿ ಇಹಜೀವನವನ್ನು ಮುಗಿಸಿದಳು. ಮಹಾಭಾರತದಲ್ಲಿ ಬರುವ ಸ್ತ್ರೀಯರಲ್ಲಿ ದ್ರೌಪದಿಯ ಚಿತ್ರ ಹೊರತು ಇನ್ನು ಯಾರ ಚಿತ್ರವೂ ವಿಸ್ತಾರದಲ್ಲಿ ಕುಂತಿಯ ಚಿತ್ರದ ಜೊತೆಗೆ ಬರಲಾರದು. ಬಂದಿರುವಷ್ಟು ವಿವರದಿಂದ ಈ ತಾಯ ನೋವು, ಕರುಳು, ಸಾಹಸ, ನಮ್ಮ ಜನದ ಮನಸ್ಸನ್ನು ಎಷ್ಟು ಚೆನ್ನಾಗಿ ಮುಟ್ಟಿದವೆಂದರೆ, ಈ ಹೊತ್ತಿಗೂ ನಮ್ಮ ಹಳ್ಳಿಗಳ ಜನರಿಗೆ ಕುಂತೀದೇವಿ ತಾಯಿತನದ ಪ್ರತಿನಿಧಿ. ಒಂದು ಕಾಡಿನಲ್ಲಿ ಅವಳು ಮಕ್ಕಳಿಗೆ ಅನ್ನ ಮಾಡಿ ಹಾಕಿದ್ದಾಳೆ; ಒಂದು ಬೆಟ್ಟದ ಮೇಲೆ ಭೀಮನು ಅವಳಿಗೆ ಗದೆಯಿಂದ ಒಂದು ಸರೋವರವನ್ನು ತೋಡಿಕೊಟ್ಟಿದ್ದಾನೆ; ಒಂದು ಕಡೆ ಅವಳು ಸಂಬಾರವನ್ನು ರುಬ್ಬಿದ ಒರಳಿದೆ. ಭುಜದೆತ್ತರಕ್ಕೆ ಬೆಳೆದ ಶೂರರಾದ ಮಕ್ಕಳನ್ನು ಪ್ರೀತಿಯ ಬಲದಿಂದ ತನ್ನ ಅಂಕೆಯಲ್ಲಿ ಇಟ್ಟುಕೊಂಡು ಆಳಿದ, ಆಳುವ, ತಾಯಿ ಮೂರು ಲೋಕದಲ್ಲಿ ಒಬ್ಬಳೇ ಒಬ್ಬಳು: ಅವಳ ಹೆಸರು ಕುಂತಿ.

೮

## ವಿದುಲೋಪಾಖ್ಯಾನ

ಯುಧಿಷ್ಠಿರನಿಗೆ ಸಂದೇಶವನ್ನು ಕಳುಹಿಸುವುದಕ್ಕೆ ಕುಂತೀದೇವಿ ವಿದುಲಾ ಎಂಬ ಪುರಾತನ ಇತಿಹಾಸದ ಒಬ್ಬ ಕ್ಷತ್ರಿಯ ಮಾತೆಯ ಆಖ್ಯಾನವನ್ನು ಬಳಸಿದಳೆಂದು ಹೇಳಿತಷ್ಟೆ. ಈ ಆಖ್ಯಾನ ಭಾರತದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ''ನಾರಾಯಣಂ ನಮಸ್ಕೃತ್ಯ'' ಎಂದು ಮೊದಲಾಗುವ ಶ್ಲೋಕದ ''ಜಯ ಮುದೀರಯೇತ್'' ಎಂಬಲ್ಲಿ ಸಂಪ್ರದಾಯ 'ಜಯ' ಶಬ್ದಕ್ಕೆ 'ಭಾರತ' ಎಂದು ಅರ್ಥ ಹೇಳುತ್ತದೆ. ಆದರೆ, ಭಾರತ ಗ್ರಂಥವನ್ನು 'ಜಯ' ಎಂದು ಕರೆದಿರುವುದು ಬೇರೆ

ಎಲ್ಲಿಯೂ ಕಾಣುವುದಿಲ್ಲ. 'ಜಯ' ಎಂಬ ಹೆಸರು ಇನ್ನು ಒಂದು ಕಡೆ ಬರುತ್ತದೆ; ಆ ಒಂದು ಕಡೆ ಎನ್ನುವುದು ವಿದುಲೋಪಾಖ್ಯಾನದ ಕೊನೆ. ಆದಿ ಜಯ ಕಾವ್ಯ ವಿದುಲೋಪಾಖ್ಯಾನ. ಆ ಕಾವ್ಯದಲ್ಲಿ ವಿದುಲಾ ಇದ್ದ ಸ್ಥಾನದಲ್ಲಿ ಭಾರತದಲ್ಲಿ ಕುಂತಿ ಬಂದಿದ್ದಾಳೆ. ಆ ತಾಯಿ ಅಂದು ಒಂದು ಸಂದೇಶವನ್ನು ಕಳುಹಿಸಿದಂತೆ ಈ ತಾಯಿ ಇಂದು ಒಂದು ಸಂದೇಶವನ್ನು ಕಳುಹಿಸಿದ್ದಾಳೆ. ಈ ಹೋಲಿಕೆಯಿಂದ ಇರಬೇಕು, ಕುಂತಿಯ ಮಕ್ಕಳ ಜಯದ ಚರಿತ್ರೆಗೆ 'ಜಯ' ಎಂದು ಹೆಸರು ಬಂದಿತು. ಆ ಚರಿತ್ರೆಯ ಕೊನೆ ಈ ಚರಿತ್ರೆಯ ಕೊನೆ ರೀತಿಯಲ್ಲಿ ಬೇರೆ. ಸಾದೃಶ್ಯ ವಿರುವುದು ವೀರಮಾತೆಯ ಸಂದೇಶದಲ್ಲಿ; ಪ್ರಾಯಶಃ ಕ್ಷತ್ರಿಯನ ಧರ್ಮದ ನಿರೂಪಣೆಯಲ್ಲಿ. ಭಾರತ ಗ್ರಂಥದ ಒಳತಿರುಳು ಎಂದು ಈ ಉಪಾಖ್ಯಾನ ಪರಿಗಣಿತವಾಗಿದ್ದಿತೆಂದು ಕಾಣುವುದರಿಂದ ಇದರ ಸಾರವನ್ನು ವಿವರಿಸುವುದಕ್ಕೆ ಇದು ಸರಿಯಾದ ಸ್ಥಳ.

ಪೂರ್ವದಲ್ಲಿ ವಿದುಲಾ ಎಂಬ ಹೆಸರಿನ ಕ್ಷತ್ರಿಯ ಸ್ತ್ರೀ ಒಬ್ಬಳಿದ್ದಳು. ಆಕೆ ಕ್ಷತ್ರಿಯ ಧರ್ಮವನ್ನು ಚೆನ್ನಾಗಿ ಬಲ್ಲಳು; ಕ್ಷತ್ರಿಯ ಕುಲದಲ್ಲಿ ಅವಳ ಹೆಸರು ಪ್ರಸಿದ್ಧವಾಗಿದ್ದಿತು. ಅವಳಿಗೆ ಸಂಜಯನೆಂಬ ಒಬ್ಬ ಮಗನಿದ್ದನು. ಅವನು ಒಂದು ಸಲ ಸಿಂಧೂದೇಶದ ಅರಸನೊಡನೆ ಯುದ್ಧಮಾಡಿ ಸೋತು ಓಡಿಬಂದನು; ನಾಚಿಕೆಯಿಂದ, ವ್ಯಥೆಯಿಂದ, ಕೋಣೆಯಲ್ಲಿ ಅಡಗಿಕೊಂಡನು. ವಿದುಲಾದೇವಿ ಮಗನನ್ನು ಛೀಗುಟ್ಟಿ ದಳು. "ಎಲಾ, ಅಲ್ಪ! ಏಳು: ನೀನೇನು ನಮ್ಮ ಹಗೆಗಳನ್ನು ಸಂತೋಷಗೊಳಿಸಲೆಂದು ಹುಟ್ಟಿದೆಯಾ? ಹೀಗೆ ನಿಂತೆಯಾದರೆ ನೀನು ನಿಮ್ಮ ತಂದೆಯ ಮಗನಲ್ಲ, ನನ್ನ ಮಗನಲ್ಲ. ನಿನಗೆ ಕೈಕಾಲು ಇದ್ದು ಏನು ಸಾರ್ಥಕ? ಸೋತು ಬಂದು ತಲೆ ಉಳಿಸಿಕೊಳ್ಳುವುದಲ್ಲ ನಿನ್ನ ಧರ್ಮ. ಹಾವಿನ ಹಲ್ಲನ್ನು ಕೀಳುವವನಂತೆ ಸಾಹಸಮಾಡಿ ದುಸ್ಸಾಧ್ಯ ನಾದ ಶತ್ರುವಿನ ಮೇಲಾದರೂ ಬಿದ್ದು ಸಾಯುವುದೇ ಶ್ರೇಯಸ್ಸು. ವಜ್ರದಿಂದ ಪೆಟ್ಟುತಿಂದು ಹೆಣವಾದಂತೆ ಹಾಸಿಗೆಯ ಮೇಲೆ ಮಲಗಿರುವೆ ಯೇಕೆ? ತಿಂದುಕದ ಕೊರಡಿನ ಕೊಳ್ಳಿಯಂತೆ ಒಂದು ಕ್ಷಣವಾದರೂ ಪ್ರಜ್ವಲಿಸು. ತುಷಾರಾಗ್ನಿಯಂತೆ ಅನರ್ಚಿಯಾಗಿ ಜೀವಿಸಲು ಆಶೆಪಡ

ಬೇಡ. ಬಹುಕಾಲ ಹೊಗೆಯಾಡುವುದಕ್ಕಿಂತ ಒಂದು ಕ್ಷಣ ಉರಿಯು ವುದು ಶ್ರೇಯಸ್ಸು.

ಮಾಹಸ್ಮ ಕಸ್ಯಚಿದ್ಗೇಹೇ ಜನೀರಾಜ್ಞಃ ಖರೀವ್ಮೃದುಃ

ಯಾವನೇ ಅರಸನ ಮನೆಯಲ್ಲಿ ಹೆಣ್ಣುಕತ್ತೆ ಹುಟ್ಟಿದಂತೆ ಆಗಬಾರದು.

ಅಲಬ್ಧ್ವಾ ಯದಿವಾ ಲಬ್ಧ್ವಾ ನಾನುಶೋಚತಿ ಪಂಡಿತಃ.
ಉದ್ಭಾವಯಸ್ವ ವೀರ್ಯಂ ವಾ ತಾಂ ವಾ ಗಚ್ಛಧ್ರುವಾಂ ಗತಿಂ.
ಇಷ್ಟಾಪೂರ್ತಂ ಹಿ ತೇ ಕ್ಲೀಬ ಕೀರ್ತಿಶ್ಚ ಸಕಲಾಹತಾ;
ವಿಚ್ಛಿನ್ನಂ ಭೋಗಮೂಲಂ ತೇ ಕಿನ್ನಿಮಿತ್ತಂ ಹಿ ಜೀವಸಿ?

ಕ್ಷತ್ರಿಯನು ತಾನು ಮುಳುಗಿಹೋಗುವಾಗ ತನ್ನ ಹಗೆಯನ್ನು ಜೊತೆಗೆ ಎಳೆದುಕೊಂಡು ಸಾಯಬೇಕು. ಬೀಳುತ್ತ ಅವನನ್ನು ಜೊತೆಗೆ ಎಳೆದು ಬೀಳಿಸಬೇಕು.

ಕುರುಸತ್ತ್ವಂ ಚ ಮಾನಂ ಚ ವಿದ್ಧಿ ಪೌರುಷಮಾತ್ಮನಃ;
ಉದ್ಭಾವಯ ಕುಲಂ ಮಗ್ನಂ ತ್ವತ್ಕೃತೇ ಸ್ವಯಮೇವ ಹಿ;
ಯಸ್ಯವೃತ್ತಂ ನಜಲ್ಪಂತಿ ಮಾನವಾ ಮಹದದ್ಭುತಂ
ರಾಶಿವರ್ಧನಮಾತ್ರಂ ಸ ನೈವ ಸ್ತ್ರೀ ನಪುನಃ ಪುಮಾನ್;
ದಾನೇ ತಪಸಿ ಶೌರ್ಯೇಚ ಯಸ್ಯ ನ ಪ್ರಥಿತಂ ಯಶಃ
ವಿದ್ಯಾಯಾಂ ಅರ್ಥಲಾಭೇವಾ ಮಾತುರುಚ್ಚಾರ ಏವ ಸಃ;
ಶ್ರುತೇನ ತಪಸಾ ವಾಽಪಿ ಶ್ರಿಯಾ ವಾ ವಿಕ್ರಮೇಣ ವಾ
ಜನಾನ್ಯೋಽಭಿಭವತ್ಯನ್ಯಾನ್ ಕರ್ಮಣಾ ಹಿ ಸವೈ ಪುಮಾನ್.

ಗೆದ್ದರೂ ಸರಿಯೆ ಸೋತರೂ ಸರಿಯೆ, ಬಲ್ಲವನು ವ್ಯಥೆಪಡುವುದಿಲ್ಲ. ತನ್ನ ಶೌರ್ಯವನ್ನು ಪ್ರಕಟಿಸಬೇಕು; ಆಗಲಿಲ್ಲ, ಸತ್ತು ಶಾಶ್ವತವಾದ ಸದ್ಗತಿಯನ್ನು ಪಡೆಯಬೇಕು. ಸೋತು ಹಿಂದಕ್ಕೆ ಬಂದು ಮನೆಯಲ್ಲಿ ಕುಳಿತರೆ ರಾಜನಾಗಿರುವುದರ ಇಷ್ಟಾಪೂರ್ತಿಯಾಯಿತೆ? ಕೀರ್ತಿ ತೀರ ಹಾಳಾಯಿತು; ಭೋಗದ ಬೇರು ಕಡಿದುಹೋಯಿತು. ಬದುಕಿ ಇರು ವುದರ ಉದ್ದೇಶವೇನು? ಶಕ್ತಿಯನ್ನು ತೋರಿಸು; ಅಭಿಮಾನದಿಂದ ನಡೆದುಕೊ; ನಿನ್ನ ಉಸಿರಿನ ಪೌರುಷವೇನಿದೆ ಅದನ್ನಾದರೂ ತಿಳಿದುಕೊ. ನಿನ್ನ ನಡತೆಯಿಂದ ಕೀರ್ತಿಯಳಿದ ಕುಲವನ್ನು ನೀನೇ ಮೇಲಕ್ಕೆ ಎತ್ತುವೆ. ಮನುಷ್ಯರು 'ಆಹಾ! ಎಂಥ ಅದ್ಭುತಕಾರ್ಯವನ್ನು ಮಾಡಿದನು'

ಎಂದು ನಿನ್ನನ್ನು ಹೊಗಳದ ಮೇಲೆ ನೀನು ಇದ್ದು ಆದುದೇನು? ರಾಶಿಯಲ್ಲಿ ಇರುವ ಕಾಳಿನಂತೆ ಜನರ ಗುಂಪಿನಲ್ಲಿ ನೀನೊಬ್ಬ ಮನುಷ್ಯ ನಾದೆ. ಅಂಥ ಮನುಷ್ಯನು ಹೆಣ್ಣೂ ಅಲ್ಲ, ಗಂಡೂ ಅಲ್ಲ. ದಾನದಲ್ಲಿ, ತಪಸ್ಸಿನಲ್ಲಿ, ಶೌರ್ಯದಲ್ಲಿ ಯಶಸ್ಸು ಪ್ರಥಿತವಾಗದಿದ್ದರೆ, ವಿದ್ಯೆಯಲ್ಲಿ ಅರ್ಥಲಾಭದಲ್ಲಿ ಆದರೂ ಹೆಸರು ತೋರದೆ ಇದ್ದರೆ, ಮನುಷ್ಯನು ತಾಯಿ ಮೈ ಎಸೆದ ಒಂದು ಕಸ ಅಷ್ಟೆ. ಓದಿನಿಂದ ಅಥವಾ ತಪಸ್ಸಿನಿಂದ, ಇಲ್ಲ ಶ್ರೀಯಿಂದ, ಇಲ್ಲವೆ ಪರಾಕ್ರಮದಿಂದ, ಯಾವನು ಉಳಿದವರನ್ನು ಹಿಂದಕ್ಕೆ ಹಾಕುತ್ತಾನೊ ಅವನೇ ಪುರುಷನು.

ನಿರಮರ್ಷಂ ನಿರುತ್ಸಾಹಂ ನಿರ್ವೀರ್ಯಮರಿನಂದನಂ
ಮಾಸ್ಮ ಸೀಮಂತಿನೀ ಕಾಚಿತ್ ಜನಯೇತ್ ಪುತ್ರಮೀದೃಶಂ.
ಮಾ ಧೂಮಾಯ ಜ್ವಲಾತ್ಯಂತಂ ಆಕ್ರಮ್ಯ ಜಹಿ ಶಾತ್ರವಾನ್;
ಜ್ವಲಮೂರ್ಧನ್ಯಮಿತ್ರಾಣಾಂ ಮುಹೂರ್ತಮಪಿ ವಾ ಕ್ಷಣಮ್.
ಏತಾವಾನೇವ ಪುರುಷೋ ಯದಮರ್ಷೀ ಯದಕ್ಷಮೀ
ಕ್ಷಮಾವಾನ್ ನಿರಮರ್ಷಶ್ಚ ನೈವಸ್ತ್ರೀ ನ ಪುನಃಪುಮಾನ್.

*    *    *

ಏಭ್ಯೋ ನಿಕೃತಿ ಪಾಪೇಭ್ಯಃ ಪ್ರಮುಂಚಾತ್ಮಾನಮಾತ್ಮನಾ;
ಆಯಸಂ ಹೃದಯಂ ಕೃತ್ವಾ ಮೃಗಯಸ್ವ ಪುನಃ ಸ್ವಕಂ

*    *    *

ಶೂರಸ್ಯ ಊರ್ಜಿತ ಸತ್ವಸ್ಯ ಸಿಂಹವಿಕ್ರಾಂತಗಾಮಿನಃ
ದಿಷ್ಟಭಾವಂ ಗತಸ್ಯಾಪಿ ವಿಷಯೇ ಮೋದತೇ ಪ್ರಜಾ.

ಚಲವಿಲ್ಲದ ನಿರುತ್ಸಾಹಿಯಾದ ನಿರ್ವೀರ್ಯನಾಗಿ ಹಗೆಗಳಿಗೆ ಸಂತೋಷ ವನ್ನುಂಟುಮಾಡುವ ನಿನ್ನಂಥ ಮಗನನ್ನು ಯಾವ ಹೆಂಗಸೂ ಜೊಚ್ಚ ಲೆಂದು ಪಡೆಯದಿರಲಿ. ಹೊಗೆಯಾಡುತ್ತಿರಬೇಡ; ಆದಷ್ಟು ಉರಿ. ಶತ್ರುಗಳ ಮೇಲೆ ನುಗ್ಗು; ಅವರನ್ನು ಕೊಲ್ಲು. ಒಂದು ಮುಹೂರ್ತವೊ ಒಂದು ಕ್ಷಣವೊ ಅಮಿತ್ರರ ಮಂಡೆಯ ಮೇಲೆ ಜ್ವಲಿಸು. ಚಲವಿಲ್ಲದ, ಅತಿಕ್ಷಮಾವಂತನಾದ ಪುರುಷನು ಹೆಣ್ಣೂ ಅಲ್ಲ, ಗಂಡೂ ಅಲ್ಲ. ಚಲದಿಂದ ಅಸಹನೆಯಿಂದ ಗಂಡು ಗಂಡಾಗುತ್ತಾನೆ. ನಿಕೃತಿ ಪಾಪ ಗಳಿಂದ ನಿನ್ನನ್ನು ನೀನೇ ಬಿಡಿಸಿಕೊ; ಎದೆಯನ್ನು ಉಕ್ಕುಮಾಡಿಕೊ;

ನಿನ್ನ ಐಶ್ವರ್ಯವನ್ನು ಹುಡುಕು. ಶೂರನಾದ ಊರ್ಜಿತ ಸತ್ತ್ವನಾದ, ಸಿಂಹವಿಕ್ರಾಂತಗಾಮಿಯಾದ ರಾಜನ ವಿಷಯದಲ್ಲಿ ಅವನು ಮರಣವನ್ನು ಹೊಂದಿದರೂ ಪ್ರಜೆಗಳು ಸಂತೋಷಪಡುವರು.'' ಹೀಗೆಂದ ತಾಯಿಗೆ ಆ ಮಗನು, ''ನಾನು ಸತ್ತರೂ ತಪ್ಪಿಲ್ಲವೆಂದು ನೀನು ಹೇಳುತ್ತಿದೀಯಲ್ಲ. ನಿನ್ನ ಕಣ್ಣಿಂದ ನಾನು ಮರೆಯೇ ಆದರೆ ತಾಯಾದ ನಿನಗೆ ಸರ್ವ ಪೃಥಿವಿಯಿಂದ ಏನು ಸುಖ ಉಳಿದೀತು? ಆಭರಣದಿಂದ, ಭೋಗದಿಂದ, ಜೀವಿಸಿರುವುದರಿಂದ, ಏನು ಸುಖ ಕಂಡೀತು?'' ಎಂದು ಕೇಳಿದನು. ತಾಯಿ ಹೇಳಿದಳು: ''ಸತ್ತರೂ ಒಳಿತು ಎಂದರೆ ಸಾಯಿ ಎಂದಲ್ಲ. ಗೆಲ್ಲಬೇಕು; ಬಾಳಬೇಕು. ಲೋಕ ಅರಸನೊಂದಿಗೆ ಸುಖವಾಗಿ ಬಾಳಬೇಕು.

ಯಮಾಜೀವಂತಿ ಪುರುಷಂ ಸರ್ವಭೂತಾನಿ ಸಂಜಯ,
ಪಕ್ವಂ ದ್ರುಮಮಿವಾಸಾದ್ಯ ತಸ್ಯ ಜೀವಿತಮರ್ಥವತ್.

*            *

ಸ್ವ ಬಾಹುಬಲಮಾಶ್ರಿತ್ಯ ಯೋಽಭ್ಯುಜ್ಜೀವತಿ ಮಾನವಃ
ಸಲೋಕೇ ಲಭತೇ ಕೀರ್ತಿಂ ಪರತ್ರಚ ಶುಭಾಂ ಗತಿಮ್.

ಹಣ್ಣಿಂದ ತುಂಬಿರುವ ಮರವನ್ನು ಹೇಗೊ ಹಾಗೆ ಯಾವ ಮನುಷ್ಯನನ್ನು ಜನರು ಆಶ್ರಯಿಸಿ ಸುಖಿಸುತ್ತಾರೊ ಅವನು ನಿಜವಾಗಿ ಜೀವಿಸುತ್ತಿರುವನು. ತನ್ನ ಬಾಹುಬಲವನ್ನಾಶ್ರಯಿಸಿ ಯಾವನು ಅಭ್ಯುಜ್ಜೀವಿಸುತ್ತಾನೆಯೊ ಅವನು ಇಹದಲ್ಲಿ ಕೀರ್ತಿಯನ್ನೂ ಪರದಲ್ಲಿ ಸದ್ಗತಿಯನ್ನೂ ಪಡೆಯುತ್ತಾನೆ.

ಯೋ ಹಿ ತೇಜೋ ಯಥಾಶಕ್ತಿ ನ ದರ್ಶಯತಿ ವಿಕ್ರಮಾತ್
ಕ್ಷತ್ರಿಯೋ ಜೀವಿತಾಕಾಂಕ್ಷೀ ಸ್ತೇನ ಇತ್ಯೇವ ತಂ ವಿದುಃ.

*            *            *

ನಾಮ ವಿಶ್ರಾವ್ಯ ವೈ ಸಂಖ್ಯೇ ಶತ್ರೂನಾಹೂಯ ದಂಶಿತಾನ್
ಸೇನಾಗ್ರಂವಾಽಪಿ ವಿದ್ರಾವ್ಯ ಹತ್ವಾ ವಾ ಪುರುಷಂ ವರಂ
ಯದೈವ ಲಭತೇ ವೀರಃ ಸಯುದ್ಧೇನ ಮಹದ್ಯಶಃ
ತದೈವ ಪ್ರವ್ಯಥಂತೇಽಸ್ಯ ಶತ್ರವೋ ವಿನಮಂತಿ ಚ.

ಯಾವ ಕ್ಷತ್ರಿಯನು ಪ್ರಾಣದ ಮೇಲಣ ಆಸೆಯಿಂದ ಪರಾಕ್ರಮಪೂರ್ವಕ ಆದಷ್ಟು ತೇಜಸ್ಸನ್ನು ಪ್ರದರ್ಶಿಸದೆ ಇರುತ್ತಾನೆ, ಅವನನ್ನು

ಜೀವಗಳ್ಳನೆಂದು ತಿಳಿಯಬೇಕು. ಇಂಥ ನಾನು ಬರುತ್ತಿದೇನೆಂದು ತನ್ನ ಹೆಸರನ್ನು ಕೂಗಿಹೇಳಿ ಶತ್ರುಗಳನ್ನು ಯುದ್ಧಕ್ಕೆ ಕರೆದು ಸೇನೆಯನ್ನು ಮುಂದಕ್ಕೆ ನುಗ್ಗಿಸಿ ವಿರೋಧಿಯನ್ನು ಕೊಂದು ಯಾವಾಗ ಒಬ್ಬನು ವೀರನಾಗಿ ಮಹದ್ಯಶವನ್ನು ಪಡೆಯುತ್ತಾನೆ, ಆಗಲೆ ಅವನ ಶತ್ರುಗಳು ದುಃಖಿಸುತ್ತಾರೆ; ಅವನಿಗೆ ಬಗ್ಗುತ್ತಾರೆ.

ಯದಿ ತ್ವಾಮನುಪಶ್ಯಾಮಿ ಪರಸ್ಯ ಪ್ರಿಯವಾದಿನಂ
ಪೃಷ್ಠತೋನುವ್ರಜಂತಂ ವಾ ಕಾ ಶಾಂತಿಃ ಹೃದಯಸ್ಯಮೇ
ನಾಸ್ಮಿನ್ ಜಾತು ಕುಲೇ ಜಾತೋ ಗಚ್ಛೇದ್ಯೋನ್ಯಸ್ಯ ಪೃಷ್ಠತಃ ;
ನತ್ವಂ ಪರಸ್ಯಾನುಚರಃ ತಾತ ಜೀವಿತುಮರ್ಹಸಿ.

* * *

ಉದ್ಯಚ್ಛೇದೇವ ನ ನಮೇತ್ ಉದ್ಯಮೋಹ್ಯೇವ ಪೌರುಷಂ ;
ಅಪ್ಯಪರ್ವಣಿ ಭಜ್ಯೇತ ನನಮೇತೇ ಹ ಕಸ್ಯಚಿತ್.

ಹಗೆಗೆ ರುಚಿಸುವ ಮಾತನ್ನಾಡುವ ಅಥವಾ ಅವನ ಹಿಂಬಾಲಕನಾಗಿ ನಡೆಯುವ ನಿನ್ನನ್ನು ನೋಡಿ ನಾನು ಹೇಗೆ ಸಮಾಧಾನವಾಗಿರಲಿ? ಈ ಕುಲದಲ್ಲಿ ಹುಟ್ಟಿದ ಯಾವನಾದರೂ ಬೇರೊಬ್ಬನ ಅನುಚರನಾಗಿ ನಡೆಯಬಾರದಲ್ಲ! ಮತ್ತೊಬ್ಬರ ಹೊರೆಯನ್ನು ಹೊತ್ತುಕೊಂಡು ಜೀವಿಸುವುದು ನಿನಗೆ ತಕ್ಕುದಲ್ಲ. ತಲೆಯೆತ್ತಿರಬೇಕು; ತಲೆಬಾಗಿರ ಬಾರದು. ಉದ್ಯಮವೇ ಪೌರುಷ; ಅಕಾಲದಲ್ಲಾದರೂ ಪೌರುಷ ವನ್ನೇ ತೋರಬೇಕು. ಈ ಲೋಕದಲ್ಲಿ ಯಾರಿಗೂ ಬಾಗ[illegible]ರದು.'' ಹೀಗೆ ಬಹು ನಿಷ್ಠುರವಾಗಿ ನುಡಿದ ತಾಯನ್ನು ಕುರಿತು ಸಂಜಯನು, ''ಅಮ್ಮಾ, ನಿನ್ನ ಹೃದಯ ಕೃಷ್ಣಾಯಸದಿಂದ ನಿರ್ಮಿತವಾದಂತಿದೆ. ನನ್ನ ತಾಯಿ ನೀನು ನಿಷ್ಕರುಣಿ. ವೈರಪ್ರಜ್ಞೆ, ಅಮರ್ಷಿಣಿ. ನಾನು ನಿನಗೆ ಒಬ್ಬನೇ ಮಗ. ನನಗೆ ಇಂಥ ಮಾತನ್ನು ಹೇಳುತ್ತೀಯಲ್ಲ. ಇದರಿಂದ ಕ್ಷತ್ರಿಯತನವೆನ್ನುವುದು ಎಷ್ಟು ಕ್ರೂರವಾದದ್ದೆನ್ನುವುದು ಕಾಣುತ್ತದೆ,'' ಎಂದನು. ಸಂಜಯನಿಗೆ ಸಾವಿನ ಭಯ ಬದುಕುವ ಆಸೆ ಇವುಗಳಿಂದ, ಕ್ಷತ್ರಿಯ ಧರ್ಮವೇ ತಪ್ಪೆಂದು ಕಂಡಿತು, ಅದನ್ನು ತನಗೆ ಜ್ಞಾಪಕ ಹೇಳಿದ ತಾಯಿ ಮಾತೆಯ ಧರ್ಮಕ್ಕೆ ವಿರೋಧವಾಗಿ ನಡೆಯುತ್ತಿದಾಳೆ ಎಂದು ತೋರಿತು. ವಿದುಲಾದೇವಿ ಮಗನಿಗೆ,

"ಅಪ್ಪ, ಕ್ಷತ್ರಿಯನಾದ ನೀನು ಯುದ್ಧಕ್ಕೆ ಹಿಂಜರಿದು ಅಪಕೀರ್ತಿಗೆ ಪಕ್ಕಾಗುವಾಗ ನಾನು ನಿನ್ನನ್ನು ತಿದ್ದದೆ ಬಿಟ್ಟರೆ ಆ ನನ್ನ ವಾತ್ಸಲ್ಯ ಒಂದು ತಾಯಿಕತ್ತೆಯ ವಾತ್ಸಲ್ಯ ಎನಿಸಿಕೊಂಡೀತು. ಮಾಡಬೇಕಾದ ಕೆಲಸವನ್ನು ಮಾಡದವರು, ನಿಂದಿತವಾದದ್ದನ್ನು ಮಾಡುವವರು, ಇವರು ಇಹದಲ್ಲಿಯೂ ಸುಖವನ್ನು ಪಡೆಯಲಾರರು, ಪರದಲ್ಲಿಯೂ ಸುಖವನ್ನು ಪಡೆಯಲಾರರು. ಇವರು ಪುರುಷಾಧಮರು. ಕ್ಷತ್ರಿಯನು ಯುದ್ಧಕ್ಕಾಗಿ ಸೃಷ್ಟಿಯಾಗಿದ್ದಾನೆ; ಜಯಕ್ಕಾಗಿ ಸೃಷ್ಟಿಯಾಗಿದ್ದಾನೆ. ಪ್ರಜಾಪರಿಪಾಲನಕ್ಕಾಗಿ ಕ್ರೂರವಾದ ಕರ್ಮವನ್ನು ಮಾಡಲು ಅವನು ಸೃಷ್ಟಿಯಾಗಿದ್ದಾನೆ. ಜಯಿಸಿದರೂ ಸರಿ, ಯುದ್ಧದಲ್ಲಿ ಸತ್ತರೂ ಸರಿ, ಅವನು ಇಂದ್ರಲೋಕವನ್ನು ಪಡೆಯುತ್ತಾನೆ. ಸ್ವಲ್ಪ ಸುಖಕ್ಕಾಗಿ ಹಾತೊರೆಯುವವನು ಆ ಸುಖ ಕಷ್ಟವಾದದ್ದನ್ನು ಕಾಣುವನು," ಎಂದಳು. ಮಗನು ಮತ್ತೆ ತಾಯಿಗೆ, "ತಾಯಾದ ನೀನು ಕರುಣೆಯಿಂದ ನಡೆದುಕೊಳ್ಳುವುದು ಮೊದಲ ಕೆಲಸ," ಎಂದನು. ಆ ತಾಯಿ, "ನಾನು ಏನು ಮಾಡಬೇಕೆಂದು ನನಗೆ ನೀನು ತೋರಿಸುತ್ತಿರುವೆ. ಇದು ಬಹು ಒಳ್ಳೆಯದು; ಆದರೆ, ವಿಚಿತ್ರವಾಗಿದೆ. ನಾನೂ ಹಾಗೆಯೇ ನೀನು ಮಾಡಬೇಕಾದ ಕೆಲಸವನ್ನು ನಿನಗೆ ಹೇಳುತ್ತಿದೇನೆ. ಅದನ್ನು ನೀನು ಮಾಡು; ಆಗ ನಾನು ನಿನ್ನನ್ನು ಕರುಣೆಯಿಂದ ಕಾಣುತ್ತೇನೆ," ಎಂದಳು. ಇಷ್ಟು ಮಾತನ್ನು ಕೇಳಿದ ಮೇಲೆ ಸಂಜಯನಿಗೆ ಇವಳಿಂದ ತಪ್ಪಿಸಿಕೊಳ್ಳುವುದು ಸುಲಭವಲ್ಲ ಎನ್ನಿಸಿತು. ಅವನು, "ನನಗೆ ಜನ ಸಹಾಯವಿಲ್ಲ. ಹೇಗೆ ಯುದ್ಧಮಾಡಲಿ? ಶತ್ರುಗಳನ್ನು ಗೆಲ್ಲುವ ಉಪಾಯ ಏನಾದರೂ ಇದ್ದರೆ ಹೇಳು. ಪರಿಣತ ಪ್ರಜ್ಞಳಾದ ನಿನ್ನ ಮಾತಿನಂತೆ ನಡೆದುಕೊಳ್ಳುತ್ತೇನೆ," ಎಂದನು. ಈ ಮಾತಿನಲ್ಲಿ ಇದ್ದ ಕೊಂಕಿಗೆ ಆ ತಾಯಿ ಹೀಗೆಂದಳು. "ಜಯವಾಗುವುದೆಂದು ತಿಳಿದ ಮೇಲೆ ಕೆಲಸಮಾಡುವೆನೆನ್ನುವೆಯಾ? ಯಾವ ಕೆಲಸಕ್ಕೂ ಫಲ ಎಂದೂ ಅನಿಶ್ಚಯ. ಕೆಲಸ ಮಾಡಬೇಕು; ಫಲ ಬರಬಹುದು, ಬರದೆ ಹೋಗಬಹುದು. ಫಲ ಅನಿಶ್ಚಯವೆಂಬ ಕಾರಣದಿಂದ ಕೆಲಸಮಾಡದೆ ಇದ್ದರೆ ಫಲ ದೊರೆಯುವುದು ಸಾಧ್ಯವೇ ಅಲ್ಲ.

ಅನಿತ್ಯಮಿತಿಜಾನಂತೋ ನ ಭವಂತಿ ಭವಂತಿ ಚ
ಅಥ ಯೇ ನೈವ ಕುರ್ವಂತೇ ನೈವ ಜಾತು ಭವಂತಿ ತೇ.

ಯಾವನು ಪ್ರಯತ್ನ ವಿಫಲವಾದೀತೆಂದು ಮೊದಲೇ ಸುಮ್ಮನಾಗುತ್ತಾನೊ ಅಂಥವನಿಗೆ ಅನುಕೂಲ ಪ್ರತಿಕೂಲ ಎರಡೂ ಒಂದೇ.

ಪ್ರಾಜ್ಞಸ್ಯ ನೃಪತೇರಾಶು ವೃದ್ಧಿರ್ಭವತಿ ಪುತ್ರಕ;
ಅಭಿವರ್ಧತಿ ಲಕ್ಷ್ಮೀಸ್ತಂ ಪ್ರಾಚೀಮಿವ ದಿವಾಕರಃ.

* * *

ಯದೈವ ಶತ್ರುಃ ಜಾನೀಯಾತ್ ಸಪತ್ನಂ ತ್ಯಕ್ತಜೀವಿತಂ
ತದೈವಾಸ್ಮಾದುದ್ವಿಜೇತ ಸರ್ಪಾದ್ವೇಶ್ಮಗತಾಮಿವ.

ಪ್ರಾಜ್ಞನಾದ ಅರಸನಿಗೆ ಬೇಗನೆಯೆ ವೃದ್ಧಿ ಉಂಟಾಗುತ್ತದೆ. ಪೂರ್ವ ದಿಕ್ಕನ್ನು ಸೂರ್ಯನು ಸೇರುವುದು ಎಷ್ಟು ನಿಜವೊ ಅಷ್ಟು ನಿಜವಾಗಿ ಲಕ್ಷ್ಮಿ ಅವನನ್ನು ಸೇರುತ್ತದೆ. ಎದುರಾಳಿ ತನ್ನ ಜೀವದಾಸೆಯನ್ನು ಬಿಟ್ಟು ಕಾದುವುದಕ್ಕೆ ನಿಂತಿದ್ದಾನೆಂದು ತಿಳಿದ ಒಡನೆಯೆ ಶತ್ರುಗಳು ಹಾವುಹೊಕ್ಕ ಮನೆಗೆ ಅಂಜುವಂತೆ ಅವನಿಗೆ ಹೆದರುತ್ತಾರೆ. ನಿನಗೆ ಏನಿದೆ ಏನಿಲ್ಲ ಇದನ್ನು ಹೊರಗೆ ತೋರಿಸಬೇಡ. ನಿನಗೆ ಧೈರ್ಯಕೆಟ್ಟಿರುವುದು ಹೊರಕ್ಕೆ ಕಂಡರೆ ನಿನ್ನ ಮಿತ್ರರು ಕೂಡ ನಿನ್ನ ಕೈಬಿಟ್ಟರು. ನಿನಗೆ ಧನಬೇಕೆ? ಅದು ಇರುವ ಸ್ಥಳವನ್ನು ಬಲ್ಲೆನು: ಒದಗಿಸುತ್ತೇನೆ, ತೆಗೆದುಕೊ. ಜನಬೇಕೆ? ಧೈರ್ಯದಿಂದ ಮುಂದೆ ನಿಲ್ಲು. ಜೊತೆಗೆಬರುವ ಜನ ಇದ್ದಾರೆ.'' ತಾಯ ಈ ಮಾತುಗಳನ್ನು ಕೇಳಿ ಧೈರ್ಯಕೆಟ್ಟಿದ್ದ ಸಂಜಯನಿಗೆ ಕೂಡ ಧೈರ್ಯಬಂದಿತು. ಅವನು ತಾಯನ್ನು ಮೆಚ್ಚಿಕೊಂಡು ಹೀಗೆಂದನು.

ತಸ್ಯಾಸ್ತ್ವೀದೃಶಕಂ ವಾಕ್ಯಂ ಶ್ರುತ್ವಾಪಿ ಸ್ವಲ್ಪ ಚೇತಸಃ
ತಮಸ್ತ್ವಪಾಗಮತ್ತಸ್ಯ ಸುಚಿತ್ರಾರ್ಥಪದಾಕ್ಷರಂ.
ಉದಕೇ ನೌರಿಯಂ ಧಾರ್ಯಾ ವಕ್ತವ್ಯಂ ಪ್ರವಣೀಮಯಾ.
ಯಸ್ಯ ಮೇ ಭವತೀ ನೇತ್ರೀ ಭವಿಷ್ಯದ್ಭೂತಿದರ್ಶಿನೀ
ಅಹಂ ಹಿ ವಚನಂ ತ್ವತ್ತಃ ಶುಶ್ರೂಷುರಪರಾಪರಂ.
ಕಿಂಚಿತ್ ಕಿಂಚಿತ್ ಪ್ರತಿವದನ್ ತೂಷ್ಣೀಮಾಸಂ ಮುಹುರ್ಮುಹುಃ.
ಅತೃಪ್ಯನ್ ಅಮೃತಸ್ಯೇವ ಕೃಚ್ಛ್ರಾಲ್ಲಬ್ಧಸ್ಯ ಬಾಂಧವಾತ್
ಉದ್ಯಚ್ಛಾಮ್ಯೇಷ ಶತ್ರೂಣಾಂ ನಿಯಮಾರ್ಥಂ ಜಯಾಯ ಚ.

ಇಷ್ಟು ಚೆನ್ನಾಗಿರುವ ಇಂಥ ವಾಕ್ಯಗಳನ್ನು ಕೇಳಿ ಯಾವ ಅಲ್ಪ ಚೇತಸ್ಸಿಗಾಗಲಿ ಅಧೈರ್ಯ ಕಳೆಯದೆ ನಿಂತೀತೆ? "ಭೂತ ಭವಿಷ್ಯತ್ತನ್ನು ತೋರಿಸಿ ಕೊಡುವ ನೀನು ನನಗೆ ಇರುವ ಕಾರಣ ನಾನು ನೀರಿನಲ್ಲಿ ಮುಳುಗಿಹೋದಂತಿರುವ ರಾಜ್ಯವನ್ನು ಉದ್ಧರಿಸಲು ಪ್ರವಣನಾಗುತ್ತೇನೆ. ನೀನು ಮಾತನಾಡುತ್ತ ಹೋದ ಹಾಗೆ ಅದನ್ನು ಕೇಳುತ್ತ ಕೇಳುತ್ತ ನನ್ನ ಮಾತು ಮೆಲ್ಲ ಮೆಲ್ಲನೆ ಕಡಮೆಯಾಯಿತು. ಕೊನೆಗೆ ನನ್ನ ಬಾಯಿ ಮುಚ್ಚಿಹೋಯಿತು. ಈ ಮಾತುಗಳನ್ನು ಕೇಳುತ್ತ ನನಗೆ ಅಮೃತ ಕುಡಿಯುವವನಂತೆ ಸಾಕು ಎನ್ನಿಸದೆ ಹೋಗಿದೆ. ಕಷ್ಟಪಟ್ಟು ಮಿತ್ರರನ್ನು ಕೂಡಿಸಿಕೊಂಡು ಶತ್ರುಗಳ ಮೇಲೆ ಬೀಳುತ್ತೇನೆ. ಅವರನ್ನು ನಿಗ್ರಹಿಸುತ್ತೇನೆ. ಜಯಿಸುತ್ತೇನೆ." ಹೀಗೆಂದು ಹೇಳಿ ಹೊರಟ ಆ ರಾಜಕುಮಾರನು ತಾಯಿ ಹೇಳಿದಂತೆ ಸರ್ವವನ್ನೂ ನಡಸಿದನು. ಮಂತ್ರಿಯಾದವನು ಶತ್ರು ಪೀಡಿತನಾದ ತನ್ನ ಅರಸನಿಗೆ ತೇಜೋವರ್ಧಕವಾದ ಈ ಇತಿಹಾಸವನ್ನು ಹೇಳಬೇಕು. ಈ ಇತಿಹಾಸಕ್ಕೆ ಜಯ ಎಂದು ಹೆಸರು. ಜಯಾಭಿಲಾಷಿಗಳಾದ ಅರಸರು ಇದನ್ನು ಕೇಳಬೇಕು. ಅವರು ಬೇಗದಲ್ಲೆ ರಾಜ್ಯವನ್ನು ಗೆಲ್ಲುವರು. ಶತ್ರುಗಳನ್ನು ಮರ್ದಿಸುವರು.

ಈ ಉಪಾಖ್ಯಾನದಲ್ಲಿ ಒಂದು ವಿಶೇಷವೇನೆಂದರೆ ಯುದ್ಧಕ್ಕೆ ಹೋದ ಸಂಜಯನು ಏನಾದನೆಂದು ಅದು ಹೇಳುವುದಿಲ್ಲ.

ಹತೋವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಂ

ಎಂದ ಗೀತೆಯ ಭಾವ ಇಲ್ಲಿ 'ಪ್ರಾಪ್ನೋತಿ ಇಂದ್ರ ಸಲೋಕತಾಂ' ಎಂಬ ಶಬ್ದಗಳಿಂದ ಪ್ರಕಟವಾಗಿದೆ. ಧೈರ್ಯದಿಂದ ಶತ್ರುವನ್ನು ತಾಗಿದ ಕ್ಷತ್ರಿಯನಿಗೆ ಜಯ ಹೊರತು ಬೇರೆಯ ಪರಿಣಾಮ ಸಾಧ್ಯವಲ್ಲ. ಗೆದ್ದನೇ ಇಂದ್ರನಿಗೆ ಸಮನಾಗಿ ಭೂಮಿಯನ್ನು ಆಳುತ್ತಾನೆ; ಸತ್ತನೇ ಇಂದ್ರನಿಗೆ ಸಮನಾಗಿ ಸ್ವರ್ಗದಲ್ಲಿ ಬಾಳುತ್ತಾನೆ.

ವೀರಮಾತೆ ಕುಂತಿ ಮಗನಿಗೆ ಹೇಳಿಕಳುಹಿಸಿದ ಸಂದೇಶದ ಈ ಉಪಾಖ್ಯಾನ ಭಾರತದ ಒಳತಿರುಳು ಎಂದು ಹೇಳಿದ್ದಾಗಿದೆ. ಈ ಕಥೆ ಯುಧಿಷ್ಠಿರನಿಗಾಗಲಿ ಉಳಿದ ಅಂದಿನ ರಾಜರಿಗಾಗಲಿ ಹೊಸತಾಗಿರಲಾರದು. ಇದನ್ನೂ ಇಂಥ ನೂರು ಕಥೆಯನ್ನೂ ಕೇಳಿ ಇದ್ದದರಿಂದಲೆ

ಭೀಮಾರ್ಜುನ ನಕುಲ ಸಹದೇವರು, ಸುಯೋಧನ ದುಶ್ಶಾಸನ ಕರ್ಣ ಅಭಿಮನ್ಯು ಲಕ್ಷ್ಮಣರು, ಸಾವು ಎಂದರೆ ಅಷ್ಟು ಸದರ ಎಂಬಂತೆ ನಡೆದು ಕೊಂಡರು. ಇಲ್ಲಿ ಈ ಕಥೆಗೆ ಅದನ್ನು ಹೇಳಿ ಕಳುಹಿಸಿದ ತಾಯ ದೆಸೆ ಯಿಂದ, ಅದನ್ನು ಕೇಳಿದ ಮಗನ ದೆಸೆಯಿಂದ, ವಿಶೇಷ ಪ್ರಾಮುಖ್ಯ ಬರುತ್ತದೆ. ಯುಧಿಷ್ಠಿರನು ಸಂಜಯನಂತೆ ಹೇಡಿತನದಿಂದ ಯುದ್ಧಕ್ಕೆ ಹಿಂಜರಿಯುತ್ತಿರಲಿಲ್ಲ; ಧರ್ಮಕ್ಕೆ ಕಟ್ಟುಬಿದ್ದು ಅತಿ ಸಹನೆಯಿಂದ ನಡೆದು ಕೊಳ್ಳುತ್ತಿದ್ದನು. ಕ್ಷತ್ರಿಯನಿಗೆ ಶಾಂತಿ ಧರ್ಮ; ಆದರೆ ಆ ಶಾಂತಿ ಅಭಿಭವದಿಂದ ದೊರೆಯುವುದಾದರೆ ಅದು ಧರ್ಮವಲ್ಲ. ಆಗ ಅವನಿಗೆ ಯುದ್ಧಧರ್ಮ. ಇದು ಧರ್ಮ ಎನ್ನುವುದನ್ನು ಧರ್ಮರಾಯನಿಗೆ ತಿಳಿಸುವುದು ಆವಶ್ಯಕವೆಂದು ಕುಂತಿಗೆ ಕಂಡಿತು. ಕೃಷ್ಣನು ಇದನ್ನು ಅವನಿಗೆ ಹೇಳಿರಬೇಕು. ಹೀಗೆ ಅದನ್ನು ಕೇಳಿದಕಾರಣದಿಂದಲೊ ಬೇರೆ ಕಾರಣದಿಂದಲೊ ಇಲ್ಲವೆ ಈ ಆ ಎಲ್ಲ ಕಾರಣಗಳಿಂದಲೊ ಯುದ್ಧ ಹೊರತು ಬೇರೆದಾರಿ ಇಲ್ಲ ಎಂದು ಕಂಡಾಗ ಯುಧಿಷ್ಠಿರನು ಯುದ್ಧ ವನ್ನೇ ನಿಶ್ಚಯಿಸಿದನು. ಹೀಗೆ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಈ ಉಪಾಖ್ಯಾನ ಅವನ ಜೀವನ ಪಥವನ್ನು ನಿರ್ಧರಿಸಿತು.

೯

## ನಳ ಹರಿಶ್ಚಂದ್ರ ಸಾವಿತ್ರೀ ಉಪಾಖ್ಯಾನಗಳು

ಹೀಗೆ ಯುಧಿಷ್ಠಿರನ ಜೀವನವನ್ನು ನಿರ್ಧರಿಸಿದ ಇನ್ನು ಕೆಲವು ಉಪಾಖ್ಯಾನಗಳು ಮಹಾಭಾರತದಲ್ಲಿ ಅಲ್ಲಲ್ಲಿ ಬರುತ್ತವೆ. ಯುಧಿಷ್ಠಿರನ ಜೊತೆಗೆ ಅವನ ತಮ್ಮಂದಿರೂ ಅವನ ಹೆಂಡತಿಯೂ ಈ ಉಪಾಖ್ಯಾನ ಗಳನ್ನೆಲ್ಲಾ ಕೇಳಿರಬೇಕು; ಅವರ ಮನಸ್ಸುಗಳ ಮೇಲೂ ಇವುಗಳ ಪರಿಣಾಮ ಆಗಿರಬೇಕು. ಭಾರತ ಗ್ರಂಥದ ನೀತಿಯ ಕಲ್ಪನೆ ಎಂಥದು ಎಂದು ತಿಳಿಯುವುದಕ್ಕೆ ಈ ಉಪಾಖ್ಯಾನಗಳು ಉತ್ತಮ ಸಾಮಗ್ರಿ. ಪಾಂಡವ ಸೋದರರ ಮತ್ತು ಪ್ರತಿಪಕ್ಷದ ನಾಯಕರ, ಹಾಗೆಯೇ ಶ್ರೀ ಕೃಷ್ಣನ, ಬಲರಾಮನ, ವ್ಯಕ್ತಿಚಿತ್ರಗಳನ್ನು ಪರಿಶೀಲಿಸುವ ಮೊದಲು ಈ ಆಖ್ಯಾನಗಳನ್ನು ಪಾಠಮಾಡುವುದು ಉಚಿತವಾಗಿದೆ.

ಇವುಗಳಲ್ಲಿ ಮೊದಲನೆಯುದು ನಳೋಪಾಖ್ಯಾನ. ನಿಷಧದೇಶಾಧಿಪತಿ ವೀರಸೇನ ರಾಜನ ಮಗ ನಳ ಎಂಬ ಹೆಸರಿನ ಒಬ್ಬ ದೊರೆ ಇದ್ದನು. ಅವನು ಬಹು ರೂಪವಂತನು. ಚೇದಿದೇಶದ ಭೀಮ ಭೂಪಾಲನ ಮಗಳು ದಮಯಂತಿ ಅಗ್ಗ ಬಹು ಚೆಲುವೆ ಎಂದು ಹೆಸರಾದ ತರುಣಿ. ನಳನು ದಮಯಂತಿಯ ಸಂಗತಿಯನ್ನು ತಿಳಿದು, ದಮಯಂತಿ ನಳನ ಸಂಗತಿಯನ್ನು ಕೇಳಿ, ಇವರಲ್ಲಿ ಪರಸ್ಪರ ಅನುರಾಗಹುಟ್ಟಿತು. ಭೀಮ ಭೂಪಾಲನು ಮಗಳ ಸ್ವಯಂವರವನ್ನು ಏರ್ಪಡಿಸಿದನು. ಅದಕ್ಕೆ ನಳನೂ, ಇಂದ್ರ ಮೊದಲಾಗಿ ಐವರು ದೇವತೆಗಳೂ, ಬಹುದೇಶಗಳ ಅನೇಕ ಅರಸರೂ ಬಂದರು. ದೇವತೆಗಳು ನಳನನ್ನು ದಾರಿಯಲ್ಲೇ ಕಂಡು, "ದಮಯಂತಿ ನಮ್ಮಲ್ಲಿ ಒಬ್ಬರನ್ನು ವರಿಸುವಂತೆ ನೀನೆ ಅವಳಿಗೆ ಹೇಳು," ಎಂದು ಅವನನ್ನು ಒತ್ತಾಯಪಡಿಸಿದರು. ನಳನಿಗೆ ಇದು ಇಷ್ಟವಿಲ್ಲ; ಆದರೆ ದೇವತೆಗಳ ಮಾತನ್ನು ಮೀರಲಾರದೆ ಅವನು ಈ ಕೆಲಸವನ್ನು ಮಾಡಿದನು. ದಮಯಂತಿ ಅವನ ಈ ವರ್ತನೆಯನ್ನು ಮೆಚ್ಚಲಿಲ್ಲ: "ನಾನು ನಿನ್ನನ್ನು, ನೀನು ನನ್ನನ್ನು ಒಲಿದಿರುವಲ್ಲಿ ಹೆರವರ ಮಾತು ನಮಗೇಕೆ?" ಎಂದಳು. ಸ್ವಯಂವರದ ವೇಳೆ ದೇವತೆಗಳು ನಳನಂತೆಯೆ ಆಕಾರವನ್ನು ವಹಿಸಿ ಅವನ ಪಕ್ಕದಲ್ಲೆ ಕುಳಿತರು. ದಮಯಂತಿ ಒಂದೆ ರೂಪದಿಂದ ಕಂಡ ಆರು ಜನರನ್ನು ನೋಡಿ ಕ್ಷಣಕಾಲ ಭ್ರಾಂತಳಾದಳು; ಮತ್ತೆ ಯೋಚಿಸಿ ಕಣ್ಣ ಎವೆಯಿಂದ, ಮೈಯ್ಯ ಬೆವರಿಂದ, ಮಾನವನನ್ನು ಗುರುತುಹಿಡಿದು ಅವನನ್ನು ವರಿಸಿದಳು. ದೇವತೆಗಳು ಇದನ್ನು ತುಂಬ ಮೆಚ್ಚಿಕೊಂಡರು; ಸುಖವಾಗಿರಿ ಎಂದು ಅವರನ್ನು ಹರಸಿ ತಮ್ಮ ನೆಲೆಯನ್ನು ಸಾರಿದರು. ತರುಣ ದಂಪತಿಗಳು ಸುಖವಾಗಿ ಬಾಳಿದರು. ದಮಯಂತಿ ಇಬ್ಬರು ಮಕ್ಕಳನ್ನು ಹಡೆದಳು. ಇಷ್ಟುಹೊತ್ತಿಗೆ ನಳನ ಜೀವನದಲ್ಲಿ ಕಲಿ ಪ್ರವೇಶಿಸಿದನು. ಅವನ ಜ್ಞಾತಿ ಸೋದರ ಪುಷ್ಕರನೆಂಬವನು ಬಂದು ಅವನನ್ನು ಜೂಜಿಗೆ ಕರೆದನು. ಜೂಜಿನಲ್ಲಿ ನಳನು ತನ್ನ ರಾಷ್ಟ್ರ ಮೊದಲಾಗಿ ಸಮಸ್ತ ಐಶ್ವರ್ಯವನ್ನೂ ಪುಷ್ಕರನಿಗೆ ಸೋತನು; ದೇಶಭ್ರಷ್ಟನಾಗಿ ಹೆಂಡತಿಯೊಡನೆ ವನವನ್ನು ಸಾರಿದನು. ವನಕ್ಕೆ ಹೊರಡುವ ಮೊದಲು ದಮಯಂತಿ ಮಕ್ಕಳನ್ನು

ತಂದೆಯ ಮನೆಗೆ ಕಳುಹಿಸಿದಳು. ವನದಲ್ಲಿ ಅಲೆಯುತ್ತ ನಳನು ಹೊನ್ನ ಗರಿಯ ಹಕ್ಕಿ ಕೆಲವನ್ನು ಕಂಡು ಅವುಗಳನ್ನು ಹಿಡಿಯಲು ಅವುಗಳ ಮೇಲೆ ತನ್ನ ವಸ್ತ್ರವನ್ನು ಬೀಸಿದನು; ಅವು ಆ ವಸ್ತ್ರವನ್ನು ಹೊತ್ತು ಕೊಂಡೇ ಹಾರಿಹೋದುವು. ನಳನಿಗೆ ಬೇರೆ ವಸ್ತ್ರವಿರಲಿಲ್ಲ; ಅವನು ಹೆಂಡತಿಯ ಸೀರೆಯ ಸೆರಗನ್ನು ಮೈಗೆ ಸುತ್ತಿಕೊಂಡು ನಡೆಯಬೇಕಾ ಯಿತು. ಆ ರಾತ್ರಿ ಇವರು ಒಂದು ಕಡೆ ಮಲಗಿದರು. ನಳನು ಅರ್ಧ ರಾತ್ರಿಯಲ್ಲಿ ಎದ್ದನು; ಹೆಂಡತಿಯ ಸೀರೆಯನ್ನು ಕತ್ತರಿಸಿ ತಾನು ಉಟ್ಟಿದ್ದ ಭಾಗವನ್ನು ಬೇರೆ ಮಾಡಿಕೊಂಡನು; ಅವಳನ್ನು ನಿದ್ರೆಯಲ್ಲಿ ಬಿಟ್ಟು ತನ್ನ ಪಾಡಿಗೆ ನಡೆದನು. ದಾರಿಯಲ್ಲಿ ಅವನನ್ನು ಕರ್ಕೋಟಕ ನೆಂಬ ಒಂದು ಹಾವು ಕಡಿಯಿತು; ಅವನ ರೂಪವೇ ಮಾರ್ಪಟ್ಟು ಹೋಯಿತು. ಅವನು ಅಲ್ಲಿಂದ ಮುಂದೆ ನಡೆದು ಋತುಪರ್ಣರಾಜನ ಪುರವನ್ನು ಹೊಕ್ಕನು; ಅಡಿಗೆಯಲ್ಲಿ, ಕುದುರೆಗಳನ್ನು ನೋಡಿಕೊಳ್ಳು ವುದರಲ್ಲಿ, ವಿಶೇಷ ಬುದ್ಧಿ ಉಳ್ಳವನೆಂದು ತಿಳಿಸಿ ಆ ರಾಜನ ಸೇವೆಯಲ್ಲಿ ನಿಂತನು. ಅಲ್ಲಿ ಅವನಿಗೆ ಬಾಹುಕ ಎಂದು ಹೆಸರು. ಇತ್ತ ದಮಯಂತಿ ನಿದ್ರೆಯಲ್ಲಿ ಎಚ್ಚತ್ತು ದೊರೆ ತನ್ನನ್ನು ತೊರೆದುಹೋದದ್ದನ್ನು ಕಂಡು ದುಃಖಪಟ್ಟಳು. ಕಾಡಿಗೆ ಹೊರಡುವ ಮೊದಲು ನಳನು ಅವಳಿಗೆ ವಿದರ್ಭ ದೇಶಕ್ಕೆ ಹೋಗುವ ದಾರಿಯನ್ನು ವಿವರಿಸಿದ್ದನು. ಅವಳು, "ನನ್ನನ್ನು ತೊರೆದು ಹೋಗಲು ಬಯಸುವೆಯಾ? ನಾನು ಇದಕ್ಕೆ ಒಪ್ಪುವುದಿಲ್ಲ," ಎಂದಳು. ಅವನು, "ನಾನು ನಿನ್ನನ್ನು ಬಿಟ್ಟೇನೆ?" ಎಂದು ಉತ್ತರ ಕೊಟ್ಟಿದ್ದನು. ದಮಯಂತಿ, "ಹಾಗಾದರೆ ವಿದರ್ಭದೇಶದ ದಾರಿಯನ್ನು ತಿಳಿಸಿದೆಯೇತಕ್ಕೆ? ನಾನು ನಿನ್ನನ್ನು ಬಿಟ್ಟಿರಲಾರೆನು," ಎಂದು ಹೇಳಿ ದ್ದಳು. ಈಗ ಅದೇ ಪ್ರಿಯನು ಇವಳನ್ನು ಕೈಬಿಟ್ಟಿದ್ದನು. ದಮಯಂತಿ ಕೆಲವು ದಿನ ಅಲೆದಳು; ಒಂದು ರಾಜನಗರಿಗೆ ಬಂದಳು. ಪತಿವಿಯೋಗ ದಿಂದ, ವನಸಂಚಾರದಿಂದ, ನಿರಾಶೆಯ ಜೀವನದಿಂದ, ಅವಳು ಮಲಿನ ಳಾಗಿದ್ದಳು. ಊರ ಮಕ್ಕಳು ಇವಳನ್ನು ಹುಚ್ಚಿ ಎಂದು ತಿಳಿದು ಇವಳ ಸುತ್ತ ನೆರೆದು ಗದ್ದಲ ಮಾಡುತ್ತ ನಡೆದರು. ಅರಮನೆಯ ಮುಂದೆ ಬಂದಾಗ ರಾಜಕುಮಾರಿ ಉಪ್ಪರಿಗೆಯಿಂದ ಈ ಗದ್ದಲವನ್ನು ನೋಡಿ,

ಸೇವಕನನ್ನು ಕೊಟ್ಟುಕಳುಹಿಸಿ ದಮಯಂತಿಯನ್ನು ಒಳಕ್ಕೆ ಕರಸಿಕೊಂಡಳು; ಅವಳೂ ಅವಳ ತಾಯೂ ಅವಳನ್ನು ಯಾರೊ ಅನಾಥೆಯೆಂದು ಕನಿಕರದಿಂದ ನೋಡಿಕೊಂಡರು. ಮಗಳು ಅಳಿಯ ಕಾಡಿಗೆ ಹೋದರೆಂದು ಭೀಮನೃಪಾಲನು ಅವರನ್ನು ಹುಡುಕುವುದಕ್ಕೆ ದೇಶದ ಮೇಲೆಲ್ಲ ಬ್ರಾಹ್ಮಣರನ್ನು ಕಳುಹಿಸಿದನು. ಅವರಲ್ಲಿ ಒಬ್ಬನು ದಮಯಂತಿ ಇದ್ದ ಊರಿಗೆ ಬಂದು ಅವಳನ್ನು ಅರಮನೆಯಲ್ಲಿ ನೋಡಿ ಗುರುತಿಸಿದನು. ಆ ಊರ ರಾಣಿ ದಮಯಂತಿಯ ತಾಯ ತಂಗಿ. ಅವಳಿಂದ ಸತ್ಕಾರ ಪಡೆದು ದಮಯಂತಿ ತಂದೆಯ ನಗರಕ್ಕೆ ಬಂದಳು. ನಳನು ಏನಾದನೆಂದು ಹುಡುಕುವುದಕ್ಕೆ ಬೇರೆಯ ಜನರನ್ನು ಒಡನೆಯೇ ಅಟ್ಟಿದರು. ಹೋದ ಕಡೆಯಲ್ಲೆಲ್ಲ ಇವರು, "ನಂಬಿದ ಹೆಂಡತಿಯನ್ನು ಕಾಡಿನಲ್ಲಿ ಒಬ್ಬಳನ್ನೇ ಬಿಟ್ಟು ಕದ್ದು ಓಡುವವರುಂಟೆ?" ಎಂದು ಪ್ರಶ್ನೆ ಕೇಳಬೇಕು; ಈ ಮಾತು ಅನ್ವಯಿಸುವ ನಳನು ಅದಕ್ಕೆ ಏನಾದರೂ ಉತ್ತರಕೊಡುವನು; ಅವನ ಉತ್ತರ ಬೇರೆಯ ಜನರ ಉತ್ತರದಿಂದ ಬೇರೆಯಾಗಿರಬೇಕು. ಇದು ದಮಯಂತಿಯ ಊಹೆ. ಇದಕ್ಕೆ ತಕ್ಕಂತೆ ಋತುಪರ್ಣನ ನಗರಿಗೆ ಬಂದ ದೂತನು ಈ ಮಾತನ್ನಾಡಿದಾಗ ಬಾಹುಕನು ಅವನಿಗೆ ಆ ಮಾತಿಗೆ ಅನ್ವಯಿಸುವ ಉತ್ತರವನ್ನು ಕೊಟ್ಟನು. ಆ ದೂತನು ಬಂದು ದಮಯಂತಿಗೆ ಅದನ್ನು ತಿಳಿಸಿದನು. ಆ ಮಾತನ್ನಾಡಿದ ಮನುಷ್ಯನು ನಳನಿರಬೇಕೆಂದು ದಮಯಂತಿಗೆ ತೋರಿತು. ಆದರೆ, ಅವನ ರೂಪ ಚರ್ಯೆಗಳ ವರ್ಣನೆ ನಳನಿಗೆ ಹೊಂದುವುದಾಗಿರಲಿಲ್ಲ. ಆವಳು ಅವನನ್ನು ತನ್ನ ನಗರಕ್ಕೆ ಬರಮಾಡಬೇಕೆಂದು, "ಪತಿ ನಷ್ಟನಾದದ್ದರಿಂದ ದಮಯಂತಿ ಮತ್ತೆ ಸ್ವಯಂವರವನ್ನು ಸಂಕಲ್ಪಿಸಿದ್ದಾಳೆ; ಅದು ಇಂತಹ ದಿವಸ; ಅದಕ್ಕೆ ಋತುಪರ್ಣರಾಜನು ಬರಬೇಕು," ಎಂದು ಒಂದು ಆಹ್ವಾನವನ್ನು ಕಳುಹಿಸಿದಳು. ದೂತನು ಈ ಸಂಗತಿಯನ್ನು ತಿಳಿಸಿದಾಗ ಸ್ವಯಂವರ ಗೊತ್ತಾಗಿರುವುದು ಮಾರನೆಯ ದಿನವೇ ಎಂದು ಹೇಳಿದನು. ಅವಕಾಶ ಸಾಲದಲ್ಲ, ಹೇಗೆ ಹೋಗುವುದು, ಎಂದು ಋತುಪರ್ಣನು ಯೋಚಿಸುತ್ತಿರುವಲ್ಲಿ ಬಾಹುಕನು ಅಶ್ವಹೃದಯವನ್ನು ಬಲ್ಲವನಾದ್ದರಿಂದ ಆ ಅಲ್ಪಾವಕಾಶದಲ್ಲಿಯೇ ಅವನನ್ನು ವೈದರ್ಭಪುರಿಗೆ

ಕರೆದುಕೊಂಡು ಹೋಗುತ್ತೇನೆ ಎಂದು ತಿಳಿಸಿದನು. ಋತುಪರ್ಣನು ಬಾಹುಕನೊಡನೆ ರಥದಲ್ಲಿ ಹೊರಟನು. ದಾರಿಯಲ್ಲಿ ಋತುಪರ್ಣನು ಬಾಹುಕನಿಗೆ ಅಕ್ಷಶಾಸ್ತ್ರದ ಗುಟ್ಟನ್ನು ತಿಳಿಸಿ ಅವನಿಂದ ತಾನು ಅಶ್ವಶಾಸ್ತ್ರದ ಗುಟ್ಟನ್ನು ಕಲಿಯಲು ಒಪ್ಪಿದನು. ವಿದರ್ಭಪುರಿಗೆ ಬಂದಮೇಲೆ ದಮಯಂತಿ ಕೇಶಿನಿ ಎಂಬ ತನ್ನ ಸೇವಕಿಯೊಡನೆ ತನ್ನ ಇಬ್ಬರು ಮಕ್ಕಳನ್ನು ಬಾಹುಕನ ಬಳಿಗೆ ಕಳುಹಿಸಿದಳು; ಅವನು ಅವರನ್ನು ಎತ್ತಿಕೊಂಡು ಕಣ್ಣೀರು ಸುರಿಸಿದ್ದನ್ನು ನೋಡಿದಳು. ದಮಯಂತಿಗೆ ಇವನು ನಳನೇ ಹೌದು ಎಂದು ನಿಶ್ಚಯವಾಯಿತು. ಆದರೆ ರೂಪುಬೇರೆ. ಅವಳು ತಂದೆ ತಾಯಂದಿರ ಅಪ್ಪಣೆಯನ್ನು ಪಡೆದು ನಳನನ್ನು ಹತ್ತಿರಕ್ಕೆ ಬರಮಾಡಿಕೊಂಡಳು. "ಅರಣ್ಯದಲ್ಲಿ ಮಲಗಿದ್ದ ಹೆಂಡತಿಯನ್ನು ಒಂಟಿಯಾಗಿ ಬಿಟ್ಟು ಹೊರಟುಹೋದ ಒಬ್ಬ ಧರ್ಮಜ್ಞ ನನ್ನು ನೀನು ಬಲ್ಲೆಯಾ? ನಳನೊಬ್ಬನಲ್ಲದೆ ಬೇರೆ ಯಾರು ಹೀಗೆ ಮಾಡಿ ಯಾರು? ನಾನು ದೇವತೆಗಳನ್ನು ನಿರಾಕರಿಸಿ ಅವನನ್ನು ವರಿಸಿದೆನು. ಅವನು ಅಗ್ನಿಸಾಕ್ಷಿಕವಾಗಿ 'ನಾನು ನಿನ್ನನ್ನು ಬಿಡುವುದಿಲ್ಲ' ಎಂದು ನನ್ನನ್ನು ಸ್ವೀಕರಿಸಿದನು. ಆ ವಚನ ಏನಾಯಿತು?" ಎಂದಳು. ನಳನು, "ದೇವಿ ನಾನು ಇದು ಯಾವುದನ್ನೂ ನನ್ನ ಇಚ್ಛೆಯಿಂದ ಮಾಡಿದವನಲ್ಲ. ನಾನು ಕಲಿಯ ಅಧೀನದಲ್ಲಿದ್ದೆನು. ಆ ಕಾಲದಲ್ಲಿ ನನ್ನಿಂದ ಇದೆಲ್ಲ ನಡೆದುಹೋಯಿತು. ಈಗ ಕಲಿ ನನ್ನನ್ನು ಬಿಟ್ಟನು. ಇನ್ನು ಮೇಲೆ ನಾನು ಸರಿಯಾಗಿ ನಡೆದುಕೊಳ್ಳುತ್ತೇನೆ. ಆದರೆ ನೀನು ಎಂತಹ ಕೆಲಸ ಮಾಡಿಬಿಟ್ಟೆ? ಗಂಡ ನಷ್ಟವಾದನೆಂದು ಮತ್ತೊಂದು ಸ್ವಯಂವರವನ್ನು ಪತಿವ್ರತೆಯಾದ ಹೆಂಗಸು ಮಾಡಬಹುದೆ?" ಎಂದನು. ದಮಯಂತಿ ಸ್ವಯಂವರದ ಮಾತು ಅವನನ್ನು ಬರಮಾಡುವುದಕ್ಕಾಗಿ ಕಲ್ಪಿಸಿದ್ದು ಎನ್ನುವುದನ್ನು ವಿವರಿಸಿದಳು. ಸ್ವಯಂವರದ ದಿನ ಬಂದರೂ ಋತುಪರ್ಣನು ಹೊರತು ಯಾರೂ ಬಂದಿರಲಿಲ್ಲ. ಅರಮನೆಯಲ್ಲಿ, ಊರಿನಲ್ಲಿ, ಯಾವುದೇ ಉತ್ಸವದ ಲಕ್ಷಣಗಳು ಕಾಣುತ್ತಿರಲಿಲ್ಲ. ದಮಯಂತಿಯ ಮಾತು ನಿಜವೆಂದು ನಳನಿಗೆ ಕಂಡಿತು; ದೇವತೆಗಳು ಅವಳು ಪತಿವ್ರತೆ ಎಂದು ನಿಶ್ಚಯವನ್ನು ನುಡಿದರು. ನಳನು

ದಮಯಂತಿಯನ್ನು ಒಪ್ಪಿಕೊಂಡನು; ಋತುಪರ್ಣನಿಗೆ ಎಲ್ಲ ಸಂಗತಿ ಯನ್ನೂ ತಿಳಿಸಿ ಅವನಿಗೆ ಅಶ್ವವಿದ್ಯೆಯನ್ನು ಹೇಳಿಕೊಟ್ಟು ತನ್ನ ದೇಶಕ್ಕೆ ಹೋಗಿ ಪುಷ್ಕರನನ್ನು ಮತ್ತೆ ಜೂಜಿಗೆ ಕರೆದನು. ಋತುಪರ್ಣನಿಂದ ಅಕ್ಷವಿದ್ಯೆಯನ್ನು ಕಲಿತಿದ್ದ ಬಲದಿಂದ ಜೂಜಿನಲ್ಲಿ ಪುಷ್ಕರನನ್ನು ಸೋಲಿಸಿ ರಾಜ್ಯವನ್ನು ಮತ್ತೆ ಪಡೆದನು. ಪುಷ್ಕರನು ತನ್ನ ವಿಷಯಕ್ಕೆ ತಪ್ಪಿನಡೆದಿದ್ದ ನಾದರೂ ನಳನು ಅವನನ್ನು ಮನ್ನಿಸಿ ಅವನು ಜ್ಞಾತಿಯಾದದ್ದರಿಂದ ರಾಜ್ಯದ ಸ್ವಲ್ಪ ಭಾಗವನ್ನು ಅವನಿಗೆ ಉಚಿತವಾಗಿಕೊಟ್ಟು 'ಬದುಕಿಕೊ' ಎಂದು ಹರಸಿದನು.

ನಳನು ಜೂಜಿನಲ್ಲಿ ರಾಷ್ಟ್ರವನ್ನು ಕಳೆದುಕೊಂಡನೆನ್ನುವುದು ಹೊರ ತಾಗಿ ಯುಧಿಷ್ಠಿರನ ಚರಿತೆಗೂ ಇವನ ಕಥೆಗೂ ಸಾಮ್ಯವಿಲ್ಲ. ಆದರೆ ಈ ಕಥೆ ಒಂದು ನಯವಂತ ಜನಾಂಗದ ಜೀವನದ ಸ್ವರೂಪವನ್ನು ಬಹು ಸುಂದರವಾಗಿ ಚಿತ್ರಿಸುತ್ತದೆ. ಇದರಲ್ಲಿ ಬರುವ ಜನರು ಒಂದು ಹಿರಿಯ ಸಂಸ್ಕೃತಿಯನ್ನು ಬೆಳೆಸಿಕೊಂಡಿದ್ದವರು. ಇದರ ಗಂಡು ಹೆಣ್ಣಿನ ಸಂಬಂಧದ ಕಲ್ಪನೆ ಬಹು ಪರಿಷ್ಕೃತವಾದದ್ದು; ದಾಂಪತ್ಯವನ್ನು ಕುರಿತ ಕಲ್ಪನೆ ಉನ್ನತವಾದದ್ದು. ಕಥೆಯನ್ನು ಕೇಳುವ ಕಾಲಕ್ಕೆ ಯುಧಿಷ್ಠಿರ ನಿಗೆ ಇದರಿಂದ ಸಮಾಧಾನ ಎಷ್ಟಾದರೂ ಆಗದಿದ್ದರೂ ನಳನ ಉದಾತ್ತ ಗುಣವೊಂದು ಮನಗಂಡಿರಬೇಕು. ತನಗೆ ಕೇಡು ಮಾಡಿದ್ದ ಪುಷ್ಕರನ ಮೇಲೆ ಆ ಮಹಾರಾಯನು ಸೇಡು ತೀರಿಸಿಕೊಳ್ಳಲಿಲ್ಲ. ತಪ್ಪುಮಾಡಿದ್ದವ ನನ್ನು ಮನ್ನಿಸಿದನು; ಅವನನ್ನು ತಮ್ಮನೆಂದು ಕರೆದು ಅವನಿಗೆ ರಾಜ್ಯ ವನ್ನು ಕೊಟ್ಟನು; ತನ್ನ ಹಿರಿಯತನವನ್ನು ಮೆರೆದನು. ಯುಧಿಷ್ಠಿರನಿಗೆ ಸ್ವಭಾವತಃ ಇದೇ ಮನೋಧರ್ಮ ಇದ್ದಿತು. ಈ ಕಥೆಯನ್ನು ಕೇಳಿ ಅದು ಪರಿಪುಷ್ಟವಾಗಿದ್ದಿರಬೇಕು.

ವನಪರ್ವದಲ್ಲಿ ಬರುವ ಮತ್ತೊಂದು ಇಂಥ ಕಥೆ ಹರಿಶ್ಚಂದ್ರನನ್ನು ಕುರಿತದ್ದು. ಹರಿಶ್ಚಂದ್ರನು ಸತ್ಯಪ್ರತಿಜ್ಞ ಎಂದು ಕೀರ್ತಿಯನ್ನು ಪಡೆದಿ ದ್ದನು. ಇಂದ್ರಲೋಕದಲ್ಲಿ ಭೂಲೋಕದ ರಾಜರ ಸತ್ಯದ ವಿಷಯ ಪ್ರಶಂಸೆಗೆ ಬಂದು, ವಿಶ್ವಾಮಿತ್ರನು 'ಸತ್ಯವಂತನೆಂಬವನು ಒಬ್ಬನೂ ಇಲ್ಲ' ಎಂದು ರಾಜರನ್ನು ಸಮುದಾಯತ್ವೇನ ಜರೆದನು. ಹರಿಶ್ಚಂದ್ರನ

ಕುಲಪುರೋಹಿತನಾದ ವಸಿಷ್ಠನು ಹರಿಶ್ಚಂದ್ರನು ಸತ್ಯವಂತನೆಂದೂ ಯಾವ ನಷ್ಟವನ್ನಾದರೂ ಅನುಭವಿಸಿ ಸತ್ಯವನ್ನು ಅನುಷ್ಠಾನಮಾಡುವವ ನೆಂದೂ ಶಪಥಮಾಡಿದನು. ವಿಶ್ವಾಮಿತ್ರನು ಆ ರಾಜನನ್ನು ಸತ್ಯದಿಂದ ಬೀಳುವಂತೆ ಮಾಡುವೆನು ಎಂದು ಪ್ರತಿಜ್ಞೆಮಾಡಿದನು. ವಸಿಷ್ಠನು ಹರಿಶ್ಚಂದ್ರನಿಗೆ ಈ ಸಂಗತಿಯನ್ನು ತಿಳಿಸಿ, ''ವಿಶ್ವಾಮಿತ್ರನ ಬಳಿಗೆ ಹೋಗಬೇಡ, ಎಚ್ಚರದಿಂದಿರು,'' ಎಂದು ಮೊದಲೇ ಜಾಗ್ರತೆ ಹೇಳಿ ದನು. ರಾಜ್ಯವನ್ನು ನೋಡಿಕೊಳ್ಳುವ ಕೆಲಸದಲ್ಲಿ ಆದರ ಒಂದು ಭಾಗಕ್ಕೆ ಹೋಗದೆ ಇರುವುದು ಹರಿಶ್ಚಂದ್ರನಿಗೆ ಆಗಲಿಲ್ಲ. ಅವನು ಒಂದುದಿನ ತನಗೇ ತಿಳಿಯದೆ ವಿಶ್ವಾಮಿತ್ರನ ಆಶ್ರಮವನ್ನು ಹೊಕ್ಕನು. ಅಲ್ಲಿ ಇವನಿಗೆ ಆ ಋಷಿಯೊಂದಿಗೆ ಹೆಚ್ಚುಕಡಮೆಯ ಮಾತು ನಡೆಯಿತು. ಬಾಯಿಂದ ಬಂದ ಒಂದು ಮಾತನ್ನು ಹಿಡಿದುಕೊಂಡ ಋಷಿ ಇವನಿಂದ ಇವನ ರಾಷ್ಟ್ರವನ್ನೆಲ್ಲ ಕಸಿದುಕೊಂಡನು; ಮೇಲೆ ದಕ್ಷಿಣೆ ಒಂದು ಬರಬೇಕಾಗಿದೆ, ಅದನ್ನೂ ಕೊಡು, ಎಂದು ನಿಷ್ಠುರಮಾಡಿದನು. ಹರಿಶ್ಚಂದ್ರನು ರಾಣಿ ಚಂದ್ರಮತಿ, ಒಬ್ಬನೇ ಮಗ ಎಳೆಯ ಲೋಹಿತಾಶ್ವ, ಇವರೊಂದಿಗೆ ರಾಜ್ಯವನ್ನು ಬಿಟ್ಟು, ದಕ್ಷಿಣೆಯ ಧನವನ್ನು ಸಂಪಾದಿಸಿ ಕೊಡುವುದಾಗಿ ಮಾತುಕೊಟ್ಟು ದೇಶಾಂತರ ಹೊರಟನು; ಕಾಶಿಯನ್ನು ಸೇರಿದನು; ಹೆಂಡತಿಯನ್ನು ಒಬ್ಬ ಬ್ರಾಹ್ಮಣನ ಮನೆಯಲ್ಲಿ ಕೆಲಸಕ್ಕೆ ಇಟ್ಟು ತಾನು ಆ ಊರ ಚಂಡಾಲನಿಗೆ ದಾಸನಾಗಿರಲು ಒಪ್ಪಿ, ಹೀಗೆ ಬಂದ ಹಣದಿಂದ ದಕ್ಷಿಣೆಯ ಸಾಲವನ್ನು ತೀರಿಸಿದನು. ರಾಣಿಯಾದ ಚಂದ್ರಮತಿ ಬ್ರಾಹ್ಮಣನ ಮನೆಯ ಪರಿಚಾರಿಕೆಯಾಗಿ ತುಂಬ ಕಷ್ಟ ಪಟ್ಟಳು; ಆದರೆ ಎಲ್ಲವನ್ನೂ ಸಹಿಸಿದಳು. ಅವಳ ಮಗನು ಬ್ರಾಹ್ಮಣನ ಮನೆಯ ದೇವರ ಪೂಜೆಗಾಗಿ ಹೂ ತುಳಸಿಯನ್ನು ತರುವನು. ಒಂದು ದಿನ ಲೋಹಿತಾಶ್ವನನ್ನು ಒಂದು ಹಾವು ಕಡಿಯಿತು; ಅವನು ತೀರಿ ಕೊಂಡನು. ಚಂದ್ರಮತಿ ದಿನದ ಕೆಲಸವನ್ನು ಮುಗಿಸಿ ಕಠಿಣಳಾದ ಬ್ರಾಹ್ಮಣಿಯ ಅಪ್ಪಣೆಯನ್ನು ಪಡೆದು ರಾತ್ರಿಯಲ್ಲಿ ಮಗನ ಶವಕ್ಕೆ ಸಂಸ್ಕಾರಮಾಡಲು ಹೊರಟಳು; ಕಳೇಬರವನ್ನು ತೆಗೆದುಕೊಂಡು ಶ್ಮಶಾನಕ್ಕೆ ಹೋದಳು. ಶ್ಮಶಾನದಲ್ಲಿ ಚಂಡಾಲನ ದಾಸನಾಗಿ

ಹರಿಶ್ಚಂದ್ರನು ಕಾವಲಿದ್ದನು; ಶ್ಮಶಾನಭೂಮಿಯ ಸುಂಕವನ್ನು ಕೊಟ್ಟು ಕಳೇಬರಕ್ಕೆ ಅಂತ್ಯಕ್ರಿಯೆಯನ್ನು ಮಾಡು ಎಂದು ನಿಯಮಿಸಿದನು. ಮೊದಲು ಇವರಿಗೆ ಒಬ್ಬರೊಬ್ಬರ ಗುರುತು ಸಿಕ್ಕಲಿಲ್ಲ; ಆಮೇಲೆ ತಿಳಿಯಿತು. ಶ್ಮಶಾನದ ಸುಂಕವನ್ನು ಕೊಡದೆ ಕರ್ಮಮಾಡುವಂತೆ ಇಲ್ಲವಾಗಿ ಅದಕ್ಕೆ ಬೇಕಾದ ಹಣವನ್ನು ತರಲು ಚಂದ್ರಮತಿ ಮನೆಗೆ ಹೊರಟಳು. ದಾರಿಯಲ್ಲಿ ಒಬ್ಬ ಹುಡುಗನನ್ನು ಯಾರೊ ಕಳ್ಳರು ಹಿಡಿದಿದ್ದು ಕಾವಲಜನ ಬಂದ ಕಾರಣದಿಂದ ಅವನನ್ನು ಬಿಟ್ಟು ಓಡಿದರು. ಆ ಸಮಯಕ್ಕೆ ಸರಿಯಾಗಿ ಚಂದ್ರಮತಿ ಅಲ್ಲಿದ್ದಳು. ಹುಡುಗನನ್ನು ಕದ್ದವಳು ಇವಳೇ ಇರಬೇಕೆಂದು ಕಾವಲಜನ ಅವಳನ್ನು ಹಿಡಿದು ಕೊಂಡರು. ಹುಡುಗನ ಮೈಮೇಲಿದ್ದ ಒಡವೆಗಳ ಆಸೆಯಿಂದ ಇವಳು ಅವನನ್ನು ಕದ್ದಳೆಂದು ನಿರ್ಣಯವಾಗಿ ಇವಳಿಗೆ ಮರಣದಂಡನೆ ನಿಶ್ಚಿತ ವಾಯಿತು. ಸೇವಕರು ಅಪರಾಧಿನಿಯ ತಲೆಯನ್ನು ಕಡಿಸುವುದಕ್ಕೆ ಅವಳನ್ನು ಶ್ಮಶಾನ ಭೂಮಿಗೆ ಕರೆದೊಯ್ದರು. ಹೆಂಡತಿಯ ತಲೆಯನ್ನು ಕಡಿಯುವುದು ಹರಿಶ್ಚಂದ್ರನ ಕರ್ತವ್ಯವಾಗಿ ಒದಗಿತು. ಸತ್ತಿರುವ ಮಗನ ಹೆಣ ಪಕ್ಕದಲ್ಲಿ ಬಿದ್ದಿತ್ತು; ಮರಣದಂಡನೆಗೆ ಗುರಿಯಾಗಿ ಪ್ರಿಯೆಯಾದ ಪತ್ನಿ ತನ್ನ ಕೈಯ ಕತ್ತಿಯ ಪೆಟ್ಟಿಗೆ ಸಿದ್ಧವಾಗಿ ನಿಂತಿದ್ದಳು: ರಾಜನ ಮನಸ್ಸು ಕರ್ತವ್ಯದ ನೆಲೆಯಿಂದ ಒಂದು ಎಳೆ ಕದಲಲಿಲ್ಲ. ಅವನು ಕತ್ತಿಯನ್ನು ಎತ್ತಿದನು. ವಿಶ್ವಾಮಿತ್ರನು ಆಗ ಬಂದು ಅವನು ಸತ್ಯದಿಂದ ಕದಲಿದರೆ ಹೆಂಡತಿ ಮಕ್ಕಳು ಬದುಕುವರು, ತಾನು ರಾಜ್ಯವನ್ನು ಬಿಟ್ಟುಕೊಡುವೆನು, ಎಂದು ಆಸೆತೋರಿಸಿದನು. ಹರಿಶ್ಚಂದ್ರನು ತನ್ನ ದಾರಿಯಿಂದ ಅಲುಗಲಿಲ್ಲ. ಹೆಂಡತಿಯ ತಲೆಯನ್ನು ಕಡಿಯಲು ಮತ್ತೆ ಕತ್ತಿಯನ್ನು ಎತ್ತಿದನು. ಇಂಥ ವಿಷಮಪರಿಸ್ಥಿತಿ ಯಲ್ಲಿ ಕೂಡ ಅಚಲನಾಗಿ ನಿಂತ ಅವನ ಸತ್ಯನಿಷ್ಠೆಗೆ ಮೆಚ್ಚಿ ದೇವತೆ ಗಳು ಪ್ರತ್ಯಕ್ಷರಾದರು; ಇದೆಲ್ಲ ಪರೀಕ್ಷೆಗಾಗಿ ನಡೆದದ್ದೆಂದು ತಿಳಿಸಿದರು; ಲೋಹಿತಾಶ್ವನನ್ನು ಬದುಕಿಸಿಕೊಟ್ಟರು. ವಿಶ್ವಾಮಿತ್ರನೂ ದೊರೆಯನ್ನು ಮೆಚ್ಚಿಕೊಂಡನು; ಅವನ ರಾಜ್ಯವನ್ನು ಅವನಿಗೆ ಕೊಟ್ಟು, ಸುಖವಾಗಿ ಬಾಳು, ಎಂದನು. ಹರಿಶ್ಚಂದ್ರನು ಬಹುಕಾಲ ಸುಖವಾಗಿ

ರಾಜ್ಯವಾಳಿದನು. ಸತ್ಯಸಂಧನೆಂದು ಮೂರು ಲೋಕದಲ್ಲಿ ಖ್ಯಾತನಾದನು.

ಸತ್ಯ ಪರಿಪಾಲನ, ಸ್ವಧರ್ಮನಿಷ್ಠೆ, ಮನುಷ್ಯನಲ್ಲಿ ಉತ್ತಮ ಗುಣಗಳು ಎನ್ನುವುದನ್ನು ಪ್ರತಿಪಾದಿಸುವ ಈ ಕಥೆ ಸ್ವಲ್ಪ ಕೃತಕವಾಗಿದೆ. ನಳೋಪಾಖ್ಯಾನದಲ್ಲಿ ಕಾಣುವ ನಯವೂ ಇದರಲ್ಲಿ ಕಾಣುವುದಿಲ್ಲ. ಆದರೂ ಇದು ಪ್ರತಿಪಾದಿಸುವ ಧರ್ಮ ಭಾರತ ಗ್ರಂಥದ ಮೂಲದಲ್ಲಿ ಸೇರಿದ್ದೇ. "ಸತ್ಯಾನ್ನಾಸ್ತಿ ಪರೋಧರ್ಮಃ."

ವನಪರ್ವದಲ್ಲಿ ಬರುವ ಮತ್ತೊಂದು ಉಪಾಖ್ಯಾನ ಸಾವಿತ್ರಿಯನ್ನು ಕುರಿತದ್ದು. ಸಾವಿತ್ರಿ ಮದ್ರದೇಶಾಧಿಪತಿಯ ಮಗಳು; ಸಾವಿತ್ರೀ ದೇವಿಯ ವರದಿಂದ ಅವನು ಅವಳನ್ನು ಪಡೆದನು. ಪ್ರಾಪ್ತವಯಸ್ಕಳಾಗಿ ಇವಳು ಒಬ್ಬ ಪುರುಷನನ್ನು ಪತಿಯಾಗಿ ವರಿಸಲು ಹೊರಟು, ರಾಜ್ಯಭ್ರಷ್ಟನಾಗಿ ಅರಣ್ಯದಲ್ಲಿದ್ದ ದ್ಯುಮತ್ಸೇನನೆಂಬ ಅರಸನ ಮಗನನ್ನು ವರಿಸಿದಳು. ಮಾತಾಪಿತೃಗಳ ಸೇವೆಯಲ್ಲಿ ಪುಣ್ಯವನ್ನು ಗಳಿಸುತ್ತಿದ್ದ ಆ ರಾಜಕುಮಾರ ಇವಳನ್ನು ಒಪ್ಪಿಕೊಂಡನು. ಈ ಸಂಗತಿ ತಿಳಿದು ನಾರದನು ಸಾವಿತ್ರಿಗೆ, "ಸತ್ಯವಂತನಿಗೆ ಬಹು ಅಲ್ಪ ಆಯುಸ್ಸು; ನೀನು ಅವನನ್ನು ಮದುವೆಯಾಗುವುದು ಬೇಡ," ಎಂದು ಎಚ್ಚರಿಕೆ ಹೇಳಿದನು. ಸಾವಿತ್ರಿ, "ಒಂದು ಮಾತು ಕೊಟ್ಟಮೇಲೆ ಮತ್ತೆ ಮಾತು ಆಡುವರುಂಟೆ? ಏನು ಬರುವುದಿದ್ದರೂ ಸತ್ಯವಂತನೇ ನನಗೆ ಪತಿ," ಎಂದಳು. ಮದುವೆಯಾಯಿತು; ಸಾವಿತ್ರಿ ಅತ್ತೆಮಾವಂದಿರ ಆಶ್ರಮವನ್ನು ಸೇರಿದಳು; ಗಂಡನೊಂದಿಗೆ ಅವರ ಶುಶ್ರೂಷೆಯನ್ನು ಮಾಡಿದಳು. ಗಂಡನು ಸಾಯುವುದೆಂಬ ದಿನಕ್ಕೆ ಮೂರುದಿನ ಹಿಂದಿನಿಂದ ಅನಶನ ವ್ರತವನ್ನು ನಡಸಿದಳು; ಅವನ ಆಯುಸ್ಸು ಮುಗಿಯುವುದಾಗಿದ್ದ ದಿನ ಅವನೊಡನೆ ಕಾಡಿಗೆ ಹೋದಳು. ಸತ್ಯವಾನನ ಜೀವವನ್ನು ಕೊಂಡು ಹೋಗಲು ಯಮನು ಬಂದನು. ಸಾವಿತ್ರಿ ತನ್ನ ತಪೋಬಲದಿಂದ ಯಮದೇವನನ್ನು ಕಂಡಳು; ತನ್ನ ಗಂಡನನ್ನು ಉಳಿಸಿಕೊಡಬೇಕೆಂದು ಅವನನ್ನು ಬೇಡಿಕೊಂಡಳು. ಅವನು ಒಪ್ಪಲಿಲ್ಲ: ಸತ್ಯವಂತನ ಜೀವವನ್ನು ಸೆಳೆದುಕೊಂಡು ತನ್ನ ಲೋಕಕ್ಕೆ ಹೊರಟನು. ಸಾವಿತ್ರಿ ಜೊತೆಗೇ

ಹೋದಳು. ಯಮನು ಅವಳನ್ನು ತಡೆದನು; "ಸತ್ತವನೊಂದಿಗೆ ಜೀವವುಳ್ಳವಳು ಬರುವುದು ಹೇಗೆ, ನಿಲ್ಲು," ಎಂದನು. ಸಾವಿತ್ರಿ ಒಪ್ಪಲಿಲ್ಲ. "ನಿನ್ನಂಥ ಪುಣ್ಯಸತ್ತ್ವನೊಂದಿಗೆ ನಡೆಯುವುದು ನನಗೆ ಒಳ್ಳೆಯದು," ಎಂದು ಮುಂತಾಗಿ ತನ್ನ ಎಳೆತನದ ಮುದ್ದಿನ ರೀತಿ ಯಿಂದ ಅವನಲ್ಲಿ ಬಿನ್ನಹಮಾಡಿಕೊಂಡಳು. ಅವಳ ಮಾತು, ಅವಳ ರೀತಿ ಸಾವಿನ ದೇವರಿಗೆ ಕೂಡ ಮೆಚ್ಚುಗೆಯನ್ನು ಉಂಟುಮಾಡಿದುವು. ಅವನು ಅವಳನ್ನು ಮೂರುಸಲ ನಿಲ್ಲಿಸಲು ನೋಡಿ, ಅವಳು ಮೂರುಸಲ ಅವನ ಮಾತನ್ನು ಮೀರಿ ಜೊತೆಗೇ ನಡೆದು ಮುದ್ದಾಗಿ ಮಾತನಾಡಿ, ಅವನು ಸೋತನು. "ನಿನ್ನ ಮಾತಿಗೆ ಮೆಚ್ಚಿದೆನು. ಸತ್ಯವಂತನ ಜೀವವೊಂದನ್ನು ಬಿಟ್ಟು ಬೇರೆ ಏನನ್ನಾದರೂ ವರವನ್ನು ಬೇಡು, ಕೊಡು ತ್ತೇನೆ," ಎಂದನು. ಕುರುಡನಾಗಿದ್ದ ಮಾವ ದ್ಯುಮತ್ಸೇನನಿಗೆ ಕಣ್ಣು ಬರಲಿ ಎಂದು ಒಮ್ಮೆ, ರಾಜ್ಯಪ್ರಾಪ್ತಿಯಾಗಲಿ ಎಂದು ಒಮ್ಮೆ, ತನಗೆ ಮಕ್ಕಳಾಗಬೇಕೆಂದು ಒಮ್ಮೆ, ಸಾವಿತ್ರಿ ವರ ಕೇಳಿದಳು. ಯಮದೇವನು ಮೂರು ವರವನ್ನೂ ಕೊಟ್ಟನು. ಸಾವಿತ್ರಿ ಗಂಡನಿಲ್ಲದೆ ತಾನು ಮಕ್ಕಳನ್ನು ಪಡೆಯಲಾರೆನಲ್ಲ. ಸತ್ಯವಂತನನ್ನು ಉಳಿಸಿಕೊಡು ಎಂದು ಕೇಳಿ ಕೊಂಡಳು. ಯಮದೇವನು ಒಪ್ಪಿಕೊಂಡನು; ಸತ್ಯವಂತನನ್ನು ಬಿಟ್ಟು ಕೊಟ್ಟನು. ಸಾವಿತ್ರಿ ಜೀವಂತನಾದ ಗಂಡನನ್ನು ಕರೆದುಕೊಂಡು ಆಶ್ರಮಕ್ಕೆ ಹಿಂತಿರುಗಿದಳು. ದ್ಯುಮತ್ಸೇನನು ರಾಜನಾದನು; ಸತ್ಯ ವಂತನೂ ಸಾವಿತ್ರಿಯೂ ಸುಖದಿಂದ ಬಾಳಿದರು.

ಯುಧಿಷ್ಠಿರನ ಕಾಲಕ್ಕೇ ಹಳೆಯದಾಗಿದ್ದಿತೆಂಬ ಈ ಕಥೆ ಮೂಲತಃ ದಿನವನ್ನೂ ಸೂರ್ಯನನ್ನೂ ಹೆಂಡತಿ ಗಂಡ ಎಂದು ಭಾವಿಸಿ ರಚಿಸಿದ್ದೆಂದು ತಾನಾಗಿ ಸ್ಪಷ್ಟವಾಗುತ್ತದೆ. ಜನಾಂಗದ ಯಾವುದೊ ಆರಂಭದ ಸ್ಥಿತಿಯಲ್ಲಿ ಹೀಗೆ ಮೊದಲಾದ ಕಲ್ಪನೆ ಬರುಬರುತ್ತ ಪುಷ್ಟಿಗೊಂಡು ಭಾರತದ ಕಾಲಕ್ಕೆ ಅದು ಒಂದು ಸಂಕೇತದ ಕಥನ ಎಂಬುದು ಮರೆತು ಹೋಗಿತ್ತು; ಅದರ ವ್ಯಕ್ತಿಗಳು ಪಾರ್ಥಿವ ದೇಹದಿಂದ ಭೂಮಿಯ ಮೇಲೆ ನಡೆದ ಸ್ತ್ರೀ ಪುರುಷರಾಗಿ ಜನತೆಯ ಮನಸ್ಸಿನಲ್ಲಿ ನಿಂತಿದ್ದರು. ಸಾರಾಂಶದಲ್ಲಿ ಕಥೆಯ ಸಂಗತಿ ಒಂದು ಪವಾಡ. ಪತಿವ್ರತೆಯಾದ

ಹೆಂಡತಿ ನಿಶ್ಚಯವಾದ ಸಂಕಲ್ಪಮಾಡಿ ಯಮನನ್ನೂ ಗೆದ್ದು ಗಂಡನನ್ನು ಉಳಿಸಿದಳು. ಪಾತಿವ್ರತ್ಯದ ಮಹಿಮೆ ಎಷ್ಟು ಎಂದು ಹೇಳುವುದು ಕಥೆಯ ಉದ್ದೇಶವಾದದರಿಂದ ಜನತೆಯ ಮನಸ್ಸು ಪವಾಡವನ್ನು ಒಪ್ಪಿಕೊಳ್ಳುತ್ತದೆ. "ಸತ್ಯವಂತರಿಗಾಗಿ ದೈವಕೂಡ ತನ್ನ ದಾರಿಯನ್ನು ಬಿಟ್ಟು ನಡೆಯುತ್ತದೆ. ಸತ್ಯವಂತರಾಗಿ ಬಾಳಿ, ಪ್ರಯೋಜನ ಉಂಟು," ಎನ್ನುವುದು ಕಥೆಯ ಉಪದೇಶ.

## ೧೦
## ದಾಂಪತ್ಯದ ಎರಡು ಕಥೆ

ನಳೋಪಾಖ್ಯಾನದ ಪ್ರಚೋದಕ ಭಾವ ಅನುಕೂಲ ದಾಂಪತ್ಯ. ಒಲಿದ ಗಂಡು ಹೆಣ್ಣು ಗಂಡ ಹೆಂಡತಿ ಆಗಿ ಒಂದನ್ನೊಂದು ಹೇಗೆ ನೋಡಿಕೊಳ್ಳಬೇಕು? ಕಥೆ ಇದನ್ನು ಹೇಳುವುದಕ್ಕಾಗಿ ಪ್ರವೃತ್ತವಾಗಿದೆ. ಈ ವಿಷಯದಲ್ಲಿ ಭಾರತದ ಭಾವ ಏನು ಎನ್ನುವುದು ಸ್ಪಷ್ಟವಾಗುವುದಕ್ಕೆ ಇನ್ನೆರಡು ಉಪಾಖ್ಯಾನಗಳ ವಿಷಯವನ್ನು ವಿವರಿಸುವುದು ಆವಶ್ಯಕ.

ಭೃಗುಋಷಿಯ ಮೊಮ್ಮಗ ಪ್ರಮತಿ ಘೃತಾಚಿ ಎಂಬ ಅಪ್ಸರೆಯಲ್ಲಿ ರುರು ಎಂಬ ಮಗನನ್ನು ಪಡೆದನು. ಅದೇ ಕಾಲದಲ್ಲಿ ಮೇನಕೆ ವಿಶ್ವಾವಸು ಎಂಬ ಗಂಧರ್ವನಿಂದ ಪಡೆದು ತೊರೆದುಹೋದ ಪ್ರಮದ್ವರೆ ಎಂಬ ಹೆಣ್ಣುಮಗು ಒಂದು ಸ್ಥೂಲಕೇಶನೆಂಬ ಋಷಿಯ ಆಶ್ರಮದಲ್ಲಿ ಬೆಳೆಯಿತು. ರುರು ತರುಣನಾಗಿ ಪ್ರಮದ್ವರೆಯನ್ನು ನೋಡಿ ಅವಳನ್ನು ಮದುವೆಯಾಗಲು ಬಯಸಿದನು. ಸಂಬಂಧ ಗೊತ್ತಾಯಿತು; ಮದುವೆಗೆ ಒಂದು ಲಗ್ನವನ್ನಿರಿಸಿದರು. ಅಂದೇ ಪ್ರಮದ್ವರೆಯನ್ನು ಒಂದು ಹಾವು ಕಚ್ಚಿತು; ಅವಳು ಸತ್ತಳು. ಇಂಥ ಅಪಘಾತ ಆಗಿ ಮದುವೆ ತಪ್ಪಿತು ಎಂದು ಬಂದಿದ್ದ ದೊಡ್ಡವರೆಲ್ಲ ವ್ಯಥೆಪಟ್ಟರು. ರುರು ಆಶ್ರಮದ ಒಂದು ಮೂಲೆಗೆ ಹೋಗಿ ಗೋಳಾಡುತ್ತ,

"ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ
ಸಮ್ಯಗಾರಾಧಿತಾಃ ತೇನ ಸಂಜೀವತು ಮಮ ಪ್ರಿಯಾ
ಯಥಾಚ ಜನ್ಮ ಪ್ರಭೃತಿ ಯತಾತ್ಮಾಹಂ ಧೃತವ್ರತಃ
ಪ್ರಮದ್ವರಾ ತಥಾದ್ಯೈಷಾ ಸಮುತ್ತಿಷ್ಠತು ಭಾಮಿನೀ

"ನಾನು ದಾನಮಾಡಿರುವುದು, ತಪ ಮಾಡಿರುವುದು, ಹಿರಿಯರನ್ನು ಚೆನ್ನಾಗಿ ಪೂಜಿಸಿರುವುದು ಅಹುದಾದರೆ ನನ್ನ ಪ್ರಿಯೆ ಮತ್ತೆ ಬದುಕಲಿ. ನಾನು ಜನ್ಮಪ್ರಭೃತಿ ಯತಾತ್ಮನೂ ದೃಢವ್ರತನೂ ಆಗಿದ್ದೇನಾದರೆ ಪ್ರಮದ್ವರೆ ಎಂದಿನಂತೆ ತೊಳಗುತ್ತ ಎದ್ದು ನಿಲ್ಲಲಿ," ಎಂದನು. ರುರು ಶ್ರೇಷ್ಠ ತಪಸ್ವಿ; ದೇವತೆಗಳು ಇವನ ಮಾತಿಗೆ ಗಮನಕೊಡಬೇಕಾಯಿತು. ಅವರ ಒಬ್ಬ ದೂತನು ಬಂದು ಇವನಿಗೆ, "ರುರು, ನಿನ್ನ ತಪಸ್ಸು ಗುರು ಶುಶ್ರೂಷೆ ಎಲ್ಲ ನಿಜ. ಆದರೆ, ತೀರಿಕೊಂಡವಳಿಗೆ ಮತ್ತೆ ಆಯುಸ್ಸಿಲ್ಲವಲ್ಲ. ಅವಳು ಬದುಕಲೇಬೇಕೆಂದರೆ ಒಂದು ದಾರಿಯಿದೆ. ಅದು ನಿನಗೆ ಒಪ್ಪಿಗೆಯೆ ನೋಡು," ಎಂದನು. ರುರು, "ಆ ದಾರಿ ಯಾವುದು?" ಎಂದು ಕೇಳಿದನು. "ನಿನ್ನ ಆಯುಸ್ಸಿನ ಅರ್ಧವನ್ನು ನೀನು ಕನ್ನೆಗೆ ದಾನಮಾಡಿದರೆ ಅವಳು ಜೀವಂತಳಾಗಿ ಏಳುತ್ತಾಳೆ. ನಿನ್ನ ಹೆಂಡತಿ ಆಗುತ್ತಾಳೆ." ರುರು ಒಪ್ಪಿದನು; ಪ್ರಮದ್ವರೆ ಅವನ ಆಯುಸ್ಸಿನ ಅರ್ಧವನ್ನು ಪಡೆದು ಜೀವಿಸಿದಳು; ಗಂಡ ಹೆಂಡಿರಾಗಿ ಇವರು ಸುಖದಿಂದ ಬಾಳಿದರು.

ಸಾವಿತ್ರೀ ಉಪಾಖ್ಯಾನ ಹೆಂಡತಿಯಾದವಳು ಯಮನೊಡನೆ ಹೋಗಿ ಗಂಡನನ್ನು ಬದುಕಿಸಿಕೊಂಡು ಬಂದ ಕಥೆ. ಇದು ಗ್ರೀಕ್ ಸಾಹಿತ್ಯದಲ್ಲಿ ಆಲ್ಸೆಸ್ಟಿಸ್ ಎಂಬ ರಾಣಿಯ ಕಥೆಯಾಗಿ ಬೇರೆಯ ಒಂದು ರೂಪದಲ್ಲಿ ಕಾಣುತ್ತದೆ. ಗಂಡು ತನ್ನ ಆಯುಸ್ಸನ್ನು ಕೊಟ್ಟು ಹೆಂಡತಿಯನ್ನು ಬದುಕಿಸಿದ್ದೆನ್ನುವುದು ರುರುವಿನ ಕಥೆ ಒಂದರಲ್ಲಿ ಹೊರತಾಗಿ ಲೋಕದ ಸಾಹಿತ್ಯದಲ್ಲೆ ಎಲ್ಲೂ ಇರುವಂತಿಲ್ಲ. ಗಂಡಿನ ಪ್ರೇಮವನ್ನು ಕುರಿತ ಈ ಉದಾತ್ತ ಕಲ್ಪನೆ ಭಾರತಕ್ಕೆ ವಿಶೇಷವಾದದ್ದು.

ಹಕ್ಕಿಗಳನ್ನು ಕೊಲ್ಲುವ ವ್ಯಾಧನೊಬ್ಬನು ಒಂದುಸಲ ಒಂದು ಕಾಡಿನಲ್ಲಿ ಒಂದು ಮರದ ಬುಡವನ್ನು ಸೇರಿದನು. ಆಗ ಮರಗಳನ್ನು ಉರುಳಿಸುವಂಥ ವೇಗದಿಂದ ಬಿರುಸಾದ ಮಳೆಗಾಳಿಯೊಂದು ಎದ್ದಿತು. ಪಕ್ಷಿಗಳು ಗೂಡಿಂದ ಬಿದ್ದವು; ಮೃಗ ಸಿಂಹ ವರಾಹಗಳು ಬಹು ಕಷ್ಟಕ್ಕೆ ಈಡಾದುವು. ವ್ಯಾಧನು ನಿಲ್ಲಲು ಸ್ಥಳವನ್ನು ಹುಡುಕುತ್ತ ನಡೆದು ದಾರಿಯಲ್ಲಿ ನೆಲದಮೇಲೆ ಬಿದ್ದಿದ್ದ ಒಂದು ಹೆಣ್ಣು ಪಾರಿವಾಳವನ್ನು ಕಂಡನು.

ಆತ್ಮಾನಂ ಯೋ ನಸಂಧತ್ತೇ ಸೋನ್ಯಸ್ಯ ಸ್ಯಾತ್ ಕಥಂ ಹಿತಃ?

* * *

ಸ್ವಯಂ ದುಃಖಾಯ ಭೂತೋಪಿ ದುಃಖಮೇವಾಕರೋತ್ ಪರೇ

ತನ್ನ ಆತ್ಮಕಲ್ಯಾಣವನ್ನು ತಾನು ಸಾಧಿಸದವನು ಇತರರಿಗೆ ಯಾವ ಹಿತವನ್ನು ಮಾಡಬಹುದು? ತಾನು ದುಃಖದಲ್ಲಿದ್ದೂ ಕೂಡ ವ್ಯಾಧನು ಈ ಪರಜೀವಕ್ಕೂ ಕೆಡಕು ಮಾಡಿದನು; ಅದನ್ನು ಎತ್ತಿಕೊಂಡು ತನ್ನ ಪಂಜರದಲ್ಲಿ ಸೇರಿಸಿದನು. ಹಾಗೆಯೇ ಮುಂದೆ ಹೋಗಿ ಅವನು ಒಂದು ಮರದ ಕೆಳಗೆ ಕುಳಿತನು. ಇವನು ಹಿಡಿದಿದ್ದ ಕಪೋತಿಯ ಗೂಡು ಆ ಮರದ ಮೇಲೆ ಇದ್ದಿತು. ಅಲ್ಲಿ ಅದರ ಗಂಡು ಕುಳಿತು ತನ್ನ ಹೆಂಡತಿ ಬರಲಿಲ್ಲವೇ ಎಂದು ವ್ಯಾಕುಲದಿಂದ ಮಾತನಾಡಿತು.

"ಅಪಿಸ್ವಸ್ತಿ ಭವೇತ್ ತಸ್ಯಾಃ ಪ್ರಿಯಾಯಾಃಮಮ ಕಾನನೇ

"ಕಾನನದಲ್ಲಿ ನನ್ನ ಪ್ರಿಯೆಗೆ ಸದ್ಯ ಒಳ್ಳಿತಾಗಿರಲಿ.

"ತಯಾ ವಿರಹಿತಂ ಹೀದಂ ಶೂನ್ಯಮದ್ಯಗೃಹಂ ಮಮ
ಪುತ್ರ ಪೌತ್ರ ವಧೂ ಭೃತ್ಯೈಃ ಆಕೀರ್ಣಮಪಿ ಸರ್ವತಃ.
ಭಾರ್ಯಾಹೀನಂ ಗೃಹಸ್ಥಸ್ಯ ಶೂನ್ಯಮೇವ ಗೃಹಂ ಭವೇತ್;
ನಗೃಹಂ ಗೃಹಮಿತ್ಯಾಹುಃ ಗೃಹಿಣೀಗೃಹಮುಚ್ಯತೇ.
ಗೃಹಂತು ಗೃಹಿಣೀ ಹೀನಂ ಅರಣ್ಯ ಸದೃಶಂ ಮತಂ
ಯದಿ ಸಾ ರಕ್ತನೇತ್ರಾಂತಾ ಚಿತ್ರಾಂಗೀಮಧುರಸ್ವರಾ
ಅದ್ಯನಾಭ್ಯೇತಿ ಮೇಕಾಂತಾ ನಕಾರ್ಯಂ ಜೀವಿತೇನ ಮೇ

ನನ್ನ ಭಾರ್ಯೆ ಇಲ್ಲದೆ ಈ ನನ್ನ ಮನೆ ಶೂನ್ಯವಾಗಿ ಕಾಣುತ್ತಿದೆ. ಮಕ್ಕಳು ಮೊಮ್ಮಕ್ಕಳು ಸೊಸೆಯದಿರು ಸೇವಕರು ಎಲ್ಲೆಲ್ಲೂ ತುಂಬಿ ಇರಬಹುದು; ಆದರೂ ಮನೆಯ ಹೆಂಡತಿ ಇಲ್ಲದಿದ್ದರೆ ಗೃಹಸ್ಥನಿಗೆ ಆ ಮನೆ ಬರಿದೇ ಸರಿ. ಮನೆಯೆನ್ನುವುದು ಕಟ್ಟಡವಲ್ಲ; ಅದನ್ನು ಮನೆ ಎನ್ನಿಸುವ ಹೆಂಡತಿ. ಅಂತ ಹೆಂಡತಿ ಇಲ್ಲದ ಮನೆ ಎನ್ನುವುದು ಒಂದು ಕಾಡಿಗೆ ಸಮಾನ, ಹೆಚ್ಚೇನಲ್ಲ. ಕೆಂಪನೆಯ ಕಣ್ಕೊನೆಯ, ಬಣ್ಣ ದೊಡಲು ಇಂಚರದ, ನನ್ನ ಕಾಂತೆ ಈಗಲೆ ಬಂದಳೇ ಸರಿ. ಬರಲಿಲ್ಲ, ನಾನು ಬದುಕಿ ಆಗಬೇಕಾದದ್ದೇನು?"

ಕಥಕನು ತಾನು ಪಕ್ಷಿಯ ಕಥೆ ಹೇಳುತ್ತಿರುವುದನ್ನು ನೆನೆದು ರಕ್ತ ನೇತ್ರಾಂತ ಚಿತ್ರಾಂಗ ಮಧುರಸ್ವರಗಳ ಮಾತುಗಳನ್ನು ತಂದಿದ್ದಾನೆ. ಆದರೆ ಅದರ ಹಿಂದಿನ ಮಾತು ಒಂದು ಪಕ್ಷಿಯ ಮಾತು, ಪಕ್ಷಿಯನ್ನು ಕುರಿತ ಮಾತು, ಅಲ್ಲ. ಒಬ್ಬ ಸಂಸಾರಿ ಮನುಷ್ಯನ ಮಾತು; ಹೆಂಗಸನ್ನು ಕುರಿತದ್ದು. ಆ ಮಾತು ಹೀಗೆ ಮುಂದರಿಯುತ್ತದೆ:

"ನಭುಂಕ್ತೇ ಮಯ್ಯಭುಕ್ತೇಯಾ ನಾಸ್ನಾತೇ ಸ್ನಾತಿಸುವ್ರತಾ
ನಾತಿಷ್ಠತ್ಯುಪತಿಷ್ಠೇತ ಶೇತೇಚ ಶಯಿತೇ ಮಯಿ
ಹೃಷ್ಟೇ ಭವೇತ್ಸಾಹೃಷ್ಟಾ ದುಃಖಿತೇ ಮಯಿ ದುಃಖಿತಾ
ಪ್ರೋಷಿತೇ ದೀನವದನಾ ಕ್ರುದ್ಧೇಚ ಪ್ರಿಯ ವಾದಿನಿ?
ಪತಿಧರ್ಮವ್ರತಾ ಸಾಧ್ವೀ ಪ್ರಾಣೇಭ್ಯೋಪಿಗರೀಯಸೀ
ಯಸ್ಯಸ್ಯಾತ್ ತಾದೃಶೀ ಭಾರ್ಯಾ ಧನ್ಯಸ್ಸಪುರುಷೋ ಭುವಿ
ಸಾಹಿ ಶ್ರಾಂತಂ ಕ್ಷುಧಾರ್ತಂ ಚ ಜಾನೀತೇಮಾಂ ತಪಸ್ವಿನೀ
ಅನುರಕ್ತಾ ಸ್ಥಿರಾಚೈವ ಭಕ್ತಾಸ್ನಿಗ್ಧಾ ಯಶಸ್ವಿನೀ
ವೃಕ್ಷ ಮೂಲೇಪಿ ದಯಿತಾ ಯಸ್ಯ ತಿಷ್ಠತಿ ತದ್ಗೃಹಂ
ಪ್ರಾಸಾದೋಪಿ ತಯಾ ಹೀನಃ ಕಾಂತಾರ ಇತಿ ನಿಶ್ಚಿತಂ

* * *

ನಾಸ್ತಿ ಭಾರ್ಯಾ ಸಮಂ ಮಿತ್ರಂ ನರಸ್ಯಾರ್ತಸ್ಯ ಭೇಷಜಂ
ನಾಸ್ತಿ ಭಾರ್ಯಾಸಮೋಬಂಧುಃ ನಾಸ್ತಿ ಭಾರ್ಯಾ ಸಮಾಗತಿಃ

* * *

ಯಸ್ಯ ಭಾರ್ಯಾ ಗೃಹೇನಾಸ್ತಿ ಸಾಧ್ವೀ ಚ ಪ್ರಿಯವಾದಿನೀ
ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾಗೃಹಂ

"ನಾನು ಊಟಮಾಡದೆ ತಾನು ಊಟಮಾಡಳು. ನಾನು ಸ್ನಾನಮಾಡದೆ ತಾನು ಸ್ನಾನ ಮಾಡಳು. ನಾನು ಕುಳ್ಳಿರದಿದ್ದರೆ ತಾನು ಕುಳಿತಿರಳು. ನಾನು ಮಲಗಿದಮೇಲೆ ತಾನು ಮಲಗುವಳು. ಇದನ್ನು ಅವಳು ಒಂದು ವ್ರತದಂತೆ ನಡಸುತ್ತಿದ್ದಳು. ನನಗೆ ಹರ್ಷವಾಯಿತು, ತಾನು ಹೃಷ್ಟಳಾಗುವಳು. ನಾನು ದುಃಖಿಸಿದೆನು, ಅವಳೂ ದುಃಖಿ. ಎಲ್ಲಿಗೋ ಹೊರಟೆನು, ಅವಳ ಮುಖ ಸಪ್ಪಗಾಗುವುದು. ನಾನು ಕೋಪಗೊಂಡರೂ ಅವಳು ಪ್ರಿಯವಾಗಿಯೆ ನುಡಿಯುವಳು. ಪತಿಧರ್ಮವ್ರತೆಯಾದ ಸಾಧ್ವಿ ನನಗೆ ಪ್ರಾಣಕ್ಕಿಂತ ಹೆಚ್ಚಾಗಿದ್ದಳು. ಯಾವನಿಗೆ ಇಂಥ ಹೆಂಡಿರಿದಾಳೆ

ಆ ಗಂಡ ಲೋಕದಲ್ಲಿ ಉಳಿದವರಿಗಿಂತ ಹೆಚ್ಚಿನ ಭಾಗ್ಯವಂತನು. ಪತಿಗಾಗಿ ಜೀವವನ್ನು ಮೀಸಲು ಮಾಡಿದ್ದ ನನ್ನ ಕಾಂತೆ ನಾನು ದಣಿದಾಗ, ಹಸಿದಾಗ, ತಾನಾಗಿ ಅದನ್ನು ತಿಳಿಯುತ್ತಿದ್ದಳು. ಅವಳ ಒಲವು ಸ್ಥಿರ; ಅವಳ ಸ್ನೇಹ, ಅವಳ ಭಕ್ತಿ, ಹಿರಿಯುವು. ಅವು ಅವಳಿಗೆ ಯಶಸ್ಸು ತರುವಂಥವು. ಮನುಷ್ಯನು ಒಂದು ಮರದ ಬುಡದಲ್ಲಿ ವಾಸಮಾಡಲಿ, ಜೊತೆಗೆ ದಯಿತೆ ಇದ್ದರೆ ಅದೇ ಮನೆಯಾಗುತ್ತದೆ. ಇನಿಯಳಿಲ್ಲವೇ ಮಾಡದ ಮನೆಯೂ ಕಾಂತಾರವೆ, ಸಂಶಯವಿಲ್ಲ. ಮನುಷ್ಯನಿಗೆ ಹೆಂಡಿರಂಥ ಕೆಳೆ ಇಲ್ಲ; ರೋಗಿಯಾದರೆ ಅವಳಂತೆ ಒಂದು ಔಷಧವಿಲ್ಲ; ಹೆಂಡಿರಿಗೆ ಸಮನಾದ ಬೇರೆ ಬಂಧುವಿಲ್ಲ, ಬೇರೆ ದಿಕ್ಕಿಲ್ಲ. ಯಾರಿಗೆ ಸಾಧ್ವಿಯೂ ಪ್ರಿಯದರ್ಶಿನಿಯೂ ಆದ ಹೆಂಡತಿ ಮನೆಯಲ್ಲಿ ಇಲ್ಲವೊ ಅವನು ಕಾಡನ್ನು ಸೇರುವುದು ಸರಿ; ಅವನಿಗೆ ಆ ಮನೆಯೂ ಕಾಡೂ ಒಂದೇ.''

ಕೆಳಗೆ ಪಂಜರದಲ್ಲಿ ಸೆರೆಯಾಗಿ ಕುಳಿತಿದ್ದ ಹೆಣ್ಣು ಹಕ್ಕಿಗೆ ಗಂಡನ ಈ ವಿಲಾಪ ಕೇಳಿಸಿತು. ಅದು

> ''ಅಹೋ ಅತೀವ ಸುಭಾಗ್ಯಾಹಂ ಯಸ್ಯಾಮೇ ದಯಿತಃ ಪತಿಃ
> ಅಸತೋ ವಾ ಸತೋ ವಾಪಿ ಗುಣಾನೇವಂ ಪ್ರಭಾಷತೇ.
> ಸಾಹಿಸ್ತ್ರೀತ್ವಮಗಂತವ್ಯಾ ಯಸ್ಯಾ ಭರ್ತಾತು ತುಷ್ಯತಿ
> ತುಷ್ಟೇ ಭರ್ತರಿ ನಾರೀಣಾಂ ತುಷ್ಟಾಸ್ಯುಃ ಸರ್ವದೇವತಾಃ.
>
> *　　*　　*
>
> ದಾವಾಗ್ನಿನೇವ ನಿರ್ದಗ್ಧಾ ಸಪುಷ್ಪಸ್ತಬಕಾಲತಾ
> ಭಸ್ಮೀ ಭವತಿ ಸಾ ನಾರೀ ಯಸ್ಯಾಭರ್ತಾ ನ ತುಷ್ಯತಿ

''ಆಹ, ನಾನೇ ಭಾಗ್ಯವಂತಳು: ಪ್ರಿಯನಾದ ನನ್ನ ಪತಿ, ನಾನು ನಿಜವಾಗಿಯೂ ಒಳ್ಳೆಯವಳೇ ಆಗಿರಲಿ, ಆಗದೆ ಇರಲಿ, ನನ್ನ ಗುಣಗಳನ್ನು ಹೀಗೆ ಹೊಗಳುತ್ತಾನೆ. ಯಾವ ಗಂಡನು ಪತ್ನೀ ವಿಷಯಕವಾಗಿ ಹೀಗೆ ಸಂತೋಷಿಸುತ್ತಾನೆ ಅವಳೇ ಹೆಂಡತಿ ಎಂಬ ಶಬ್ದಕ್ಕೆ ಯೋಗ್ಯಳು. ಹೆಂಡಿರ ವಿಷಯದಲ್ಲಿ ಗಂಡದಿರು ಸಂತೋಷಪಟ್ಟರೆ ದೇವತೆಗಳು ಸಂತೋಷಪಡುತ್ತಾರೆ,'' ಎಂದುಕೊಂಡಿತು; ತಾನು ಬೇಡನಿಗೆ ಸೆರೆಸಿಕ್ಕಿ ಪಂಜರದಲ್ಲಿ ಇರುವುದನ್ನು ತನ್ನ ಗಂಡನಿಗೆ ತಿಳಿಸಿ,

"ಬೇಡನು ಅತಿಥಿಯಾಗಿ ಬಂದಿದ್ದಾನೆ. ಅವನಿಗೆ ಉಪಚಾರಮಾಡುವುದು ಗೃಹಸ್ಥನಾದ ನಿನ್ನ ಧರ್ಮ. ಆತಿಥ್ಯ ನೀಡಿ ಅವನನ್ನು ನೋಡಿಕೊ," ಎಂದು ಹೇಳಿತು. ಕಪೋತವು ತಾನು ಏನು ಮಾಡುವುದೆಂದು ಯೋಚಿಸಿ, ಬೇರೆ ಯಾವ ಉಪಚಾರಕ್ಕೂ ಅವಕಾಶವಿರಲಿಲ್ಲವಾಗಿ, ಮರದ ಬುಡದಲ್ಲಿ ವ್ಯಾಧನ ಪಕ್ಕದಲ್ಲಿ ಎರಡು ಕಡ್ಡಿಯನ್ನಿಟ್ಟು ಬೆಂಕಿಯನ್ನು ಹೊತ್ತಿಸಿ, "ನಾನು ಇದರಲ್ಲಿ ಬಿದ್ದು ಸಾಯುತ್ತೇನೆ. ನೀನು ನನ್ನನ್ನು ತಿನ್ನು," ಎಂದು ಅವನಿಗೆ ಹೇಳಿ ಅಗ್ನಿಪ್ರವೇಶಮಾಡಿತು. ಸೆರೆಸಿಕ್ಕಿದ್ದ ಹೆಣ್ಣು ಇದರ ಹೆಂಡಿರೆಂದು ತಿಳಿದು ವ್ಯಾಧನು ಅದನ್ನು ಪಂಜರದಿಂದ ಬಿಟ್ಟನು. ಅದು ಗಂಡನನ್ನು ಕಳೆದುಕೊಂಡು ಹೀಗೆ ದುಃಖಿಸಿತು.

"ನಾಹಂ ತೇ ವಿಪ್ರಿಯಂ ಕಾಂತ ಕದಾಚಿದಪಿ ಸಂಸ್ಮರೇ.

* * *

ಲಾಲಿತಾಹಂ ತ್ವಯಾ ನಿತ್ಯಂ ಬಹುಮಾನಾಚ್ಚ ಪೂಜಿತಾ
ವಚನೈಃ ಮಧುರೈಃ ಸ್ನಿಗ್ಧೈಃ ಅಸಂಕ್ಲಿಷ್ಟ ಮನೋಹರೈಃ;
ಕಂದರೇಷು ಚ ಶೈಲಾನಾಂ ನದೀನಾಂ ನಿರ್ಝರೇಷು ಚ
ದ್ರುಮಾಗ್ರೇಷು ಚ ರಮ್ಯೇಷು ರಮಿತಾಹಂ ತ್ವಯಾ ಸಹ;
ಆಕಾಶಗಮನೇ ಚೈವ ವಿಹೃತಾಹಂ ತ್ವಯಾ ಸುಖಂ
ರಮಾಮಿಸ್ಮ ಪುರಾ ಕಾಂತ; ತನ್ಮೇನಾಸ್ತ್ಯದ್ಯಮೇ ಪ್ರಿಯ.
ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ
ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನಪೂಜಯೇತ್.
ನಾಸ್ತಿ ಭರ್ತೃ ಸಮೋ ನಾಥೋ ನಾಸ್ತಿ ಭರ್ತೃ ಸಮಂ ಸುಖಂ
ವಿಸೃಜ್ಯ ಧನಸರ್ವಸ್ವಂ ಭರ್ತಾ ವೈ ಶರಣಂ ಸ್ತ್ರಿಯಾಃ.

"ಕಾಂತ, ನೀನು ನನಗೆ ಎಂದಾದರೂ ವಿಪ್ರಿಯ ಮಾಡಿದ್ದು ನೆನಪಿಲ್ಲ. ನೀನು ನನ್ನನ್ನು ಎಂದೂ ಲಾಲಿಸಿದೆ; ಮರ್ಯಾದೆಯಿಂದ ಸಂತೋಷ ಪಡಿಸಿದೆ. ಸ್ನೇಹದಿಂದ ಕೂಡಿದ, ನಿರಾಳವಾಗಿ ಮನೋಹರವಾದ, ಮಧುರ ವಚನಗಳಿಂದ ಶೈಲಕಂದರಗಳಲ್ಲಿ ನದೀ ನಿರ್ಝರಗಳಲ್ಲಿ ರಮ್ಯ ದ್ರುಮಾಗ್ರಗಳಲ್ಲಿ ನೀನು ನನ್ನನ್ನು ಜೊತೆಗೆ ಒಯ್ದು ಸುಖಪಡಿಸಿದೆ. ಆಕಾಶದಲ್ಲಿ ಹಾರಾಡುವುದು ನೀನು ಜೊತೆಯಲ್ಲಿ ಇದ್ದದ್ದರಿಂದ ನನಗೆ ವಿಹಾರವಾಗಿದ್ದಿತು. ನಾನು ಆಗ ಪಟ್ಟ ಸುಖ ಈಗ ಇಲ್ಲವಾಗಿದೆ.

ತಂದೆ ಮಿತವನ್ನು ಕೊಡುತ್ತಾನೆ; ಸೋದರನು ಮಿತವನ್ನೆ ಕೊಡುತ್ತಾನೆ; ಮಗನು ಕೊಡುವುದೂ ಮಿತವನ್ನೆ. ಅಮಿತವನ್ನು ಕೊಡುವವನು ಗಂಡನು. ಆದ್ದರಿಂದ ಗಂಡನನ್ನು ಯಾವ ಹೆಂಗಸು ತಾನೆ ಮರ್ಯಾದಿಸದೆಇರುವಳು? ಗಂಡನಂತೆ ನೋಡಿಕೊಳ್ಳುವವನಿಲ್ಲ; ಗಂಡನಂತೆ ಸುಖವಿಲ್ಲ; ಸ್ತ್ರೀಯಾದ ಜೀವಕ್ಕೆ ಬೇರೆ ಎಲ್ಲವನ್ನೂ ತೊರೆದು ಆಶ್ರಯಿಸಬೇಕಾದ ಆಶ್ರಯ ಗಂಡ.'' ಹೀಗೆಂದು ಅದು ಎದುರಿಗಿದ್ದ ಅಗ್ನಿಯನ್ನು ತಾನೂ ಹೊಕ್ಕುಬಿಟ್ಟಿತು. ಪುಣ್ಯಕರ್ಮದಿಂದ ಸ್ವರ್ಗ ಸೇರುವ ಅಧಿಕಾರವನ್ನು ಪಡೆದಿದ್ದ ತನ್ನ ಗಂಡನು ಒಂದು ವಿಮಾನದಲ್ಲಿ ಇದ್ದದ್ದನ್ನು ಕಂಡಿತು; ಮಹಾತ್ಮರು ಪುಣ್ಯವಂತನಾದ ಆ ತನ್ನ ಪತಿಯನ್ನು ಗೌರವಿಸುತ್ತಿರುವುದನ್ನು ಕಂಡಿತು; ತಾನು ಅದರೊಡನೆ ಸೇರಿತು. ಎರಡೂ ಸ್ವರ್ಗವನ್ನು ಸೇರಿದುವು; ಅಲ್ಲಿ ಸುಖವಾಗಿದ್ದುವು.

ವ್ಯಾಧನು ಕೂಡ ಈ ಪಕ್ಷಿಗಳ ನಡತೆಯನ್ನು ನೋಡಿ, ತನ್ನ ಜೀವನ ಎಷ್ಟು ಕುತ್ಸಿತವಾಯಿತೆಂದು ವ್ಯಥೆಪಟ್ಟು ವಿರಕ್ತನಾಗಿ ವನದಲ್ಲಿ ಅಲೆದನು. ಎದುರಿಗೆ ಒಂದು ಕಾಡುಕಿಚ್ಚು ಕಂಡಿತು. ತನ್ನ ಜನ್ಮವನ್ನು ಮುಗಿಸಿಕೊಳ್ಳಬೇಕೆಂದು ಅವನು ಅದನ್ನು ಪ್ರವೇಶಿಸಿದನು. ನಷ್ಟ ಕಲ್ಮಷನಾಗಿ ತಾನೂ ಸ್ವರ್ಗವನ್ನು ಸೇರಿದನು.

ತತ ಸ್ವದೇಹಮೋಕ್ಷಾರ್ಥಂ ಸಂಪ್ರಹೃಷ್ಟೇನ ಚೇತಸಾ
ಅಭ್ಯಧಾವತವರ್ಧಂತಂ ಪಾವಕಂ ಲುಬ್ಧಕಸ್ತದಾ.
ತತಸ್ತೇನಾಗ್ನಿನಾ ದಗ್ಧೋ ಲುಬ್ಧಕೋ ನಷ್ಟಕಲ್ಮಷಃ
ಜಗಾಮ ಪರಮಾಂ ಸಿದ್ಧಿಂ ತತೋ ಭರತಸತ್ತಮ.

## ೧೧

## ಧರ್ಮವ್ಯಾಧ

ಪತಿವ್ರತಾ ಮಾಹಾತ್ಮ್ಯವನ್ನು ವರ್ಣಿಸುವುದಕ್ಕೆಂದು ಹೊರಟು ಬಹುವಿಸ್ತಾರವಾದ ಧರ್ಮವನ್ನು ಪ್ರತಿಪಾದಿಸುವ ಮತ್ತೊಂದು ಪ್ರಸಂಗ ಧರ್ಮವ್ಯಾಧನನ್ನು ಕುರಿತದ್ದು. ವೇದಾಧ್ಯಾಯಿಯೂ ತಪೋಧನನೂ ಆದ ಕೌಶಿಕನೆಂಬ ಒಬ್ಬ ಬ್ರಾಹ್ಮಣನು ಒಂದು ದಿನ ಭಿಕ್ಷಾರ್ಥವಾಗಿ ಒಂದು ಗ್ರಾಮಕ್ಕೆ ಹೊರಟು ದಾರಿಯಲ್ಲಿ ಒಂದು ಮರದ ಕೆಳಗೆ ಕುಳಿತನು.

ಮರದ ಮೇಲೆ ಕುಳಿತಿದ್ದ ಒಂದು ಹಕ್ಕಿ ಇಚ್ಚಿಕ್ಕಿತು; ಕಸ ಇವನ ಮೇಲೆ ಬಿದ್ದಿತು. ಬ್ರಾಹ್ಮಣನು ಕೋಪದಿಂದ ಪಕ್ಷಿಯ ಕಡೆ ನೋಡಿದನು. ಅವನ ಕ್ರೋಧದ ಜ್ವಾಲೆಯಿಂದ ಹಕ್ಕಿ ಸುಟ್ಟು ಕೆಳಗೆ ಬಿದ್ದಿತು. ಕೌಶಿಕನು ಇದನ್ನು ನೋಡಿ ಮರುಕದಿಂದ ಸಂತಾಪಗೊಂಡನು; ಅಕಾರ್ಯವನ್ನು ಮಾಡಿದೆನಲ್ಲ ಎಂದು ಚಿಂತಿಸುತ್ತ ಗ್ರಾಮಕ್ಕೆ ಹೋದನು; ಒಂದು ಮನೆಯ ಮುಂದೆ ನಿಂತು, 'ದೇಹೀ' ಎಂದು ಕೂಗಿದನು. ಮನೆ ಹೆಂಗಸು ಭಿಕ್ಷೆ ತರುವುದರಲ್ಲಿ ತಡಮಾಡಿದಳು. ಅವಳು ಬಂದಾಗ ಬ್ರಾಹ್ಮಣನು, "ಇದೇನು ನೀನು ನನ್ನನ್ನು ಇಷ್ಟು ಹೊತ್ತು ನಿಲ್ಲಿಸಿದೆ," ಎಂದು ಕೋಪದಿಂದ ಕೇಳಿದನು. ಮನೆಯಾಕೆ, "ಅಯ್ಯಾ, ನನ್ನ ಜೀವನದ ದೈವ ಹಸಿದು ಬಳಲಿ ಮನೆಗೆ ಬಂದರು ಅವರ ಶುಶ್ರೂಷೆ ಮಾಡುವುದರಲ್ಲಿ ಹೊತ್ತಾಯಿತು. ನೀನು ನನ್ನನ್ನು ಕ್ಷಮಿಸಬೇಕು," ಎಂದಳು. ಬ್ರಾಹ್ಮಣನು, "ನಿನಗೆ ಬ್ರಾಹ್ಮಣನು ಹೆಚ್ಚಾಗಲಿಲ್ಲ. ನಿನ್ನ ಗಂಡನೇ ಹೆಚ್ಚಾದನು. ಗೃಹಸ್ಥ ಧರ್ಮದಲ್ಲಿ ಇರುವ ನೀನು ಬ್ರಾಹ್ಮಣ್ಯವನ್ನು ಕಡಮೆಯೆಂದು ತಿಳಿದಿದ್ದೀಯೆ. ಬ್ರಾಹ್ಮಣರಿಗೆ ಇಂದ್ರನು ಕೂಡ ಪ್ರಣಾಮ ಮಾಡುತ್ತಾನೆ. ಇನ್ನು ಮನುಷ್ಯರ ಮಾತೇನು?" ಎಂದನು. ಆಕೆ, "ನಾನು ಬ್ರಾಹ್ಮಣರನ್ನು ಕಡಮೆ ಎಂದು ತಿಳಿದಿಲ್ಲ. ಆದರೆ ನನ್ನ ಪಾಲಿಗೆ ನನ್ನ ಭರ್ತ ದೇವತೆಗಳಿಗೆ ಕೂಡ ಹೆಚ್ಚಾದ ದೈವ. ನಾನು ಎಲ್ಲಕ್ಕೂ ಮೊದಲು ಪತಿಶುಶ್ರೂಷೆಯನ್ನು ಮಾಡಬೇಕು. ನನ್ನ ಈ ಪತಿಸೇವೆಯ ಫಲ ಎಂಥದೆಂದು ಹಾಗಾದರೆ ತಿಳಿ. ನೀನ್ ಕೋಪಿಸಿಕೊಂಡು ಹಕ್ಕಿ ಸತ್ತಿತು. ಅದನ್ನು ನಾನು ಬಲ್ಲೆನು. ಅಯ್ಯಾ ದ್ವಿಜೋತ್ತಮ!

"ಕ್ರೋಧಶ್ಶತ್ರುಃ ಶರೀರಸ್ಥೋ ಮನುಷ್ಯಾಣಾಂ ದ್ವಿಜೋತ್ತಮ
ಯಃ ಕ್ರೋಧಮೋಹೌ ತ್ಯಜತಿ ತಂ ದೇವಾ ಬ್ರಾಹ್ಮಣಂ ವಿದುಃ.
ಯೋ ವದೇತಿಹ ಸತ್ಯಾನಿ ಗುರೂನ್ ಸಂತೋಷಯೇತ ಚ
ಹಿಂಸಿತಶ್ಚ ನಹಿಂಸೇತ ತಂ ದೇವಾ ಬ್ರಾಹ್ಮಣಂ ವಿದುಃ.
ಜಿತೇಂದ್ರಿಯೋ ಧರ್ಮಪರಃ ಸ್ವಾಧ್ಯಾಯನಿರತಶ್ಶುಚಿಃ
ಕಾಮಕ್ರೋಧೌ ವಶೇ ಯಸ್ಯ ತಂ ದೇವಾ ಬ್ರಾಹಣಂ ವಿದುಃ.

* * *

ಧನಂ ತು ಬ್ರಾಹ್ಮಣಸ್ಯಾಹುಃ ಸ್ವಾಧ್ಯಾಯಂ ದಮಮಾರ್ಜವಂ
ಸತ್ಯಾರ್ಜವೇ ಧರ್ಮಮಾಹುಃ ಪರಂ ಧರ್ಮವಿದೋ ಜನಾಃ
ದುರ್ಜ್ಞೇಯಃ ಶಾಶ್ವತೋಧರ್ಮಃ ಸ ತು ಸತ್ಯೇ ಪ್ರತಿಷ್ಠಿತಃ.

* * *

ನ ತು ತತ್ತ್ವೇನ ಭಗವನ್ ಧರ್ಮಾನ್ ವೇತ್ಸೀತಿ ಮೇ ಮತಿಃ
ಮಾತಾಪಿತೃಭ್ಯಾಂ ಶುಶ್ರೂಷುಃ ಸತ್ಯವಾದೀ ಜಿತೇಂದ್ರಿಯಃ
ಮಿಥಿಲಾಯಾಂ ವಸನ್ ವ್ಯಾಧಃ ಸತೇ ಧರ್ಮಾನ್ ಪ್ರವಕ್ಷ್ಯತಿ
ತತ್ರ ಗಚ್ಛಸ್ವ ಭದ್ರಂತೇ ಯಥಾಕಾಮಂ ದ್ವಿಜೋತ್ತಮ.

"ಮನುಷ್ಯನಿಗೆ ಕೋಪ ಶತ್ರು. ಯಾವನು ಕ್ರೋಧವನ್ನೂ ಮೋಹವನ್ನೂ ಕಳೆಯುತ್ತಾನೆ, ಅವನನ್ನು ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ. ಯಾವನು ಸತ್ಯವನ್ನು ನುಡಿಯುತ್ತಾನೆ, ಹಿರಿಯರನ್ನು ಸಂತೋಷಪಡಿಸುತ್ತಾನೆ, ಹಿಂಸಿತನಾದರೂ ಪ್ರತಿಯಾಗಿ ಹಿಂಸೆ ಮಾಡುವುದಿಲ್ಲ, ಯಾವನು ಜಿತೇಂದ್ರಿಯನಾಗಿ ಧರ್ಮಪರನಾಗಿ ಸ್ವಾಧ್ಯಾಯನಿರತನಾಗಿ ಶುಚಿಯಾಗಿ ಕಾಮಕ್ರೋಧಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ, ಅವನನ್ನು ದೇವತೆಗಳು ಬ್ರಾಹ್ಮಣನೆಂದು ಎಣಿಸುತ್ತಾರೆ. ಸ್ವಾಧ್ಯಾಯ ದಮ ಆರ್ಜವವನ್ನು ಬ್ರಾಹ್ಮಣನ ಧನ ಎಂದು ಹೇಳುತ್ತಾರೆ. ಇಂದ್ರಿಯ ನಿಗ್ರಹ ಬ್ರಾಹ್ಮಣನ ಶಾಶ್ವತ ಧನ. ಧರ್ಮವನ್ನು ಬಲ್ಲವರು ಸತ್ಯ ಆರ್ಜವಗಳನ್ನು ಶ್ರೇಷ್ಠ ಧರ್ಮ ಎಂದು ಹೇಳುತ್ತಾರೆ. ಶಾಶ್ವತವಾದ ಧರ್ಮ ಎನ್ನುವುದು ದುರ್ಜ್ಞೇಯವಾದುದು; ಆದರೆ ಅದು ಸತ್ಯದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಭಗವನ್, ನೀನು ಧರ್ಮಗಳನ್ನು ಸರಿಯಾಗಿ ತಿಳಿದುಕೊಂಡಿಲ್ಲ ಎಂದು ನನಗೆ ತೋರುತ್ತಿದೆ. ಮಾತಾಪಿತೃಗಳ ಶುಶ್ರೂಷೆ ಮಾಡುವವನಾಗಿ ಸತ್ಯವಾದಿ ಜಿತೇಂದ್ರಿಯ ವ್ಯಾಧನೊಬ್ಬನು ಮಿಥಿಲಾ ನಗರದಲ್ಲಿ ಇದ್ದಾನೆ. ಆತನು ನಿನಗೆ ಧರ್ಮವನ್ನು ತಿಳಿಸುತ್ತಾನೆ. ಅವನಲ್ಲಿಗೆ ಹೋಗುವುದಾಗಲಿ, ನಿನಗೆ ನಿನ್ನ ಅಭೀಷ್ಟ ದೊರೆಯಲಿ.

"ಅತ್ಯುಕ್ತಮಪಿ ಮೇ ಸರ್ವಂ ಕ್ಷಂತುಮರ್ಹಸ್ಯನಿಂದಿತ;
ಸ್ತ್ರಿಯೋಹಿ ಅವಧ್ಯಾ ಸರ್ವೇಷಾಂ ಯೇ ಧರ್ಮವಿದುಷೋ ಜನಾಃ.

"ನನ್ನ ಮಾತು ಹೆಚ್ಚಾಗಿದ್ದರೂ ನೀನು ಮನ್ನಿಸಬೇಕು. ನಿನ್ನಲ್ಲಿ ದೋಷ ತೋರಿಸಬೇಕೆಂದು ನಾನು ಮಾತನಾಡಿಲ್ಲ. ನೀನು ಕೋಪಿಸಿದರೆ

ನನ್ನನ್ನು ಶಿಕ್ಷಿಸುವ ಶಕ್ತಿ ಉಳ್ಳವನು; ಆದರೆ ಸ್ತ್ರೀಯರು ಅವಧ್ಯರು. ಧರ್ಮ ಬಲ್ಲ ಜನರು ಅವರಿಗೆ ದಂಡನೆ ವಿಧಿಸುವುದಿಲ್ಲ,'' ಎಂದಳು. ಬ್ರಾಹ್ಮಣನು,

'' ಪ್ರೀತೋಽಸ್ಮಿ ತವ ಭದ್ರಂ ತೇ ಗತಃ ಕ್ರೋಧಶ್ಚ ಶೋಭನೇ
ಉಪಾಲಂಭಸ್ತ್ವಯಾಹಿ ಉಕ್ತೋ ಮಮ ನಿಶ್ರ್ಯೇಯಸಂ ಪರಂ.

'' ತಾಯಿ, ನಿನ್ನ ವಿಷಯದಲ್ಲಿ ನಾನು ಪ್ರೀತನಾಗಿದ್ದೇನೆ. ನಿನಗೆ ಮಂಗಳವಾಗಲಿ. ನನ್ನ ಕೋಪ ಉಳಿದಿಲ್ಲ. ನೀನು ನನಗೆ ಹೇಳಿರುವ ಮಾತು ಏನಿದೆ ಅದು ನನ್ನ ಪರಮಕಲ್ಯಾಣಕ್ಕಾಗಿ ಉಕ್ತವಾಯಿತು,'' ಎಂದು ಹೇಳಿ ಹೊರಟನು.

ಇದು ಪತಿವ್ರತೆಯ ಮಹಿಮೆಯನ್ನು ಕುರಿತ ಭಾಗ. ಈ ತಾಯಿ ಸಾನ್ನಿಧ್ಯದಿಂದ ಬೀಳ್ಕೊಂಡು ಕೌಶಿಕನು ಮಿಥಿಲಾನಗರಿಯ ವ್ಯಾಧನ ಬಳಿಗೆ ಸಾರಿದನು. ವ್ಯಾಧನು ಅವನನ್ನು ಕಂಡು ಸಂಭ್ರಮದಿಂದ ಹತ್ತಿರಕ್ಕೆ ಬಂದನು. '' ಭಗವನ್, ನಾನು ತಮಗೆ ಅಭಿವಾದನ ಮಾಡುತ್ತೇನೆ. ತಮಗೆ ಸ್ವಾಗತ. ನಾನು ವ್ಯಾಧ. ನನ್ನಿಂದ ತಮಗೆ ಏನಾಗಬೇಕು? ಅಪ್ಪಣೆ ಕೊಡಿಸಿರಿ. ಪತಿವ್ರತೆಯಾದ ಆ ನನ್ನ ತಾಯಿ ಮಿಥಿಲೆಗೆ ಹೋಗು ಎಂದು ತಮಗೆ ಅಪ್ಪಣೆಮಾಡಿರುವ ಸಂಗತಿಯನ್ನು ನಾನು ಬಲ್ಲೆನು,'' ಎಂದನು. ಅವನ ಮಾತನ್ನು ಕೇಳಿ ಕೌಶಿಕನು ರೋಮಾಂಚಿತನಾದನು; ಇದು ಎರಡನೆಯ ಆಶ್ಚರ್ಯವೆಂದುಕೊಂಡನು. ವ್ಯಾಧನು ಅವನನ್ನು ತನ್ನ ಮನೆಗೆ ಹೋಗೋಣವೆ ಎಂದು ಕೇಳಿದನು. ಇಬ್ಬರೂ ಅಲ್ಲಿಗೆ ಹೋದರು. ಅಲ್ಲಿ ವ್ಯಾಧನು ಕೌಶಿಕನನ್ನು ಒಂದು ಪೀಠದ ಮೇಲೆ ಕುಳ್ಳಿರಿಸಿ ಪಾದ್ಯ ಆಚಮನೀಯಗಳನ್ನು ಒಪ್ಪಿಸಿದನು. ಕೌಶಿಕನು ಅದನ್ನು ಸ್ವೀಕರಿಸಿ ವ್ಯಾಧನನ್ನು ಕುರಿತು,

'' ಕರ್ಮೈತದ್ವೈ ನ ಸದೃಶಂ ಭವತಃ ಪ್ರತಿಭಾತಿ ಮೇ
ಅನುತಪ್ಯೇ ಭೃಶಂ ತಾತ ತವ ಘೋರೇಣ ಕರ್ಮಣಾ.

'' ಅಣ್ಣಾ, ಈ ನಿನ್ನ ವ್ಯವಹಾರ ನಿನಗೆ ತಕ್ಕದ್ದಲ್ಲವೆಂದು ನನಗೆ ತೋರುತ್ತಿದೆ. ನಿನ್ನ ಈ ಘೋರವಾದ ಕರ್ಮವನ್ನು ಕುರಿತು ನಾನು ಅನುತಾಪ ಪಡುತ್ತೇನೆ,'' ಎಂದನು. ವ್ಯಾಧನು ಹೇಳಿದನು:

"ಕುಲೋಚಿತಮಿದಂ ಕರ್ಮ ಪಿತೃಪೈತಾಮಹಂ ಮಮ;
ವರ್ತಮಾನಸ್ಯ ಮೇ ಧರ್ಮೇ ಸ್ವೇ ಮನ್ಯುಂ ಮಾಕೃಥಾ ದ್ವಿಜ.
ಧಾತ್ರಾತು ವಿಹಿತಂ ಪೂರ್ವಂ ಕರ್ಮಸ್ವಂ ಪಾಲಯಾಮ್ಯಹಂ;
ಪ್ರಯತ್ನಾಚ್ಚ ಗುರೂವೃದ್ಧೌ ಶುಶ್ರೂಷೇಹಂ ದ್ವಿಜೋತ್ತಮ.
ಸತ್ಯಂವದೇ ನಾಭ್ಯಸೂಯೇ ಯಥಾಶಕ್ತಿ ದದಾಮಿ ಚ
ದೇವತಾತಿಥಿ ಭೃತ್ಯಾನಾಂ ಅವಶಿಷ್ಟೇನ ವರ್ತಯೇ.
ನ ಕುತ್ಸಯಾಮ್ಯಹಂ ಕಿಂಚಿತ್ ನಗರ್ಹೇ ಬಲವತ್ತರಂ

* * *

ಜನಕಸ್ಯೇಹ ವಿಪ್ರರ್ಷೇ ವಿಕರ್ಮಸ್ಥೋ ನ ವಿದ್ಯತೇ
ಸ್ವಕರ್ಮನಿರತಾ ವರ್ಣಾ ಚತ್ವಾರೋಪಿ ದ್ವಿಜೋತ್ತಮ
ಸ ಏಷ ಜನಕೋ ರಾಜಾ ದುರ್ವೃತ್ತಮಪಿಚೇತ್ಸುತಂ
ದಂಡ್ಯಂ ದಂಡೇ ನಿಕ್ಷಿಪತಿ ತಥಾ ನಗ್ಲಾತಿ ಧಾರ್ಮಿಕಂ

* * *

ಪರೇಣ ಹಿ ಹತಾನ್ ಬ್ರಹ್ಮನ್ ವರಾಹ ಮಹಿಷಾನಹಂ
ನ ಸ್ವಯಂ ಹನ್ಮಿ ವಿಪ್ರರ್ಷೇ ವಿಕ್ರೀಣಾಮಿ ಸದಾತ್ವಹಂ.
ನಭಕ್ಷಯಾಮಿ ಮಾಂಸಾನಿ ಋತುಗಾಮೀ ತಥಾಹ್ಯಹಂ
ಸದೋಪವಾಸೀ ಚ ತಥಾ ನಕ್ತ ಭೋಜೀತಥಾದ್ವಿಜ

* * *

ಯೇ ಚೈವ ಮಾಂ ಪ್ರಶಂಸಂತಿ ಯೇ ಚ ನಿಂದಂತಿ ಮಾನವಾಃ
ಸರ್ವಾನ್ ಸು ಪರಿಣೀತೇನ ಕರ್ಮಣಾ ತೋಷಯಾಮ್ಯಹಂ

* * *

ನಚ ಕಾಮಾನ್ನ ಸಂರಂಭಾತ್ ನ ದ್ವೇಷಾದ್ಧರ್ಮ ಮುತ್ಸೃಜೇತ್
ಪ್ರಿಯೇನಾತಿ ಭೃಶಂ ಹೃಷ್ಯೇತ್ ಅಪ್ರಿಯೇ ನಚ ಸಂಜ್ವರೇತ್

* * *

ನ ಪಾಪಂಪ್ರತಿ ಪಾಪಸ್ಯಾತ್ ಸಾಧುರೇವ ಸದಾ ಭವೇತ್;
ಆತ್ಮನೈವ ಹತಃ ಪಾಪೋ ಯಃ ಪಾಪಂ ಕರ್ತುಮಿಚ್ಛತಿ.
ನಧರ್ಮೋಸ್ತೀತಿ ಮನ್ವಾನಾಃ ಶುಚೀನಪಹಸಂತಿಯೇ
ಅಶ್ರದ್ಧಧಾನಾ ಧರ್ಮಸ್ಯ ತೇ ನಶ್ಯಂತಿ ನ ಸಂಶಯಃ.

"ಅಯ್ಯಾ ಬ್ರಾಹ್ಮಣ, ಪಿತೃಪೈತಾಮಹವಾಗಿ ಬಂದಿರುವ ನನ್ನ ಕುಲದ ಕರ್ಮವನ್ನು ನಾನು ಮಾಡುತ್ತಿದೇನೆ. ನನ್ನ ಧರ್ಮದಲ್ಲಿ ನಡೆಯುತ್ತಿರುವ ನನ್ನನ್ನು ಕುರಿತು ಬೇಸರಪಡುವುದು ಬೇಡ. ಪೂರ್ವದಿಂದ

ವಿಧಾತನು ನಿಯಮಿಸಿರುವ ನಮ್ಮದಾದ ಕರ್ಮವನ್ನು ನಾನು ಪಾಲಿಸುತ್ತಿದ್ದೇನೆ. ಹಾಗೆಯೇ ಪ್ರಯತ್ನ ಪೂರ್ವಕವಾಗಿ ಹಿರಿಯರ ಸೇವೆಯನ್ನು ನಡಸುತ್ತಿದ್ದೇನೆ. ಸತ್ಯವನ್ನು ನುಡಿಯುತ್ತೇನೆ; ಅಸೂಯೆಯಿಂದ ನಡೆಯುವುದಿಲ್ಲ; ಕೈಯಲಾದಷ್ಟು ದಾನಮಾಡುತ್ತಿದೇನೆ; ಉಳಿದದ್ದರಿಂದ ಬಾಳುತ್ತಿದೇನೆ. ಅಲ್ಪರೀತಿಯಲ್ಲಿ ವರ್ತಿಸುತ್ತಿಲ್ಲ. ಗರ್ಹಿಸಬೇಕಾಯಿತು; ಅದನ್ನು ಅತಿ ಮಾಡುವುದಿಲ್ಲ. ಜನಕನ ಈ ರಾಷ್ಟ್ರದಲ್ಲಿ ತನ್ನ ಕುಲದ ಕರ್ಮವನ್ನು ಬಿಟ್ಟವನು ಒಬ್ಬನಿಲ್ಲ; ನಾಲ್ಕು ವರ್ಣದ ಎಲ್ಲ ಜನರೂ ತಮ್ಮ ಕುಲಗಳ ಕರ್ಮಗಳಲ್ಲಿ ನಿರತರಾಗಿದ್ದಾರೆ. ನಮ್ಮ ಈ ದೊರೆ ದುರ್ವೃತ್ತನಾದವನನ್ನು ಅವನು ತನ್ನ ಮಗನೇ ಆದರೂ ಶಿಕ್ಷಿಸದೆ ಬಿಡುವುದಿಲ್ಲ; ಹಾಗೆಯೇ ಧರ್ಮದಲ್ಲಿರುವವನನ್ನು ನೋಯಿಸುವುದಿಲ್ಲ. ಇತರರು ಜೀವ ತೆಗೆದು ಮೃಗಗಳನ್ನು ತರುತ್ತಾರೆ; ನಾನು ಸ್ವತಃ ಯಾವ ಜೀವಿಯನ್ನೂ ಕೊಲ್ಲುವುದಿಲ್ಲ; ಹಾಗೆ ಬಂದ ಮಾಂಸವನ್ನು ಮಾರುತ್ತೇನೆ. ನಾನು ಮಾಂಸವನ್ನು ಭಕ್ಷಿಸುವುದಿಲ್ಲ; ಋತುಗಾಮಿಯಾಗಿದ್ದೇನೆ; ಆಹಾರದ ವಿಷಯದಲ್ಲಿ ನಿಯಮವನ್ನು ಪಾಲಿಸುತ್ತಿದೇನೆ. ನನ್ನನ್ನು ಪ್ರಶಂಸೆಮಾಡುವ, ನಿಂದಿಸುವ, ಎಲ್ಲರನ್ನೂ ನ್ಯಾಯಾನುಸಾರವಾದ ನಡತೆಯಿಂದ ತೃಪ್ತಿ ಪಡಿಸುತ್ತೇನೆ. ಯಾವನೇ ಆಗಲಿ ಒಂದು ಆಸೆಗಾಗಿಯೆ ಒಂದು ಉದ್ವೇಗದಿಂದಲೆ ಇಲ್ಲ ದ್ವೇಷದ ಕಾರಣದಿಂದಲೆ ಧರ್ಮವನ್ನು ತೊರೆಯುವುದು ತಪ್ಪು. ಪ್ರಿಯವಾದದ್ದು ಸಂಭವಿಸಿದರೆ ಅತಿಯಾಗಿ ಹರ್ಷಪಡುವುದು ಬೇಡ. ಅಪ್ರಿಯ ಸಂಭವಿಸಿತು, ಸುಮ್ಮನೆ ಕುದಿಯುವುದೂ ಬೇಡ. ಕೆಟ್ಟದನ್ನು ಮಾಡಿದವನಿಗೆ ಪ್ರತಿಯಾಗಿ ಕೆಟ್ಟದನ್ನು ಮಾಡುವುದು ಬೇಡ. ಎಲ್ಲ ಹೊತ್ತಿನಲ್ಲಿಯೂ ಸಾಧುವಾಗಿರತಕ್ಕದ್ದು. ಪಾಪವನ್ನು ಮಾಡಲು ಯೋಚಿಸಿದ ಪಾಪಿ ತನ್ನಿಂದ ತಾನೇ ಪತನಾದನು. ಓಹೊ! ಮಹಾಧರ್ಮವಂತೆ, ಎಂದು ಯೋಚಿಸಿ ಸತ್ಯವಂತರಾದವರನ್ನು ಅಪಹಾಸ್ಯಮಾಡುವ ಮನುಷ್ಯರು ಧರ್ಮದಲ್ಲಿ ಶ್ರದ್ಧೆಯಿಲ್ಲದ ಕಾರಣದಿಂದ ನಾಶವಾಗುತ್ತಾರೆ. ಇದಕ್ಕೆ ಸಂಶಯವಿಲ್ಲ.'' ಇದಾದ ಮೇಲೆ ಕೌಶಿಕನು ಶಿಷ್ಟಾಚಾರ ಯಾವುದು ಎಂದು ಕೇಳಲು ಧರ್ಮವ್ಯಾಧನು ಅದನ್ನು ವಿವರಿಸುತ್ತ,

ಅಹಿಂಸಾ ಸತ್ಯವಚನಂ ಸರ್ವಭೂತ ಹಿತಂಪರಂ ;
ಅಹಿಂಸಾ ಪರಮೋಧರ್ಮಃ ಸಚ ಸತ್ಯೇ ಪ್ರತಿಷ್ಠಿತಃ.
ಸತ್ಯಮೇವ ಗರೀಯಸ್ತು ಶಿಷ್ಟಾಚಾರ ನಿಷೇವಿತಂ
ಆಚಾರಶ್ಚ ಸತಾಂ ಧರ್ಮಃ ಸಂತಶ್ಚ ಆಚಾರ ಲಕ್ಷಣಾಃ

* * *

ಆರಂಭೋ ನ್ಯಾಯಮುಕ್ತೋ ಯಃ ಸಹಿ ಧರ್ಮ ಇತಿಸ್ಮೃತಃ ;
ಅನಾಚಾರಸ್ತ್ವಧರ್ಮೇತಿ ಏತಚ್ಛಿಷ್ಟಾನುಶಾಸನಮ್

* * *

ಅಕ್ರುದ್ಧ್ಯಂತಃ ಅನಸೂಯಂತಃ ನಿರಹಂಕಾರಮತ್ಸರಾಃ
ಋಜವಃ ಶಮಸಂಪನ್ನಾಃ ಶಿಷ್ಟಾಚಾರಾಃ ಭವಂತಿತೇ

* * *

ಗುರುಶುಶ್ರೂಷವೋ ದಾಂತಾಃ ಶಿಷ್ಟಾಚಾರಾಃ ಭವಂತ್ಯುತ
ತೇಷಾಮದೀನ ಸತ್ವಾನಾಂ ದುಷ್ಕರಾಚಾರ ಕರ್ಮಣಾಂ
ಸ್ವೈಃ ಕರ್ಮಭಿಃ ಸತ್ಕೃತಾನಾಂ ಘೋರತ್ವಂ ಸಂಪ್ರಣಶ್ಯತಿ

* * *

ಕ್ಷಮಾ ಸತ್ಯಾರ್ಜವಂ ಶೌಚಂ ಶಿಷ್ಟಾಚಾರ ನಿದರ್ಶನಮ್
ಸರ್ವಭೂತದಯಾವಂತೋ ಅಹಿಂಸಾ ನಿರತಾಸ್ಸದಾ
ಪರುಷಂ ನ ಪ್ರಭಾಷಂತೇ ಸದಾ ಸಂತೋ ದ್ವಿಜಪ್ರಿಯಾಃ

* * *

ಅಹಿಂಸಾ ಸತ್ಯವಚನಂ ಆನೃಶಂಸ್ಯಮಥಾರ್ಜವಮ್
ಅದ್ರೋಹೋ ನಾತಿಮಾನಶ್ಚ ಹ್ರೀಃ ತಿತಿಕ್ಷಾದಮಶ್ಶಮಃ
ಧೀಮಂತೋ ಧೃತಿಮಂತಶ್ಚ ಭೂತಾನಾಮನುಕಂಪಕಾಃ
ಅಕಾಮ ದ್ವೇಷ ಸಂಯುಕ್ತಾಃ ತೇಸಂತೋ ಲೋಕಸತ್ಕೃತಾಃ
ತ್ರೀಣ್ಯೇವ ತು ಪದಾನ್ಯಾಹುಃ ಸತಾಂ ವೃತ್ತಮನುತ್ತಮಂ
ನದ್ರುಹ್ಯೇಚ್ಚೈವ ದದ್ಯಾಚ್ಚ ಸತ್ಯಂ ಚೈವ ಸದಾ ವದೇತ್

* * *

ಅನಸೂಯಾ ಕ್ಷಮಾ ಶಾಂತಿಃ ಸಂತೋಷಃ ಪ್ರಿಯವಾದಿತಾ
ಕಾಮಕ್ರೋಧ ಪರಿತ್ಯಾಗಃ ಶಿಷ್ಟಾಚಾರ ನಿಷೇವಣಂ

"ಶಿಷ್ಟಾಚಾರವೆಂದರೆ ಅಹಿಂಸೆ, ಸತ್ಯವಚನ, ಸಮಸ್ತ ಪ್ರಾಣಿಗಳನ್ನೂ ನಡಸಿಕೊಂಡು ಬಾಳುವುದು. ನೀತಿಯನ್ನು ತಿಳಿವರೆ ಸಾಲದು ; ಅದನ್ನು

ನಡಸಬೇಕು. ಸತ್ಯವಂತನಿಗೆ ಆಚಾರ ಲಕ್ಷಣ. ಯಾವುದು ನ್ಯಾಯ ಯುಕ್ತವಾಗಿದೆ ಕೆಲಸ ಅದು ಧರ್ಮ. ಗುರುಶುಶ್ರೂಷೆ ಮಾಡುತ್ತ ತಮ್ಮ ಪ್ರವೃತ್ತಿಗಳನ್ನು ನಿಗ್ರಹಿಸಿಕೊಂಡಿರುವವರು ಶಿಷ್ಟರೆನಿಸುತ್ತಾರೆ. ಇಂಥವರು ಮನಸ್ಸಿನಲ್ಲಿ ಕುಗ್ಗದೆ ತಮಗೆ ನಿಯತವಾಗಿ ಬಂದಿರುವ ಘೋರ ಕರ್ಮವನ್ನು ಮಾಡಿಯೂ ಶಿಷ್ಟರಾಗಿಯೆ ಇರುತ್ತಾರೆ. ಅವರ ಕರ್ಮದ ಘೋರತ್ವ ಲೆಕ್ಕಕ್ಕೆ ಬರುವುದಿಲ್ಲ. ಸರ್ವಲೋಕ ದಯಾವಂತ ರಾದವರು, ಅಹಿಂಸಾ ನಿರತರಾದವರು, ಪರುಷವಾದ ಮಾತನ್ನಾಡು ವುದಿಲ್ಲ. ಅಹಿಂಸೆ, ಸತ್ಯವಚನ, ಆನೃಶಂಸ್ಯ, ಆರ್ಜವ, ಅದ್ರೋಹ, ನಿರಭಿಮಾನ, ಸಂಕೋಚ, ಸಹನೆ, ದಮ, ಶಮ, ಈ ಗುಣಗಳನ್ನು ಉಳ್ಳ ಬುದ್ಧಿವಂತರು ಧೃತಿಮಂತರು ಪ್ರಾಣಿಗಳ ವಿಷಯದಲ್ಲಿ ಅನುಕಂಪ ವುಳ್ಳವರಾಗಿ ಕಾಮದ್ವೇಷಗಳಿಂದ ಬಿಡುಗಡೆ ಹೊಂದಿ ಲೋಕಸತ್ಕೃತ ರಾಗುತ್ತಾರೆ. ಒಳ್ಳೆಯವರ ನಡೆಗೆ ಮೂರು ನೆಲೆ ಇದೆ: ದ್ರೋಹ ಮಾಡ ಬೇಡ; ದಾನಮಾಡು; ಸದಾ ಸತ್ಯವನ್ನು ಆಡು. ಅಸೂಯೆ ಇಲ್ಲದಿರು ವುದು, ಕ್ಷಮೆ, ಶಾಂತಿ, ತೃಪ್ತನಾಗಿರುವುದು, ಪ್ರಿಯವನ್ನು ನುಡಿಯು ವುದು, ಕಾಮಕ್ರೋಧಗಳನ್ನು ತೊರೆಯುವುದು: ಇದು ಶಿಷ್ಟಾಚಾರ.'' ಹೀಗೆ ಕೌಶಿಕನೂ ವ್ಯಾಧನೂ ಚರ್ಚೆಮಾಡಿ ಅಹಿಂಸೆಯ ಸ್ವರೂಪ, ಬ್ರಾಹ್ಮಣ್ಯದ ಸ್ವರೂಪ ಮುಂತಾಗಿ ಹಲವು ವಿಷಯಗಳನ್ನು ಕುರಿತು ನಿಷ್ಕರ್ಷೆಗೆ ಬರುತ್ತಾರೆ. ಕೊನೆಗೆ ವ್ಯಾಧನು ತಾನು ಹಿಂದಿನ ಜನ್ಮದಲ್ಲಿ ಉತ್ತಮ ಕುಲದವನಾಗಿದ್ದು ಒಬ್ಬ ಹಿರಿಯರ ವಿಷಯದಲ್ಲಿ ತಪ್ಪಿ ನಡೆದು ಅವರ ಶಾಪದಿಂದ ಈಗ ವ್ಯಾಧನಾಗಿ ಹುಟ್ಟಿರುವುದಾಗಿಯೂ, ಈ ಜನ್ಮ ಮುಗಿದಮೇಲೆ ತನ್ನ ಹಿಂದಿನ ಸ್ಥಿತಿಗೆ ಮರಳಿ ಸೇರುವಂತೆ ಅನುಗ್ರಹ ಪಡೆದಿರುವುದಾಗಿಯೂ, ವಿವರಿಸುತ್ತಾನೆ. ಕೌಶಿಕನು ಅವನ ಸದ್ಯ ಸ್ಥಿತಿ ಯನ್ನು ಕುರಿತು ಅನುತಾಪವನ್ನು ಸೂಚಿಸಲು, ವ್ಯಾಧನು,

'' ಅಸಂತೋಷಸ್ಯ ನಾಸ್ತ್ಯಂತಃ ತುಷ್ಟಿಸ್ತು ಪರಮಂಸುಖಂ;
ನಶೋಚಂತಿ ಗತಾಧ್ವಾನಃ ಪಶ್ಯಂತಃ ಪರಮಾಂಗತಿಂ.
ನವಿಷಾದೇ ಮನಃ ಕಾರ್ಯಂ ವಿಷಾದೋ ವಿಷಮುತ್ತಮಂ
ಮಾರಯತ್ಯಕೃತಪ್ರಜ್ಞಂ ಬಾಲಂಕ್ರುದ್ಧ ಇವೋರಗಃ
ನಶೋಚಾಮಿಚ ವೈ ವಿದ್ವನ್ ಕಾಲಾಕಾಂಕ್ಷೀಸ್ಥಿತೋಽಸ್ಮ್ಯಹಂ
ಏತೈಃ ನಿದರ್ಶನೈಃ ಬ್ರಹ್ಮನ್ ನಾವಸೀದಾಮಿ ಸತ್ತಮ.

"ಹಿಂದೆ ಆದದ್ದನ್ನು ನೆನೆದು ಪ್ರಯೋಜನವಿಲ್ಲ; ಗುರಿಯಲ್ಲಿ ಕಣ್ಣಿಟ್ಟವನು ಇಂಥ ವೃಥಾಕಾರ್ಯದಲ್ಲಿ ತೊಡಗುವುದಿಲ್ಲ. ಅಸಂತೋಷಕ್ಕೆ ಕೊನೆಯಿಲ್ಲ; ತೃಪ್ತಿಗೆ ಸಮನಾದ ಸುಖವಿಲ್ಲ. ಕೆಟ್ಟುದಾಯಿತು; ಆಯಿತು, ಮುಂದೆ ಏನೊ ನೋಡಬೇಕು. ವಿಷಾದ ಒಳ್ಳೆಯದಲ್ಲ: ವಿಷಾದ ನಿಜದಲ್ಲಿ ಕ್ರೂರವಿಷ. ಹಾವು ಅಜ್ಞನಾದ ಬಾಲನನ್ನು ಕೊಲ್ಲುವಂತೆ ತಿಳಿವಿಲ್ಲದ ಮನುಷ್ಯನನ್ನು ವಿಷಾದ ತೀರಿಸಿಬಿಡುತ್ತದೆ. ನಾನು ವ್ಯಥೆ ಪಡುವುದಿಲ್ಲ. ಅವಧಿ ಮುಗಿಯುವ ದಿನವನ್ನು ಕಾಯುತ್ತಿದೇನೆ. ಈ ಕಾರಣದಿಂದ ಕುಗ್ಗದೆ ಇದೇನೆ," ಎಂದನು. ಬ್ರಾಹ್ಮಣನು,

> ಕೃತಪ್ರಜ್ಞೋಽಸಿ ಮೇಧಾವೀ, ಬುದ್ಧಿಶ್ಚ ವಿಪುಲಾ ತವ,
> ನಾಹಂ ಭವಂತಂ ಶೋಚಾಮಿ ಜ್ಞಾನತೃಪ್ತೋಽಸಿ ಧರ್ಮವಿತ್.
> ಆಪೃಚ್ಛೇತ್ವಾಂ, ಸ್ವಸ್ತಿ ತೇಽಸ್ತು, ಧರ್ಮಸ್ತ್ವಾ ಪರಿ ರಕ್ಷತು,
> ಅಪ್ರಮಾದಸ್ತು ಕರ್ತವ್ಯೋ ಧರ್ಮೇ ಧರ್ಮಭೃತಾಂವರ.

"ಅಯ್ಯಾ ನೀನು ಮೇಧಾವಿ; ಕೃತಪ್ರಜ್ಞನಾಗಿದ್ದೀಯೆ. ನಿನ್ನ ಬುದ್ಧಿ ವಿಪುಲವಾಗಿದೆ. ನಾನಾದರೂ ನಿನ್ನ ವಿಷಯಕ್ಕೆ ದುಃಖಪಡುವುದಿಲ್ಲ. ನೀನು ಜ್ಞಾನತೃಪ್ತನಾಗಿದ್ದೀಯೆ. ಧರ್ಮವೇತ್ತನಾಗಿದ್ದೀಯೆ. ನನಗೆ ಅಪ್ಪಣೆಕೊಡು. ನಿನಗೆ ಒಳ್ಳೆಯದಾಗಲಿ; ಧರ್ಮ ನಿನ್ನನ್ನು ಕಾಪಾಡಲಿ. ಧರ್ಮಿಷ್ಠರಲ್ಲಿ ಶ್ರೇಷ್ಠನಾದವನೇ, ಧರ್ಮದಲ್ಲಿ ಎಚ್ಚರ ಇರತಕ್ಕದ್ದು," ಎಂದು ಹೇಳಿ ಬೀಳ್ಕೊಂಡನು.

## ೧೨
## ಸೋಮಕನ ಕಥೆ

ಇಲ್ಲಿ ವನಪರ್ವದ ಇನ್ನೊಂದು ಉಪಾಖ್ಯಾನವನ್ನು ವಿವರಿಸುವುದು ಆವಶ್ಯಕ.

ಸೋಮಕನೆಂಬ ಒಬ್ಬ ರಾಜನಿದ್ದನು. ಅವನಿಗೆ ನೂರುಮಂದಿ ಪತ್ನಿಯರಿದ್ದರು. ಬಹುಕಾಲದನಂತರ ಅವನಿಗೆ ಜ್ಯೇಷ್ಠ ಪತ್ನಿಯಲ್ಲಿ ಒಬ್ಬನೆ ಮಗನು ಹುಟ್ಟಿದನು. ಈ ಬಹು ಪ್ರಿಯನಾದ ಮಗನನ್ನು ಒಂದು ದಿನ ಒಂದು ಇರುವೆ ಕಡಿಯಲು ರಾಣಿಯರೆಲ್ಲಾ ಗಟ್ಟಿಯಾಗಿ ಅಳುತ್ತ ಕುಳಿತರು. ಇಷ್ಟು ಕೂಗಿನ ಕಾರಣವೇನೆಂದು ವಿಚಾರಿಸಿ ಅದು

ತಿಳಿದಾಗ ಸೋಮಕನು, "ಒಬ್ಬನೆ ಮಗನಾದ್ದರಿಂದ ಅಲ್ಲವೆ ನಮಗೆ ಈ ಮಗನ ವಿಷಯದಲ್ಲಿ ಇಷ್ಟು ವ್ಯಾಕುಲ? ನೂರು ಮಕ್ಕಳನ್ನು ಪಡೆಯಬೇಕು. ಈ ಚಿಂತೆಯಿಂದ ಬಿಡಿಸಿಕೊಳ್ಳಬೇಕು," ಎಂದು ಪುರೋಹಿತನನ್ನು ಕರೆದು, "ನೂರು ಮಕ್ಕಳಾಗುವ ರೀತಿ ತಕ್ಕದೊಂದ ಕರ್ಮವನ್ನು ನಡಸಬೇಕು," ಎಂದು ನಿರೂಪಿಸಿದನು. ರಾಜಕುಮಾರನನ್ನು ಒಂದು ಪಶುವಾಗಿ ಮಾಡಿ ಯಜ್ಞವನ್ನು ನಡಸುವುದಾದರೆ ದೊರೆಯ ಇಷ್ಟ ಸಲ್ಲುವುದೆಂದು ಪುರೋಹಿತನು ಉತ್ತರಕೊಟ್ಟನು. ಇದು ತಪ್ಪು ದಾರಿಯ ಒಂದು ಯಜ್ಞ: ಆದರೆ ಪುತ್ರಕಾಮನಾದ ರಾಜನು ಅದಕ್ಕೆ ಒಪ್ಪಿಗೆಕೊಟ್ಟನು. ಅಭಿಚಾರಕವಾದ ಪ್ರಯೋಗದಿಂದ ಯಜ್ಞ ನಡೆದು ರಾಜನಿಗೆ ನೂರು ಮಕ್ಕಳಾದರು. ದಿನ ಕಳೆದು ಪುರೋಹಿತನು ಮೃತನಾದನು. ಮತ್ತಷ್ಟು ಕಾಲ ಕಳೆದು ರಾಜನೂ ಮೃತನಾಗಿ ಪರದಲ್ಲಿ ತನ್ನ ಸ್ಥಾನವನ್ನು ಕುರಿತು ಹೋಗುತ್ತಿದ್ದನು; ದಾರಿಯಲ್ಲಿ ತನ್ನ ಪುರೋಹಿತನು ಘೋರ ನರಕದಲ್ಲಿ ಯಾತನೆ ಪಡುತ್ತಿರುವುದನ್ನು ಕಂಡನು. ಅವನ ವಿಷಯದಲ್ಲಿ ರಾಜನಿಗೆ ಕನಿಕರವಾಯಿತು. ಅವನು ಪುರೋಹಿತನನ್ನು, "ಇದೇಕೆ ಇಲ್ಲಿದ್ದೀಯೆ?" ಎಂದು ಕೇಳಿದನು. "ಅಭಿಚಾರದ ಕರ್ಮವೊಂದನ್ನು ಮಾಡಿಸಿದೆನಲ್ಲ! ಅದರಿಂದಲೆ ನಿನಗೆ ಸಂತತಿ ಪ್ರಾಪ್ತವಾಯಿತು. ಅದನ್ನು ಮಾಡಿಸಿದ್ದರಿಂದ ನಾನು ಇಲ್ಲಿ ನರಕದಲ್ಲಿದ್ದೇನೆ," ಎಂದನು. ಸೋಮಕನು ತನ್ನ ಜೊತೆಗಿದ್ದ ಯಮನನ್ನು ಕುರಿತು, "ಈ ಬ್ರಾಹ್ಮಣನು ನನ್ನ ಸಲುವಾಗಿ ಒಂದು ಕರ್ಮವನ್ನು ಮಾಡಿಸಿ ಶಿಕ್ಷೆಗೆ ಸಿಕ್ಕಿದ್ದಾನೆ. ಆ ಶಿಕ್ಷೆಯನ್ನು ನಾನು ಅನುಭವಿಸುತ್ತೇನೆ. ಅವನನ್ನು ಬಿಡಿಸು," ಎಂದನು. ಯಮನು, "ಅಯ್ಯಾ, ಅವನು ತಪ್ಪುಮಾಡಿ ಶಿಕ್ಷೆಯನ್ನು ಅನುಭವಿಸುತ್ತಿರುವನು. ನೀನು ಪುಣ್ಯವಂತನು, ನಿನಗೆ ಪುಣ್ಯಲೋಕ ಕಾದಿರುವುದು," ಎಂದನು. ಸೋಮಕನು

ಪುಣ್ಯಾನ್ನ ಕಾಮಯೇ ಲೋಕಾನ್ ಋತೇಽಹಂ ಬ್ರಹ್ಮವಾದಿನಂ;
ಇಚ್ಛಾಮ್ಯಹಮನೇನೈವ ಸಹವಸ್ತುಂ ಸುರಾಲಯೇ
ನರಕೇ ವಾ ಧರ್ಮರಾಜ; ಕರ್ಮಣಾಽಸ್ಯ ಸಮೋಹ್ಯಹಂ
ಪುಣ್ಯಾಪುಣ್ಯಫಲಂ ದೇವ ಸಮಮಸ್ತ್ವಾವಯೋರಿದಂ.

"ನಾನು ಈ ನನ್ನ ಪುರೋಹಿತನನ್ನು ಬಿಟ್ಟು ಪುಣ್ಯಲೋಕವನ್ನು ಬಯಸುವುದಿಲ್ಲ. ಇವನೊಂದಿಗೆ ನಾನು ಇರಬೇಕು: ಸ್ವರ್ಗದಲ್ಲಾದರೂ ಸರಿಯೆ, ನರಕದಲ್ಲಾದರೂ ಸರಿಯೆ. ಇವನಿಗೆ ಶಿಕ್ಷೆ ತಂದಿರುವ ಪಾಪಕರ್ಮದಲ್ಲಿ ಅವನಷ್ಟೇ ನಾನೂ ಭಾಗಿ. ಆದಕಾರಣ ಪುಣ್ಯ ಅಥವಾ ಅಪುಣ್ಯದ ಫಲವು ನಮಗಿಬ್ಬರಿಗೂ ಸಮವಾಗಿ ದೊರೆಯಲಿ," ಎಂದನು. ಧರ್ಮನು,

"ಯದ್ಯೇವಮಾಪ್ಸಿತಂ ರಾಜನ್ ಭುಂಕ್ಷ್ವ ಅಸ್ಯ ಸಹಿತಃ ಫಲಂ;
ತುಲ್ಯಕಾಲಂ ಸಹಾನೇನ ಪಶ್ಚಾತ್ ಪ್ರಾಪ್ಸ್ಯಸಿ ಸದ್ಗತಿಂ.

"ರಾಜನೆ, ನಿನ್ನ ಇಷ್ಟ ಹೀಗಿರುವುದಾದರೆ ಇವನ ಜೊತೆಗೆ ಈ ಫಲವನ್ನು ಅನುಭವಿಸು. ಸಮಕಾಲ ಇಬ್ಬರೂ ಈ ಯಾತನೆಯನ್ನು ಅನುಭವಿಸಿ ಮುಗಿಸಿದಮೇಲೆ ಇವನೊಂದಿಗೆ ನೀನು ನಿತ್ಯವಾದ ಸದ್ಗತಿಯನ್ನು ಪಡೆಯುವೆ," ಎಂದನು. ರಾಜನು ಹೀಗೆಯೇ ಮಾಡಿದನು; ಕೆಲವು ಕಾಲ ಪುರೋಹಿತನೊಂದಿಗೆ ನರಕದಲ್ಲಿ ನೊಂದು ಅನಂತರ ತನ್ನ ಪುಣ್ಯಕರ್ಮದಿಂದ ತನ್ನ ಪಾಲಿಗೆ ಬಂದಿದ್ದ ಸ್ವರ್ಗವನ್ನು ಅವನೊಂದಿಗೆ ಸಾರಿದನು.

## ೧೩
## ನಕುಲ, ಸಹದೇವ

ಭೀಷ್ಮ ಧೃತರಾಷ್ಟ್ರ ವಿದುರಾದಿ ಹಿರಿಯರ ನೆರಳಲ್ಲಿ ಬೆಳೆದು ಇಂಥ ಆಖ್ಯಾನಗಳನ್ನು ಕೇಳಿ ಮನಸ್ಸು ತಿದ್ದಿದ ಪಾಂಡವ ಕೌರವರು, ಇವರ ಜೊತೆಯ ಪ್ರಮುಖ ವ್ಯಕ್ತಿಗಳು, ಎಂಥವರಾಗಿರಬೇಕು? ನಾವು ಈಗ ಇದನ್ನು ನೋಡಬಹುದು. ಹೀಗೆ ಮಾಡುವುದರಲ್ಲಿ ಮೊದಲು ಕಿರಿಯರಾದ ನಾಲ್ವರು ಪಾಂಡವರನ್ನೂ, ಅನಂತರ ಯುಧಿಷ್ಠಿರ ದ್ರೌಪದಿಯರನ್ನೂ, ಆಮೇಲೆ ದುರ್ಯೋಧನ ದುಶ್ಶಾಸನ ಕರ್ಣರನ್ನೂ, ಅನಂತರ ಬಲರಾಮ ಕೃಷ್ಣರನ್ನೂ ಪರಿಶೀಲಿಸುವುದು ಅನುಕೂಲ.

ಮಾದ್ರಿಯ ಮಕ್ಕಳಾದ ನಕುಲ ಸಹದೇವರಿಬ್ಬರಲ್ಲಿ ಯಾರ ಚಿತ್ರವೂ ಭಾರತದಲ್ಲಿ ಅಷ್ಟೇನೂ ದೊಡ್ಡದಾಗಿ ಕಾಣುವುದಿಲ್ಲ. ವಯಸ್ಸಿನಿಂದ ನಕುಲ ಸಹದೇವರು ಯುಧಿಷ್ಠಿರ ಭೀಮಾರ್ಜುನರಿಗಿಂತ ಬಹಳ

ಕಿರಿಯುವರೇನೂ ಅಲ್ಲ. ಆದರೆ ಕಿರಿಯ ಹೆಂಡತಿಯ ಮಕ್ಕಳು ಎಂಬ ಕಾರಣದಿಂದಲೋ ತಂದೆ ತಾಯಿ ಇಬ್ಬರನ್ನೂ ಕಳೆದುಕೊಂಡು ದೊಡ್ಡ ತಾಯ ಕೈಯಲ್ಲಿ ಬೆಳೆಯಬೇಕಾಯಿತು ಎಂಬ ಕಾರಣದಿಂದಲೋ ಉಳಿದ ಮೂವರಿಗೆ ಸಮನಾಗಿ ತೂಗುವುದು ಸಾಧ್ಯವಲ್ಲದೆ, ಅಥವಾ ಕಿರಿಯರಾದ ಕಾರಣದಿಂದ ಹಾಗೆ ತೂಗಬೇಕೆಂಬ ಪ್ರವೃತ್ತಿಯೇ ಇಲ್ಲದೆ, ಇವರು ಬಹುಮಟ್ಟಿಗೆ ತಗ್ಗಿ ನಡೆದರು. ಕುಂತಿ ಇವರಿಗೆ ಮಲತಾಯಾದ ಕಾರಣದಿಂದ ಇವರು ಅಸೂಯೆಯ ಆವರಣದಲ್ಲಿ ಬೆಳೆದರೆನ್ನುವುದು ಇದರ ಅರ್ಥವಲ್ಲ. ಇಬ್ಬರು ತಾಯದಿರೂ ಬದುಕಿದ್ದರೆ ಮಾದ್ರಿ ತನ್ನ ಮಕ್ಕಳನ್ನು ತನ್ನವರು ಎಂದು ಹೆಚ್ಚು ಅಭಿಮಾನದಿಂದ ನೋಡುವ ಸಂಭವ ಇದ್ದಿತು. ಇದರ ಫಲವಾಗಿ ಕುಂತಿ ತನ್ನ ಮಕ್ಕಳನ್ನು ಹೆಚ್ಚು ಅಭಿಮಾನದಿಂದ ಕಾಣಬಹುದಾಗಿದ್ದಿತೇನೋ. ಮಾದ್ರಿ ಪತಿಯೊಂದಿಗೆ ಸಹಗಮನಮಾಡಿ ಈ ಸಮಸ್ಯೆ ಹುಟ್ಟದಂತೆ ಮಾಡಿದಳು; ತೀರಿಕೊಳ್ಳುತ್ತ ಕುಂತಿಗೆ ಬಹು ಅರ್ಥಯುಕ್ತವಾದ ಒಂದು ಮಾತನ್ನು ಹೇಳಿ ಹೋದಳು. ತಮ್ಮಿಬ್ಬರಲ್ಲಿ ಒಬ್ಬಳು ಇದ್ದು ಮಕ್ಕಳನ್ನು ನೋಡಿ ಕೊಳ್ಳಬೇಕು, ಒಬ್ಬಳು ಸಹಗಮನ ಮಾಡಬಹುದು, ಎಂದು ನಿಶ್ಚಯ ವಾದಾಗ ಮಾದ್ರಿ, "ನಾನು ನನ್ನವಲ್ಲದ ಮಕ್ಕಳನ್ನು ನನ್ನ ಮಕ್ಕಳಂತೆ ನಿಷ್ಪಕ್ಷಪಾತವಾಗಿ ನೋಡಿಕೊಳ್ಳಲಾರೆನು; ನೀನು ಹೀಗೆ ಮಾಡಬಲ್ಲೆ. ಆದ್ದರಿಂದ ನೀನು ಬದುಕಿ ಇದ್ದು ಮಕ್ಕಳನ್ನು ನೋಡಿಕೊ, ನಾನು ಸಹಗಮನ ಮಾಡುತ್ತೇನೆ," ಎಂದಳು. ಸಹಗಮನ ಮಾಡಬೇಕೆಂಬ ನಿಶ್ಚಯಕ್ಕೆ ಅವಳು ಈ ಕಾರಣವನ್ನು ನಿರ್ಮಿಸಿ ಹೇಳಿದಳೊ ಎಂಬ ಕಲ್ಪನೆಕ್ಕೂ ಇಲ್ಲಿ ಅವಕಾಶವಿದೆ. ಆದರೆ, ಮಾದ್ರಿ ನಿಜವಾಗಿಯೂ ಹೀಗೆ ತಿಳಿದಿದ್ದಳು ಎಂದರೂ ಆಶ್ಚರ್ಯಪಡಬೇಕಾದದ್ದಿಲ್ಲ. ಅವಳು ಹಾಗೆ ತಿಳಿದಿದ್ದರೂ ತಿಳಿಯದೆ ಇದ್ದರೂ ಕುಂತಿಯ ಭಾಗಕ್ಕೆ ಈ ಮಾತು ಒಂದು ಮೇಲ್ಪಂಕ್ತಿಯಾಗಿ ಪರಿಣಮಿಸಿರಬೇಕು. "ಈ ಮಕ್ಕಳ ತಾಯಿ ಇವನ್ನು ನನ್ನ ಕೈಯಲ್ಲಿ ಬಿಟ್ಟು ಹೋಗುವಾಗ ನಾನು ಇವನ್ನು ನನ್ನ ಮಕ್ಕಳಂತೆ ನೋಡಿಕೊಳ್ಳುತ್ತೇನೆ ಎಂದು ಹೇಳಿದಳಲ್ಲ. ನಾನು ನೋಡಿ ಕೊಳ್ಳುತ್ತಿದೇನೆಯೆ," ಎಂದು ಅವಳು ಆ ಮಕ್ಕಳು ಬೆಳೆಯುವ ಕಾಲದಲ್ಲಿ

ನೂರು ಸಲ ಯೋಚಿಸಿರಬೇಕು. ಅಂತೂ ತಮ್ಮ ತಾಯನ್ನು ಕಾಣದೆ ಬೆಳೆದ ಈ ಹುಡುಗರು ಬೇರೆ ಒಬ್ಬ ತಾಯಿ ಇರಲಿಲ್ಲ ಎಂಬಂತೆಯೆ ಬೆಳೆದರು. ಪಾಂಡವರಲ್ಲಿ ಮೊದಲ ಮೂವರಿಗೆ ಈ ಇಬ್ಬರಿಗೆ ಮನಸ್ತಾಪ ಉಂಟಾಗುವಂತೆ ಮಾಡಬೇಕು ಎಂದು ಪ್ರತಿಪಕ್ಷದವರು ಒಮ್ಮೆ ಯೋಚಿಸಿದ್ದುಂಟು. ಇದು ಸಾಧ್ಯವಲ್ಲ, ಈ ಐವರು ಅಣ್ಣತಮ್ಮಂದಿರೂ ಒಂದೆ ತಾಯ ಮಕ್ಕಳಂತೆ ಒಂದು ಮನಸ್ಸಿನಿಂದ ಬಾಳುತ್ತಿದಾರೆ, ಎಂದು ಕೊಂಡು ಆ ಹಗೆಗಳು ಆ ಯೋಚನೆಯನ್ನು ಬಿಟ್ಟರು.

ನಕುಲನು ರಾಜಸೂಯದ ಸಂದರ್ಭದಲ್ಲಿ ತಾನೂ ಒಂದು ದಿಕ್ಕಿಗೆ ಹೋಗಿ ದಿಗ್ವಿಜಯ ಮಾಡಿಕೊಂಡು ಬಂದನು. ಅರಣ್ಯವಾಸದಲ್ಲಿ, ಅಜ್ಞಾತವಾಸದಲ್ಲಿ, ಯುಧಿಷ್ಠಿರನ ಇಷ್ಟದಂತೆ ನಡೆದುಕೊಂಡನು. ಹದಿನೆಂಟು ದಿನದ ಯುದ್ಧದಲ್ಲಿ ತಾನೂ ಒಂದು ಭಾಗ ವಹಿಸಿ ಹಿರಿಯಣ್ಣನು ಪಟ್ಟಾಭಿಷಿಕ್ತನಾದಾಗ ಅವನ ಪಕ್ಕದಲ್ಲಿ ನಿಂತನು. ಕಾಲ ಕ್ರಮದಲ್ಲಿ ಇವರು ರಾಜ್ಯವನ್ನು ಬಿಟ್ಟು ಮಹಾಪ್ರಸ್ಥಾನ ಮಾಡಿದಾಗ ರಾಜನ ಹಿಂದೆ ನಡೆದು ತನ್ನ ಹೊತ್ತು ಬಂದಾಗ ಇದ್ದ ಸ್ಥಳದಲ್ಲಿ ಬಿದ್ದು ಜೀವನವನ್ನು ಮುಗಿಸಿದನು.

ಒಡಹುಟ್ಟಿದವರ ಜೀವನದಲ್ಲಿ ತನ್ನ ಜೀವನವನ್ನು ಬೆರಸಿ, ತಾನು ಎಂಬ ಒಂದು ಅಭಿಮಾನವನ್ನಿಟ್ಟುಕೊಳ್ಳದೆ ಬೆಳೆಯುವ ಸೋದರ್ಯಕ್ಕೆ ನಕುಲ ಶ್ರೇಷ್ಠವಾದ ಆದರ್ಶ.

ಸಹದೇವನು ಇವನಿಗಿಂತ ಸ್ವಲ್ಪ ಹೆಚ್ಚಿನ ವ್ಯಕ್ತಿತ್ವವನ್ನು ತೋರಿಸು ತ್ತಾನೆ. ನೀತಿರೀತಿಯಲ್ಲಿ ಇವನು ಸ್ವಲ್ಪಮಟ್ಟಿಗೆ ಭೀಮನಂತೆ ಆದನೆಂದು ಕಾಣುತ್ತದೆ. ರಾಜಸೂಯದ ಸಮಯದಲ್ಲಿ ಕೃಷ್ಣನಿಗೆ ಅಗ್ರಪೂಜೆ ನಿಶ್ಚಿತವಾದಾಗ ಅದನ್ನು ನಡಸುವುದಕ್ಕೆ ಮುಂದಾಗಿ ನಿಂತವನು ಈ ಕನಿಷ್ಠ ಸೋದರ. ಕೃಷ್ಣನಿಗೆ ಅಗ್ರಪೂಜೆ ಕೂಡದೆಂದು ಶಿಶುಪಾಲನು ಪ್ರತಿ ಭಟಿಸಲು ಸಹದೇವನಿಗೆ ಬಹು ಕೋಪಬಂದಿತು. ಭೀಷ್ಮ ಶಿಶುಪಾಲರಿಗೆ ಒಂದೆರಡು ಮಾತು ನಡೆದು, ಕೆಲವರು ರಾಜರು ಶಿಶುಪಾಲನ ಪಕ್ಷವನ್ನು ವಹಿಸಿದರೆಂದು ಕಂಡಾಗ ಸಹದೇವನು ಆ ಪ್ರತಿಪಕ್ಷವನ್ನು ಧಿಕ್ಕರಿಸಿ ನುಡಿದನು. ''ಅಗ್ರಪೂಜೆಗೆ ಕೃಷ್ಣನೇ ಯೋಗ್ಯನು. ಇದು ತಪ್ಪು

ಎನ್ನುವವರ ತಲೆಯ ಮೇಲೆ ನನ್ನ ಕಾಲನ್ನಿಟ್ಟು ಮೆಟ್ಟುತ್ತೇನೆ. ಬನ್ನಿ ಯಾರು?'' ಎಂದನು. ಕಥನದಲ್ಲಿ ಹೀಗೆ ಹೇಳಿ ಅವನು ತನ್ನ ಬಲಗಾಲನ್ನು ಎತ್ತಿ ಮುಂದಕ್ಕೆ ಚಾಚಿದನೆಂದು ಉಕ್ತವಾಗಿದೆ. ಈ ಕಾಲು ಚಾಚಿದನೆಂಬುದು ತೀರಾ ಪ್ರಾಕೃತ ವರ್ತನವೆಂದು ತೋರುತ್ತದೆ. ಸಹದೇವನ ನಡತೆಯನ್ನು ವರ್ಣಿಸುವುದರಲ್ಲಿ ಯಾರಾದರೂ ಕಥಕರು ಈ ಮಾತನ್ನು ಸೇರಿಸಿರಬೇಕು. ಯುದ್ಧಕ್ಕೆ ಮೊದಲು ದುರ್ಯೋಧನನೊಂದಿಗೆ ಸಂಧಾನ ನಡಸುವ ಮಾತು ಬಂದಾಗ ಸಹದೇವನು, ಯುದ್ಧವೇ ಸರಿ, ಸಮಾಧಾನಬೇಡ, ಎಂದನು. ವನವಾಸದಲ್ಲಿ, ಅಜ್ಞಾತವಾಸದಲ್ಲಿ, ಯುದ್ಧದಲ್ಲಿ ಇವನು ಸೋದರರೊಡನೆ ಒಂದು ಮನಸ್ಸಿನಿಂದ ಬಾಳಿದನು; ಅಣ್ಣನು ರಾಜನಾದಾಗ ಜೊತೆಗೆ ನಿಂತನು. ಎಲ್ಲರಿಗೂ ಕಿರಿಯನಾದ ಕಾರಣದಿಂದ ಇವನು ಕುಂತೀದೇವಿಗೆ ಮುದ್ದಿನ ಮಗು ಆದನು. ಮಕ್ಕಳೆಲ್ಲ ವನವಾಸಕ್ಕೆ ಹೊರಟಾಗ ಕುಂತಿ ಇವನೊಬ್ಬನಿಗೆ ನೀನು ನನ್ನೊಡನೆ ಇದ್ದುಬಿಡು ಎಂದಳು. ಆಶ್ರಮವಾಸಕ್ಕಾಗಿ ಕಾಡಿಗೆ ಹೋಗಲು ಹೊರಟ ಕುಂತಿ ಹಿರಿಯ ಮಕ್ಕಳಿಗೆ, ದ್ರೌಪದಿಗೆ, ಸಹದೇವನನ್ನು ನೋಡಿಕೊಳ್ಳಿ ಎಂದು ಹೇಳಿ ಹೊರಟಳು. ಎಲ್ಲ ಸೋದರರೂ ದ್ರೌಪದಿಯೂ ಕುಂತಿಯನ್ನು ನೋಡುವುದಕ್ಕೆ ಕಾಡಿಗೆ ಹೋದಾಗ ಸಹದೇವನು ಉಳಿದವರಿಗಿಂತ ಮೊದಲಲ್ಲಿ ಓಡಿಹೋಗಿ ತಾಯ ಬಳಿ ಕುಳಿತನು. ಮಹಾಪ್ರಸ್ಥಾನದಲ್ಲಿ ದ್ರೌಪದಿಯನಂತರ ಅವಳ ಮುಂದೆ ನಡೆಯುತ್ತಿದ್ದ ಈ ತಮ್ಮನು ಮೊದಲು ಬಿದ್ದು ನಾಲ್ವರು ಅಣ್ಣಂದಿರಿಗೂ ದುಃಖವನ್ನುಂಟುಮಾಡಿದನು.

## ೧೪
## ಅರ್ಜುನ

ಅರ್ಜುನನು ಪಾಂಡವರಲ್ಲಿ ಪ್ರಮುಖ ಮೂರ್ತಿಯಾಗಿ ಭಾರತದಲ್ಲಿ ಚಿತ್ರಿತನಾಗಿದ್ದಾನೆ. ಯುಧಿಷ್ಠಿರನದು ಒಂದು ಪಕ್ಕಕ್ಕೆ ಅತಿ, ಭೀಮನದು ಇನ್ನೊಂದು ಪಕ್ಕಕ್ಕೆ ಅಷ್ಟೇ ಅತಿ: ಈ ಎರಡು ಅತಿಗಳ ಮಧ್ಯೆ ಒಂದು ಸಮವಾದ ಮಾರ್ಗವನ್ನು ಹಿಡಿಯುವುದು ಅರ್ಜುನನ ಸ್ವಭಾವ.

ಎಂದರೆ, ಪರಾಕ್ರಮದಲ್ಲಿ ಇವನು ಭೀಮನಿಗಿಂತ ಕಡಮೆಯೆಂದಲ್ಲ; ಪರಾಕ್ರಮದಷ್ಟೇ ಮಾತಾದರೆ ಈ ಅಣ್ಣ ತಮ್ಮಂದಿರಲ್ಲಿ ಒಬ್ಬರು ಹೆಚ್ಚು ಒಬ್ಬರು ಕಡಮೆ ಎನ್ನುವಂತಿಲ್ಲ. ಧನುರ್ವಿದ್ಯೆಗೆ ಆರಂಭವಾದ ದಿನದಲ್ಲೆ ಅರ್ಜುನನು ಲೋಕೋತ್ತರ ಧನ್ವಿಯಾಗುವನೆಂದು ಧನುರ್ವಿದ್ಯಾ ಗುರು ದ್ರೋಣಾಚಾರ್ಯನಿಗೆ ತಿಳಿದಿತ್ತು.

ಅರ್ಜುನಸ್ತು ಪರಂಯತ್ತಮಾತಸ್ಥೇ ಗುರುಪೂಜನೇ
ಅಸ್ತ್ರೇಚ ಪರಮಂ ಯೋಗಂ ಪ್ರಿಯೋ ದ್ರೋಣಸ್ಯ ಚಾಭವತ್.

ದ್ರೋಣನು ಅವನನ್ನು ಲೋಕದಲ್ಲಿ ಅತುಲ ಧನ್ವಿಯಾಗಿ ಮಾಡುವೆನೆಂದು ಅಭಯವಿತ್ತನು.

ಪ್ರಯತಿಷ್ಯೇ ತಥಾ ಕರ್ತುಂ ಯಥಾನಾನ್ಯೋ ಧನುರ್ಧರಃ
ತ್ವತ್ಸಮೋ ಭವಿತಾ ಲೋಕೇಸತ್ಯಮೇತತ್ ಬ್ರವೀಮಿ ತೇ.

ಒಂದು ಸಲ ದ್ರೋಣನು ಒಂದು ಮರದ ಕೊಂಬೆಯ ಕೊನೆಗೆ ಒಂದು ಕೃತಕ ಪಕ್ಷಿಯನ್ನು ಕಟ್ಟಿ ಈ ತರುಣರನ್ನೆಲ್ಲ ಅದರ ಕಡೆಗೆ ಗುರಿಹಿಡಿದು ನಿಲ್ಲಿ ಎಂದನು. ಒಬ್ಬೊಬ್ಬರೂ ಗುರಿಹಿಡಿದು ನಿಂತರು. ಆಚಾರ್ಯನು ಪಕ್ಷಿ ಕಾಣುತ್ತಿದೆಯೆ ಎನ್ನುವನು. ಅವರು ಕಾಣುತ್ತದೆಯೆನ್ನುವರು. ಮತ್ತೇನು ಕಾಣುತ್ತದೆ, ನಾನು, ಮರ, ಆಕಾಶ, ಎಂದು ಅವನು ಕೇಳಿದರೆ, ಎಲ್ಲರೂ ಇವೆಲ್ಲ ಕಾಣುತ್ತವೆ ಎಂದರು. ಅರ್ಜುನನು ಮಾತ್ರ ಹಕ್ಕಿ ಒಂದು ಕಾಣುತ್ತದೆ, ನನ್ನ ದೃಷ್ಟಿಯಲ್ಲಿ ಈಗ ಇನ್ನಾವುದೂ ಬೀಳುತ್ತಿಲ್ಲ, ಎಂದನು. ದ್ರೋಣನು ಅವನ ಈ ಏಕಾಗ್ರತೆಯನ್ನು ಮೆಚ್ಚಿದನು. ಅರ್ಜುನನು ಲೋಕವೇ ಮೆಚ್ಚುವಂಥ ಅಸಾಧಾರಣ ಕೌಶಲವನ್ನು ಬೆಳಸಿಕೊಂಡು ತನ್ನ ದಿನಕ್ಕೆ ತನಗೆ ಜೊತೆಯ ಬಿಲ್ಲಾಳಿಲ್ಲವೆಂದು ಕೀರ್ತಿಗಳಿಸಿದನು. ಏಕಲವ್ಯನೆಂಬ ವನ್ಯ ತರುಣನೊಬ್ಬನು ದ್ರೋಣನಲ್ಲಿ ಪ್ರತ್ಯಕ್ಷವಾಗಿ ವಿದ್ಯೆ ಕಲಿಯದೆ, ಅವನನ್ನು ಗುರುವೆಂದು ಭಾವಿಸಿ ಧನುರ್ವಿದ್ಯೆಯನ್ನು ಅಭ್ಯಾಸಮಾಡಿ ಅರ್ಜುನನಿಗೆ ಕೂಡ ಸಾಧ್ಯವಲ್ಲದ ಒಂದು ಕೌಶಲವನ್ನು ಸುಮಾರು ಇದೇ ಕಾಲದಲ್ಲಿ ಪಡೆದಿದ್ದನು. ಕೌರವ ಪಾಂಡವ ತರುಣರು ಒಂದು ಸಲ ಮೃಗಯಾ ವಿಹಾರಕ್ಕೆ ಹೋದಾಗ ಅವರ ನಾಯಿಯೊಂದು ಏಕಲವ್ಯನ ಬೀಡಿನ ಬಳಿ ಗದ್ದಲ

ಮಾಡಲು ಅವನು ಅದನ್ನು ಕೆಲವು ಬಾಣಗಳಿಂದ ಹೊಡೆದು ಹಿಂದಕ್ಕೆ ಅಟ್ಟಿದನು. ಆ ಬಾಣಗಳು ನಾಯಿಗೆ ತಗುಲಿದ್ದ ರೀತಿ ಆಶ್ಚರ್ಯಕರ ವಾಗಿದ್ದಿತು. ತನಗೆ ಈ ಕೌಶಲ ಇಲ್ಲವೆಂದು ಅರ್ಜುನನಿಗೆ ತೋರಿತು. ವಿಚಾರಿಸಿದ್ದರಲ್ಲಿ ಏಕಲವ್ಯನು ತಾನು ದ್ರೋಣನ ಶಿಷ್ಯನೆಂದು ಹೇಳಿ ಕೊಂಡನು. ಅರ್ಜುನನು ಗುರುವಿನ ಬಳಿಗೆ ಬಂದು, "ನನ್ನನ್ನು ಲೋಕದಲ್ಲಿ ಎಣೆಯಿಲ್ಲದ ಬಿಲ್ಲಾಳಾಗಿ ಮಾಡುತ್ತೇನೆ ಎಂದಿರಿ. ಈಗ ನಿಮ್ಮ ಶಿಷ್ಯನೊಬ್ಬನು ನನಗಿಂತ ಹೆಚ್ಚಿನ ಕೌಶಲ್ಯದಿಂದ ಸರಳನ್ನು ಬಿಡಬಲ್ಲವನಾಗಿದ್ದಾನೆ," ಎಂದು ಅಳಲಿದನು. ದ್ರೋಣನು ಯಾರು ತನ್ನ ಶಿಷ್ಯ ಎಂದು ಆಶ್ಚರ್ಯದಿಂದ ಏಕಲವ್ಯನ ಬೀಡಿಗೆ ಹೋಗಿ ಅವನು ತನ್ನನ್ನು ಗುರುವೆಂದು ಭಾವಿಸಿ ಒಂದು ಮೂರ್ತಿಯನ್ನು ಮಾಡಿಟ್ಟು ಕೊಂಡು ಇಷ್ಟೆಲ್ಲ ವಿದ್ಯವನ್ನು ಸಾಧಿಸಿರುವುದನ್ನು ಕಂಡನು; ಇನ್ನಿವನು ಹೆಚ್ಚುವುದಕ್ಕೆ ಬಿಡಬಾರದು ಎಂದು ನಿಶ್ಚಯಿಸಿ, "ನಾನು ನಿನ್ನ ಗುರು ವಾದರೆ ನೀನು ನನಗೆ ದಕ್ಷಿಣೆ ಕೊಡಬೇಕು," ಎಂದನು. ಏಕಲವ್ಯನು, "ಅಪ್ಪಣೆಮಾಡಿ, ನಿಮ್ಮ ಆಜ್ಞೆಯಂತೆ ನಡೆಯುವೆನು," ಎಂದನು. ಗುರು, "ನಿನ್ನ ಬಲಗೈಯ ಹೆಬ್ಬೆರಳನ್ನು ಕತ್ತರಿಸಿಕೊಡು," ಎಂದನು. ಸ್ವಲ್ಪವೂ ಹಿಂಜರಿಯದೆ ಏಕಲವ್ಯನು ತನ್ನ ಬೆರಳನ್ನು ಕತ್ತರಿಸಿ ಗುರುವಿನ ಎದುರಿಗಿಟ್ಟನು. ಆಮೇಲೆ ಅವನ ಹಸ್ತ ಲಾಘವ ಕೆಡಮೆಯಾಯಿತು; ಅವನ ಚಾಪಕೌಶಲ ಅರ್ಜುನನ ಕೌಶಲಕ್ಕೆ ಸಮನಾಗಲಿಲ್ಲ. ತನ್ನಲ್ಲಿ ವಿದ್ಯೆ ಕಲಿತ ಈ ಪಾಂಡವ ವೀರನಿಗಾಗಿ ದ್ರೋಣನು ಎಂಥ ಅನ್ಯಾಯ ವನ್ನು ಮಾಡಿದನೆನ್ನುವುದು ಈ ಕಥೆಯಲ್ಲಿ ಒಂದು ಮುಖ; ಆದರೆ ಅವನಿಗೆ ಈ ಶಿಷ್ಯನ ಮೇಲೆ ಎಷ್ಟು ಪ್ರೀತಿ ಇದ್ದಿತು ಎನ್ನುವುದೂ ಒಂದು ಮುಖ. ಅರ್ಜುನನು ಬಹು ಅನುಸರಣೆಯ ಮನುಷ್ಯ: ತುಂಬ ಹಿರಿಯ ವ್ಯಕ್ತಿತ್ವದ ಜೊತೆಗೆ ಇವನದು ಇತರರೊಂದಿಗೆ ಬೆರೆತು ನಡೆಯುವ ಮನೋಧರ್ಮ. ಇದರಿಂದಲೆ ಇವನು ಸರ್ವರಿಗೂ ಪ್ರಿಯನಾದನು; ಗಾಢವಾದ ಸ್ನೇಹಗಳನ್ನು ಸಂಪಾದಿಸಿದನು; ಕೃಷ್ಣನಂಥ ಮಹಾವ್ಯಕ್ತಿಯ ನಚ್ಚಿನ ಗೆಳೆಯನಾದನು. ಪಾಂಡವರ ಸಮಸ್ತ ವೈಭವಕ್ಕೆ, ಸಮಸ್ತ ವ್ಯಾಕುಲಕ್ಕೆ ಮೂಲ ಕಾರಣಳಾದ ದ್ರೌಪದಿಯನ್ನು ಅವರಿಗೆ ಸಂಪಾದಿಸಿ

ತಂದದ್ದು ಅರ್ಜುನನ ಬಿಲ್ಲಾಳುತನ. ತಾನು ಗೆದ್ದು ತಂದ ಹೆಣ್ಣಾದರೂ ಅರ್ಜುನನು ಅವಳನ್ನು ತಮ್ಮೆಲ್ಲರಿಗಾಗಿ ಎಂದೇ ಕರೆದುತಂದನು; ಅವಳನ್ನು ಸೋದರ್ಯರ ರಾಣಿಯಾಗಿ ಮಾಡುವೆನೆಂದ ಯುಧಿಷ್ಠಿರನ ನಿರ್ಣಯಕ್ಕೆ ಒಪ್ಪಿದನು. ಐವರು ಗಂಡಂದಿರು ಒಬ್ಬ ಹೆಂಡಿರನ್ನು ನಡಸಿಕೊಳ್ಳಬೇಕಾದರೆ ಹೇಗೆ ವರ್ತಿಸಬೇಕೆಂದು ನಾರದನಿಂದ ಸೂಚನೆಯನ್ನು ಪಡೆದು ಪಾಂಡವರು ಒಬ್ಬೊಬ್ಬ ಸೋದರನೂ ಒಂದೊಂದು ವರ್ಷ ಅವಳೊಂದಿಗೆ ಬಾಳುವುದೆಂದು ನಿಶ್ಚಯಮಾಡಿಕೊಂಡರು. ಇದಕ್ಕೆ ಅನುಸಾರವಾಗಿ ಯುಧಿಷ್ಠಿರನು ದ್ರೌಪದಿಯೊಂದಿಗೆ ಇದ್ದಕಾಲದಲ್ಲಿ ಒಂದು ದಿನ ಅರ್ಜುನನು ಸಹಾಯ ಬೇಡಿ ಬಂದ ಒಬ್ಬ ಪ್ರಜೆಯ ಸಲುವಾಗಿ ತನ್ನ ಬಿಲ್ಲು ಬತ್ತಳಿಕೆಯನ್ನು ತರಲು ಒಳಗೆ ಹೋಗಬೇಕಾಯಿತು. ಹೋದನೆ ತಾನು ಒಂದು ವರ್ಷ ದೇಶಾಟನೆ ಹೋಗಬೇಕಾಗುತ್ತದೆ; ಹೋಗಲಿಲ್ಲವೆ ಆರ್ತನಾಗಿ ಬಂದವನಿಗೆ ಸಹಾಯವಿಲ್ಲ. ಅರ್ಜುನನು, ಒಂದು ವರ್ಷ ದೇಶಾಟನವಾದರೂ ಮಾಡಿಯೇನು, ಎಂದುಕೊಂಡು ಸೋದರ್ಯದ ನಿಯಮವನ್ನು ಅತಿಕ್ರಮಿಸಿ ಒಳಗೆ ಹೋದನು. ಸಹಾಯ ಬೇಡಿ ಬಂದವರಿಗೆ ಸಹಾಯಮಾಡಿ ಸಮಯದಂತೆ ಒಂದು ವರ್ಷ ದೇಶಾಂತರ ಹೊರಟನು. "ನೀನು ಬಂದದ್ದು ನನಗೇನೂ ತಪ್ಪಿಲ್ಲ. ನೀನು ದೇಶಾಂತರ ಹೋಗಬೇಡ" ಎಂದು ಯುಧಿಷ್ಠಿರನೇ ತಮ್ಮನಿಗೆ ಸಮಾಧಾನ ಹೇಳಿದನು: ಈ ತಮ್ಮನು ಒಪ್ಪಲಿಲ್ಲ. ಒಪ್ಪಂದ ಒಪ್ಪಂದವೆ; ಒಪ್ಪಿಕೊಂಡವನು ಅದರಂತೆ ನಡೆಯಬೇಕು. ಎದುರಾಳಿ ಆದರಿಂದ ಇವನನ್ನು ಬಿಡಿಸುವುದಕ್ಕೆ ಸಿದ್ಧವಾಗಿರಬಹುದು; ಆದರೆ ಆ ಬಿಡುಗಡೆಯನ್ನು ಬಳಸಿಕೊಳ್ಳುವುದಕ್ಕೆ ಇವನು ಸಿದ್ಧನಾಗಿರಲಿಲ್ಲ.

"ಅನುಪ್ರವೇಶೇಯದ್ವೀರ ಕೃತವಾನ್ ತ್ವಂ ಮಮಾಪ್ರಿಯಂ
ಸರ್ವಂ ತದನುಜಾನಾಮಿವ್ಯಲೀಕಂ ನ ಚಮೇ ಹೃದಿ"

"ನವ್ಯಾಜೇನ ಚರೇತ್ ಧರ್ಮಮಿತಿಮೇ ಭವತಃ ಶ್ರುತಂ
ನಸತ್ಯಾದ್ವಿಚಲಿಷ್ಯಾಮಿ ಸತ್ಯೇನಾಯುಧಮಾಲಭೇ"

ಅರ್ಜುನನ ಈ ನಿಶ್ಚಯ ಅವನ ತಾತ ಭೀಷ್ಮನ ನಿಶ್ಚಯವನ್ನು ಜ್ಞಾಪಕಕ್ಕೆ ತರುತದೆ. ರಾಜಸೂಯದ ಸಂದರ್ಭದಲ್ಲಿ ಬಹು ರಾಷ್ಟ್ರಗಳನ್ನು

ಜಯಿಸಿದ್ದು ಅರ್ಜುನನ ಪ್ರತಾಪಕ್ಕೆ ಅನುಗುಣವಾಗಿಯೆ ಇದೆ. ದ್ಯೂತದ ಪ್ರಸಂಗದಲ್ಲಿ ಇವನು ಅಣ್ಣನ ಆಜ್ಞಾನುವರ್ತಿಯಾಗಿ ಎಷ್ಟೇ ಕೋಪ ಬಂದರೂ ತಡೆದುಕೊಂಡು ಗಂಭೀರವಾಗಿ ನಡೆದುಕೊಂಡನು. ಅರಣ್ಯ ವಾಸದಲ್ಲಿ ಹಿರಿಯಣ್ಣನಿಗೆ ಯಾವ ಬೇಸರವನ್ನೂ ಉಂಟುಮಾಡದೆ ನಿಶ್ಚಲ ಸ್ನೇಹದಿಂದ ವರ್ತಿಸಿದನು. ಘೋಷಯಾತ್ರೆಯ ಪ್ರಸಂಗದಲ್ಲಿ ಯುಧಿಷ್ಠಿರನು ದುರ್ಯೋಧನನನ್ನು ಬಿಡಿಸಿಕೊಂಡು ಬನ್ನಿ ಎಂದು ತಮ್ಮಂದಿರಿಗೆ ಹೇಳಿದಾಗ ಅವನ ಮಾತನ್ನು ನಡಸಿದವನು ಈ ತಮ್ಮ. ದುರ್ಯೋಧನನು ತಮ್ಮ ವಿಷಯದಲ್ಲಿ ಅನ್ಯಾಯವಾಗಿ ನಡೆದನೆನ್ನುವುದು ಭೀಮನಿಗೆ ಎಷ್ಟೋ ಅರ್ಜುನನಿಗೂ ಅಷ್ಟೇ ಬೇಸರ. ಆದರೆ ಇಂಥ ವೇಳೆಯಲ್ಲಿ ಅರ್ಜುನನಿಗೆ ತನ್ನ ರಾಗದ್ವೇಷಗಳಿಗಿಂತ ಅಣ್ಣನ ಆಜ್ಞೆ ಹೆಚ್ಚಿನ ಪದಾರ್ಥವಾಗುತ್ತಿದ್ದಿತು. ವನವಾಸ ಮುಗಿದು ಅಜ್ಞಾತವಾಸ ಕ್ಕೆಂದು ಇವರೆಲ್ಲ ವಿರಾಟನಗರಿಗೆ ನಡೆದ ಸಂದರ್ಭದಲ್ಲಿ ಒಮ್ಮೆ ದಾರಿಯಲ್ಲಿ ದ್ರೌಪದಿಗೆ ಬಹಳ ದಣಿವಾಯಿತು. ಯುಧಿಷ್ಠಿರನು, "ಪಾಂಚಾಲಿ ಬಳಲಿದ್ದಾಳೆ. ಅವಳನ್ನು ಸ್ವಲ್ಪ ದೂರ ಎತ್ತಿಕೊಂಡು ನಡೆ," ಎಂದು ಸಹದೇವನಿಗೆ ಹೇಳಿದನು; ಅವನು ತನ್ನಿಂದ ಆಗುವುದಿಲ್ಲವೆನ್ನಲು ನಕುಲನಿಗೆ ಹೇಳಿದನು. ಅವನೂ ಆಗುವುದಿಲ್ಲವೆನ್ನಲು ಅರ್ಜುನನು ರಾಣಿಯನ್ನು ಎತ್ತಿಕೊಂಡು ಕೊಂಚ ದೂರ ನಡೆದು ಅವಳ ದಣಿವನ್ನು ಹರಿಸಿದನು. ಇಂಥ ಮಾತಿನಿಂದ ಅರ್ಜುನನ ಮನೋಧರ್ಮ ಎಷ್ಟು ಉದಾತ್ತವಾದುದು ಎಂದು ಕಾಣುತ್ತದೆ. ಇಷ್ಟೇ ಉದಾತ್ತವಾದ ಇವನ ಇನ್ನೊಂದು ಗುಣ ಇವನ ಇಂದ್ರಿಯಸಂಯಮ. ಇವನು ಇಂದ್ರ ಲೋಕಕ್ಕೆ ಹೋದನೆಂದೂ, ಅಲ್ಲಿ ಊರ್ವಶಿ ಇವನ ಸಹವಾಸ ವನ್ನು ಬಯಸಿ ಹತ್ತಿರ ಬಂದಳೆಂದೂ, ಇವನು "ನೀನು ನಮ್ಮ ವಂಶದ ಮಾತೆ, ನಾನು ನಿನ್ನನ್ನು ತಾಯಿ ಎಂದಲ್ಲದೆ ಬೇರೆಯಾಗಿ ಬಗೆಯ ಲಾರೆನು," ಎಂದನೆಂದೂ ಭಾರತದಲ್ಲಿ ಕಥೆಯಿದೆ. ಊರ್ವಶಿ, ತಾನು ಅಪ್ಸರೆ, ತನಗೆ ಮನುಷ್ಯರ ಈ ನೀತಿ ಅನ್ವಯಿಸುವುದಿಲ್ಲ, ಎಂದು ಅವನನ್ನು ಒಪ್ಪಿಸಲು ಯತ್ನಮಾಡಿ ಅವನು ತನ್ನ ನಿಶ್ಚಯದಿಂದ ಕದಲದೆ ನಿಲ್ಲಲು ಬೇಸರದಿಂದ, "ನೀನು ಒಂದು ವರ್ಷ ಷಂಡನಾಗಿರು," ಎಂದಳಂತೆ.

ವಿರಾಟನ ಅರಮನೆಯಲ್ಲಿ ಅರ್ಜುನನು ಒಂದು ವರ್ಷ ರಾಣಿವಾಸದಲ್ಲಿ ಷಂಡನ ವೇಷದಲ್ಲಿ ನಿಲ್ಲಬೇಕಾಯಿತು, ಆಗ ಈ ಶಾಪ ಪ್ರಯೋಜನಕ್ಕೆ ಬಂದಿತು, ಎಂದು ಕಥೆಯಲ್ಲಿ ಹೇಳಿದೆ. ಈ ಅರ್ಜುನೋರ್ವಶೀ ಪ್ರಸಂಗ ಒಂದು ಪ್ರಾಂತದ ಕಲ್ಪನೆ. ಅರ್ಜುನನು ಬೃಹನ್ನಳೆಯ ವೇಷದಲ್ಲಿದ್ದಾಗ ನಿಜವಾಗಿ ಷಂಡನಾಗಿರಲಿಲ್ಲ; ಅಜ್ಞಾತವಾಸದ ಸಲುವಾಗಿ ನಿಷ್ಠುರ ಬ್ರಹ್ಮಚರ್ಯವನ್ನು ಆಚರಿಸಿದನು.

ಭ್ರಾತುರ್ನಿಯೋಗಾತ್ ಜ್ಯೇಷ್ಠಸ್ಯ ಸಂವತ್ಸರಮಿದಂ ವ್ರತಂ
ಚರಾಮಿ ಬ್ರಹ್ಮಚರ್ಯಂವೈ ಸತ್ಯಮೇತತ್ ಬ್ರವೀಮಿತೇ
ನಾಸ್ಮಿಕ್ಲೀಬೋ ಮಹಾಬಾಹೋ ಪರವಾನ್ ಧರ್ಮಸಂಯುತಃ
ಸಮಾಪ್ತವ್ರತಮುತ್ತೀರ್ಣಂ ವಿದ್ಧಿಮಾಂ ತ್ವಂ ನೃಪಾತ್ಮಜ

ಎಂದು ಅವನು ಆಮೇಲೆ ಉತ್ತರನಿಗೆ ಹೇಳುತ್ತಾನೆ.

ನಿಜವಾಗಿ ನೋಡಿದರೆ ಊರ್ವಶಿ ಹತ್ತಿರ ಬಂದಾಗ ಅವಳನ್ನು ಬೇಡ ಎಂದು ಹೇಳಿದ್ದರೆ ಅದು ಎಷ್ಟು ಆಶ್ಚರ್ಯಕ್ಕೆ ಕಾರಣವೊ ಅದಕ್ಕಿಂತ ಅರಮನೆಯಲ್ಲಿ ಎಂಥ ಎಂಥ ಚೆಲುವೆಯರ ಮಧ್ಯೆ ಬರಿಯ ಸ್ತ್ರೀಯರೇ ಇರುವೆವೆಂಬ ತಿಳಿವಳಿಕೆಯಲ್ಲಿ ಅವರು ಆಡಿದ ಆಟ ಹೇಳಿದ ಮಾತುಗಳನ್ನು ನೋಡುತ್ತ ಕೇಳುತ್ತ ಅವರಿಗೆ ನೃತ್ಯ ಗೀತಗಳನ್ನು ಕಲಿಸುತ್ತ ಗಂಡಾದವನು ಷಂಡನೆಂದೇ ತೋರುವಂತೆ ಬಾಳಿದನೆನ್ನುವುದು ಇದು ಹೆಚ್ಚು ಆಶ್ಚರ್ಯದ ಮಾತು. ಕೌರವ ಸೇನೆ ಬಂದು ವಿರಾಟನ ಗೋವುಗಳನ್ನು ಹಿಡಿದಾಗ ಅದರ ಮೇಲೆ ಯುದ್ಧಮಾಡಿ ಅದನ್ನು ಸೋಲಿಸಿ ಗೋವುಗಳನ್ನು ಹಿಂತಿರುಗಿಸಿ ತಂದವನು ಅರ್ಜುನನೇ. ಯುದ್ಧ ನಡೆದರೆ ಗೆಲವು ಪಾಂಡವರಿಗೆ ಎಂದು ಲೋಕವೆ ತಿಳಿದಿದ್ದಿತು: ಅರ್ಜುನನ ಜಯದಿಂದ ಅದು ಸಿದ್ಧಾಂತವಾಯಿತು. ಕೌರವರೊಂದಿಗೆ ಸಂಧಿಮಾಡಿಕೊಳ್ಳುವುದೆ ಎಂದು ಪ್ರಶ್ನೆ ಬಂದಾಗ ಅರ್ಜುನನು ಅಣ್ಣನ ಮಾತನ್ನು ವಿರೋಧಿಸಲಿಲ್ಲ. ಯುದ್ಧದಲ್ಲಿ ವೃಷ್ಣಿಗಳ ಸಹಾಯವನ್ನು ಕ್ರಮಪ್ರಕಾರ ಬೇಡುವುದಕ್ಕೆ ಇವನು ಹೋದಾಗ ಕೃಷ್ಣನು ನಿದ್ರಿಸುತ್ತಿರಲು ಎಷ್ಟೇ ಗಳಿಗೆಯನಾದರೂ ಇವನು ಅವನು ಏಳುವವರೆಗೆ ಕಾಯುವುದಕ್ಕೆ ಅವನ ಕಾಲಬದಿಯಲ್ಲಿ ಕುಳಿತನು. ಪರಾಕ್ರಮದಷ್ಟು, ಇಂದ್ರಿಯ ಸಂಯಮ

ದಷ್ಟು, ಅರ್ಜುನನಲ್ಲಿ ವಿನಯವೂ ಇದ್ದಿತು. ಧರ್ಮವಾದ ಕಾರಣ ತಾನು ಯುದ್ಧ ಮಾಡಬೇಕು; ಅದರಲ್ಲಿ ತನ್ನೆದುರಿಗೆ ಬಂದವರು ಎಷ್ಟೇ ಪ್ರಿಯರು, ಹಿರಿಯರು, ಆದರೂ ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸಿ ಅವರೊಡನೆ ಕಾದಬೇಕು: ಇದು ಅರ್ಜುನನ ನಿಶ್ಚಯ. ಜೊತೆಗೆ ಇವನಿಗೆ, "ಅಯ್ಯೊ, ಇಂಥ ಕೊಲೆಯಾಗುತ್ತಿದೆಯಲ್ಲ! ಇಷ್ಟು ಹತ್ತಿರದವರನ್ನು ಇಷ್ಟು ಪೂಜ್ಯರನ್ನು ಕೊಲ್ಲುತ್ತಿರುವೆವಲ್ಲ," ಎಂದು ವ್ಯಥೆಯೂ ಇದ್ದಿತು. ಭೀಷ್ಮಪರ್ವದಲ್ಲಿ ಇದು ಸ್ಪಷ್ಟವಾಗಿ ಕಾಣುತ್ತದೆ.

ಭೀಷ್ಮನನ್ನು ಕೆಡಹಬೇಕಾಗಿ ಬಂದಾಗ ಅರ್ಜುನನು ಆಡಿದ ಮಾತು ಕಲ್ಲೆದೆಯನ್ನು ಕರಗಿಸುವಂಥ ಮಾತು:

ಗುರುಣಾ ಕುರುವೃದ್ಧೇನ ಕೃತ ಪ್ರಜ್ಞೇನ ಧೀಮತಾ
ಪಿತಾಮಹೇನ ಸಂಗ್ರಾಮೇ ಕಥಂ ಯೋದ್ಧಾಸ್ಮಿ ಮಾಧವ
ಕ್ರೀಡತಾ ಹಿ ಮಯಾ ಬಾಲ್ಯೇ ವಾಸುದೇವ ಮಹಾಮನಾಃ
ಪಾಂಸು ದೂಷಿತ ಗಾತ್ರೇಣ ಮಹಾತ್ಮಾ ಪರುಷೀಕೃತಃ
ಯಸ್ಯಾಹ ಮಧಿರುಹ್ಯಾಂಕಂ ಬಾಲಃ ಕಿಲ ಗದಾಗ್ರಜ
ತಾತೇತ್ಯವೋಚಂ ಪಿತರಂ ಪಿತುಃ ಪಾಂಡೋಃ ಮಹಾತ್ಮನಃ
ನಾಹಂ ತಾತಸ್ತವಪಿತುಸ್ತಾತೋಽಸ್ಮಿ ತವ ಭಾರತ
ಇತಿ ಮಾಮಬ್ರವೀತ್ ಬಾಲ್ಯೇ ಯಃಸವಧ್ಯಂ ಕಥಂ ಮಯಾ

ಮಗುವಾಗಿದ್ದ ದಿನದಲ್ಲಿ ದೂಳಿನಲ್ಲಿ ಆಡಿ ಮಣ್ಣಾದ ಮೈಯಿಂದ ಇವನು ಈ ತಾತನ ಮೈಯನ್ನು ಮಣ್ಣುಮಾಡಿದ್ದನು; ಅಪ್ಪಾ ಎಂದು ಕರೆದಿದ್ದನು. ಅವನು ಈ ದೂಳನ್ನು ಒಪ್ಪಿಕೊಂಡು ತಾನು ಅಪ್ಪನಲ್ಲ, ಅಪ್ಪನ ಅಪ್ಪ ಎಂದು ಈ ತಬ್ಬಲಿ ಮಗುವಿಗೆ ಅರಿಯಿಸಿದ್ದನು.

ಭಾರತದ ಯುದ್ಧದಲ್ಲಿ ಅರ್ಜುನನ ಭಾಗ ಬಹಳಹಿರಿಯ ಭಾಗ. ಭೀಷ್ಮ, ದ್ರೋಣ, ಕರ್ಣ ಈ ಮೂವರನ್ನೂ ಕಾದಿ ತಡೆದ ಕೀರ್ತಿ ಇವನಿಗೆ ಸೇರತಕ್ಕದ್ದು. ಭೀಷ್ಮದ್ರೋಣರು ಇವನ ಕೈಯಿಂದ ಸಾಯಲಿಲ್ಲ; ಕರ್ಣನು ಇವನ ಕೈಯಿಂದ ಸತ್ತನು. ಆ ದಿನಕ್ಕೆ ಅರ್ಜುನನಿಗೆ ಸಮಸಮನಾದ ಧನ್ವಿ ಎಂದರೆ ಕರ್ಣ ಎಂದು ಹೆಸರಾಗಿದ್ದಿತು. ಕರ್ಣನನ್ನು ಕೊಲ್ಲುವುದಕ್ಕೆ ಅರ್ಜುನನು ಯುದ್ಧ ನಿಯಮಕ್ಕೆ ತಪ್ಪಿನಡೆದನೆಂದೂ

ಹಾಗೆ ತಪ್ಪಿ ನಡೆಯುವಂತೆ ಕೃಷ್ಣನು ಅವನನ್ನು ಪ್ರೇರಿಸಿದನೆಂದೂ ಕಥೆಯಲ್ಲಿ ಹೇಳಿರುವುದು ಕಾಣುತ್ತದೆ. ಕಥೆ ಕೃಷ್ಣನಿಗೆ ಇಂಥ ಹಲವು ಕೃತ್ಯಗಳನ್ನು ಆರೋಪಿಸುತ್ತದೆ. ಇವು ನಿಜವೇ ಎಂಬ ವಿಷಯದಲ್ಲಿ ಸಂದೇಹ ಬರುವುದಕ್ಕೆ ಕಾರಣ ಇದೆ. ಕೃಷ್ಣನನ್ನು ದೇವರು ಮಾಡಿದ ಜನ ಅವನನ್ನು ಕಪಟನಾಟಕ ಸೂತ್ರಧಾರಿಯನ್ನಾಗಿಯೂ ಮಾಡಿ ಮನುಷ್ಯರಲ್ಲಿ ದೋಷವಾಗಬಹುದಾದ ಕಾಪಟ್ಯ ದೇವರಿಗೆ ಭೂಷಣ ವಾಗುತ್ತದೆ ಎಂಬಂತೆ ತಮ್ಮ ದೇವರ ಹೆಚ್ಚಳಕ್ಕಾಗಿ ಇಂಥ ಸಂಗತಿಯನ್ನು ಕಲ್ಪಿಸಿದಂತೆ ತೋರುತ್ತದೆ. ಯುದ್ಧದಲ್ಲಿ ಅರ್ಜುನನಿಗೆ ಅವನ ಪ್ರಿಯ ಪುತ್ರ ಅಭಿಮನ್ಯುವಿನ ಸಾವಿನಿಂದ ದುಃಸಹ ದುಃಖ ಉಂಟಾಯಿತು. ಮಾನವನಂತೆ ಅಳಲಿ ಕ್ಷತ್ರಿಯನಾಗಿ ಅದನ್ನು ಸಹಿಸಿಕೊಂಡು ಅರ್ಜುನನು ಯುದ್ಧಕಾರ್ಯವನ್ನು ಎಂದಿನಂತೆ ಮುಂದರಿಸಿದನು. ಯುದ್ಧ ಮುಗಿದು ಯುಧಿಷ್ಠಿರನಿಗೆ ಪಟ್ಟಾಭಿಷೇಕವಾದಾಗ ಅವನ ಲೋಕೋತ್ತರ ಚಾಪ ಕೌಶಲ ಸಾರ್ಥಕವಾಯಿತು.

ಅರ್ಜುನನು ಕೃಷ್ಣನ ಸೋದರಿ ಸುಭದ್ರೆಯನ್ನು ಮದುವೆಯಾಗಿ ಅವನಿಗೆ ಗೆಳೆಯನೆಂಬ ಕಾರಣದಿಂದ ಮಾತ್ರವಲ್ಲದೆ ಅಳಿಯನೆಂಬ ಕಾರಣದಿಂದ ಮತ್ತಷ್ಟು ಪ್ರಿಯನಾದನು. ಇವರಿವರ ಸಂಬಂಧ ಬೆಳೆದ ರೀತಿಯಿಂದ ಇವರು ನರನಾರಾಯಣರಂತೆ ಒಂದು ಯಮಳ ವ್ಯಕ್ತಿದ್ವಯ ಎಂದು ಜನಕ್ಕೆ ತೋರಿತು. ಗೆಳೆತನ ಬಾಂಧವ್ಯ ಎರಡರಿಂದ ಬೆಳೆದ ಒಲವು ಇಷ್ಟು ಗಾಢವಾಗಿ ಇವರನ್ನು ಕೂಡಿಸಿದ್ದರಿಂದ ಕೃಷ್ಣನು ಅರ್ಜುನನಿಗೆ ತನ್ನ ಸಿದ್ಧಿಯ ಸಾರತತ್ತ್ವವನ್ನು ಹೇಳುವುದು ಸಾಧ್ಯ ವಾಯಿತು. ಯುದ್ಧದ ಆರಂಭದಲ್ಲಿ ಎರಡು ಸೈನ್ಯಗಳ ಮಧ್ಯೆ ನಿಂತು ಅವನು ಈ ಶಿಷ್ಯನಿಗೆ ಭಗವದ್ಗೀತೆಯನ್ನು ಉಪದೇಶ ಮಾಡಿದನೆನ್ನುವುದು ಕಲ್ಪನೆ. ಆದರೂ ಆ ಗ್ರಂಥದಲ್ಲಿ ಉಕ್ತವಾಗಿರುವ ಸಂಗತಿಯನ್ನು ಅವನು ತನ್ನ ಈ ಬಂಧುವಿಗೆ ಬೇರೆ ಬೇರೆ ಹತ್ತಾರು ಸಂದರ್ಭದಲ್ಲಿ ಹೇಳಿರಬೇಕೆನ್ನುವುದರಲ್ಲಿ ಸಂದೇಹವಿಲ್ಲ. ಈ ಅರ್ಥದಲ್ಲಿ ಅರ್ಜುನನು ಕೃಷ್ಣನ ಲೋಕ ಸಂಗ್ರಹ ಕಾರ್ಯ ಒಂದು ಸ್ಫುಟವಾದ ಆಕಾರವನ್ನು ಪಡೆಯುವುದಕ್ಕೆ ಕಾರಣನಾದನು.

## ೧೫

# ಭೀಮ

ಭೀಮನು ರೀತಿಯಲ್ಲಿ ಈ ತಮ್ಮನಿಂದಲೂ ಅಣ್ಣ ಯುಧಿಷ್ಠಿರನಿಂದಲೂ ಬೇರೆಯಾದವನು. ಇವನು ಆಕಾರದಲ್ಲಿ ಅಸಾಧರಣವಾದ ಎತ್ತರದ ಗಾತ್ರದ ಮೂರ್ತಿಯಾಗಿದ್ದಿರಬೇಕು. ಮೈಕಟ್ಟು ಬಹು ಭದ್ರ. ಇವನು ಹುಟ್ಟಿದ ಹೊಸದರಲ್ಲಿ ತಾಯಿ ಇವನನ್ನು ಎತ್ತಿಕೊಂಡು ಕಾಡಿನಲ್ಲಿ ಸುಳಿಯುತ್ತಿದ್ದಾಗ ಎದುರಿಗೆ ಒಂದು ಹುಲಿ ಬಂದು ಗರ್ಜಿಸಿತೆಂದೂ, ಅವಳು ಭಯದಿಂದ ಮಗುವನ್ನು ಕೆಳಗೆ ಹಾಕಿದಳೆಂದೂ, ಮಗು ಪಕ್ಕದಲ್ಲಿದ್ದ ಹಳ್ಳದ ಒಂದು ಬಂಡೆಯ ಮೇಲೆ ಬಿದ್ದು ಬಂಡೆ ಒಡೆದು ಹೋಯಿತೆಂದೂ ಭಾರತದಲ್ಲಿ ಕಥೆಯಿದೆ. ಇದು ಉತ್ಪ್ರೇಕ್ಷೆ ಎನ್ನುವುದರಲ್ಲಿ ಸಂದೇಹವಿಲ್ಲ: ಮಗು ಎಷ್ಟು ಕಟ್ಟುಮುಟ್ಟಾಗಿದ್ದಿತೆಂಬುದನ್ನು ಬಹು ಸುಂದರವಾಗಿ ಹೇಳುವ ತೆರ ಅಷ್ಟೆ. ಭೀಮನು ಬಹು ಹೆಚ್ಚಾಗಿ ಊಟ ಮಾಡುತ್ತಿದ್ದನೆಂದೂ ಕಥೆಯಲ್ಲಿ ಹೇಳಿದೆ. ಈ ಕಾರಣದಿಂದ ಅವನಿಗೆ ವೃಕೋದರ ಎಂದು ಹೆಸರು. ಈ ತೋಳನ ಹೊಟ್ಟೆಯ ಮಗನಿಗಾಗಿ ತಾಯಿ ಕುಂತಿ ಎಂಥ ಕಷ್ಟದ ದಿನದಲ್ಲೂ ಮನೆಯ ಅನ್ನದ ಅರ್ಧವನ್ನು ಮೀಸಲಾಗಿ ಇರಿಸುತ್ತಿದ್ದಳು. ಭೀಮನು ಸುಲಭ ಕೋಪಿ. ಅಷ್ಟೇ ಸುಲಭವಾಗಿ ಶಾಂತನೂ ಆಗುತ್ತಿದ್ದನು. ಶಾಂತನಾದರೂ ಆಗದಿದ್ದರೂ ಇವನ ಕೋಪ ಎಷ್ಟು ತೀವ್ರವೊ ಅಷ್ಟೇ ಇವನ ಹೃದಯ ಮೃದು. ಇವನ ಕನಿಕರ ಆಳ. ಇವನ ವಾತ್ಸಲ್ಯ ಗಾಢ. ಅರಣ್ಯದಿಂದ ಹಸ್ತಿನಾಪುರಕ್ಕೆ ಬಂದ ಎಳೆತನದ ಆ ದಿನಗಳಲ್ಲಿ ಕೌರವ ಪಾಂಡವರು ಎರಡು ಪಕ್ಷವಾದುದಕ್ಕೆ ಭೀಮನೇ ಕಾರಣ.

ಜವೇ ಲಕ್ಷ್ಯಾಭಿಹರಣೇ ಭೋಜ್ಯೇಪಾಂಸುವಿಕರ್ಷಣೇ
ಧಾರ್ತರಾಷ್ಟ್ರಾನ್ ಭೀಮಸೇನಃ ಸರ್ವಾನ್ ಸಪರಿಮರ್ದತಿ...
ಏವಂ ಸಧಾರ್ತರಾಷ್ಟ್ರಾಣಾಂ ಸ್ಪರ್ಧಮಾನೋ ವೃಕೋದರಃ
ಅಪ್ರಿಯೇಽತಿಷ್ಠದತ್ಯಂತಂ ಬಾಲ್ಯಾನ್ನ ದ್ರೋಹಚೇತಸಾ

ದುರ್ಯೋಧನ ಸುಮಾರು ಭೀಮಸೇನನ ವಯಸ್ಸಿನ ತರುಣ. ಅವನೂ ಕಟ್ಟುಮುಟ್ಟಾದ ಮೈಯ ಹುಡುಗ. ಇವರಿಬ್ಬರ ಮಧ್ಯೆ ಸಹಜವಾಗಿ

ಸ್ಪರ್ಧೆ ಹುಟ್ಟಿತು. ಯುಧಿಷ್ಠಿರ ಎಷ್ಟಾದರೂ ಅಣ್ಣ; ಅರ್ಜುನ ಎಷ್ಟಾದರೂ ತಮ್ಮ; ದುರ್ಯೋಧನ ಅವರನ್ನು ಸಮನೆಂದು ಕಾಣು ವಂತಿರಲಿಲ್ಲ. ಜೊತೆಯೆಂದು ತಿಳಿದ ಭೀಮನ ಸ್ವಭಾವ ಸ್ವಲ್ಪ ತೀಕ್ಷ್ಣ ವಾದ ಕಾರಣದಿಂದ ಈ ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳ ಮಧ್ಯೆ ವೈರವೇ ತಲೆಯಿಟ್ಟಿತು. ಪ್ರತಿಪಕ್ಷದವರು ಭೀಮನಿಗೆ ಒಂದು ಸಲ ವಿಷದ ಅನ್ನವನ್ನು ತಿನ್ನಿಸಿದರಂತೆ; ಒಂದು ಸಲ ಅವನನ್ನು ವಿಷದ ಹಾವಿನಿಂದ ಕಚ್ಚಿಸಿದರಂತೆ; ಒಂದು ಸಲ ಅವನನ್ನು ನೀರಿಗೆ ಎತ್ತಿ ಹಾಕಿದರಂತೆ. ಇದು ಯಾವುದರಿಂದಲೂ ಭೀಮನಿಗೆ ಕೇಡಾಗಲಿಲ್ಲ. ಆಗಲೆ ಅವರ ನಿರಾಶೆ ಮೊದಲಾಯಿತು. ದುರ್ಯೋಧನನ ಕೃತ್ರಿಮವನ್ನನುಸರಿಸಿ ಪಾಂಡವರು ವಾರಣಾವತದಲ್ಲಿ ವಾಸಮಾಡಲು ತೊಡಗಿದಾಗ, ಅವರನ್ನು ಅರಗಿನ ಮನೆಯಿಂದ ರಕ್ಷಿಸಿಕೊಳ್ಳುವ ಭಾರ ಭೀಮನ ಮೇಲೆ ಬಿದ್ದಿತು; ಅವನು ಆ ಹೊಣೆಯನ್ನು ದಕ್ಷತೆಯಿಂದ ನಿರ್ವಹಿಸಿದನು; ತಾಯನ್ನು ಅಣ್ಣನನ್ನು ತಮ್ಮಂದಿರನ್ನು ಉಳಿಸಿಕೊಂಡು ಕಾಡನ್ನು ಸಾರಿದನು. ಕಾಡಿನಲ್ಲಿ ಅವರು ದಣಿವಿಂದ ನಿದ್ರಿಸುತ್ತಿರುವ ಹೊತ್ತಿನಲ್ಲಿ ಭೀಮನು ಉಳಿದವರಿಗಿಂತ ಹೆಚ್ಚಿನ ದೇಹದಾರ್ಢ್ಯವಿದ್ದುದರಿಂದ ಕಾವಲು ಕುಳಿತನು. ಭೀಮನು ಆ ಹೊತ್ತಿನಲ್ಲಿ ಅವರಿಗೆ ಬಂದ ಅವಸ್ಥೆಯನ್ನು ಕುರಿತು ತುಂಬ ಕಳವಳಪಟ್ಟನು. "ಹಸ್ತಿನಾವತಿಯಲ್ಲಿ, ವಾರಣಾವತದಲ್ಲಿ, ಅರಮನೆಯ ಮೃದುತಲ್ಪಗಳಲ್ಲ ಮಲಗಿದರೂ ನಿದ್ದೆಬಾರದೆ ಇದ್ದ ಈ ತಾಯಿ ಸೋದರರು ಇಲ್ಲಿ ಕಾಡಿನಲ್ಲಿ ನೆಲದಮೇಲೆ ಮಲಗಿ ಹೇಗೆ ನಿದ್ರಿಸು ತ್ತಿದಾರೆ? ವಸುದೇವನ ತಂಗಿ, ಕುಂತಿಭೋಜನ ಮಗಳು, ವಿಚಿತ್ರ ವೀರ್ಯನ ಸೊಸೆ, ಪಾಂಡುರಾಯನ ರಾಣಿ, ನಮ್ಮಂಥ ಮಕ್ಕಳನ್ನು ಪಡೆದೂ ಅರಣ್ಯದಲ್ಲಿ ಅನಾಥೆಯಂತೆ ನಿದ್ರಿಸಬೇಕಾಯಿತೆ? ಈ ಅಣ್ಣ ತ್ರೈಲೋಕ್ಯಾಧಿಪತ್ಯಕ್ಕೆ ಯೋಗ್ಯನು. ತಮ್ಮನಾದ ಈ ಅರ್ಜುನ ನೆಲದಲ್ಲಿ ಮಲಗಿರುವುದನ್ನು ನೋಡುವುದಕ್ಕಿಂತ ಹೆಚ್ಚಿನ ದುಃಖವುಂಟೆ? ಈ ನಕುಲ ಸಹದೇವರು ಈ ದುರವಸ್ಥೆಯನ್ನೈದಿದರೆ? ಅದೃಷ್ಟವನ್ನು ಏನೆಂದು ಹೇಳುವುದು? ಜ್ಞಾತಿಯುಳ್ಳ ಮನುಷ್ಯ ಊರ ಮಧ್ಯದ ಮರ. ಅದಕ್ಕೆ ಕೇಡು ನಿಜ," ಎಂದುಕೊಂಡನು. ಆ ಸಮಯದಲ್ಲಿ ರಾಕ್ಷಸಿ

ತರುಣಿ ಹಿಡಿಂಬಿ ಬಂದಳು; ಬಂದವಳು ಇವನನ್ನು ಒಲಿದಳು. ಭೀಮನು ಅವಳ ಅಣ್ಣನೊಂದಿಗೆ ಕಾದಿ ಅವನನ್ನು ಕೊಂದು ಹಿಡಿಂಬಿಯನ್ನು ಮದುವೆಯಾದನು. ಏಕಚಕ್ರನಗರಿಗೆ ಹೋದ ಮೇಲೆ ಅಲ್ಲಿ ಭೀಮ ಸೇನನು ಬಕನನ್ನು ಕೊಂದನು; ಊರನ್ನು ಒಂದು ಮಹದಾಪತ್ತಿನಿಂದ ಸಂರಕ್ಷಿಸಿದನು. ರಾಜಸೂಯದ ಸಮಯದಲ್ಲಿ ಜರಾಸಂಧನನ್ನು ಕೊಲ್ಲುವ ಕಾರ್ಯ ಭೀಮನದಾಯಿತು. ಯಾಗ ನಡೆಯುತ್ತಿರುವ ವೇಳೆ ಶಿಶು ಪಾಲನು ಕೃಷ್ಣನನ್ನು ಕುರಿತು ಧೃಷ್ಟತನದಿಂದ ಮಾತನಾಡಿದಾಗ ಭೀಮನು ಅವನನ್ನು ದಂಡಿಸಲು ಎದ್ದುನಿಂತನು; ಆಗ ಭೀಷ್ಮನು "ಇದು ನಿನ್ನ ಕೆಲಸವಲ್ಲ ತಡೆದುಕೊ," ಎಂದು ಅವನನ್ನು ನಿಲ್ಲಿಸಿದನು. ಜೂಜಿನ ಹೊತ್ತಿನಲ್ಲಿ ಅಣ್ಣ ಯುಧಿಷ್ಠಿರನ ಕ್ರಮ ಈ ತಮ್ಮನಿಗೆ ಸರಿ ಹೋಗಲಿಲ್ಲ; ಆದರೆ ಅಣ್ಣನ ಮಾತನ್ನು ಮೀರುವುದು ಸಲ್ಲದೆಂಬ ಒಂದೇ ಭಾವನೆಯಿಂದ ಅವನು ಆದದ್ದನ್ನೆಲ್ಲ ಸಹಿಸಿಕೊಂಡನು. ಕಾಡಿಗೆ ಹೋದಮೇಲೆ ಒಂದು ಸಲ ದ್ರೌಪದಿ ಯುಧಿಷ್ಠಿರನ ಸಂಗಡ ಅವನ ಕರ್ತವ್ಯ ಏನು ಎಂಬ ವಿಷಯವನ್ನು ಕುರಿತು ಚರ್ಚೆಯನ್ನಾರಂಭಿಸಿ ದಳು. ಯುಧಿಷ್ಠಿರನ ದಾರಿ ಅತಿಮೆದುವಾಯಿತು ಎಂದು ಅವಳ ತಿಳಿವಳಿಕೆ. ಭೀಮನದೂ ಅದೇ ಅಭಿಪ್ರಾಯ. ದ್ರೌಪದಿ ಹೇಳಿದ ಮಾತಿಗೆ ಯುಧಿಷ್ಠಿರನು ಸಮಾಧಾನ ಹೇಳಿದನಂತರ ಭೀಮನು ವಾದದ ಸೂತ್ರವನ್ನು ಹಿಡಿದುಕೊಂಡನು. "ಸತ್ಪುರುಷೋಚಿತವಾದ ಮತ್ತು ಧರ್ಮದಿಂದ ನಮ್ಮದಾದ ರಾಜಪದವಿಯನ್ನು ಬಿಟ್ಟುಕೊಟ್ಟು ನಾವು ತಪೋವನದಲ್ಲಿ ಇರುವುದರ ಪ್ರಯೋಜನ ಏನು? ದುರ್ಯೋಧನನು ನಮ್ಮಿಂದ ರಾಜ್ಯವನ್ನು ಅಪಹರಿಸಿದ್ದು ಧರ್ಮದಿಂದಲ್ಲ, ಆರ್ಜವದಿಂದ ಅಲ್ಲ, ಪ್ರತಾಪದಿಂದ ಅಲ್ಲ. ದಾಳದ ಮೋಸವನ್ನಾಶ್ರಯಿಸಿ ಅವನು ನಮ್ಮ ರಾಜ್ಯವನ್ನು ಕಸಿದುಕೊಂಡನು. ಇದು ಶಕ್ತಿಮಂತವಾದ ಸಿಂಹ ದಿಂದ ಅದು ತಿನ್ನುವ ಮಾಂಸವನ್ನು ಒಂದು ನರಿ ಮೋಸದಿಂದ ಕದ್ದ ಹಾಗಾಯಿತು. ನ್ಯಾಯವಾಗಿ ನಿನ್ನದಾದ ರಾಜ್ಯಕ್ಕೆ ನೀನು ನಡೆ. ಧರ್ಮಲೇಶ ಯಾವುದನ್ನೊ ಮನಸ್ಸಿಗೆ ಅಂಟಿಸಿಕೊಂಡು ನಿಜವಾದ ಧರ್ಮ ಯಾವುದೊ ಅದನ್ನು ನೀನು ತೊರೆದಿದ್ದೀಯೆ. ನಿನ್ನನ್ನು ಅನು

ಸರಿಸಬೇಕಾದ ಕಾರಣದಿಂದಲೆ ನಾವು ಕೂಡ ಈ ದುರವಸ್ಥೆಯನ್ನು ತಪ್ಪಿಸಲಾಗಲಿಲ್ಲ. ನಾವು ನಿನ್ನ ಆಜ್ಞೆಗೆ ಕಟ್ಟುಬಿದ್ದು ಇಷ್ಟರಾದವರಿಗೆ ದುಃಖವನ್ನೂ ವೈರಿಗಳಿಗೆ ಸಂತೋಷವನ್ನೂ ಉಂಟುಮಾಡುತ್ತಿದೇವೆ. ನಮಗೆ ಒದಗಿರುವ ಈಗಿನ ದುಃಖ ಮರಣಕ್ಕೆ ಸಮನಾಗಿದೆ. ನಿಜವಾಗಿ ಇದಕ್ಕಿಂತ ಮರಣವೇ ಮೇಲು. ಧರ್ಮದಿಂದ ಯುದ್ಧ ಮಾಡಿದವನಿಗೆ ಸತ್ತರೆ ಪರಲೋಕವುಂಟು, ಗೆದ್ದರೆ ಇಹಲೋಕವುಂಟು; ಈಗಿನ ನಮ್ಮ ಗತಿ ಯಾವುದೂ ಅಲ್ಲ. ಬಲಿಷ್ಠನಾದವನು ತನ್ನ ಶಕ್ತಿಯನ್ನು ಬಳಸಬೇಕು, ಯುದ್ಧಮಾಡಬೇಕು; ನಿನ್ನ ಬಲವನ್ನು ಉಪಯೋಗಿಸು. ದುರ್ಯೋಧನನು ಈ ರಾಜ್ಯಕ್ಕೆ ಅಪಾತ್ರನು. ಇದನ್ನು ಲೋಕವೆ ಬಲ್ಲುದು. ಹಗೆಯೊಂದಿಗೆ ಯುದ್ಧಮಾಡಿ ಅವನನ್ನು ಸೋಲಿಸಿ ಒಡನೆಯೆ ರಾಜನಾಗಬೇಕು. ಸಕಾಲವೆಂದು, ಅವಧಿ ಎಂದು, ದಿನಗಳನ್ನು ಕಳೆದು ಕಾದು ಆಯುಸ್ಸನ್ನು ವ್ಯರ್ಥಮಾಡಬೇಡ. ಮನುಷ್ಯನು ನೀರಮೇಲಣ ನೊರೆಯಂತೆ, ಪಕ್ವವಾದ ಹಣ್ಣಿನಂತೆ, ಯಾವ ಕ್ಷಣದಲ್ಲೊ ನಷ್ಟವಾಗುವವನು. ಹೀಗಿರುವಲ್ಲಿ ನೀನು ಕಾಲ ನಿನ್ನ ಅಧೀನವಾಗಿದೆ ಎಂಬಂತೆ ಸಾವಕಾಶ ಮಾಡುತ್ತೀಯಲ್ಲ. ನೀನು ಅವಧಿಯೆಂಬ ಕಾರಣದಿಂದ ಕಾಲ ತಡೆಯುತ್ತದೆಯೆ? ನಿನ್ನನ್ನು ನಂಬಿದ ನಾವೆಲ್ಲ ಯಾವುದೊ ಒಂದು ಒಳ್ಳೆಯದನ್ನು ಬಯಸುತ್ತಿದೇವೆ; ಆ ನಾವೆಲ್ಲ ದುಃಖದಲ್ಲಿ ಸಿಕ್ಕಿಕೊಂಡಿದ್ದೇವೆ.

"ನೇತಃ ಪಾಪೀಯಸೀ ಕಾಚಿತ್ ಆಪತ್ ರಾಜನ್ ಭವಿಷ್ಯತಿ,
ಯನ್ನೋ ನೀಚೈರಲ್ಪಬಲೈಃ ರಾಜ್ಯಂ ಆಚ್ಛಿದ್ಯ ಭುಜ್ಯತೇ.
ಶೀಲದೋಷಾತ್ ಘೃಣಾದಿಷ್ಟ ಆನೃಶಂಸ್ಯಾತ್ ಪರಂತಪ
ಕ್ಲೇಶಾನ್ ತಿತಿಕ್ಷ್ಯಸೇ ರಾಜನ್ ನಾನ್ಯಃ ಕಶ್ಚಿತ್ ಪ್ರಶಂಸತಿ.
ಘೃಣೀ ಬ್ರಾಹ್ಮಣ ರೂಪೋಸಿ ಕಥಂ ಕ್ಷತ್ರೇ ಅಜಾಯಥಾಃ
ಅಸ್ಯಾಂ ಹಿ ಯೋನೌ ಜಾಯಂತೇ ಪ್ರಾಯಶಃ ಕ್ರೂರ ಬುದ್ಧಯಃ

"ಇದಕ್ಕಿಂತ ಕೇಡು ಸಾಧ್ಯವಲ್ಲ. ನಮಗಿಂತ ಕಡಮೆಯ ಬಲದ ನೀಚರು ನಮ್ಮ ರಾಜ್ಯವನ್ನು ಕಿತ್ತುಕೊಂಡು ಆಳುತ್ತಿರುವುದು ಆಪತ್ತಿನಲ್ಲಿ ಕೊನೆಯ ನೆಲೆ. ನಿನ್ನ ಶೀಲ ಒಂದು ದೋಷವಾಗಿದೆ. ನಿನ್ನನ್ನು

ಘೃಣ ಹಿಡಿದುಬಿಟ್ಟದೆ. ಈ ಕಾರಣದಿಂದ ಪರಂತಪನಾದ ನೀನು ಆನೃಶಂಸ್ಯವನ್ನು ಹಿಡಿದು ಕ್ಲೇಶವನ್ನು ಸಹಿಸಿಕೊಂಡಿದೀಯೆ. ನಿನ್ನ ಘೃಣ ಎಷ್ಟಾಯಿತೆಂದರೆ ನೀನು ಒಬ್ಬ ಬ್ರಾಹ್ಮಣನಂತಿದೀಯೆ. ಕ್ಷತ್ರಿಯರಲ್ಲಿ ಹೇಗೆ ಹುಟ್ಟಿದೆಯೊ? ಪ್ರಾಯಶಃ ಕ್ಷತ್ರಿಯ ಕುಲದಲ್ಲಿ ಹುಟ್ಟಿದವರು ಕ್ರೂರಬುದ್ಧಿಗಳಾಗಿರಬೇಕು. ಒಂದು ಹಿಡಿ ಹುಲ್ಲಿನಿಂದ ಹಿಮವತ್ಪರ್ವತವನ್ನು ಹೊದಿಸುವೆನೆಂಬಂತೆ ನೀನು ನಮ್ಮನ್ನು ತಡೆಯುತ್ತ ನಿಂತಿದ್ದೀಯೆ. ಕ್ಷತ್ರಿಯರಿಗೆ ಯುದ್ಧಕ್ಕಿಂತ ಹಿರಿಯ ಧರ್ಮ ಬೇರೊಂದಿಲ್ಲ. ಆದ್ದರಿಂದ ಶತ್ರುಸಂಹಾರವನ್ನು ನಿಶ್ಚಯಿಸು.

> "ತಸ್ಮಾತ್ ಶತ್ರುವಧೇ ರಾಜನ್ ಕ್ರಿಯತಾಂ ನಿಶ್ಚಯಃತ್ವಯಾ
> ಕ್ಷತ್ರಿಯಸ್ಯತು ಸರ್ವಸ್ಯ ನಾನ್ಯೋಧರ್ಮೋಽಸ್ತಿ ಸಂಯುಗಾತ್,"

ಎಂದನು. ಧರ್ಮರಾಯನು ಈ ಮಾತಿಗೆ ಒಪ್ಪಲಿಲ್ಲ. ಘೋಷಯಾತ್ರೆಯ ಪ್ರಸಂಗದಲ್ಲಿ ದುರ್ಯೋಧನನು ಗಂಧರ್ವರ ಕೈಗೆ ಸಿಕ್ಕಿದಾನೆಂಬ ಸುದ್ದಿ ಬಂದಾಗ ಭೀಮಸೇನನು,

> "ಅನ್ಯಥಾ ವರ್ತಮಾನಾನಾಂ ಅರ್ಥೋ ಜಾತೋಯಮನ್ಯಥಾ
> ಅಸ್ಮಾಭಿಃ ಯದನುಷ್ಠೇಯಂ ಗಂಧರ್ವೈಃ ತದನುಷ್ಠಿತಂ

"ತಪ್ಪುದಾರಿಯಲ್ಲಿ ನಡೆದವನಿಗೆ ಅನರ್ಥ ಸಂಭವಿಸಿತು. ನಾವು ಯಾವುದನ್ನು ಮಾಡಬೇಕಾಗಿತ್ತೋ ಅದನ್ನು ಗಂಧರ್ವರು ಮಾಡಿದರು," ಎಂದನು. ಇವನ ಈ ಕ್ರೂರ ವಾಕ್ಯವನ್ನು ಯುಧಿಷ್ಠಿರನು ಒಪ್ಪಲಿಲ್ಲ. ಅರ್ಜುನನು ದುರ್ಯೋಧನನ ಸಹಾಯಕ್ಕೆ ಹೋದನು, ಅವನನ್ನು ಗಂಧರ್ವರ ಕೈಯಿಂದ ಬಿಡಿಸಿದನು. ವಿರಾಟನಗರಿಯಲ್ಲಿ ಅಜ್ಞಾತವಾಸದಲ್ಲಿರುವಾಗ ಕೀಚಕನು ದ್ರೌಪದಿಯ ವಿಷಯದಲ್ಲಿ ಅವಮರ್ಯಾದೆಯಿಂದ ನಡೆದ ಸಂದರ್ಭದಲ್ಲಿ ದ್ರೌಪದಿಗೆ ಭೀಮನು ಹೊರತು ಬೇರೆ ದಿಕ್ಕಿಲ್ಲ ಎಂದು ತೋರಿತು. ಯುಧಿಷ್ಠಿರನು ಯಾವ ಮಾತಿಗೂ ಸಹಿಸಿಕೊ ಎನ್ನುವನು; ಅರ್ಜುನನು ನಪುಂಸಕವೇಷದಲ್ಲಿ ಅಂತಃಪುರದಲ್ಲಿರುವವನು; ನಕುಲ ಸಹದೇವರು ಮನೋಧರ್ಮದಿಂದ ಕೀಚಕನನ್ನು ಎದುರಿಸುವುದಕ್ಕೆ ಅಕ್ಷಮರು; ಅವನನ್ನು ದಂಡಿಸುವ ಮನಸ್ಸು ಶಕ್ತಿ ಎರಡೂ ಇದ್ದದ್ದು

ಭೀಮನಿಗೆ ಒಬ್ಬಸಿಗೇ. ಅವಳು ತೀರ ವಿಧಿಯಿಲ್ಲವೆಂದು ಕಂಡಾಗ ಒಂದು ರಾತ್ರಿ ಭೀಮಸೇನನ ಬಳಿಗೆ ಬಂದಳು; ತನ್ನ ಸಂಕಟವನ್ನು ಅವನಿಗೆ ಹೇಳಿಕೊಂಡಳು. "ನನ್ನ ಗತಿ ಹೀಗಾಗಬಹುದೆ? ನಾನು ನಿಮ್ಮ ಐವರಿಗೆ ಅಂಜಿದವಳಲ್ಲ. ಅತ್ತೆ ಕುಂತಿಯ ಎದುರಿಗೆ ಹೆದರಿ ನಿಂತವಳಲ್ಲ. ಈಗ ಈ ವಿರಾಟನ ಅರಮನೆಯಲ್ಲಿ ಇವರು ಕೇಳಿದ ಗಂಧವನ್ನು ತೇದು ಎದುರಿಗಿಟ್ಟು, ಇವರು ಒಪ್ಪುವರೊ ಇಲ್ಲವೊ ಎಂದು ಹೆದರಿ ಎದುರಿಗೆ ನಿಲ್ಲುತ್ತಿದೇನೆ. ನೋಡು ಭೀಮ! ಈ ಅರಮನೆಯ ಜನಕ್ಕೆ ಗಂಧವನ್ನು ತೇದು ತೇದು ಈ ನನ್ನ ಅಂಗೈ ಜಡ್ಡುಕಟ್ಟಿದೆ," ಎಂದು ಕೈಯನ್ನು ತೋರಿಸಿದಳು. ಭೀಮನು ಆ ಕೈಯನ್ನು ತೆಗೆದುಕೊಂಡು ತನ್ನ ಕಣ್ಣಿಗೆ ಒತ್ತಿಕೊಂಡನಂತೆ. ದಾಂಪತ್ಯದ ಪ್ರೇಮದ ಬಹು ಸುಂದರ ಚಿತ್ರ ಇಂಥದು ಲೋಕದ ಸಾಹಿತ್ಯದಲ್ಲಿ ಬಹಳ ಇರಲಾರದು. ಅದರ ನಾಯಕ ಭೀಮ ಎಂದರೆ ಅನೇಕರು ನಂಬಲಾರರು. ಭೀಮನ ಸ್ವಭಾವವನ್ನು ಕುರಿತು ನೂರು ಶ್ಲೋಕಗಳನ್ನು ಬರೆದಿದ್ದರೂ ಕವಿ ಅದನ್ನು ಈ ಒಂದು ವಿವರದಿಂದ ವರ್ಣಿಸುವಷ್ಟು ಚೆನ್ನಾಗಿ ವರ್ಣಿಸುವುದು ಆಗಿರಲಾರದು. ಯುದ್ಧ ನಿಶ್ಚಯವಾಗುವುದಕ್ಕೆ ಮೊದಲು, ಕೃಷ್ಣನು ದುರ್ಯೋಧನನ ಬಳಿಗೆ ಸಂಧಿಗೆಂದು ಹೋಗುವುದೆಂದು ಮಾತು ಬಂದಾಗ ಮೊದಲಲ್ಲಿ ಭೀಮನು ಕೂಡ, ಸಾಧ್ಯವಾದರೆ ಸಂಧಿ ಮಾಡಿಕೊಳ್ಳುವುದೇ ಸರಿ, ಎಂದನು. "ನಿನ್ನಿಂದ ಇಂಥ ಮಾತು ಕೇಳುವುದು ಆಶ್ಚರ್ಯ," ಎಂದು ಕೃಷ್ಣನು ಕೆಣಕಿ ನುಡಿದಾಗ ಭೀಮನು, "ನಿನಗೆ ಆಶ್ಚರ್ಯವಾಗುವುದು ಸಹಜ. ನೀನು ನನ್ನನ್ನು ಕಾಣೆ. ಕೊಳದಲ್ಲಿ ಈಜದವನಿಗೆ ನೀರಿನ ಆಳ ಹೇಗೆ ತಿಳಿಯಬೇಕು? ಯುದ್ಧ ಬಂದರೆ ಅದನ್ನು ಮಾಡುವುದರಲ್ಲಿ ನಾನು ಯಾರಿಗೂ ಹಿಂದೆ ನಿಲ್ಲುವುದಿಲ್ಲ. ಆದರೆ ಹಗೆಗಳು ನ್ಯಾಯಕ್ಕೆ ಒಪ್ಪಿ ಬಂದರೆ ಅದನ್ನೂ ನಾನು ಒಪ್ಪಿಕೊಂಡೇನು," ಎಂದನು. ಯುದ್ಧ ನಡೆಯಿತು. ಭೀಮನು ಮಹಾ ಪರಾಕ್ರಮದಿಂದ ಕಾದಿದನು; ತನ್ನ ಗದೆಯ ಪ್ರಹಾರದಿಂದ ದುರ್ಯೋಧನನನ್ನು ನೆಲಕ್ಕೆ ಬಡಿದು ಅವರ ಮುಕ್ತಾಯವನ್ನು ಆಚರಿಸಿದನು. ಗದಾಯುದ್ಧದಲ್ಲಿ ಕೃಷ್ಣನು ಭೀಮಸೇನನಿಗೆ, "ಹಗೆಯ ತೊಡೆಗೆ ಪೆಟ್ಟುಹಾಕು," ಎಂದು ಸನ್ನೆಮಾಡಿ

ದನೆಂದೂ, ಭೀಮಸೇನನು ಹಾಗೆ ಮಾಡಿದನೆಂದೂ, ಅದು ಗದಾ ಯುದ್ಧದ ನಿಯಮಗಳಿಗೆ ವಿರೋಧವೆಂದೂ ಕೃಷ್ಣನ ಕುಟಿಲ ಭೀಮಸೇನನ ದುರಾಚಾರದಿಂದ ದುರ್ಯೋಧನನು ಮಡಿದನೆಂದೂ, ಕಥೆ ಬೆಳೆದಿದೆ. ದುರ್ಯೋಧನನು ಅನ್ಯಾಯದಿಂದ ಮಡಿದನೆಂದು ದೇವತೆಗಳು ಆಕಾಶ ದಿಂದ ನುಡಿದರಂತೆ; ಅವನ ಮೇಲೆ ಪುಷ್ಪಗಳನ್ನು ಸುರಿದರಂತೆ. ಈ ಮಾತೆಲ್ಲ ಆ ಮೇಲೆ ಸೇರಿದ್ದು ಎಂದು ಕಥೆಯ ಸರಣಿಯಿಂದ ಸ್ಪಷ್ಟ ವಾಗುತ್ತದೆ. ಭೀಮನು ದುರ್ಯೋಧನನ ತೊಡೆಯನ್ನು ಹೊಡೆದದ್ದೇ ಆದರೆ ಅವನು ಅದಕ್ಕೆ ಹಿಂದೆ ಎಲ್ಲರ ಎದುರಿಗೆ ಮಾಡಿದ್ದ ಶಪಥವನ್ನು ಮಾತ್ರ ನಡಸಿದನು. ಗದೆಯಿಂದ ಯುದ್ಧ ಮಾಡುವಲ್ಲಿ ತೊಡೆಯಮೇಲೆ ಹೊಡೆಯುವುದು ತಪ್ಪೇ ಆಗಿದ್ದ ಪಕ್ಷದಲ್ಲಿ ಶಪಥಮಾಡುವಾಗ ಭೀಮನಿಗೆ ಈ ಯೋಚನೆ ಬರಬೇಕಾಗಿರಲಿಲ್ಲ. ಅಲ್ಲದೆ ಅವನು ಮಾಡಿದ್ದ ಶಪಥ ವನ್ನು ನಡಸು ಎಂದು ಕೃಷ್ಣನು ಹುಬ್ಬಿನಿಂದ ಸನ್ನೆಮಾಡಿ ಅವನನ್ನು ಪ್ರೇರಿಸಬೇಕಾದ ಕಾರಣವಿಲ್ಲ. ದುರ್ಯೋಧನನು ಕೆಳಗೆ ಬಿದ್ದಮೇಲೆ ಭೀಮನು ತನ್ನ ಕಾಲಿನಿಂದ ಅವನ ತಲೆಯನ್ನು ಒದೆದನು. ಇದು ನಡೆದ ಸಂಗತಿಯೆಂದು ಕಾಣುತ್ತದೆ. ಭೀಮನಲ್ಲಿ ಈ ನಡತೆ ಸರಿಯಲ್ಲ. ಆದರೆ ದುರ್ಯೋಧನನು ಮಾಡಿದ್ದ ಅನ್ಯಾಯಗಳ ಜೊತೆಗೆ ಅಳತೆ ಮಾಡಿದರೆ ಈ ಅಪಚಾರ ಪ್ರಾಯಶಃ ಕ್ಷಮ್ಯವೆಂದು ಕಾಣಬಹುದು. ಕ್ಷಮ್ಯವೊ, ಕ್ಷಮ್ಯ ಅಲ್ಲವೊ, ಬಹು ಸಹಜ ಎಂದು ಕಾಣಲೆಬೇಕು. ಕ್ಷಮ್ಯವೆಂದು ಹೇಳಿ ನಾವು ಪಕ್ಷಪಾತಿಗಳಾಗಬೇಕಾದ ಕಾರಣ ಏನೂ ಇಲ್ಲ. ಸಹಜವೆಂದು ಒಪ್ಪಿಕೊಂಡರೆ ಮನುಷ್ಯ ಸ್ವಭಾವವನ್ನು ಬಲ್ಲವರು ಆದೇವು. ರಾಜನಾದ ಯುಧಿಷ್ಠಿರನಿಗೆ ಭೀಮಸೇನನ ಪ್ರೀತಿಗಿಂತ ಹೆಚ್ಚಿನ ಆಸ್ತಿ ಒಂದಿರಲಿಲ್ಲ. ಮಹಾಪ್ರಸ್ಥಾನದಲ್ಲಿ ದ್ರೌಪದಿ ಸಹದೇವ ನಕುಲ ಅರ್ಜುನರು ತೀರಿಕೊಂಡ ಮೇಲೆ ಭೀಮನೂ ಯುಧಿಷ್ಠಿರನೂ ಸ್ವಲ್ಪದೂರ ಜೊತೆಗೆ ನಡೆದರು. ಕೊನೆಗೆ ಭೀಮನೂ ಬಿದ್ದುಹೋದನು; "ದೊರೆಯೆ, ನಿನಗೆ ಪ್ರಿಯನಾದ ನಾನು ಬಿದ್ದೆನು" ಎಂದನು. ಭೀಮನು ನಿಜವಾಗಿ ಯುಧಿಷ್ಠಿರನಿಗೆ ಬಹು ಪ್ರಿಯನಾದ ಸಹೋದರನು.

## ೧೬
# ಯುಧಿಷ್ಠಿರ
## (i) ಪೂರ್ವಾರ್ಧ

ಈ ಎಲ್ಲರ ಅಣ್ಣ ಯುಧಿಷ್ಠಿರನು ಮಹಾಭಾರತ ಕಥೆಯ ಮುಖ್ಯ ನಾಯಕನು. ಮಹಾ ಪರಾಕ್ರಮಿಯಾದ ಅರ್ಜುನ, ಮಹಾ ತೇಜಸ್ವಿಯಾದ ಭೀಮ, ಇವರ ಜೊತೆಯಲ್ಲಿ ನಿಂತು ಯುಧಿಷ್ಠಿರನು ಭಾರತದಂಥ ವೀರರಸ ಪ್ರತಿಪಾದಕವಾದ ಗ್ರಂಥದ ನಾಯಕನು ಹೇಗೆ ಆಗಬಹುದು ಎಂದು ಅನೇಕರಿಗೆ ಸಂಶಯ ಹುಟ್ಟಬಹುದು. ಯುಧಿಷ್ಠಿರನ ಮುಖ್ಯ ಗುಣ ಪರಾಕ್ರಮ, ತೇಜಸ್ಸು ಅಲ್ಲ: ಯುದ್ಧಕ್ಕೆ ಪರಾಕ್ರಮ ತೇಜಸ್ಸು ಆವಶ್ಯಕ. ಆದರೆ ಯುಧಿಷ್ಠಿರನು, ಸಾಧ್ಯವಾದರೆ ಯುದ್ಧವನ್ನು ತಪ್ಪಿಸಬೇಕೆಂದು ಯೋಚಿಸುವ ಸ್ವಭಾವದವನಾಗಿ, ಮುಖ್ಯವಾಗಿ ಕ್ಷಮಾವಂತನೆನಿಸಿಕೊಂಡರೂ, ಯುದ್ಧಕ್ಕೆ ಹೆದರುವ ಹೇಡಿಯಲ್ಲ. ಅವನು ಹೇಡಿಯಾಗಿ ಯುಧಿಷ್ಠಿರ ಎಂಬ ಹೆಸರನ್ನು ಉಳಿಸಿಕೊಂಡಿರಲಾರನು. ತೇಜಸ್ವಿಯಾದ ಭೀಮ, ಪರಾಕ್ರಮಿಯಾದ ಅರ್ಜುನ, ಇವರನ್ನು ತಮ್ಮಂದಿರಾಗಿ ಪಡೆದು ಇವನು ದೊಡ್ಡ ತಾತ ದೊಡ್ಡ ತಂದೆಯವರ ನೆರಳಿನಲ್ಲಿ, ಅಸೂಯಾವಂತ ಜ್ಞಾತಿಗಳ ಜೊತೆಯಲ್ಲಿ ಬೆಳೆಯಬೇಕಾಯಿತು. ಈ ಪರಿಸ್ಥಿತಿಯನ್ನು ಸರಿಯಾಗಿ ಗ್ರಹಿಸದೆ ಇವನ ಸ್ವಭಾವ ಬೆಳೆದ ರೀತಿಯನ್ನು ತಿಳಿಯಲಾಗುವುದಿಲ್ಲ. ಯಜಮಾನ ಧೃತರಾಷ್ಟ್ರನ ಮಕ್ಕಳೊಂದಿಗೆ ಈ ಹುಡುಗರಿಗೆ ವಿವಾದ ಬಂದಾಗ ಅವರಿಗೆ ಅವರಪ್ಪ ಉಂಟು; ಇವರಿಗೆ ಯಾರು ದಿಕ್ಕು? ಇಂಥ ಸಂದರ್ಭದಲ್ಲ ಯಾವನು ಹಿರಿಯನೊ ಅವನು ತಂದೆಯ ಸ್ಥಾನವನ್ನು ವಹಿಸಿಕೊಳ್ಳುತ್ತಾನೆ. ಧರ್ಮರಾಯನ ಸ್ಥಿತಿ ಹೀಗಾಯಿತು. ತಂದೆ ಜೀವಂತನಾಗಿದ್ದು ಇವರ ಜಗಳಗಳನ್ನು ಬಿಡಿಸುವುದಕ್ಕೆ ಹತ್ತಿರದಲ್ಲಿ ಇದ್ದಿದ್ದರೆ ಇವನೂ ತನ್ನ ಪರಾಕ್ರಮ ತೇಜಸ್ಸನ್ನು ಮುಂದೆ ಇಟ್ಟುಕೊಂಡು ನಡೆಯಬಹುದಾಗಿದ್ದಿತು. ಆ ತಂದೆ ಇಲ್ಲದ್ದರಿಂದ, ಆ ತಂದೆ ಆಡಬಹುದಾಗಿದ್ದ ನ್ಯಾಯದ ಮಾತುಗಳನ್ನು ಆಡುವ ಭಾರ ಇವನದಾಯಿತು. ಇದರಿಂದ ಇವನು ಜಗಳವಾಡುವುದು ಬೇಡ ಎಂಬ ಮನೋಧರ್ಮದಲ್ಲಿ ಬೆಳೆಯಬೇಕಾಯಿತು; ವಯಸ್ಸಿನಲ್ಲಿ ಭೀಮಾರ್ಜುನ

ರಿಗಿಂತ ಬಹಳವೇನೂ ಹಿರಿಯನಲ್ಲದಿದ್ದರೂ ತಾಳ್ಮೆಯಿಂದ ಬಹುವೃದ್ಧ ನಾದಂತೆ ಕಾಣಬೇಕಾಯಿತು. ಹಸ್ತಿನಾವತಿಯ ಆರಂಭದ ಜೀವನದಲ್ಲಿ, ಶಸ್ತ್ರಾಭ್ಯಾಸದ ಕಾಲದಲ್ಲಿ ಇವನೂ ಶಕ್ತನೆಂದೇ ಹೊಗಳಿಸಿಕೊಂಡನು. ವಾರಣಾವತಕ್ಕೆ ಹೊರಡುವ ವೇಳೆಗೆ ಯುಧಿಷ್ಠಿರನು ತನ್ನ ಸಂಸಾರದ ಯಾಜಮಾನ್ಯವನ್ನು ವಹಿಸಿಕೊಂಡು, ಮುಂದೆ ಬರುವ ಕೇಡಿನ ವಿಷಯ ವಾಗಿ ವಿದುರನು ಕೊಟ್ಟ ಸಂಕೇತದ ಎಚ್ಚರಿಕೆಯನ್ನು ತಿಳಿಯುವ ಮಟ್ಟಿಗೆ ಧೀಮಂತನಾಗಿದ್ದನು. ಅರಗಿನ ಮನೆಯ ವಾಸದ ಕಾಲದಲ್ಲಿ ಎಚ್ಚರದಿಂದ ಬಾಳಿ, ಜ್ಞಾತಿಗಳು ಕೆಡಕನ್ನು ಮಾಡಿದ್ದರೂ ಅದರ ಮಾತನ್ನು ಹೊರಗೆಡಹಿ ಜಗಳವನ್ನು ಮೊದಲು ಮಾಡದೆ, ಇವನು ಗಂಭೀರವಾಗಿ ನಡೆದುಕೊಂಡನು. ದ್ರೌಪದೀ ಸ್ವಯಂವರದಲ್ಲಿ ಅರ್ಜುನನಿಗೆ ಗೆಲವಾಗಿ ಆ ರಾಜಕುಮಾರಿ ತಮ್ಮ ಪಾಲಿಗೆ ಬಂದಾಗ ಇವನು ತನ್ನ ಕುಲಧರ್ಮವನ್ನನುಸರಿಸಿ ಅವಳನ್ನು ತಮ್ಮ ಐವರ ಹೆಂಡಿರಾಗಿರುವಂತೆ ನಿಶ್ಚಯಿಸಿದನು. ಇಬ್ಬರು ತಾಯಿದಿರ ಮಕ್ಕಳಾದ ಈ ಐವರು ಸೋದರರು ಪರಸ್ಪರ ಎಂಥ ಸ್ನೇಹದಿಂದ ಬಾಳುತ್ತಿದ್ದರೆನ್ನು ವುದಕ್ಕೆ ಇದಕ್ಕಿಂತ ಪ್ರಬಲವಾದ ಸಾಕ್ಷಿ ಇನ್ನೊಂದಿರುವುದು ಸಾಧ್ಯವಲ್ಲ. ಖಾಂಡವಪ್ರಸ್ಥದಲ್ಲಿ ನಿಂತ ಕಾಲದಲ್ಲಿ ಆ ಒಬ್ಬ ಪತ್ನಿಯನ್ನು ನಡಸಿಕೊಳ್ಳುವ ರೀತಿಯನ್ನು ಕುರಿತು ಇವರೆಲ್ಲ ಒಂದು ಸಂಕೇತಮಾಡಿಕೊಂಡದ್ದನ್ನು ಹೇಳಿದೆ.

ಮಾಡಿಕೊಂಡ ಸಂಕೇತವನ್ನು ಇವರು ಬಹು ಚೆನ್ನಾಗಿ ಪಾಲಿಸಿದ್ದ ರಿಂದಲೆ ಇವರಲ್ಲಿ ಪರಸ್ಪರ ಸ್ನೇಹ ಅವಿಚ್ಛಿನ್ನವಾಗಿ ನಿಂತಿತು. ಯಾರಿಗೊ ಸಹಾಯ ನೀಡಬೇಕಾದಾಗಆತುರದಲ್ಲಿ ಅರ್ಜುನನು ಸಂಕೇತವನ್ನುಲ್ಲಂಘಿಸಿ ಈ ಅಣ್ಣನು ದ್ರೌಪದಿಯೊಂದಿಗಿದ್ದ ಸಮಯದಲ್ಲಿ ಒಳಗೆ ಹೋಗಬೇಕಾ ದಾಗ ಅವನು ತಾನಾಗಿ ಒಂದು ವರ್ಷದಕಾಲ ದೇಶಪರ್ಯಟನ ಮಾಡುವೆನೆಂದನು. ಯುಧಿಷ್ಠಿರನು, "ತಮ್ಮನಾದವನು ಅಣ್ಣನ ಏಕಾಂತಕ್ಕೆ ಹೋದರೆ ಏನು ತಪ್ಪು? ಸಮಯ ಮಾಡಿಕೊಂಡೆವೆಂಬ ಕಾರಣದಿಂದ ನೀನು ದೇಶಾಂತರ ಹೋಗುವುದು ಬೇಡ," ಎಂದು ತಡೆದನು. ಅಣ್ಣನಿಗೆ ತಮ್ಮಂದಿರ ವಿಷಯದಲ್ಲಿ ಎಂಥ ವಾತ್ಸಲ್ಯ ಇದ್ದಿ

ತೆಂದು ಇದರಿಂದ ಕಾಣುತ್ತದೆ. ಯುಧಿಷ್ಠಿರನು ದ್ಯೂತ ಪ್ರಸಂಗದಲ್ಲಿ ನಡೆದುಕೊಂಡ ರೀತಿ ಈಗ ನಮಗೆ ಅರ್ಥವಾಗುವುದಿಲ್ಲ. ದುರ್ಯೋಧನ ಶಕುನಿಗಳು ಧೃತರಾಷ್ಟ್ರನಿಗೆ ಆಸೆ ಹುಟ್ಟಿಸಿ ಯುಧಿಷ್ಠಿರನ ಐಶ್ವರ್ಯವನ್ನು ದ್ಯೂತದಲ್ಲಿ ಗೆಲ್ಲುವ ಯೋಚನೆಯನ್ನು ಮಾಡಿದರು. ಆದರೆ ದ್ಯೂತ ವಾಡುವುದಕ್ಕೆ ಯುಧಿಷ್ಠಿರನು ಒಪ್ಪಲೇ ಬೇಕಾದ ಕಾರಣ ಏನಿದ್ದಿತು? ಕ್ಷತ್ರಿಯನೊಬ್ಬನು ತನ್ನನ್ನು ದ್ಯೂತಕ್ಕೆ ಕರೆದರೆ ತಾನು ಆಡುವುದಿಲ್ಲ ಎಂದು ಹೇಳುವವನಲ್ಲ ಎಂದು ಧರ್ಮರಾಯನು ವಿವರಿಸಿದ್ದಾನೆ. ಇದೇನು ಇದು ಇವನ ಜೀವನದ ಒಂದು ನಿಯಮವೆ, ಇಲ್ಲ ಕ್ಷತ್ರಿಯ ಜೀವನದ ಸಾಮಾನ್ಯ ನಿಯಮವೆ? ಇದು ಸ್ಪಷ್ಟವಾಗಿಲ್ಲ. ಆಗಿನ ದಿನದಲ್ಲಿ ಬೇರೊಬ್ಬನ ರಾಜ್ಯವನ್ನು ಪಡೆಯುವುದಕ್ಕೆ ಯುದ್ಧ ಹೇಗೆ ದಾರಿಯೋ ಹಾಗೆ ದ್ಯೂತವೂ ಒಂದು ದಾರಿಯಾಗಿದ್ದಿತೆಂದು ಕಾಣುತ್ತದೆ. ಯುದ್ಧಕ್ಕೆ ಅಂಜುವುದು ಹೇಡಿತನ ಹೇಗೊ ಹಾಗೆ ದ್ಯೂತಕ್ಕೆ ಅಂಜುವುದು ಲೋಭ ಎಂಬ ಭಾವನೆ ಇದ್ದಿರಬೇಕು. ಈ ಕಾರಣದಿಂದ ಯುಧಿಷ್ಠಿರನು ದ್ಯೂತಕ್ಕೆ ಒಪ್ಪಿರಬಹುದು. ಧೃತರಾಷ್ಟ್ರನೇನೊ ಈ ದ್ಯೂತ ನಡೆಯುವುದು ವಿನೋದಕ್ಕಾಗಿ ಎಂದು ಹೇಳಿ ಕಳುಹಿಸಿದನು. ವಿನೋದ ಹೋಗಿ ವಿಪರೀತಕ್ಕಿಟ್ಟುಕೊಂಡಾಗ ಅದನ್ನು ತಡೆಯುವ ಬುದ್ಧಿ ಅವನಿಗೆ ಆದಷ್ಟು ಬೇಗನೆ ಹುಟ್ಟಲಿಲ್ಲ. ಆಟದ ಮೊದಲಲ್ಲೇ ಶಕುನಿ ಮೋಸಗಾರನೆಂದು ಎಲ್ಲರೂ ಬಲ್ಲರು. ಯುಧಿಷ್ಠಿರನು, "ಅವನು ಬೇಡ. ದಾಳವನ್ನು ನ್ಯಾಯವಾಗಿ ಹಾಕಬಲ್ಲ ಮನುಷ್ಯನು ಇರಲಿ." ಎಂದು ಏಕೆ ಹೇಳಲಿಲ್ಲ? ಶಕುನಿ ಆರಂಭದಲ್ಲಿ, "ಅಕ್ಷಕ್ರೀಡೆಯಲ್ಲಿ ತಪ್ಪಿಲ್ಲ. ಅದನ್ನು ಆಡುವುದಕ್ಕೆ ಬಾರದವರು ಆಟವನ್ನು ಬಲ್ಲವರಿಂದ ಸೋಲನ್ನು ಪಡೆದಾಗ ಆಟವನ್ನೇ ದೂರುತ್ತಾರೆ. ಇದು ಕ್ರೀಡೆಯಲ್ಲಿ ಒಂದು ದೋಷವಲ್ಲ; ಆಟ ಬಾರದವರ ದೋಷ," ಎಂದು ಹೇಳಿದನು. ಈ ಮಾತು ಮೇಲೆ ಮೇಲೆ ನೋಡಿದರೆ ಸರಿಯೆಂದೇ ಕಾಣುತ್ತದೆ. ಆದರೆ ಆಟ ಬಲ್ಲವನು ಆಟ ಬಾರದವರನ್ನು ಗೆಲ್ಲುವುದಕ್ಕೂ ಮೋಸಗಾರನು ಸತ್ಯವಂತನನ್ನು ಗೆಲ್ಲುವುದಕ್ಕೂ ಬಹಳ ಅಂತರವಿದೆ. ಯುಧಿಷ್ಠಿರನು ಶಕುನಿಯನ್ನು ಮೋಸಗಾರನೆಂದು ವರ್ಣಿಸಲು ಹಿಂತೆಗೆದಿರಬೇಕು. ಇದು ಇವನ ದಾಕ್ಷಿಣ್ಯ ಸ್ವಭಾವವನ್ನು

ತೋರಿಸುತ್ತದೆ. ಅದರ ಜೊತೆಗೆ ಒಂದು ದೌರ್ಬಲ್ಯವನ್ನೂ ತೋರಿಸು ತ್ತದೆ. ಅನೇಕ ಒಳ್ಳೆಯ ಗುಣಗಳೊಂದಿಗೆ ಯುಧಿಷ್ಠಿರನಲ್ಲಿ ದೌರ್ಬಲ್ಯದ ಈ ಒಂದು ಎಳೆ ಇದ್ದಿತು. ಅದು ನಾಲ್ಕಾರು ಸಂದರ್ಭದಲ್ಲಿ ಅವನನ್ನು ಕೆಟ್ಟುದಕ್ಕೆ ಎಳೆಯಿತು. ದ್ಯೂತದ ಸಂದರ್ಭದಲ್ಲಿ ಅವನು ಶಕುನಿಯನ್ನು ಪ್ರತಿಕಕ್ಷಿಯಾಗಿ ಒಪ್ಪಿಕೊಂಡದ್ದು ಇಂಥ ಒಂದು ಪ್ರಸಂಗ. ರಾಜ್ಯವನ್ನು ಕಳೆದುಕೊಂಡು ಕಾಡಿಗೆ ಹೋಗುವ ಹೊತ್ತಿನಲ್ಲಿ ಯುಧಿಷ್ಠಿರನನ್ನು ಕೆಲವರು ದ್ವಿಜರು ಅನುಸರಿಸಿ ಹೋದರು. ತನಗೆ ಅವರನ್ನು ನೋಡಿ ಕೊಳ್ಳುವ ಯೋಗ್ಯತೆ ಇಲ್ಲದೆ ಹೋಯಿತಲ್ಲಾ ಎಂದು ಅವನು ಪರಿತಪಿಸಿ ದನು. ತನಗೆ ಕಷ್ಟ ಬಂದಿತೇ ಎಂಬದಕ್ಕಿಂತ ಹೆಚ್ಚಾಗಿ ಇವನಿಗೆ ತನ್ನ ಅನುಯಾಯಿಗಳಿಗೆ ದಿಕ್ಕಿಲ್ಲವಾಯಿತೇ ಎನ್ನುವುದು ಹೆಚ್ಚಿನ ಕ್ಲೇಶ ವನ್ನುಂಟುಮಾಡಿತು. ಕಾಡಿನಲ್ಲಿ ದ್ರೌಪದಿ ಯುಧಿಷ್ಠಿರನನ್ನು ಕ್ಷತ್ರಿಯ ನಂತೆ ನಡೆದುಕೊ ಎಂದು ಪ್ರೇರಿಸಿದ ಮಾತನ್ನು ಈ ಮೊದಲು ಹೇಳಿ ದ್ದಾಗಿದೆ. ದ್ರೌಪದಿಯ ಮಾತಿಗೆ ಯುಧಿಷ್ಠಿರನು ವಿಸ್ತಾರವಾಗಿ ಉತ್ತರ ಕೊಟ್ಟನು. "ರಾಣಿ, ನೀನು ಮಹಾಪ್ರಾಜ್ಞಳು. ನಿನಗೆ ಇದನ್ನು ತಿಳಿಸಬೇಕಾಗಿಲ್ಲ. ಮನುಷ್ಯನಿಗೆ ಕ್ರೋಧ ಕೆಟ್ಟದು. ಯಾವನು ಕ್ರೋಧ ವನ್ನು ತಡೆಯಲಾರನು ಅವನು ಅದರಿಂದಲೆ ನಾಶವಾಗುತ್ತಾನೆ. ಆದ್ದರಿಂದ ಬಲ್ಲ ಮನುಷ್ಯರು ಏನೇ ಆದರೂ ವಿವೇಕದಿಂದ ಕ್ರೋಧವನ್ನು ಗೆಲ್ಲುವರು, ಕ್ಷಮೆಯನ್ನು ಹೊಂದುವರು. ಕ್ಷಮಾವಂತನಿಗೆ ಎಲ್ಲಿಯೂ ಜಯವೆ. ಕೋಪವನ್ನು ತೇಜಸ್ಸೆಂದು ತಿಳಿಯಬಾರದು; ಅದನ್ನು ತಡೆದುಕೊಳ್ಳುವ ಶಕ್ತಿ ನಿಜವಾದ ತೇಜಸ್ಸು. ತನ್ನಿಂದ ಒಳ್ಳೆಯದಾಗ ಬೇಕೆಂದು ಬಯಸುವವನು ಕೋಪವನ್ನು ಬಿಟ್ಟಿರಬೇಕು. ದೇವಿ, ದುರ್ಯೋಧನಾದಿಗಳಿಗೆ ಬುದ್ಧಿಯಿಲ್ಲ; ಜ್ಞಾನವಿಲ್ಲ. ಅವರು ಕ್ಷಮೆಯ ದಾರಿಯನ್ನು, ಸತ್ಯದ ದಾರಿಯನ್ನು, ಬಿಟ್ಟಿದಾರೆ. ಅವರನ್ನು ನೋಡಿ ಕೊಂಡು ನಾನು ಇವನ್ನು ಬಿಡಲೆ? ಎಲ್ಲರೂ ಕ್ಷಮೆಯನ್ನು ಬಿಟ್ಟರೆ ಮಾನವ ಕುಲದಲ್ಲಿ ಸಂಧಿಯೇ ಇಲ್ಲದೆ ಹೋದೀತು. ಕ್ಷಮೆ ಎನ್ನುವುದು ಅಮೂಲ್ಯ ವಸ್ತು. ಕ್ಷಮಾವಂತನು ಭೂಮಿಗೆ ಸಮಾನನು. ಅಸಮರ್ಥನು ಹೇಗೆ ಬಲಿಷ್ಠನ ಕ್ರೌರ್ಯವನ್ನು ಸಹಿಸಿಕೊಳ್ಳುವನೊ

ಹಾಗೆ ಸಮರ್ಥನಾದವನು ಅದನ್ನು ಸಹಿಸಿಕೊಂಡಾಗ ಅವನು ನಿಜವಾಗಿ ಕ್ಷಮಾವಂತನಾಗುತ್ತಾನೆ. ಅವನೇ ವಿದ್ವಾಂಸನು, ಅವನೇ ಪುರುಷ ಶ್ರೇಷ್ಠನು ಎಂದು ಹಿರಿಯರು ಹೇಳುವರು. ದೇವಿ, ನೀನು ಕ್ರೋಧವನ್ನು ಬಿಡು. ಇಷ್ಟರಲ್ಲೆ ಧೃತರಾಷ್ಟ್ರನು ನಮ್ಮ ಹಿರಿಯರ, ಮಿತ್ರರ, ಮಾತನ್ನು ಕೇಳಿ ನಮ್ಮ ಭಾಗದ ರಾಷ್ಟ್ರವನ್ನು ಮರಳಿ ನಮಗೆ ಕೊಡಬಹುದು. ಕೊಡಲಿಲ್ಲ, ಅವನಿಗ, ಅವನ ಮಕ್ಕಳಿಗೆ ನಾಶ ತಪ್ಪಿದ್ದಲ್ಲ. ಇದು ನನ್ನ ಮನಸ್ಸಿಗೆ ನಿಶ್ಚಯವಾಗಿದೆ. ಕೇಳು, ದುರ್ಯೋಧನನು ರಾಜ್ಯಭಾರಕ್ಕೆ ಅನರ್ಹನು. ಆದ್ದರಿಂದಲೆ ಅವನಲ್ಲಿ ಕ್ಷಮಾಗುಣ ಇಲ್ಲ. ನಾನೇ ರಾಜ್ಯಾಧಿಪತ್ಯಕ್ಕೆ ಅರ್ಹನು. ಅದರಿಂದಲೆ ನನ್ನಲ್ಲಿ ಕ್ಷಮಾಗುಣವಿದೆ. ನಾನು ಕ್ಷಾಂತಿಯಿಂದಿರುವುದು ನನ್ನಲ್ಲಿ ದೋಷವಲ್ಲ. ಆತ್ಮಜ್ಞಾನಿಯಾದವನಿಗೆ ಕ್ಷಮೆಯೇ ಸತ್ಪ್ರವೃತ್ತಿ. ಅದರಿಂದ ನಾನು ಅದನ್ನು ಆಶ್ರಯಿಸಿದ್ದೇನೆ.'' ಹೀಗೆಂದ ಯುಧಿಷ್ಠಿರನಿಗೆ ದ್ರೌಪದಿ, ''ಕ್ಷಮೆ ತಪ್ಪಲ್ಲ, ಆದರೆ ಅದರಿಂದ ರಾಜ್ಯ ಲಾಭ ಆಗುವುದಿಲ್ಲ,'' ಎಂದು ಉತ್ತರ ಕೊಟ್ಟಳು. ಯುಧಿಷ್ಠಿರನು ''ದೇವಿ, ನಿನ್ನ ಮಾತು ಕೇಳುವುದಕ್ಕೆ ಚೆನ್ನಾಗಿದೆ. ಆದರೆ ನಿನ್ನ ಅರ್ಥ ಸರಿಯಾಗಿಲ್ಲ. ಕ್ಷಮೆ ಧರ್ಮವೇ ನಿಜವಾದರೆ ನಾನು ಅದನ್ನು ಆಶ್ರಯಿಸುವುದು ಅನಿವಾರ್ಯ. ಧರ್ಮವನ್ನು ಆಶ್ರಯಿಸಿದೆನಲ್ಲ, ಇದರಿಂದ ಪ್ರಯೋಜನವಾಗಲಿ, ಎಂದು ಕೇಳಬಾರದು. ನಾನು ಫಲಾಪೇಕ್ಷೆಯಿಂದ ಯಾವ ಕರ್ಮವನ್ನೂ ಮಾಡಲಾರೆನು. ಯಾವನು ಫಲಾಭಿಸಂಧಿಯಿಂದ ಒಂದು ಕಾರ್ಯವನ್ನು ಮಾಡುತ್ತಾನೆ ಅವನು ಧರ್ಮದ ಮುಖ್ಯವಾದ ಫಲವನ್ನು ಕಳೆದುಕೊಳ್ಳುತ್ತಾನೆ; ಧರ್ಮವಾದಿಗಳಲ್ಲಿ ನೀಚನೆನಿಸಿಕೊಳ್ಳುತ್ತಾನೆ. ಧರ್ಮದಿಂದ ಸತ್ಫಲವಿಲ್ಲವೆಂದು ನೀನು ಸಂಶಯಪಡಬೇಡ. ಅಂಥ ಸಂಶಯ ಇಹಪರ ಎರಡನ್ನೂ ತಪ್ಪಿಸುತ್ತದೆ. ಧರ್ಮದಲ್ಲಿ ಶಂಕೆಪಡುವ ಮೂಢನು ಅದನ್ನು ಅನಾದರಿಸಿ ಪ್ರತ್ಯಕ್ಷವಾದ ಸುಖವನ್ನು ದೊಡ್ಡದೆಂದೆಣಿಸಿ ಅಧರ್ಮವನ್ನು ಆಚರಿಸುವನು. ಅಂಥವನಿಗೆ ಪ್ರಾಯಶ್ಚಿತ್ತವಿಲ್ಲ. ಧರ್ಮಕ್ಕೆ ಫಲ ಇಲ್ಲ ಎನ್ನುವುದು ನಿಜವಾದರೆ ಮನುಷ್ಯರಿಗೆ ಗತಿಯೇ ಇಲ್ಲ. ಧರ್ಮ ಅನಾದಿ, ಅನಂತ. ಧರ್ಮಕ್ಕೂ ಫಲವುಂಟು, ಅಧರ್ಮಕ್ಕೂ ಫಲವುಂಟು,''

ಎಂದನು. ದ್ರೌಪದಿ, 'ನಾನು ಧರ್ಮವನ್ನು ಅಲ್ಲಗಳೆಯಲಿಲ್ಲ; ಇಷ್ಟ ರಾದವರ ದುಃಖವನ್ನು ನೋಡಿ ಮನಸೋತು ಈ ಎಲ್ಲ ಮಾತನ್ನು ಆಡಿದೆನು,' ಎಂದು ಹೇಳಿ ಸುಮ್ಮನಾದಳು. ಇದೇ ಸಂದರ್ಭದಲ್ಲಿ ದ್ರೌಪದಿ ಬಿಟ್ಟ ಮಾತನ್ನು ಭೀಮಸೇನನು ಎತ್ತಿಕೊಂಡು ಅಣ್ಣನನ್ನು ಚುಚ್ಚಿ ಮಾತನಾಡಿದನು. ದ್ಯೂತವಾಡಿದ್ದು ತಪ್ಪು ಎಂದು ಅವನು ಹೇಳಿದ್ದಕ್ಕೆ, "ನನಗೆ ದ್ಯೂತದಲ್ಲಿ ದುರ್ಯೋಧನನ ಪಾಲಿನ ರಾಜ್ಯವನ್ನು ಗೆಲ್ಲೋಣ ಎಂದು ಆಸೆ ಇದ್ದಿತು. ಆದ್ದರಿಂದ ನಾನು ಆಟಕ್ಕೆ ಒಪ್ಪಿದೆನು," ಎಂದು ಯುಧಿಷ್ಠಿರನು ಹೇಳಿದಂತೆ ಗ್ರಂಥದಲ್ಲಿ ಉಕ್ತವಾಗಿದೆ. ಈ ಭಾಗ ಆಮೇಲೆ ಸೇರಿದ್ದು ಎಂದು ಕಾಣುತ್ತದೆ. ಮತ್ತೆ ಭೀಮಸೇನನು ಮಾತನಾಡಿ ಆಮೇಲೆ ಯುಧಿಷ್ಠಿರನು ತಮ್ಮನ ಮಾತಿನಿಂದ ನೊಂದು ಸ್ವಲ್ಪ ಹೊತ್ತು ಸುಮ್ಮನೆ ಕುಳಿತನು ಎಂದಿದೆ. ಪ್ರಾಯಶಃ ಭೀಮಸೇನನ ಒಟ್ಟು ಮಾತಿಗೆ ಯುಧಿಷ್ಠಿರನ ಮನಸ್ಸು ತೋರಿಸಿದ ಪ್ರತಿಕ್ರಿಯೆ ಇದು. ಅವನು ಸ್ವಲ್ಪ ಹೊತ್ತು ಚಿಂತಿಸಿ ತಮ್ಮನನ್ನು "ಬರಿಯ ಸಾಹಸದ ಮಾತಿನಿಂದ ಪ್ರಯೋಜನವಿಲ್ಲ. ಕಾಲ ಬರಲಿ. ಎಲ್ಲವನ್ನೂ ಸರಿಪಡಿಸೋಣ," ಎಂಬ ಆಶ್ವಾಸನದಿಂದ ತಡೆದನು. ಇಷ್ಟರಲ್ಲೇ ಇವರ ಸೋದರಮಾವ ವಸುದೇವನ ಮಕ್ಕಳೆಲ್ಲ ಈ ನೆಂಟರನ್ನು ನೋಡಲು ಕಾಡಿಗೆ ಬಂದರು. ಬಲರಾಮನು ಇವರಿಗಾದ ಅನ್ಯಾಯವನ್ನು ಕುರಿತು ತನ್ನ ಅಸಂತುಷ್ಟಿಯನ್ನು ವ್ಯಕ್ತಪಡಿಸಿದನು. ಸಾತ್ಯಕಿ ಯುಧಿಷ್ಠಿರನಿಗೆ, "ನಮಗೆ ಅಪ್ಪಣೆ ಕೊಡು. ನಾವೆಲ್ಲ ಹೋಗಿ ಕೌರವರನ್ನು ಸೋಲಿಸುತ್ತೇವೆ. ನೀನು ರಾಜ್ಯಾಭಿಷಿಕ್ತನಾಗುವೆಯಂತೆ," ಎಂದನು. ಮತ್ತೆ ಯುಧಿಷ್ಠಿರನು, "ತಡೆದುಕೊ. ಆತುರ ಬೇಡ. ಸರಿಯಾದ ಕಾಲದಲ್ಲಿ ಎಲ್ಲವೂ ಆಗುತ್ತದೆ," ಎಂದನು. ಇಂಥ ವೇಳೆಯಲ್ಲಿ ಇವನ ಕ್ಷಮೆ ಅತಿಯಾಯಿತೆಂದು ಎಲ್ಲರಿಗೂ ಕಂಡಿರಬೇಕು. ಆದರೆ, ಇವನೊಬ್ಬನಿಗೆ ಮಾತ್ರ ತನ್ನ ತಾಳ್ಮೆಯ ವಿಷಯದಲ್ಲಿ ಬೇಸರವಾಗಲಿಲ್ಲ. ಸ್ವಭಾವ ಮಾತ್ರ ಅಲ್ಲದೆ ಇದರಲ್ಲಿ ಧರ್ಮವಿವೇಚನೆಯೂ ಒಂದು ಇದ್ದಿತೆಂದು ಕಾಣುತ್ತದೆ. ದ್ಯೂತಕ್ಕೆ ಕುಳಿತದ್ದಾಯಿತು; ಯಾವುದೊ ಒಂದು ನಿಯಮಕ್ಕೆ ಒಪ್ಪಿದ್ದಾಯಿತು. ಆಡಿದ್ದಾಯಿತು; ಸೋತದ್ದಾಯಿತು.

ಸೋತಮೇಲೆ ನಿಯಮವನ್ನು ಅಲ್ಲಗಳೆಯುವುದು ಹೇಗೆ? ಈ ಧರ್ಮ ಶಂಕೆ ಯುಧಿಷ್ಠಿರನನ್ನು ಕಾಡಿತು ಎಂದು ಕಾಣುತ್ತದೆ. ಧರ್ಮದ ದಿಕ್ಕಿನಲ್ಲಿ ನಾಲ್ಕು ಹೆಜ್ಜೆ ಹೆಚ್ಚಾಗಿ ಇಟ್ಟು ನಷ್ಟಪಟ್ಟರೂ ಚಿಂತೆಯಿಲ್ಲ, ಕಂಡಕಂಡ ಹಾಗೆ ಅಧರ್ಮದಲ್ಲಿ ಹೆಜ್ಜೆಯಿಟ್ಟಿನೆನ್ನುವುದು ಖಂಡಿತ ವಾಗಿಯೂ ಬೇಡ, ಎಂದು ಅವನು ನಿಶ್ಚಯಮಾಡಿಕೊಂಡಿದ್ದನೆಂದು ಇದರಿಂದ ತೋರುತ್ತದೆ.

ಘೋಷಯಾತ್ರಾ ಪ್ರಸಂಗದಲ್ಲಿ ಯುಧಿಷ್ಠಿರನು ನಡೆದುಕೊಂಡರೀತಿ ಇವನ ಉದಾತ್ತ ವರ್ತನೆಯ ಪರಾಕಾಷ್ಠೆ ಎನ್ನಬೇಕು. ದುರ್ಯೋಧನನು ಗಂಧರ್ವರ ಕೈಗೆ ಸಿಕ್ಕಿದನೆಂಬ ಸುದ್ದಿ ಬಂದಾಗ ಭೀಮಸೇನನು, "ನಾವು ಯಾವುದನ್ನು ಮಾಡಬೇಕಾಗಿದ್ದಿತು, ಅದನ್ನು ಗಂಧರ್ವರು ಮಾಡಿದರು," ಎಂದು ಮಾತ್ಸರ್ಯದಿಂದ ಮಾತನಾಡಲು, ಯುಧಿಷ್ಠಿರನು, 'ನ ಕಾಲಃ ಪರುಷಸ್ಯ ಅಯಂ" "ಇದು ಕಠಿನವಾದ ಮಾತಿಗೆ ವೇಳೆ ಅಲ್ಲ," ಎಂದನು. "ನಮ್ಮನ್ನು ಯಾರು ಶರಣಾಗತರಾಗಿ ಸಾರುತ್ತಾರೆ ಅಂಥ ಭಯಾರ್ತರಿಗೆ ಅವರು ಕೌರವರೇ ಆದರೂ, ಅವರು ಕಷ್ಟದಲ್ಲಿರುವಾಗ ಈ ಮಾತನ್ನು ಹೇಗೆ ಹೇಳಿದೆ?

"ಭವಂತಿ ಭೇದಾ ಜ್ಞಾತೀನಾಂ ಕಲಹಾಶ್ಚ ವೃಕೋದರ
ಪ್ರಸಕ್ತಾನಿ ಚ ವೈರಾಣಿ ಜ್ಞಾತಿಧರ್ಮೋನ ನಶ್ಯತಿ.
ಯದಾತು ಕಶ್ಚಿತ್ ಜ್ಞಾತೀನಾಂ ಬಾಹ್ಯಃ ಪ್ರಾರ್ಥಯತೇ ಕುಲಂ
ನ ಮರ್ಶಯಂತಿ ತತ್ಸಂತೋ ಬಾಹ್ಯೇನಾಭಿಪ್ರಮರ್ಶನಂ.
ಜಾನಾತಿಹ್ಯೇಷ ದುರ್ಬುದ್ಧಿಃ ಅಸ್ಮಾನಿಹ ಚಿರೋಷಿತಾನ್
ಸ ಏಷ ಪರಿಭೂಯಾಸ್ಮಾನ್ ಅಕಾರ್ಷದಿದಮಪ್ರಿಯಾ.
ದುರ್ಯೋಧನಸ್ಯ ಗ್ರಹಣಾತ್ ಗಂಧರ್ವೇಣ ಬಲಾತ್ಕರಣೇ
ಸ್ತ್ರೀಣಾಂ ಬಾಹ್ಯಾಭಿಮರ್ಶಾಚ್ಚ ಹತಂ ಭವತಿ ನಃ ಕುಲಂ.
ಶರಣಂಚ ಪ್ರಪನ್ನಾನಾಂ ತ್ರಾಣಾರ್ಥಂಚ ಕುಲಸ್ಯನಃ
ಉತ್ತಿಷ್ಠಧ್ವಂ ನರವ್ಯಾಘ್ರಾಃ ಸಜ್ಜೀಭವಥಮಾಚಿರಂ.
ಅರ್ಜುನಶ್ಚ ಯಮೌಚೈವ ತ್ವಂಚಭೀಮ ಅಪರಾಜಿತಃ
ಮೋಕ್ಷಯಧ್ವಂ ಧಾರ್ತರಾಷ್ಟ್ರಂ ಹ್ರಿಯಮಾಣಂ ಸುಯೋಧನಂ.

* * *

ಯ ಏವ ಕಶ್ಚಿದ್ರಾಜನ್ಯಃ ಶರಣಾರ್ಥಂ ಇಹಾಗತಂ
ಪರಂ ಶಕ್ತ್ಯಾಭಿರಕ್ಷೇತ ಕಿಂಪುನಸ್ತ್ವಂ ವೃಕೋದರ.

ವರಪ್ರದಾನಂ ರಾಜ್ಯಂಚ ಪುತ್ರಜನ್ಮಚ ಪಾಂಡವ
ಶತ್ರೋಶ್ಚ ಮೋಕ್ಷಣಂ ಕ್ಲೇಶಾತ್ ತ್ರೀಣಿಚ ಏಕಂಚ ತತ್ಸಮಂ.

ಕಿಂಹ್ಯಭ್ಯಧಿಕಮೇತಸ್ಮಾತ್ ಯದಾಪನ್ನಃ ಸುಯೋಧನಃ
ತ್ವದ್ಬಾಹುಬಲಮಾಶ್ರಿತ್ಯ ಜೀವಿತಂ ಪರಿಮಾರ್ಗತಿ.

"ಇಂಥ ಮಾತಿನಿಂದ ಜ್ಞಾತಿಗಳಲ್ಲಿ ಮತ್ತಷ್ಟು ಭೇದವುಂಟಾಗುತ್ತದೆ; ಕಲಹ ಹೆಚ್ಚುತ್ತದೆ. ವೈರ ಪ್ರಬಲವಾಗುತ್ತದೆ; ವಿರೋಧವೆನ್ನುವುದಕ್ಕೆ ಕೊನೆಯಿಲ್ಲದೆ ಹೋಗುತ್ತದೆ. ಯಾವಾಗ ಹೊರಗಿನವನೊಬ್ಬನು ಬಂದು ನಮ್ಮವರ ಕುಲಕ್ಕೆ ಕೆಡಕುಮಾಡುತ್ತಾನೆ ಅದನ್ನು ಸಜ್ಜನರು ಸಹಿಸಲಾಗದು. ದುರ್ಯೋಧನನಿಗೆ ಬುದ್ಧಿಯಿಲ್ಲ. ನಾವಿಲ್ಲಿರುವುದನ್ನು ತಿಳಿದು ನಮಗೆ ಬೇಸರವನ್ನುಂಟುಮಾಡಲು ಈ ಯತ್ನಮಾಡಿದನು. ಈ ಹೊತ್ತಿನಲ್ಲಿ ಇವನು ಗಂಧರ್ವರ ಕೈಯಲ್ಲಿ ಸಿಕ್ಕಿಕೊಂಡದ್ದರಿಂದ ನಮ್ಮ ಕುಲದ ಸ್ತ್ರೀಯರು ಹೆರವರ ವಶವಾದರು. ನಮ್ಮ ಕುಲ ಕೆಟ್ಟಿತು. ನಾವಿರುವುದೇ ಬೇಡಿ ಬಂದವರನ್ನು ಕಾಪಾಡುವುದಕ್ಕಾಗಿ. ಏಳಿ. ಬೇಗನೆ ಸಿದ್ಧರಾಗಿ; ಹೊತ್ತು ಮಾಡಬೇಡಿ ಅರ್ಜುನನೂ ನಕುಲ ಸಹೋದರರೂ ಅಪರಾಜಿತನಾದ ನೀನೂ ಹೋಗಿ ಸುಯೋಧನನನ್ನು ಬಿಡಿಸಿ. ಅವನು ನಮ್ಮ ದೊಡ್ಡಪ್ಪನ ಮಗ; ಮರೆಯಬೇಡಿ. ಶರಣಾಗತನಾಗಿ ಬಂದವನನ್ನು ಯಾವ ಕ್ಷತ್ರಿಯನೇ ಆಗಲಿ ತನ್ನ ಸರ್ವಶಕ್ತಿಯಿಂದಲೂ ರಕ್ಷಿಸಬೇಕು. ಅಂಥದರಲ್ಲಿ ನೀನು ಸುಮ್ಮನೆ ಇರಬಹುದೆ? ವರಪ್ರದಾನ, ರಾಜ್ಯ, ಪುತ್ರಜನ್ಮ ಈ ಮೂರರ ಸಮ ಶತ್ರುವಿಗೆ ಸಹಾಯ ಮಾಡುವುದೆನ್ನುವುದು. ನಿನಗೆ ಇದಕ್ಕಿಂತ ಹೆಚ್ಚಿನ ಕೀರ್ತಿ ಯಾವುದು? ಸುಯೋಧನನು ನಿನ್ನ ಬಾಹುಬಲವನ್ನಾಶ್ರಯಿಸಿ ಜೀವ ಉಳಿಸಿಕೊಳ್ಳಬೇಕೆಂದು ಯೋಚಿಸುತ್ತಿದಾನೆ." ಯುಧಿಷ್ಠಿರನ ಮಾತು ತಮ್ಮಂದಿರ ಮನಸ್ಸನ್ನು ಕರಗಿಸಿತು. ಅರ್ಜುನನು ಅವನ ಇಷ್ಟವನ್ನು ನಡಸುವುದಾಗಿ ಒಪ್ಪಿದನು. ಭೀಮನು ಬಾಯಲ್ಲಿ ಏನನ್ನೂ ಹೇಳಲಿಲ್ಲ. ಆದರೆ ಈ ಪಕ್ಷ ಯುದ್ಧಕ್ಕೆ ಹೊರಟಾಗ ಅವನೇ ಎಲ್ಲರಿಗೂ ಮುಂದೆ ನಿಂತು ಎಲ್ಲವನ್ನೂ ನಡಸಿದನು.

ಅರ್ಜುನನೊಂದಿಗೆ ಯುದ್ಧಮಾಡಿ ಚಿತ್ರಸೇನ ಗಂಧರ್ವನು ಯುಧಿಷ್ಠಿರನ ಬಳಿಗೆ ಬಂದನು ; "ಈ ದುರ್ಯೋಧನನು ಪಾಪಿ. ಸದಾ ದುಷ್ಟನು. ಇವನನ್ನು ಬಿಡುವುದು ಸರಿಯಲ್ಲ," ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದನು. ಯುಧಿಷ್ಠಿರನು, "ಅಯ್ಯಾ, ನೀನು ಬಲಶಾಲಿ. ಈತನಿಗೆ ಹಿಂಸೆಯೇನನ್ನೂ ಮಾಡದೆ ಉಳಿಸಿರುವುದು ಒಳ್ಳೆಯದಾಯಿತು. ಇವನು ಒಳ್ಳೆಯವನಲ್ಲ ; ಆದರೆ ಇವನನ್ನು ನೀವು ಬಿಡದೆ ಇದ್ದರೆ ನಮ್ಮ ಕುಲಕ್ಕೇ ಅಪಕೀರ್ತಿ. ಇವನನ್ನು ಬಿಡುಗಡೆ ಮಾಡಿ ನಮ್ಮ ಹೆಸರನ್ನು ಉಳಿಸಿದಿರಿ. ಇದು ತುಂಬ ಉಪಕಾರವಾಯಿತು," ಎಂದನು. ಅವನು ಹೊರಟುಹೋದಮೇಲೆ ಯುಧಿಷ್ಠಿರನು ದುರ್ಯೋಧನನನ್ನು ಪ್ರೀತಿಯಿಂದ ಮಾತನಾಡಿಸಿ, "ಅಪ್ಪಾ, ಇಂಥ ಸಾಹಸವನ್ನು ಮತ್ತೆ ಮಾಡುವುದು ಬೇಡ. ಸಾಹಸಕರ್ತನು ಕಷ್ಟಕ್ಕೆ ಸಿಕ್ಕಿಕೊಳ್ಳುತ್ತಾನೆ. ಎಲ್ಲ ಸೋದರರೊಡನೆ ಸುಖವಾಗಿ ಮನೆಗೆ ಹಿಂದಿರುಗು. ಹೀಗಾಯಿತೆಂದು ಚಿಂತಿಸಬೇಡ."

"ಮಾಸ್ಮ ತಾತ ಪುನಃ ಕಾರ್ಷೀರೀದೃಶಂ ಸಾಹಸಂ ಕ್ವಚಿತ್
ನಹಿ ಸಾಹಸ ಕರ್ತಾರಃ ಸುಖಮೇಧಂತಿ ಭಾರತ.
ಸ್ವಸ್ತಿಮಾನ್ ಸಹಿತಸ್ಸರ್ವೈಃ ಭ್ರಾತೃಭಿಃ ಕುರುನಂದನ
ಗೃಹಾನ್ ವ್ರಜ ಯಥಾಕಾಮಂ ವೈಮನಸ್ಯಂಚ ಮಾಕೃಥಾಃ"

ಎಂದನು.

## (ii) ಯಕ್ಷಪ್ರಶ್ನ

ವನವಾಸ ಮುಗಿದು ಅಜ್ಞಾತವಾಸ ಆರಂಭವಾಗುವ ಮುನ್ನ ಧರ್ಮದೇವತೆ ಯುಧಿಷ್ಠಿರನನ್ನು ಒಂದು ಪರೀಕ್ಷೆಗೆ ಗುರಿ ಮಾಡಿದನು. ಒಂದು ದಿನ ಪಾಂಡುಪುತ್ರರ ಆಶ್ರಮದ ನೆರೆಯ ಆಶ್ರಮಕ್ಕೆ ಒಂದು ಸಾರಗ ಬಂದು ಅಲ್ಲಿಯ ಅರಣಿಯನ್ನು ಕೋಡಿಗೆ ಸಿಕ್ಕಿಸಿಕೊಂಡು ಹೊರಟುಹೋಯಿತು. ಆ ಆಶ್ರಮದ ಜನರು ಯುಧಿಷ್ಠಿರನ ಬಳಿಗೆ ಬಂದು ಈ ಸಂಗತಿಯನ್ನು ತಿಳಿಸಿ ತಮ್ಮ ಅರಣಿಯನ್ನು ತಂದುಕೊಡಬೇಕೆಂದು ಬೇಡಿದರು. ಯುಧಿಷ್ಠಿರನು ಸೋದರರೊಡನೆ ಸಾರಗವನ್ನು ಹುಡುಕಿಕೊಂಡು ಹೊರಟನು. ಅದು ಅವರ ಕಣ್ಣಿಗೆ ಬೀಳಲಿಲ್ಲ.

ಇವರೆಲ್ಲ ಶ್ರಾಂತರಾಗಿ ಗಹನವಾದ ವನದಲ್ಲಿ ಒಂದು ಆಲದಮರದ ನೆರಳಲ್ಲಿ ಕುಳಿತರು. ಎಲ್ಲರಿಗೂ ದಾಹವಾಗಿತ್ತು. ಯುಧಿಷ್ಠಿರನು ನಕುಲನಿಗೆ, "ಈ ಮರವನ್ನೇರಿ ಸುತ್ತ ನೋಡು. ಯಾವುದಾದರೂ ಜಲಾಶಯ ಹತ್ತಿರದಲ್ಲಿದೆಯೆ?" ಎಂದನು. ನಕುಲನು ಮರವನ್ನೇರಿ ಮರಗಳಿಂದ, ನೀರ ಹಕ್ಕಿಗಳಿಂದ, ಹತ್ತಿರದಲ್ಲಿಯೆ ಒಂದು ಜಲಾಶಯ ವಿರುವುದನ್ನು ಕಂಡನು. ಯುಧಿಷ್ಠಿರನು, "ಬೇಗ ಹೋಗಿ ಸ್ವಲ್ಪ ಕುಡಿಯುವ ನೀರನ್ನು ತಾ," ಎಂದು ಅವನನ್ನು ಕಳುಹಿಸಿದನು. ನಕುಲನು ಆ ಸರೋವರಕ್ಕೆ ಹೋದನು. ಅದರ ನೀರು ನಿರ್ಮಲವಾಗಿದ್ದಿತು. ಅದರ ತುಂಬ ನೀರಹಕ್ಕಿ ಇದ್ದವು. ಅವನು ಅದನ್ನು ಕುಡಿಯಲು ಉದ್ಯುಕ್ತನಾದನು. ಆಗ ಅಂತರಿಕ್ಷದಿಂದ ಈ ಮಾತು ಕೇಳಿಸಿತು.

"ಮಾತಾತ ಸಾಹಸಂ ಕಾರ್ಷೀಃ ಮಮ ಪೂರ್ವ ಪರಿಗ್ರಹಃ
ಪ್ರಶ್ನಾನುಕ್ತ್ವಾತು ಮಾದ್ರೇಯ ತತಃ ಪಿಬ ಹರಸ್ವ ಚ.

"ಅಪ್ಪಾ, ದುಡುಕಬೇಡ. ಮೊದಲು ನನ್ನನ್ನು ಒಪ್ಪಿಸು. ನನ್ನ ಪ್ರಶ್ನೆಗಳಿಗೆ ಉತ್ತರ ಹೇಳು. ಅನಂತರ ನೀರನ್ನು ಕುಡಿ, ತೆಗೆದುಕೊಂಡು ಹೋಗು." ನಕುಲನು ಈ ಮಾತನ್ನು ಲಕ್ಷಿಸಲಿಲ್ಲ:

ಅನಾದೃತ್ಯತು ತದ್ವಾಕ್ಯಂ ನಕುಲಃ ಸುಪಿಪಾಸಿತಃ
ಅಪಿಬತ್ ಶೀತಲಂ ತೋಯಂ ಪೀತ್ವಾಚ ನಿಪಪಾತಹ

ನೀರನ್ನು ಕುಡಿದನು. ಕುಡಿದವನೆ ಉರುಳಿದನು. ನಕುಲನು ಬಹಳ ಹೊತ್ತುಮಾಡಿದನೆಂದು ಯುಧಿಷ್ಠಿರನು ಸಹದೇವನನ್ನು, "ಏಕೆ ಇಷ್ಟು ಹೊತ್ತಾಯಿತು? ನೋಡಿಕೊಂಡು ಬಾ," ಎಂದು ಕಳುಹಿಸಿದನು. ಸಹದೇವನು ಹೋದನು; ಅಣ್ಣ ನಕುಲನು ನೀರ ಪಕ್ಕದಲ್ಲಿ ಉರುಳಿರುವುದನ್ನು ಕಂಡನು. ಅವನು ಸತ್ತನೆಂದೇ ತಿಳಿದು ದುಃಖಪಡುತ್ತ ಇವನು ನೀರನ್ನು ಕುಡಿಯಲು ಮುಂದುವರಿದನು. ಅವನಿಗೂ ಆ ಹಿಂದಿನಂತೆ ಮಾತು ಕೇಳಿಸಿತು; ಅವನೂ ಆ ಮಾತನ್ನು ಅಲಕ್ಷ್ಯ ಮಾಡಿದನು. ಮುಂದರಿದು ನೀರನ್ನು ಕುಡಿದನು; ಅಣ್ಣನ ಪಕ್ಕದಲ್ಲಿ ನೆಲದ ಮೇಲೆ ಉರುಳಿದನು. ಸ್ವಲ್ಪ ಹೊತ್ತು ಕಳೆದ ಮೇಲೆ ಯುಧಿಷ್ಠಿರನು ಅರ್ಜುನ

ನನ್ನು ಕಳುಹಿಸಿದನು. ಅರ್ಜುನನು ಸರೋವರಕ್ಕೆ ಬಂದು ಅಲ್ಲಿ ಈ ಇಬ್ಬರು ತಮ್ಮಂದಿರೂ ನಿದ್ರಿಸುವಂತೆ ಬಿದ್ದಿರುವುದನ್ನು ಕಂಡನು. ತುಂಬ ದುಃಖಪಟ್ಟು ಇಲ್ಲಿ ಶತ್ರು ಯಾರು ಎಂದು ನೋಡಿದನು. ಅಲ್ಲಿ ಯಾರೂ ಇಲ್ಲ: ವನದ ಕಡೆ ನೋಡಿದನು. ಆ ಮಹಾವನದಲ್ಲಿ ಯಾವ ಪ್ರಾಣಿಯೂ ಕಣ್ಣಿಗೆ ಬೀಳಲಿಲ್ಲ. ಇದರ ಮೇಲೆ ಸವ್ಯಸಾಚಿ ನೀರನ್ನು ಕುಡಿಯಲು ಮುಂದರಿದನು. ಅವನಿಗೂ ಆಕಾಶದಿಂದ ಮಾತು ಕೇಳಿಸಿತು. "ಅಯ್ಯಾ ಏಕೆ ಸಾಹಸಮಾಡುವೆ? ಈ ನೀರನ್ನು ನೀನು ಬಲಾತ್ಕಾರದಿಂದ ಕುಡಿಯುವುದು ಸಾಧ್ಯವಲ್ಲ. ನಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿದೆಯಾದರೆ ಆಗ ಈ ನೀರನ್ನು ಕುಡಿಯುವೆ. ಹಾಗೆಯೇ ತೆಗೆದುಕೊಂಡೂ ಹೋಗುವೆ." ಆಕಾಶದವಾಣಿ ಹೀಗೆ ತನ್ನನ್ನು ತಡೆದಾಗ ಅರ್ಜುನನು, "ಎದುರಿಗೆ ಬಂದು ಅಡ್ಡಿಮಾಡು. ಬಾಣದಿಂದ ಭೇದಿಸುತ್ತೇನೆ. ಆಮೇಲೆ ನೀನು ಉಸಿರೆತ್ತುವುದಿಲ್ಲ," ಎಂದನು. ಅಸ್ತ್ರಾನುಮಂತ್ರಿತ ಶರಗಳಿಂದ ಆ ಧ್ವನಿ ಬಂದ ದಿಕ್ಕಿಗೆ ಶಬ್ದವೇಧ ಕೌಶಲದಿಂದ ಬಾಣಗಳ ಮಳೆಯನ್ನು ಸುರಿಸಿದನು. ಧ್ವನಿ, "ನಿನ್ನ ವಿಘಾತದಿಂದ ಏನು ಪ್ರಯೋಜನ? ಪ್ರಶ್ನೆಗಳಿಗೆ ಉತ್ತರ ಹೇಳಿ ಅವಶ್ಯವಾಗಿ ನೀರನ್ನು ಕುಡಿ. ಉತ್ತರ ಹೇಳದೆ ನೀರನ್ನು ಕುಡಿದೆಯಾದರೆ ನೀನು ಜೀವಿಸಲಾರೆ," ಎಂದಿತು. ಅರ್ಜುನನಿಗೂ ದಾಹವಾಗಿತ್ತು; ಅವನು ಅಂತರಿಕ್ಷದ ಈ ವಾಣಿಯನ್ನು ಲಕ್ಷ್ಯಮಾಡದೆ, ಪ್ರಶ್ನೆ ಏನೆಂದು ವಿಚಾರಿಸಲೂ ವಿಚಾರಿಸದೆ, ನೀರನ್ನು ಕುಡಿದನು; ಕೆಳಗೆ ಉರುಳಿದನು. ಸ್ವಲ್ಪ ಹೊತ್ತಿನಮೇಲೆ ಯುಧಿಷ್ಠಿರನು ಭೀಮಸೇನನನ್ನಟ್ಟಿದನು. ಭೀಮನು ನೀರಿನ ಬಳಿ ಬಂದು ತಮ್ಮಂದಿರು ಮೃತರಾಗಿರುವುದನ್ನು ಕಂಡು, ಇದು ಯಕ್ಷರಾಕ್ಷಸರ ಕೆಲಸವಿರಬೇಕೆಂದು ಯೋಚಿಸಿ, ಯುದ್ಧ ಮಾಡಬೇಕು ಎಂದುಕೊಂಡನು. "ಮೊದಲು ನೀರು ಕುಡಿಯೋಣ," ಎಂದು ನಿಶ್ಚಯಿಸಿ ನೀರಿನ ಕಡೆ ನಡೆದನು. ಮತ್ತೆ ಅದೇ ಧ್ವನಿ ಕೇಳಿಸಿತು. ಭೀಮಸೇನನ ಕಿವಿಗೆ ನಕುಲ ಸಹದೇವರ ಕಿವಿಗೆ ಬಿದ್ದ ಮಾತುಗಳೇ ಬಿದ್ದವು. ಭೀಮನು ಆ ಮಾತಿಗೆ ಗಮನಕೊಡಲಿಲ್ಲ. ನೀರನ್ನು ಕುಡಿದನು; ತಾನೂ ಮಲಗಿದನು. ಸ್ವಲ್ಪ ಹೊತ್ತು ಕಾದು ಸರೋವರಕ್ಕೆ

ಹೋದ ನಾಲ್ವರಲ್ಲಿ ಯಾವನೂ ಹಿಂತಿರುಗದಿರಲು ಯುಧಿಷ್ಠಿರನು ಬಹಳ ವ್ಯಾಕುಲನಾಗಿ ಸರೋವರದ ಬಳಿಗೆ ಬಂದನು. ಸರೋವರ ಬಹು ಸುಂದರವಾಗಿದ್ದಿತು; ನೀರು ನೀಲವರ್ಣದಿಂದ ಹೊಳೆಯುತ್ತಿದ್ದಿತು. ಸುತ್ತ ಮರಗಳು; ತುಂಬಿಗಳು ಹಕ್ಕಿಗಳು ಹಾಡುತ್ತಿದ್ದುವು; ಮಧ್ಯೆ ನೀರಿನ ಪಕ್ಕದಲ್ಲಿ ನಾಲ್ವರು ಸೋದರರು ಮಲಗಿದ್ದರು. ಯುಗಾಂತ ಸಮೀಪಿಸಿರಲಾಗಿ ತಮ್ಮ ಸ್ಥಾನಗಳಿಂದ ಚ್ಯುತರಾದ ಲೋಕಪಾಲರಂತೆ ಕಂಡ ತಮ್ಮಂದಿರನ್ನು ನೋಡಿ ಇವನ ಕಣ್ಣು ನೀರಿಂದ ತುಂಬಿತು. ನಿಟ್ಟುಸಿರನ್ನು ಬಿಟ್ಟು ಅವನು ಇವರನ್ನು ಕೊಂದವರು ಯಾರು ಎಂದು ಯೋಚಿಸಿದನು. ಯಾರ ಮೈಮೇಲೆಯೂ ಗಾಯವಿಲ್ಲ; ಹತ್ತಿರದಲ್ಲಿ ಯಾರೇ ಆಗಲಿ ನಡೆದ ಹೆಜ್ಜೆಯಿಲ್ಲ. ಇವರನ್ನು ಕೊಂದದ್ದು ಯಾವುದೋ ಮಹದ್ಭೂತ ಇರಬೇಕು. ನೀರು ಕುಡಿದು ಈ ವಿಷಯವನ್ನು ನೋಡಬೇಕು. ಹೀಗೆಂದುಕೊಂಡು ಈ ಅಣ್ಣ ನೀರ ಬಳಿಹೋದನು. "ನೀರೇನಾದರೂ ವಿಷದಿಂದ ದೂಷಿತವಾಗಿದೆಯೊ? ಇರಲಾರದು. ಇವರ ಮುಖದ ಬಣ್ಣ ಸರಿಯಾಗಿದೆ," ಎಂದು ಆಲೋಚಿಸಿದನು. ಹಾಗೆಯೇ, "ಓಘ ಬಲರಾದ ಈ ನನ್ನ ತಮ್ಮಂದಿರನ್ನು ಕಾಲಾಂತಕನಾದ ಯಮನು ಹೊರತು ಮತ್ತೆ ಯಾರು ಹೀಗೆ ಮುಗಿಸುವುದು ಸಾಧ್ಯ?" ಎಂದು ಚಿಂತಿಸಿ ನೀರು ಕುಡಿಯಲು ಉದ್ಯುಕ್ತನಾದನು. ಆಕಾಶದ ವಾಣಿ ಮತ್ತೆ ಕೇಳಿಸಿತು. ಸಹದೇವ, ನಕುಲ, ಭೀಮಸೇನರ ಕಿವಿಗೆ ಬಿದ್ದ ಮಾತು ಯುಧಿಷ್ಠಿರನ ಕಿವಿಗೆ ಬಿದ್ದವು.

ಯುಧಿಷ್ಠಿರನು, "ಅಯ್ಯಾ, ಈ ಮಾತನಾಡುತ್ತಿರುವ ನೀನು ಯಾರು? ರುದ್ರರಲ್ಲಿ, ವಸುಗಳಲ್ಲಿ, ಮರುತ್ತುಗಳಲ್ಲಿ ಪ್ರಧಾನನಾದ ಒಬ್ಬನಿರಬೇಕು. ಹಿಮವಂತ ಪಾರಿಯಾತ್ರ ವಿಂಧ್ಯ ಮಲಯ ಪರ್ವತಗಳಂತೆ ಶಕ್ತಿವಂತರಾದ ಈ ನನ್ನ ನಾಲ್ವರು ಸೋದರರನ್ನು ನಿನ್ನ ತೇಜಸ್ಸಿನಿಂದ ಉರುಳಿಸಿದ್ದೀಯೆ. ದೇವತೆಗಳು, ಗಂಧರ್ವರು, ಅಸುರ ರಾಕ್ಷಸರು, ಯುದ್ಧದಲ್ಲಿ ತಡೆಯಲಾರದ ಇವರನ್ನು ನೀನು ಕೊಂದಿರುವುದು ಮಹದದ್ಭುತ. ನಿನ್ನ ಉದ್ದೇಶವೇನು? ನಿನಗೆ ಆಗಬೇಕಾದದ್ದೇನು? ಇದನ್ನು ತಿಳಿಯಬೇಕೆಂದು ನನಗೆ ಕುತೂಹಲ ಹುಟ್ಟಿದೆ.

ಹಾಗೆಯೇ ನನಗೆ ಸಾಧ್ವಸವೂ ಆಗಿದೆ. ಭಗವನ್, ನಾನು ಕೇಳುತ್ತೇನೆ. ನನಗೆ ತಿಳಿಸಿರಿ. ತಾವು ಯಾರು?'' ಎಂದು ಕೇಳಿದನು. ವಾಣಿ, "ನಾನು ಯಕ್ಷ. ಇವರೆಲ್ಲ ನನ್ನಿಂದ ಮಡಿದರು,'' ಎಂದಿತು. ಈ ಅಶುಭ ವಚನವನ್ನು ಕೇಳಿ ಉತ್ತರ ಕ್ಷಣದಲ್ಲಿ ಯುಧಿಷ್ಠಿರನು

ವಿರೂಪಾಕ್ಷಂ ಮಹಾಕಾಯಂ ಯಕ್ಷಂ ಕಾಲ ಸಮುಚ್ಛ್ರಯಂ
ಜ್ವಲನಾರ್ಕ ಪ್ರತೀಕಾಶಂ ಅಧೃಷ್ಯಂ ಪರ್ವತೋಪಮಂ

ಇಂಥ ಒಂದು ಆಕಾರವನ್ನು ಕಂಡನು. ಆ ಆಕಾರ ಮೇಘ ಗಂಭೀರ ವಾದ ವಾಣಿಯಿಂದ ಹೀಗೆ ನುಡಿಯಿತು. "ಈ ನಿನ್ನ ಸೋದರರು ನಾನು ಎಷ್ಟೇ ಹೇಳಿದರೂ ನನ್ನ ಮಾತನ್ನು ಕೇಳದೆ ಬಲಾತ್ಕಾರದಿಂದ ನೀರನ್ನು ಕುಡಿಯಲು ಅಪೇಕ್ಷಿಸಿದರು. ಆದಕಾರಣ ನಾನು ಅವರನ್ನು ಕೊಲ್ಲಬೇಕಾಯಿತು. ಜೀವದಿಂದ ಇರಬೇಕೆಂದು ಬಯಸುವವರು ನನ್ನ ಅಪ್ಪಣೆಯಿಲ್ಲದೆ ಇದನ್ನು ಕುಡಿಯಬಾರದು. ನನ್ನ ಪ್ರಶ್ನೆಗಳಿಗೆ ಉತ್ತರ ಹೇಳಿ ನನ್ನಿಂದ ಅಪ್ಪಣೆ ಪಡೆದವರು ಈ ನೀರನ್ನು ಕುಡಿಯ ಬಹುದು.'' ಯಕ್ಷನ ಮಾತನ್ನು ಕೇಳಿ ಯುಧಿಷ್ಠಿರನು, "ಸ್ವಾಮಿ, ನಿಮ್ಮ ಮಾತನ್ನು ಮೀರಿ ಈ ನೀರನ್ನು ಕುಡಿಯುವುದು ನನಗೆ ಬೇಡ. ನೀವು ಕೇಳಬೇಕೆಂಬ ಪ್ರಶ್ನೆಗಳನ್ನು ಕೇಳಿರಿ. ನನಗೆ ತಿಳಿದಂತೆ ಉತ್ತರ ಹೇಳುತ್ತೇನೆ,'' ಎಂದನು.

ಈ ಪ್ರಸಂಗದಲ್ಲಿ ಈಗ ಕಾಣುವ ಪ್ರಶ್ನೆಯೆಲ್ಲ ಆರಂಭದಲ್ಲಿ ಭಾರತ ದಲ್ಲಿ ಇದ್ದಿರಲಾರದು. ಆದರೆ ಆರಂಭದಲ್ಲಿ ಇದ್ದಿರಬೇಕು ಎಂದು ಕಾಣುವ ಪ್ರಶ್ನೆ ಮತ್ತು ಉತ್ತರಗಳಿಂದ ಭಾರತದ ಕರ್ತೃವಿಗೆ ಯುಧಿಷ್ಠಿರನ ಪ್ರಾಜ್ಞತೆಯ ವಿಷಯದಲ್ಲಿ ಯಾವ ಕಲ್ಪನೆ ಇದ್ದಿತು ಎಂದು ಕಾಣುತ್ತದೆ.

ಸೂರ್ಯನನ್ನು ಮೇಲಕ್ಕೆ ತಳ್ಳುವುದು ಯಾವುದು? ಅವನ ಮುಂದೆ ಸುಳಿಯುವವರು ಯಾರು? ಅವನನ್ನು ಮುಳುಗಿಸುವುದು ಯಾರು? ಮತ್ತೆ ಅವನು ನಿಲ್ಲುವುದು ಯಾವುದರಿಂದ?

ಸೃಷ್ಟಿಕರ್ತನು ಸೂರ್ಯನನ್ನು ಎಬ್ಬಿಸುತ್ತಾನೆ. ದೇವತೆಗಳು ಅವನ ಎದುರಿಗೆ ನಡೆಯುತ್ತಾರೆ. ಧರ್ಮ ಅವನನ್ನು ಮುಳುಗಿಸುತ್ತದೆ. ಅವನು ಸತ್ಯದಲ್ಲಿ ನಿಲ್ಲುತ್ತಾನೆ.

ಮನುಷ್ಯನು ಶ್ರೋತ್ರಿಯನಾಗುವುದು ಏತರಿಂದ? ಮಹತ್ತ್ವವನ್ನು ಅರಿಯುವುದು ಏತರಿಂದ? ಮನುಷ್ಯನಿಗೆ ಜೊತೆ ಯಾರು? ಯಾವುದರಿಂದ ಮನುಷ್ಯನು ಬುದ್ಧಿವಂತನಾಗುತ್ತಾನೆ?

ಮನುಷ್ಯನು ಶ್ರುತದಿಂದ ಶ್ರೋತ್ರಿಯನಾಗುತ್ತಾನೆ. ತಪಸ್ಸಿನಿಂದ ಮಹತ್ತನ್ನು ತಿಳಿಯುತ್ತಾನೆ. ಅವನಿಗೆ ಧೃತಿಯೇ ಜೊತೆ. ವೃದ್ಧಸೇವೆಯಿಂದ ಅವನು ಬುದ್ಧಿವಂತನಾಗುತ್ತಾನೆ.

ಇಂದ್ರಿಯಾರ್ಥಗಳನ್ನು ಅನುಭವಿಸುತ್ತಿದ್ದು ಬುದ್ಧಿವಂತನಾಗಿ ಲೋಕದ ಪ್ರಶಂಸೆಯನ್ನು ಗಳಿಸಿ ಸರ್ವ ಭೂತಗಳಿಗೂ ಸರಿಯಾಗಿದ್ದು ಯಾವನು ಉಸಿರಿದ್ದೂ ಜೀವಿಸದಂತೆ ಪರಿಗಣಿತನಾಗುವನು?

ದೇವತಾ ಅತಿಥಿ ಭೃತ್ಯರು ಪಿತೃಗಳು ತಾನು ಈ ಐವರ ನಿರ್ವಾಪವನ್ನು ಯಾರು ಮಾಡುವುದಿಲ್ಲ ಅವನು ಉಸಿರಿದ್ದೂ ಜೀವಿಸದಂತೆಯೇ.

ಭೂಮಿಗಿಂತ ಗುರುತರವಾದದ್ದು, ನಭಕ್ಕಿಂತ ಎತ್ತರವಾದದ್ದು, ವಾಯುವಿಗಿಂತ ಶೀಘ್ರತರವಾದದ್ದು, ಮನುಜ ಕುಲಕ್ಕೆ ಬಹುತರವಾದದ್ದು ಯಾವುದು?

ಮಾತಾ ಗುರುತರಾ ಭೂಮೇಃ ಪಿತಾ ಉಚ್ಚತರಶ್ಚ ಖಾತ್
ಮನಃ ಶೀಘ್ರತರಂ ವಾಯೋಃ ಚಿಂತಾ ಬಹುತರೀ ನೃಣಾಂ

ಭೂಮಿಗಿಂತ ಹಿರಿಯಳು ತಾಯಿ. ಗಗನಕ್ಕೂ ಎತ್ತರ ತಂದೆ. ಗಾಳಿಗಿಂತ ವೇಗ ಮನಸ್ಸು. ಮನುಷ್ಯರಿಗೆ ಬಹುತರ ಚಿಂತೆ.

ಪ್ರವಾಸ ಮಾಡುತ್ತಿರುವವರಿಗೆ ಯಾರು ಮಿತ್ರ? ಮನೆಯಲ್ಲಿರುವವನಿಗೆ ಮಿತ್ರನು ಯಾರು? ರೋಗಿಗೆ, ಸಾಯುವವನಿಗೆ ಮಿತ್ರನು ಯಾರು?

ಪ್ರವಾಸಿಗೆ ಹಣ ಮಿತ್ರ. ಮನೆಯಲ್ಲಿರುವವನಿಗೆ ಭಾರ್ಯೆ ಮಿತ್ರಳು. ರೋಗಿಗೆ ವೈದ್ಯನು ಮಿತ್ರ. ಸಾಯುತ್ತಿರುವವನಿಗೆ ದಾನ ಮಿತ್ರ.

ಧರ್ಮದ ಮುಖ್ಯ ಸಾಧನೆ ಯಾವುದು? ಯಶದ ಮುಖ್ಯ ಸಾಧನೆ ಯಾವುದು? ಸ್ವರ್ಗ ಯೋಗ್ಯವಾಗುವುದಕ್ಕೆ ಯಾವುದು ಮುಖ್ಯಲಕ್ಷಣ? ಯಾವುದು ಸುಖದ ಮುಖ್ಯಲಕ್ಷಣ?

ದಾಕ್ಷ್ಯ ಧರ್ಮಕ್ಕೆ, ದಾನ ಯಶಕ್ಕೆ, ಸತ್ಯ ಸ್ವರ್ಗ ಯೋಗ್ಯತೆಗೆ, ಶೀಲ ಸುಖಕ್ಕೆ ಕಾರಣ.

ಮನುಷ್ಯನಿಗೆ ತಾನೇ ಎನ್ನುವುದು ಬೇರೆ ಯಾರು? ದೈವ ಕೃತ ಸಖ ಯಾರು? ಅವನ ಉಪಜೀವನ ಯಾವುದು? ಪರಾಯಣ ಯಾವುದು?

ಮಗನು ತಾನೇ ಆದ ಬೇರೊಬ್ಬ. ಪತ್ನಿ ದೈವ ಕೃತ ಸಖ. ಪರ್ಜನ್ಯನು ಉಪಜೀವನ. ದಾನವೇ ಅವನಿಗೆ ಪರಕ್ಕೆ ದಾರಿ.

ಧನದಲ್ಲಿ ಉತ್ತಮವಾದದ್ದು ಯಾವುದು? ಶ್ರುತ.

ಲಾಭದಲ್ಲಿ ಉತ್ತಮವಾದದ್ದು? ಆರೋಗ್ಯ.

ಸುಖಗಳಲ್ಲಿ ಅತ್ಯುತ್ತಮ ಸುಖ? ತೃಪ್ತಿಯ ಸುಖ.

ಎಲ್ಲಕ್ಕಿಂತ ಹೆಚ್ಚಿನ ಧರ್ಮ ಯಾವುದು? ಆನೃಶಂಸ್ಯ.

ಯಾವುದನ್ನು ತಡೆದು ಶೋಕಿಸ ಬೇಕಾದದ್ದಿಲ್ಲ? ಮನಸ್ಸನ್ನು.

ಯಾರ ಸಹವಾಸ ಸಡಿಲವಾಗುವುದಿಲ್ಲ? ಸಜ್ಜನರ ಸಹವಾಸ.

ಯಾವುದನ್ನು ಬಿಟ್ಟು ಮನುಷ್ಯನು ಪ್ರಿಯವಾಗುತ್ತಾನೆ? ಅತಿ ಮಾನತೆಯನ್ನು ಬಿಟ್ಟು.

ಯಾವುದನ್ನು ಬಿಟ್ಟು ಶೋಕದಿಂದ ತಪ್ಪಿಸಿಕೊಳ್ಳುತ್ತಾನೆ? ಕ್ರೋಧವನ್ನು ಬಿಟ್ಟು.

ಯಾವುದನ್ನು ಬಿಟ್ಟು ಅರ್ಥವಂತನಾಗುತ್ತಾನೆ? ಕಾಮವನ್ನು ಬಿಟ್ಟು.

ಯಾವ ಮನುಷ್ಯನು ಮೃತನಿಗೆ ಸಮಾನ? ರಾಷ್ಟ್ರ ಹೇಗೆ ಮೃತ ಸಮಾನವಾಗುತ್ತದೆ?

ದರಿದ್ರನು ಮೃತ ಸಮಾನನು. ಅರಾಜಕ ರಾಜ್ಯ ಮೃತಸಮಾನ.

ಪುರುಷನು ಯಾರು?

ದಿವಂ ಸ್ಪೃಶತಿ ಭೂಮಿಂಚ ಶಬ್ದಃ ಪುಣ್ಯಸ್ಯ ಕರ್ಮಣಾ
ಯಾವತ್ ಸ ಶಬ್ದೋ ಭವತಿ ತಾವತ್ ಪುರುಷ ಉಚ್ಯತೇ.

ಪುಣ್ಯಕರ್ಮದ ಕೀರ್ತಿ ಭೂಮಿ ಸ್ವರ್ಗಗಳನ್ನು ಯಾವಾಗ ಮುಟ್ಟುತ್ತದೆ, ಆಗ ಅವುಗಳ ಕರ್ತ ಪುರುಷನೆನ್ನಿಸಿಕೊಳ್ಳುತ್ತಾನೆ.

ಸರ್ವಧನಿ ಯಾರು ?

ತುಲ್ಯೇ ಪ್ರಿಯಾಽಪ್ರಿಯೇ ಯಸ್ಯ ಸುಖದುಃಖೇತಥೈವಚ
ಅತೀತಾನಾಗತೇ ಚೋಭೇ ಸವೈಸರ್ವಧನೀ ನರಃ

ಯಾವನಿಗೆ ಪ್ರಿಯ ಅಪ್ರಿಯಗಳು, ಸುಖದುಃಖಗಳು, ಕಳೆದು ಹೋದದ್ದು ಕೈಸೇರದೆ ಇರುವುದು ಒಂದೇ ಸಮ ಅವನು ಸರ್ವಧನೀ.

ಧರ್ಮರಾಯನ ಜ್ಞಾನ ಪೂರ್ಣವಾಗಿದ್ದಿತೆಂದು ಈ ಉತ್ತರಗಳಿಂದ ಕಂಡಿತು. ಯಕ್ಷನು ಅವನಿಗೆ, "ನನ್ನ ಪ್ರಶ್ನೆಗಳಿಗೆ ತೃಪ್ತಿಕರವಾಗಿ ಉತ್ತರಗಳನ್ನು ಕೊಟ್ಟಿದ್ದೀಯೆ. ಆ ಕಾರಣದಿಂದ ನಿನ್ನ ಈ ನಾಲ್ವರು ತಮ್ಮಂದಿರಲ್ಲಿ ಯಾವ ಒಬ್ಬನು ಉಳಿಯಬೇಕೆಂದು ಬಯಸುತ್ತೀಯೋ ಅವನು ಬದುಕುತ್ತಾನೆ," ಎಂದನು. ಯುಧಿಷ್ಠಿರನು

ಶ್ಯಾಮೋ ಯ ಏಷರಕ್ತಾಕ್ಷೋ ಬೃಹತ್ಸಾಲ ಇವೋದ್ಗತಃ
ವ್ಯೂಢೋರಸ್ಕೋ ಮಹಾಬಾಹುಃ ನಕುಲೋ ಯಕ್ಷ ಜೀವತು

ಎಂದು ಹೇಳಿದನು. ಯುಧಿಷ್ಠಿರನಿಗೆ ತನ್ನ ತಮ್ಮಂದಿರಲ್ಲಿ ಎಂಥ ಪ್ರೀತಿ ಇದ್ದಿತೆನ್ನುವುದನ್ನು ನಕುಲನನ್ನು ವರ್ಣಿಸುವ ಅವನ ಮಮತೆಯ ಮಾತುಗಳಿಂದ ತಿಳಿಯಬಹುದು. ಯಕ್ಷನು, "ಅಯ್ಯಾ, ನಿನಗೆ ಭೀಮಸೇನನು ಬಹು ಪ್ರಿಯನು. ಅರ್ಜುನನೇ ನಿನಗೆ ದಿಕ್ಕು. ಹೀಗಿದ್ದೂ ನೀನು ಮಲತಾಯಿ ಮಗನಾದ ನಕುಲನನ್ನು ಏನು ಬಯಸಿದೆ ?" ಎಂದು ಕೇಳಿದನು. ಯುಧಿಷ್ಠಿರನು ಹೇಳಿದನು :

ಆನೃಶಂಸ್ಯಂ ಪರೋಧರ್ಮಃ ಪರಮಾರ್ಥಾಚ್ಚಮೇಮತಂ
ಧರ್ಮಶೀಲಃ ಮಹಾರಾಜಾ ಇತಿ ಮಾಂ ಮಾನವಾ ವಿದುಃ
ಯಥಾ ಕುಂತೀ ತಥಾ ಮಾದ್ರೀ ವಿಶೇಷೋ ನಾಸ್ತಿಮೇ ತಯೋಃ
ಮಾತೃಭ್ಯಾಂ ಸಮಮಿಚ್ಛಾಮಿ ನಕುಲೋ ಯಕ್ಷ ಜೀವತು.

"ಆನೃಶಂಸ್ಯ ಪರಮ ಧರ್ಮ. ಅದು ನನಗೆ ತೀರಾ ಒಪ್ಪಿಗೆಯಾದದ್ದು. ನನ್ನನ್ನು ಜನ ಧರ್ಮಶೀಲನೆಂದು ಹೇಳುತ್ತಾರೆ. ನಾನು ಶ್ರೇಷ್ಠವಾದ ಧರ್ಮವನ್ನು ಹಿಡಿದು ನಡೆಯಬೇಕು. ಕುಂತಿ ಮಾದ್ರಿ ದೇವಿಯರು ಇಬ್ಬರೂ ನನಗೆ ಒಂದು ಸಮ. ಈ ಮಕ್ಕಳು ಹೆಚ್ಚಲ್ಲ ಆ ಮಕ್ಕಳು ಕಡಮೆಯಲ್ಲ, ಒಬ್ಬಳ ಮಕ್ಕಳು ಮಾತ್ರ ಉಳಿದು ಇನ್ನೊಬ್ಬಳ ಮಕ್ಕಳು

ಯಾರೂ ಇಲ್ಲದೆ ಹೋಗಬಾರದು. ಆದ್ದರಿಂದ ಇಬ್ಬರು ತಾಯಿದಿರ ಹೆಸರು ಹೇಳುವ ಇಬ್ಬರು ಮಕ್ಕಳಿರಲೆಂದು ನಾನು ನಕುಲನನ್ನು ಬಯಸಿದ್ದೇನೆ.'' ಯಕ್ಷನು,

> '' ಯಸ್ಯ ತೇ ಅರ್ಥಾಚ್ಚ ಕಾಮಾಚ್ಚ ಆನೃಶಂಸ್ಯಂ ಪರಂ ಮತಂ
> ತಸ್ಮಾತ್ತೇ ಭ್ರಾತರಃ ಸರ್ವೇ ಜೀವಂತು ಭರತರ್ಷಭ.

'' ಅರ್ಥಕ್ಕಿಂತ ಕಾಮಕ್ಕಿಂತ ಆನೃಶಂಸ್ಯ ನಿನಗೆ ಹೆಚ್ಚು ಬೆಲೆಯ ವಸ್ತುವಾದ ಕಾರಣ ನಿನ್ನ ಈ ಸೋದರರು ಎಲ್ಲರೂ ಜೀವಿಸಲಿ,'' ಎಂದು ಹೇಳಿದನು. ಯುಧಿಷ್ಠಿರನು ತಮ್ಮಂದಿರನ್ನೆಲ್ಲ ಬದುಕಿಸಿಕೊಂಡು ಬಂದನು.

## (iii) ಉತ್ತರಾರ್ಧ

ಅಜ್ಞಾತವಾಸದ ಕಾಲದಲ್ಲಿ ತಮ್ಮ ಮರೆ ಕೆಡಬಾರದೆಂದು ಯುಧಿಷ್ಠಿರನು ತಮ್ಮಂದಿರನ್ನೂ ಹೆಂಡತಿಯನ್ನೂ ಬಹು ಎಚ್ಚರಿಕೆಯಿಂದ ನಡಸಿಕೊಂಡನು. ಕೀಚಕನು ದ್ರೌಪದಿಯನ್ನು ಅವಮಾನಪಡಿಸಿದ ವೇಳೆ ಭೀಮಸೇನನು ಅವನನ್ನು ದಂಡಿಸುವುದಕ್ಕಾಗಿ ಒಂದು ಮರವನ್ನು ಕೀಳಲು ಅದರ ಕಡೆ ನೋಡಿದನೆಂದೂ ಯುಧಿಷ್ಠಿರನು ಆಗ ಅವನನ್ನು ಕುರಿತು, '' ಅಯ್ಯಾ ಈ ಹಸಿಯ ಸೌದೆ ಅಡಿಗೆಗೆ ಉಪಯೋಗವಾಗುವುದಿಲ್ಲ,'' ಎಂದು ಹೇಳಿ ಸಂಕೇತ ವಚನಗಳಿಂದ ಅವನನ್ನು ತಡೆದನೆಂದೂ ಮುಂತಾಗಿ ಕಥೆಯಲ್ಲಿದೆ. ಇದು ಆಮೇಲೆ ಸೇರಿದ ಹೆಚ್ಚಿನ ಮಾತು ಎಂದು ತೋರುತ್ತದೆ. ಹೆರವರ ಮನೆಯ ಊಳಿಗದಲ್ಲಿ ತಮಗೆ ಅರ್ಹವಲ್ಲದ ಬಾಳುವೆಯನ್ನು ಬಾಳಬೇಕಾಗಿ ಬಂದ ಈ ಸಂದರ್ಭದಲ್ಲಿ ಈಸೋದರರಿಗೆ, ಅವರ ರಾಣಿಗೆ, ಬಹುಸಲ ಬಹಳ ಕಿರಿಕಿರಿಯಾಗಿರಬೇಕು. ಅದೆಲ್ಲವನ್ನೂ ಸಹಿಸಿಕೊಳ್ಳುವಂತೆ ಯುಧಿಷ್ಠಿರನು ಅವರಿಗೆ ಆದರ್ಶವಾಗಿ ನಡೆದನು. ಉತ್ತರ ಗೋಗ್ರಹಣ ಪ್ರಸಂಗ ಮುಗಿದಮೇಲೆ ಅದರಲ್ಲಿ ಗೆಲವನ್ನು ತಂದವನು ಉತ್ತರನೆಂದು ವಿರಾಟನು ಹೆಮ್ಮೆಪಟ್ಟಾಗ ಯುಧಿಷ್ಠಿರನು ಅದು ಬೃಹನ್ನಳೆಯ ಕೆಲಸ ಎಂದು ಹೇಳಿದ್ದರಿಂದ ವಿರಾಟನಿಗೆ ಕೋಪಬಂದು ಅವನು ಕೈಯಲ್ಲಿದ್ದ ದಾಳವನ್ನು ಇವನ ಮುಖದ ಮೇಲೆ ಎಸೆದನು. ಯುಧಿಷ್ಠಿರನ ಹಣೆಯಲ್ಲಿ ಗಾಯವಾಯಿತು.

ಅವನ ಮುಖದಿಂದ ರಕ್ತ ಸುರಿಯಲು ದ್ರೌಪದಿ ಓಡಿ ಬಂದು ತನ್ನ ಸೆರಗಿನಿಂದ ಆ ಗಾಯವನ್ನು ಒತ್ತಿದಳು. ಆಮೇಲೆ ಈ ಸಂಗತಿ ತಿಳಿದು ತಮ್ಮಂದಿರು ಬಹುಕೋಪ ಮಾಡಿಕೊಂಡಾಗ ಯುಧಿಷ್ಠಿರನು ಅವರಿಗೆ ತಾಳ್ಮೆ ಹೇಳಿದನು. ಆ ದಿನ ಅಜ್ಞಾತವಾಸದ ಗಡು ಮುಗಿಯುತ್ತದೆ ಎಂದೂ ಮಾರನೆಯ ದಿನ ತಾವು ತಮ್ಮ ನಿಜರೂಪವನ್ನು ಪ್ರಕಟಿಸಬಹುದೆಂದೂ ಸಮಾಧಾನಪಡಿಸಿದನು. ಒಂದು ನಿಯಮಕ್ಕೆ ಒಪ್ಪಿಕೊಂಡ ಮೇಲೆ ಅರ್ಧ ದಿನದಷ್ಟು ಕಾಲದಿಂದ ಅದನ್ನು ಮುರಿಯುವುದೂ ಅವನಿಗೆ ಸಮ್ಮತವಾಗಲಿಲ್ಲ.

ಯುದ್ಧದ ವಿಚಾರ ಬಂದಾಗ ಯುಧಿಷ್ಠಿರನು ಸಾಧ್ಯವಾದರೆ ಸಂಧಿ ಮಾಡಿಕೊಳ್ಳುವುದೇ ಸರಿ ಎಂದು ಸ್ಪಷ್ಟವಾಗಿ ಅಭಿಪ್ರಾಯಪಟ್ಟನು. "ತೀರ ವಿಧಿಯಿಲ್ಲದೆ ಹೋದರೆ ಯುದ್ಧವನ್ನೇನೋ ಮಾಡಬೇಕು ; ಆದರೆ ಆ ಯುದ್ಧವೆನ್ನುವುದು, ತೀರ ವಿಧಿಯಿಲ್ಲದೆ ಇದ್ದರೆ ಅನುಸರಿಸುವ ದಾರಿ ಹೊರತಾಗಿ ಇಷ್ಟದಿಂದ ಒಪ್ಪತಕ್ಕದ್ದಲ್ಲ. ಯಾರೋ ಹೆರವರೇ ಆಗಲಿ, ನಿಜವಾಗಿ ದುಷ್ಟರೇ ಆದರೂ, ಪ್ರತಿಪಕ್ಷ ಎಂದು ಜನರನ್ನು ಕೊಲ್ಲುವುದು ಉಚಿತವಲ್ಲ. ಹೀಗಿರುವಲ್ಲಿ, ಕೆಲವರು ಬಂಧುಗಳು, ಕೆಲವರು ಗುರುಗಳು, ಕೆಲವರು ಹಿತಚಿಂತಕರು, ಇಂಥ ಜನ ಸೇರಿ ಆಗಿರುವ ಪ್ರತಿಪಕ್ಷವನ್ನು ಕೊಲ್ಲುವುದು ಎಂಥ ಪಾಪಕಾರ್ಯ! ಕ್ಷತ್ರಿಯ ಧರ್ಮವೇ ಕೆಟ್ಟದು. ಲೋಕಕ್ಕೆಲ್ಲ ಯಾವುದು ತಪ್ಪೊ ಆ ವಧೆ ಎಂಬ ಕರ್ಮ ಕ್ಷತ್ರಿಯನಿಗೆ ಧರ್ಮ ಎನಿಸಿದೆ. ಶತ್ರುವನ್ನೇ ಕೊಂದರೂ ಪಶ್ಚಾತ್ತಾಪ ನಮ್ಮ ಹೃದಯವನ್ನು ವೇಧಿಸುವುದು. ಅಲ್ಲದೆ, ಶತ್ರುವನ್ನು ತೀರ ಮುಗಿಸಿದೆನೆನ್ನುವಂತಿಲ್ಲ. ಸ್ವಲ್ಪ ಶೇಷ ಉಳಿಯುತ್ತದೆ, ದೊಡ್ಡದಾಗುತ್ತದೆ, ಮತ್ತೆ ವೈರವನ್ನು ಸಾಧಿಸುತ್ತದೆ. ಶಾಂತಿಗಾಗಿ ರಾಜ್ಯಾಭಿಲಾಷೆಯನ್ನು ತೀರ ತೊರೆಯುವುದೂ ಧರ್ಮವಲ್ಲ. ರಾಜ್ಯ ಲಾಭಕ್ಕಾಗಿ ಅನಾವಶ್ಯಕವಾದ ವಧೆಯನ್ನು ಮಾಡುವುದೂ ಧರ್ಮವಲ್ಲ. ಆದ್ದರಿಂದ ನಾವು ಸ್ವಲ್ಪ ತಗ್ಗಿಯಾದರೂ ಪ್ರತಿಪಕ್ಷದೊಂದಿಗೆ ಸಂಧಿಯನ್ನು ಮಾಡಿಕೊಳ್ಳುವುದು ಮೇಲು ಎಂದು ನನ್ನ ಅಭಿಪ್ರಾಯ. ನಮ್ಮಿಂದ ಆದಮಟ್ಟಿಗೆ ಎಲ್ಲಾ ರೀತಿಯಿಂದ ಯುದ್ಧವನ್ನು ತಪ್ಪಿಸಿ ಸಮಾಧಾನವಾಗಿ ವ್ಯವಹಾರ

ವನ್ನು ತೀರಿಸಿಕೊಳ್ಳುವ ಯತ್ನ ಮಾಡೋಣ. ಪಕ್ಷ ಪ್ರತಿಪಕ್ಷಗಳ ಯುದ್ಧ ಬಿಡಿಸಿ ನೋಡಿದರೆ ನಾಯಿಗಳ ಕಚ್ಚಾಟ. ಹೆಚ್ಚು ಬಲವುಳ್ಳ ನಾಯಿ ಉಳಿದ ನಾಯಿಗಳನ್ನು ಓಡಿಸಿ ದೊರೆತ ಅನ್ನವನ್ನು ತಾನೇ ತಿನ್ನುವುದು. ಅವುಗಳಂತೆ ನಡೆದರೆ ಮನುಷ್ಯನೂ ನಾಯೇ. ಅವನ ಹೆಚ್ಚಳವೇನು? ನಾಯಂತೆ ನಡೆಯಬಾರದೆನ್ನುವುದು. ತಾನು ಬಲಾಢ್ಯನಾದರೂ ಸಮಾಧಾನದಿಂದ ವರ್ತಿಸಬೇಕು. ನಮಗೆ ಇದರಿಂದ ಅವಮಾನವಿಲ್ಲ. ಧೃತರಾಷ್ಟ್ರನು ನಮಗೆ ತಂದೆ, ರಾಜ, ಹಿರಿಯ. ಮೂರೂ ಕಾರಣದಿಂದಲೂ ನಮ್ಮ ಪೂಜೆಗೆ ಅರ್ಹನು. ಮಗನ ಮಾತಿಗೆ ಮರುಳಾಗಿ ಅವನು ತಪ್ಪಿನ ಕಡೆಗೆ ಒಲೆದಿರುವನು. ನಾವು ಅವನನ್ನು ಬೇಡಿ ಸಂಧಿಯನ್ನು ಮಾಡಿಕೊಳ್ಳಬೇಕು."

ಯುಧಿಷ್ಠಿರನ ಈ ಆಶೆ ನೆರವೇರಲಿಲ್ಲ. ಯುದ್ಧ ಆಯಿತು. ಅವನು ಯುದ್ಧಕ್ಕೆ ಮೊದಲು ಕುಲಕ್ಕೆ ಹಿರಿಯನಾದ ಭೀಷ್ಮನ ಬಳಿಗೆ ಹೋಗಿ, ಅವನ ಆಶೀರ್ವಚನವನ್ನು ಪಡೆದುಬಂದನು. ಭೀಷ್ಮನು ಆಗ ಪ್ರತಿಪಕ್ಷದ ಸೇನಾಪತಿಯಾಗಿದ್ದನು. ಆದರೆ ಯುಧಿಷ್ಠಿರನಿಗೆ ಇದು ಒಂದು ಅಡ್ಡಿಯಾಗಲಿಲ್ಲ. ಭೀಷ್ಮನ ಪ್ರತಾಪ ತನ್ನ ಪಕ್ಷದ ಸೇನೆಯನ್ನು ಅತಿಯಾಗಿ ಕೊರಗಿಸಲು ಯುಧಿಷ್ಠಿರನು ತಾನು ಉಳಿಯುವುದು ಹೇಗೆ ಎಂದು ಅವನನ್ನೇ ಕೇಳಿದನು. ಅವನು ಹೇಳಿದ ಉಪಾಯವನ್ನು ಅನುಸರಿಸಿ, ಅವನು ಶಸ್ತ್ರಸನ್ಯಾಸ ಮಾಡುವಂತೆ ಏರ್ಪಡಿಸಿದನು. ದ್ರೋಣನು ಸೇನಾಪತಿಯಾಗಿ ಐದು ದಿವಸ ಕಾದಿ ಪರಿಸ್ಥಿತಿ ಮತ್ತೆ ವಿಷಮವಾದಾಗ ಯುಧಿಷ್ಠಿರನಿಗೆ ಒಂದು ಪರೀಕ್ಷೆಯ ಸನ್ನಿವೇಶವೊದಗಿತೆಂದು ಕತೆ ಹೇಳುತ್ತದೆ. ದ್ರೋಣನನ್ನು ಯುದ್ಧದಿಂದ ವಿಮುಖನಾಗಿ ಮಾಡಬೇಕಾದರೆ ಅವನ ಮಗ ಅಶ್ವತ್ಥಾಮನು ತೀರಿಕೊಂಡನೆಂದು ಹೇಳುವುದು ಒಂದೇ ದಾರಿ. ಅಶ್ವತ್ಥಾಮನು ರಣರಂಗದ ಬೇರೆ ಒಂದು ಕಡೆ ಯುದ್ಧ ಮಾಡುತ್ತಿದ್ದನು. ಅಲ್ಲಿ ಅವನು ಸತ್ತನೆಂದು ಪಾಂಡವರ ಪಕ್ಷ ಸೇನೆಯಲ್ಲಿ ಸುದ್ದಿ ಹುಟ್ಟಿಸಿತು. ಕಥೆಯಲ್ಲಿ ಇದನ್ನು ಕೃಷ್ಣನು ಪ್ರೇರಿಸಿದನೆಂದು ಉಕ್ತವಾಗಿದೆ. ದ್ರೋಣನ ಎದುರಿಗೆ ಬಂದು ಭೀಮನು "ಅಶ್ವತ್ಥಾಮೋಹತಃ" ಎಂದನು. ದ್ರೋಣನಿಗೆ ಶಂಕೆ

ಯಾಯಿತು. ಆವನು ಯುಧಿಷ್ಠಿರನ ಕಡೆಗೆ ತಿರುಗಿ "ನೀನು ಹೇಳು; ಅಶ್ವತ್ಥಾಮ ಸತ್ತನೆ?" ಎಂದು ಕೇಳಿದನಂತೆ. ಯುಧಿಷ್ಠಿರನು "ಅಶ್ವತ್ಥಾಮೋ ಹತಃ ಕುಂಜರಃ" ಎಂದನು. "ಅಶ್ವತ್ಥಾಮ ಎಂಬ ಆನೆ ಸತ್ತಿತು." ಇದು ನಿಜದ ಮಾತು. ಅಶ್ವತ್ಥಾಮ ಎಂಬ ಹೆಸರಿನ ಆನೆಯೊಂದಿದ್ದಿತು. ಅದು ಸತ್ತಿದ್ದಿತು. ಇದನ್ನು ಹೇಳುವ ಹೊತ್ತಿನಲ್ಲಿ ಯುಧಿಷ್ಠಿರನು ಕುಂಜರಃ ಎಂಬ ಶಬ್ದವನ್ನು ದನಿ ತಗ್ಗಿಸಿ ನುಡಿದ ನಂತೆ. ತಾನು ನಿಜವನ್ನು ಹೇಳಿರಬೇಕು; ಆದರೆ ದ್ರೋಣನ ಕಿವಿಗೆ ಅಶ್ವತ್ಥಾಮನು ಸತ್ತನು ಎಂಬ ಅರ್ಥ ಬರುವ ಎರಡು ಶಬ್ದ ಮಾತ್ರ ಬೀಳಬೇಕು. ಹೀಗೆ ಮಾತಿನಿಂದ ನಿಜ ಹೇಳಿದರೂ ಉದ್ದೇಶದಿಂದ ಯುಧಿಷ್ಠಿರನು ಸುಳ್ಳನ್ನಾಡಿದನು ಎನ್ನುವುದು ಈ ಕಥೆಯ ಕಲ್ಪನೆ. ಕುಂಜರಃ ಶಬ್ದ ಕಿವಿಗೆ ಬೀಳದೆ, ಅಶ್ವತ್ಥಾಮೋ ಹತಃ ಎಂಬ ಮಾತು ಮಾತ್ರ ಕಿವಿಗೆ ಬಿದ್ದು ದ್ರೋಣನು, "ಯುಧಿಷ್ಠಿರನೇ ಹೇಳಿದನು; ಇದು ನಿಜವಿರಬೇಕು," ಎಂದು ಯೋಚಿಸಿ ಯುದ್ಧದಿಂದ ವಿಮುಖ ನಾದನು. ಪ್ರತಿಪಕ್ಷದ ಪೆಟ್ಟಿಗೆ ದೇಹವನ್ನು ತೆತ್ತು ಪ್ರಾಣತ್ಯಾಗ ಮಾಡಿದನು. ಯುಧಿಷ್ಠಿರನ ಈ ವಂಚನೆಯ ಪ್ರಸಂಗ ಕಥೆಯ ಮೂಲ ದಲ್ಲಿದ್ದಿತೇ ಎಂಬ ವಿಷಯದಲ್ಲಿ ಶಂಕೆಗೆ ಕಾರಣವಿದೆ. ಬಹುಮಟ್ಟಿಗೆ ಇದು ಆಮೇಲೆ ಸೇರಿದ್ದು ಎಂದು ಕಾಣುತ್ತದೆ

ಮತ್ತೆ ಯಾವ ಪರೀಕ್ಷೆಯೂ ಇಲ್ಲದೆ ಇವರ ಪಕ್ಷ ಜಯವನ್ನು ಪಡೆಯಿತು. ಯುಧಿಷ್ಠಿರನಿಗೆ ಈ ಜಯದಿಂದ ಸ್ವಲ್ಪವೂ ಸಂತೋಷ ವುಂಟಾಗಲಿಲ್ಲ. ಕ್ಷತ್ರಿಯ ಧರ್ಮವಾದಕಾರಣ, ಹಗೆ ಬೇರೆ ದಾರಿ ಯನ್ನು ಬಿಡಲಿಲ್ಲವಾದಕಾರಣ ಇವನು ಯುದ್ಧಕ್ಕೆ ಒಪ್ಪಿದ್ದನು. ಅದರಿಂದ ಯಾವ ಯಾವ ಅನರ್ಥ ಆಗುತ್ತದೆಂದು ಮೊದಲು ಊಹೆಯಿಂದ ಎಣಿಸಿ ದ್ದನೊ ಆ ಅನರ್ಥವೆಲ್ಲ ಪ್ರತ್ಯಕ್ಷವಾಗಿ ಮೈಗೊಂಡು ತನ್ನ ಮಗ, ತಮ್ಮಂದಿರ ಮಕ್ಕಳು, ನೆಂಟರಿಷ್ಟರು, ಎಲ್ಲರೂ ಅಳಿದದ್ದನ್ನು ಕಂಡನು. ಪ್ರತಿ ಪಕ್ಷ ಮಾತ್ರ ಹಾಳಾಗಿದ್ದರೂ ಇವನಿಗೆ ದುಃಖ ತಪ್ಪಿದ್ದಲ್ಲ. ಹೀಗಿರುತ್ತ ತನ್ನ ಪಕ್ಷವೂ ಮುಪ್ಪಾಗ ಮೂರುವೀಸ ಮುಗಿದುದನ್ನು ಇವನು ಸಹಿಸಬೇಕಾಯಿತು. ಜಯವಾದಮೇಲೆ ಇವನು ತನಗೆ

ರಾಜ್ಯಬೇಡ ಎಂದೇ ಹಟವಮಾಡಿದನು. ಸೋದರರೂ ಕೃಷ್ಣನೂ ಭೀಷ್ಮನೂ ಬಹುಪ್ರಕಾರವಾಗಿ ಒಪ್ಪಿಸಿದಮೇಲೆ ಪಟ್ಟಾಭಿಷೇಕಮಾಡಿಸಿ ಕೊಂಡನು.

ಧೃತರಾಷ್ಟ್ರನನ್ನೂ ಗಾಂಧಾರಿಯನ್ನೂ ಅಕುಟಿಲವಾದ ಪ್ರೀತಿಯಿಂದ ಕಂಡು ಯುಧಿಷ್ಠಿರನು ಅವರ ಆ ತೀರಿ ಹೋದ ನೂರು ಮಕ್ಕಳ ಪ್ರತಿನಿಧಿಯಾಗಿ ಅವರ ಸೇವೆಯನ್ನು ನಡಸಿದನು. ಇವನ ಸೌಜನ್ಯ ಎಷ್ಟು ಹಿರಿಯದು ಎನ್ನುವುದಕ್ಕೆ ಈ ವೃದ್ಧರು ಹದಿನೈದು ವರ್ಷದಕಾಲ ಇವನಿಂದ ಶುಶ್ರೂಷೆ ಮಾಡಿಸಿಕೊಂಡು ಇವನ ಅರಮನೆಯಲ್ಲಿ ಇದ್ದರು ಎನ್ನುವುದೇ ಸಾಕ್ಷಿ.

ರಾಜ್ಯವಾಳುವಷ್ಟುದಿನ ಆಳಿ ಕೊನೆಗೆ ದ್ವಾರಕೆಯಲ್ಲಿ ಕೃಷ್ಣನು ತೀರಿ ಕೊಂಡನು ಎಂಬ ಸುದ್ದಿ ಬಂದಾಗ ಯುಧಿಷ್ಠಿರನು ಇನ್ನು ತಾನು ರಾಜ್ಯ ವನ್ನು ಆಳುತ್ತ ಇರುವುದು ಸರಿಯಲ್ಲ ಎಂದು ನಿಶ್ಚಯಿಸಿ ಮಹಾಪ್ರಸ್ಥಾನ ಮಾಡಿದನು.

ಇವನ ತಮ್ಮಂದಿರೂ ರಾಣಿಯೂ ಇವನ ಜೊತೆಗೆ ಹೋಗುವು ದೆಂದು ನಿಶ್ಚಯವಾಯಿತು. ಇವರು ಊರಿಂದ ಹೊರಟಾಗ ಊರಿನ ಒಂದು ಕರಿಯ ನಾಯಿ ನಿಷ್ಕಾರಣವಾಗಿ ಇವರ ಜೊತೆಗೆ ಬಂದಿತು; ಮುಂದೆ ನಡೆಯಿತು. ಸಾಕಾದಷ್ಟು ದೂರ ಹೋದಮೇಲೆ ಪ್ರಯಾಣದ ಆಯಾಸದಿಂದ ಸೋತು ದ್ರೌಪದಿ ಜೀವ ಬಿಟ್ಟು ದಾರಿಯಲ್ಲಿ ಬಿದ್ದಳು. ಆಮೇಲೆ ಸಹದೇವನಾದಿಯಾಗಿ ನಾಲ್ವರು ಸೋದರರೂ ಒಬ್ಬರಾದಮೇಲೆ ಒಬ್ಬರು ದಾರಿಯಲ್ಲಿ ಮೃತರಾಗಿ ಬಿದ್ದರು. ಯುಧಿಷ್ಠಿರನು ಇನ್ನೂ ದೇಹವನ್ನು ಬಿಡುವ ಸ್ಥಿತಿಗೆ ಬರಲಿಲ್ಲ: ಒಂಟಿಯಾದನು. ಜೊತೆಗೆ ಊರಿಂದ ತಾನಾಗಿ ಬಂದ ಆ ನಾಯಿ ಒಂದು ಮಾತ್ರ ಉಳಿದಿತ್ತು. ಇಲ್ಲಿಂದ ಮುಂದಕ್ಕೆ ಭಾರತಗ್ರಂಥದ ಕರ್ತೃ ಧರ್ಮರಾಯನ ಅನುಭವ ವನ್ನು ಅಲೌಕಿಕ ಕಲ್ಪನೆಯ ಸಹಾಯದಿಂದ ವಿವರಿಸಿದ್ದಾನೆ. ಸ್ವಲ್ಪದೂರ ಹೋದಮೇಲೆ ಇಂದ್ರನು ತನ್ನ ರಥವನ್ನು ತೆಗೆದುಕೊಂಡು ಯುಧಿಷ್ಠಿರನ ಬಳಿಗೆ ಬಂದನು; "ಸ್ವರ್ಗಕ್ಕೆ ಹೋಗೋಣ, ಈ ರಥವನ್ನೇರು," ಎಂದನು. ಯುಧಿಷ್ಠಿರನು ಅವನನ್ನು ಕುರಿತು

“ಭ್ರಾತರಃ ಪತಿತಾ ಮೇತ್ರ ಗಚ್ಛೇಯುಸ್ತೇ ಮಯಾ ಸಹ
ನ ವಿನಾ ಭ್ರಾತೃಭಿಃ ಸ್ವರ್ಗಂ ಇಚ್ಛೇ ಗಂತುಂ ಸುರೇಶ್ವರ
ಸುಕುಮಾರೀ ಸುಖಾರ್ಹಾ ಚ ರಾಜಪುತ್ರೀ ಪುರಂದರ
ಸಾಸ್ಮಾಭಿಃ ಸಹಗಚ್ಛೇತ ತದ್ಭವಾನ್ ಅನುಮನ್ಯತಾಂ

“ನನ್ನ ಸೋದರರು ಇಲ್ಲಿ ಬಿದ್ದು ಹೋಗಿದ್ದಾರೆ; ಅವರೂ ನನ್ನೊಂದಿಗೆ ಬರಲಿ. ಅವರನ್ನು ಬಿಟ್ಟು ಸ್ವರ್ಗಕ್ಕೆ ಹೋಗಲು ನನಗೆ ಆಶೆಯಿಲ್ಲ. ಸುಖಾರ್ಹಳೂ ಸುಕುಮಾರಿಯೂ ಆದ ದ್ರೌಪದಿಯೂ ನಮ್ಮೆಲ್ಲರೊಂದಿಗೆ ಬರಲಿ. ನೀವು ಇದನ್ನು ಅನುಗ್ರಹಿಸಬೇಕು,” ಎಂದನು. ಇಂದ್ರನು, “ನಿನ್ನ ಸೋದರರು ಈಗಾಗಲೆ ಸ್ವರ್ಗವನ್ನು ಸೇರಿದ್ದಾರೆ. ದ್ರೌಪದಿ ಅವರ ಜೊತೆಗಿದ್ದಾಳೆ. ನೀನು ಅವರನ್ನು ಅಲ್ಲಿ ಕಾಣುವೆ, ಚಿಂತಿಸ ಬೇಡ,” ಎಂದು ಹೇಳಿದನು. ಯುಧಿಷ್ಠಿರನು

“ಅಯಂ ಶ್ವಾ ಭೂತಭವ್ಯೇಶ ಭಕ್ತೋ ಮಾಂ ನಿತ್ಯಮೇವ ಹ
ಸಗಚ್ಛೇತ ಮಯಾಸಾರ್ಧಂ ಆನೃಶಂಸ್ಯಾ ಹಿ ಮೇ ಮತಿಃ

“ಈ ನಾಯಿ ನನ್ನನ್ನು ಬಿಡದೆ ಜೊತೆಗೆ ಬಂದಿದೆ. ಇದೂ ನನ್ನೊಂದಿಗೆ ಸ್ವರ್ಗಕ್ಕೆ ಬರಲಿ. ಜೊತೆಯ ಜೀವವನ್ನು ಬಿಟ್ಟು ನಾನು ಸ್ವರ್ಗಕ್ಕೆ ಬರ ಲಾರೆ,” ಎಂದನು. ಶಕ್ರನು, ಸೋದರರನ್ನೂ ರಾಣಿಯನ್ನೂ ಬಿಟ್ಟವ ನಿಗೆ ಒಂದು ನಾಯಿ ವಿಷಯ ಏನು ಮೋಹ, ಎಂದು ಕೇಳಿದನೆಂದೂ ಯುಧಿಷ್ಠಿರನು, ಅವರು ಹೇಗೂ ತೀರಿಕೊಂಡಿದ್ದಾರೆ, ಅವರ ವಿಷಯದಲ್ಲಿ ನನ್ನ ಕರ್ತವ್ಯ ಏನೂ ಇಲ್ಲ, ಆದರೆ ಈ ನಾಯಿ ಜೀವದೊಂದಿಗಿದೆ, ಅದನ್ನು ಬಿಟ್ಟು ಸ್ವರ್ಗವನ್ನು ಸಾರುವುದು ಆರ್ಯ ವರ್ತನ ಅಲ್ಲ, ಎಂದು ಹೇಳಿದನೆಂದೂ ಕಥೆಯಲ್ಲಿ ಉಕ್ತವಾಗಿದೆ. ಇದು ಆಮೇಲೆ ಸೇರಿದ ವಿವರ ಎಂದು ಕಾಣುತ್ತದೆ. ಅಂತೂ ಜೊತೆಗೆ ಬಂದಿತೆಂಬ ಕಾರಣದಿಂದ ಆ ನಾಯನ್ನು ಬಿಡಲಾರೆನೆಂದು ಯುಧಿಷ್ಠಿರನು ಹೇಳಲು ಇಂದ್ರನು,

“ಅಭಿಜಾತೋಸಿ ರಾಜೇಂದ್ರ ಪಿತುರ್ವೃತ್ತೇನ ಮೇಧಯಾ
ಅನುಕ್ರೋಶೇನ ಚಾ ನೇನ ಸರ್ವಭೂತೇಷು ಭಾರತ
ಅಯಂ ಶ್ವಾ ಭಕ್ತ ಇತ್ಯೇವಂ ತ್ಯಕ್ತೋ ದೇವರಥಸ್ತ್ವಯಾ
ತಸ್ಮಾತ್ ಸ್ವರ್ಗೇನ ತೇ ತುಲ್ಯಃ ಕಶ್ಚಿದಸ್ತಿ ನರಾಧಿಪಃ
ಅತಸ್ತವಾಃ ಕ್ಷಯಾ ಲೋಕಾಃ ಸ್ವಶರೀರೇಣ ಭಾರತ
ಪ್ರಾಪ್ತೋಸಿ ಭರತಶ್ರೇಷ್ಠ ದಿವ್ಯಾಂಗತಿಮನುತ್ತಮಾಂ

“ನೀನು ಸಜ್ಜನನು. ಧರ್ಮದದಾರಿಯಲ್ಲಿ ನಡೆಯುತ್ತಿದ್ದೀಯೆ. ನಿನ್ನ ಬುದ್ಧಿ ಶುದ್ಧವಾಗಿದೆ. ಯಾವ ಜೀವವನ್ನೂ ಕುರಿತ ಈ ಅನುಕ್ರೋಶ ಶ್ರೇಷ್ಠನಗುಣ. ಈ ನಾಯಿ ಅನುಸರಿಸಿ ಬಂದಿತೆಂಬ ಕಾರಣದಿಂದ ಇದರ ಸಲುವಾಗಿ ನೀನು ದೇವರಥವೇ ಬೇಡ ಎಂದು ಹೇಳಿದೆಯಲ್ಲ, ಈ ಕಾರಣ ದಿಂದ ಸ್ವರ್ಗದಲ್ಲೀ ನಿನಗೆ ಸಮಾನಾದವರು ಯಾರೂ ಇಲ್ಲ. ಇನ್ನು ನಿನಗೆ ಶರೀರ ಸಮೇತನಾಗಿ ಅಕ್ಷಯಲೋಕಗಳು ದೊರೆಯುತ್ತವೆ,” ಎಂದನು.

ಹೀಗೆಂದು ಇಂದ್ರನೂ ಇತರ ದೇವತೆಗಳೂ ಯುಧಿಷ್ಠಿರನನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಸ್ವರ್ಗಕ್ಕೆ ಕರೆದುಕೊಂಡುಹೋದರು. ಶರೀರಸಹಿತನಾಗಿ ಸ್ವರ್ಗಕ್ಕೆ ಹೋದವರು ಹಿಂದೆ ಯಾರೂ ಇಲ್ಲ, ಆ ಅಪೂರ್ವ ಯಶಸ್ಸು ಈತನದಾಯಿತು, ಎಂದು ಎಲ್ಲರೂ ಯುಧಿಷ್ಠಿರ ನನ್ನು ಹೊಗಳಿದರು. ಸ್ವರ್ಗದಲ್ಲಿ ಇವನಿಗೆ ಸೋದರರು ಕಣ್ಣಿಗೆ ಬೀಳ ಲಿಲ್ಲ, ಇವನ ಪಕ್ಷದವರು ಯಾರೂ ಕಾಣಿಸಲಿಲ್ಲ. ಇವನು, “ನನ್ನ ಸೋದರರು ಹಿಂಬರು ಎಲ್ಲಿದ್ದಾರೆ, ನಾನು ಅಲ್ಲಿಗೆ ಹೋಗಬೇಕು. ಅವರನ್ನು ಬಿಟ್ಟು ನನಗೆ ಈ ಲೋಕ ಅಪೇಕ್ಷಿತವಲ್ಲ,” ಎಂದನು. ಪುರಂದರನು, “ನಿನ್ನ ಪುಣ್ಯಕರ್ಮಗಳಿಂದ ನೀನು ಸಂಪಾದಿಸಿದ ಸ್ಥಾನ ಇದು, ನೀನು ಇದನ್ನು ಅನುಭವಿಸು. ಮಾನುಷಕನಾದ ಸ್ನೇಹವನ್ನು ಇಲ್ಲಿಗೂ ಎಳೆದುಕೊಂಡು ಬರುವುದೆ. ಬೇರೆ ಯಾವ ಮನುಷ್ಯನೂ ಎಲ್ಲೂ ಪಡೆಯದ ಸಿದ್ಧಿಯನ್ನು ನೀನು ಪಡೆದಿದ್ದೀಯೆ. ನಿನ್ನ ತಮ್ಮಂದಿರು ಈ ಸ್ಥಾನವನ್ನು ಗಳಿಸಲಿಲ್ಲವಲ್ಲ!” ಎಂದನು. ಯುಧಿಷ್ಠಿರನು,

> “ತೈರ್ವಿನಾ ನೋತ್ಸಹೇ ವಸ್ತುಂ ಇಹ ದೈತ್ಯ ನಿಬರ್ಹಣ
> ಗಂತುಮಿಚ್ಛಾಮಿ ತತ್ರಾಹಂ ಯತ್ರ ಮೇ ಭ್ರಾತರೋ ಗತಾಃ
> ಯತ್ರ ಸಾ ಬೃಹತೀ ಶ್ಯಾಮಾ ಬುದ್ಧಿಸತ್ತ್ವಗುಣಾನ್ವಿತಾ
> ದ್ರೌಪದೀ ಯೋಷಿತಾಂ ಶ್ರೇಷ್ಠಾ ಯತ್ರಚೈವ ಸುತಾ ಮಮ,

“ಓ ದೈತ್ಯ ನಿಬರ್ಹಣ, ಅವರನ್ನು ಬಿಟ್ಟು ನಾನು ಇಲ್ಲಿ ವಾಸಿಸಲು ಬಯಸಲಾರೆ. ನನ್ನ ಸೋದರರು ಎಲ್ಲಿ ಹೋಗಿದ್ದಾರೆ, ಅಲ್ಲಿಗೆ ಹೋಗಲು

ನಾನು ಇಚ್ಛಿಸುತ್ತೇನೆ. ದ್ರೌಪದಿ ನನ್ನ ಮಕ್ಕಳು ಎಲ್ಲಿದ್ದಾರೆ ಅಲ್ಲಿ ನಾನು ಇರಬೇಕು," ಎಂದನು. ಸ್ವಲ್ಪ ಮುಂದೆ ಹೋಗಲು ಸ್ವರ್ಗದಲ್ಲಿ ಒಂದು ಪೀಠದಲ್ಲಿ ದುರ್ಯೋಧನನು ಕುಳಿತಿರುವುದು ಇವನಿಗೆ ಕಂಡಿತಂತೆ. ಅವನು ಸತ್ಯವಂತರಿಂದ ಆವೃತನಾಗಿ ತನ್ನ ಪೀಠದಲ್ಲಿ ತೊಳಗುತ್ತಿದ್ದನು. ಇದು ಯುಧಿಷ್ಠಿರನ ಮನಸ್ಸನ್ನು ಮತ್ತಷ್ಟು ಕೆಡಿಸಿತು. ಅವನು, "ಯಾರ ಕಾರಣದಿಂದ ಸಮಸ್ತಪೃಥ್ವಿ, ಹಾಗೆಯೇ ನಮ್ಮ ಬಂಧು ಜನವನ್ನು, ನಾವು ಕೊಲ್ಲಬೇಕಾಯಿತು ಅಂಥ ಈ ದುರ್ಯೋಧನನ ಜೊತೆಗೆ ನಾನು ಒಂದು ಸ್ಥಳದಲ್ಲಿರಲಾರೆ," ಎಂದನಂತೆ. ನಾರದನು, "ದುರ್ಯೋಧನನು ವೀರಗತಿಯನ್ನು ಪಡೆದು ಇಲ್ಲಿದ್ದಾನೆ. ನೀನು ಭೂಮಿಯಲ್ಲಿ ನಡೆದದ್ದನ್ನೆಲ್ಲ ನೆನೆಯಬಾರದು. ಇದು ಸ್ವರ್ಗ. ಇಲ್ಲಿ ವೈರಕ್ಕೆ ಎಡೆಯಿಲ್ಲ," ಎಂದನು. ಯುಧಿಷ್ಠಿರನು, "ನನ್ನ ಸಹೋದರರು ಎಲ್ಲಿದ್ದಾರೆ? ಪಾಪಿಷ್ಠನಾದ ದುರ್ಯೋಧನನು ಇಲ್ಲಿರಬೇಕಾದರೆ ಇವನಷ್ಟೇ ವೀರರಾಗಿ ಪಾಪಿಷ್ಠರಲ್ಲದೆ ಸತ್ಯಪ್ರತಿಜ್ಞರೂ ಸತ್ಯವಾದಿಗಳೂ ಆದ ಅವರಿಗೆ ಯಾವ ಲೋಕ ದೊರೆತಿದೆ? ನಾನು ಅದನ್ನು ನೋಡಬೇಕು. ಸತ್ಯಸಂಧನಾದ ಕರ್ಣ ಎಲ್ಲಿ? ಧೃಷ್ಟದ್ಯುಮ್ನ, ಸಾತ್ಯಕಿ, ಉಳಿದ ನಮ್ಮ ಪಕ್ಷದ ವೀರರು, ಎಲ್ಲಿದಾರೆ? ಅವರು ಯಾರೂ ಇಲ್ಲಿ ಕಾಣುತ್ತಿಲ್ಲ! ಅವರಿಗೇನು ಈ ಪುಣ್ಯಲೋಕ ದೊರೆಯಲಾಗದೆ ಹೋಯಿತೆ? ಅವರನ್ನುಳಿದು ನಾನು ಬಾಳಲಾರೆ.

"ನಚೇಹ ಸ್ಥಾತುಮಿಚ್ಛಾಮಿ ಸತ್ಯಮೇವಂ ಬ್ರವೀಮಿಹ
ಕಿಂ ಮೇ ಭ್ರಾತೃವಿಹೀನಸ್ಯ ಸ್ವರ್ಗೇಣ ಸುರಸತ್ತಮಾಃ
ಯತ್ರ ತೇ ಮಮ ಸ ಸ್ವರ್ಗೋ ನಾಯಂ ಸ್ವರ್ಗೋ ಮತೋ ಮಮ

"ನಾನು ಇಲ್ಲಿ ನಿಲ್ಲಲು ಅಪೇಕ್ಷಿಸುವುದಿಲ್ಲ. ನಿಜವಾಗಿ ಹೇಳುತ್ತೇನೆ ತಿಳಿಯಿರಿ. ಸೋದರರಿಲ್ಲದೆ ನನಗೆ ಸ್ವರ್ಗದಿಂದ ಆಗಬೇಕಾದದ್ದೇನು? ಅವರು ಎಲ್ಲಿದ್ದಾರೆ ಅದು ನನಗೆ ಸ್ವರ್ಗ. ಅವರು ಇಲ್ಲಿಲ್ಲದ್ದರಿಂದ ಇದು ಸ್ವರ್ಗ ಅಲ್ಲವೆಂದೇ ನನಗೆ ತೋರುತ್ತದೆ," ಎಂದನು. ದೇವತೆಗಳು, "ಹಾಗಾದರೆ ನಿನಗೆ ಇಷ್ಟವಾದ ಕಡೆಗೆ ನಿನ್ನನ್ನು ಕರೆದುಕೊಂಡು ಹೋಗುತ್ತೇವೆ ಬಾ," ಎಂದರು. ಯುಧಿಷ್ಠಿರನ ಜೊತೆಗೆ ಒಬ್ಬ ದೂತ

-ನನ್ನು ಕೊಟ್ಟು ಮುಂದಕ್ಕೆ ಕಳುಹಿಸಿದರು. ದೇವದೂತನು ಮುಂದೆ ಹೊರಟನು; ಯುಧಿಷ್ಠಿರನು ಅವನ ಹಿಂದೆ ನಡೆದನು. ಇವರು ಒಂದು ದುರ್ಗಮವಾದ ದಾರಿಗೆ ಬಂದರು. ಅಲ್ಲಿ ಕತ್ತಲು ಮುಚ್ಚಿತ್ತು; ದುರ್ಗಂಧ ಹರಡಿತ್ತು. ಈ ದುರ್ಗಂಧವನ್ನು ನೋಡಿ ಯುಧಿಷ್ಠಿರನು ದೇವದೂತನಿಗೆ, "ಅಯ್ಯಾ, ಇದೇನು? ನಾವು ಇಂಥ ಈ ದಾರಿಗೆ ಬಂದಿದ್ದೇವೆ. ನನ್ನ ಸೋದರರು ಎಲ್ಲಿದ್ದಾರೆ? ಅದನ್ನು ಹೇಳು," ಎಂದು ಕೇಳಿದನು. ದೇವದೂತನು, "ನಾನು ನಿನ್ನನ್ನು ಅಲ್ಲಿಗೇ ಕರೆದುಕೊಂಡು ಹೋಗುತ್ತಿದ್ದೇನೆ. ಬೇಡವೆಂದು ನಾವೆಲ್ಲ ಆಗಲೆ ಹೇಳಿದೆವಲ್ಲ. ಸಾಕಾಗಿದ್ದರೆ ಹಿಂದಕ್ಕೆ ಹೋಗೋಣ," ಎಂದನು. ಆ ದುರ್ಗಂಧದಿಂದ ನಿರ್ವಿಣ್ಣನಾಗಿ ಮೂರ್ಛೆಹೋಗುವ ಸ್ಥಿತಿಗೆ ಬಂದು ಯುಧಿಷ್ಠಿರನು ಹಿಂತಿರುಗುವುದೆಂದು ನಿಶ್ಚಯಿಸಿ ಸುತ್ತಿದನು. ಆಗ ಅವನಿಗೆ, "ಅಯ್ಯಾ ಧರ್ಮಕುಮಾರ, ಒಂದು ಕ್ಷಣ ಅಲ್ಲಿಯೇ ನಿಂತು ನಮ್ಮ ವಿಷಯದಲ್ಲಿ ಕೃಪೆತೋರು. ನೀನು ಬಂದೆ: ನಮ್ಮ ಮೇಲೆ ಪುಣ್ಯಸಮೀರಣ ಬೀಸುತ್ತಿದೆ, ನಮಗೆ ಸ್ವಲ್ಪ ನಿರ್ವೃತಿಯುಂಟಾಗಿದೆ. ಬಹುಕಾಲದ ನಂತರ ಸ್ವಲ್ಪ ಸುಖವನ್ನು ನಾವು ಪಡೆದಂತಾಯಿತು. ಅಲ್ಲಿಯೇ ಮತ್ತಷ್ಟು ನಿಲ್ಲು; ನಮ್ಮ ನೋವನ್ನು ಮರೆತಿರುತ್ತೇವೆ," ಎಂದು ಮೊರೆಯುವ ಧ್ವನಿಗಳು ಕೇಳಬಂದುವು ದಣಿದು ದುಃಖಿತರಾದ ಜನರ ಈ ಧ್ವನಿಗಳು ಯುಧಿಷ್ಠಿರನಿಗೆ ಗುರುತುಸಿಕ್ಕಲಿಲ್ಲ. ಅವನು. "ಅಯ್ಯಾ ಈ ಮಾತನ್ನು ಹೇಳುತ್ತಿರುವ ನೀವು ಯಾರು? ಇಲ್ಲಿ ಏಕೆ ಇದ್ದೀರಿ?" ಎಂದು ಕೇಳಿದನು. ಧ್ವನಿಗಳು, "ನಾನು ಕರ್ಣ, ನಾನು ಭೀಮಸೇನ, ನಾನು ಅರ್ಜುನ, ನಾನು ದ್ರೌಪದಿ, ಇಂಥವನು ಅಂಥವನು" ಎಂದು ಇವನ ಪಕ್ಷದವರ ಹೆಸರನ್ನು ಹೇಳಿದುವು. ಯುಧಿಷ್ಠಿರನು, "ಇದು ಏನಿದು ದೇವತೆಗಳು ಮಾಡಿರುವ ಕೆಲಸ? ಈ ಮಹಾತ್ಮರು ಮಾಡಿದ ಆ ತಪ್ಪು ಯಾವುದೋ, ಇವರನ್ನು ಈ ದುರ್ಗಂಧದ ದಾರುಣ ಆವಾಸದಲ್ಲಿ ಏಕೆ ಕೆಡವಿದ್ದಾರೆ? ಏನುಮಾಡಿ ಧೃತರಾಷ್ಟ್ರನ ಮಗ ಸುಯೋಧನನು ಅಲ್ಲಿ ಸುಖದಲ್ಲಿ ಆಳುತ್ತಿದಾನೆ? ಯಾವ ಕಾರಣದಿಂದ ಇವರು ಇಲ್ಲಿ ಈ ನರಕದಲ್ಲಿ ಉರುಳಿದ್ದಾರೆ?

"ಕಿನ್ನು ಸುಪ್ತೋಽಸ್ಮಿ ಜಾಗರ್ಮಿ ಚೇತಯಾಮಿ ನ ಚೇತಯೇ
ಅಹೋ ಚಿತ್ತವಿಕಾರೋಽಯಂ ಸ್ಯಾದ್ವಾ ಮೇ ಚಿತ್ತವಿಭ್ರಮಃ

"ನಾನೇನು ನಿದ್ದೆಯಲ್ಲಿದ್ದೇನೆಯೆ, ಎಚ್ಚರವಾಗಿದ್ದೇನೆಯೆ? ನನಗೆ ಬುದ್ಧಿವಿಕಾರವೊ ವಿಭ್ರಮವೊ ಆಗಿರಬೇಕು," ಎಂದುಕೊಂಡು ಕೋಪದಿಂದ ದೇವತೆಗಳನ್ನು ಗರ್ಹಿಸಿ ದೇವದೂತನಿಗೆ ಹೀಗೆಂದು ಹೇಳಿದನು:

"ಗಮ್ಯತಾಂ ತತ್ರ ಯೇಷಾಂ ತ್ವಂ ದೂತಸ್ತೇಷಾಂ ಉಪಾಂತಿಕಂ
ನಹ್ಯಹಂ ತತ್ರಯಾಸ್ಯಾಮಿ ಸ್ಥಿತೋಽಸ್ಮೀತಿ ನಿವೇದ್ಯತಾಂ
ಮತ್ಸಂಶ್ರಯಾತ್ ಇಮೇ ದೂತಾಃ ಸುಖಿನೋ ಭ್ರಾತರೋ ಹಿ ಮೇ

"ನೀನು ಯಾರ ದೂತ ಅವರ ಬಳಿಗೆ ಹೋಗುವುದಾಗಲಿ. ನಾನು ಅಲ್ಲಿಗೆ ಬರುವವನಲ್ಲ; ಇಲ್ಲಿಯೇ ಇರುವವನು. ಇದನ್ನು ಅವರಿಗೆ ತಿಳಿಸುವುದಾಗಲಿ. ಬೇನೆಯಿಂದನರಳುತ್ತಿರುವ ಇವರು ನಾನು ಇಲ್ಲಿರುವುದರಿಂದ ಸ್ವಲ್ಪ ಸುಖಪಡೆಯುವರು," ಎಂದನು. ದೂತನು ಹೊರಟು ಹೋದನು. ಒಂದು ಮುಹೂರ್ತದಲ್ಲಿ ಶಕ್ರನು ದೇವತೆಗಳೊಡನೆ ಯುಧಿಷ್ಠಿರನ ಮುಂದೆ ಬಂದನು. ಅವರಲ್ಲಿ ಬಂದದ್ದೇ ಆ ಸ್ಥಳ ಬೆಳಗಿತು; ಅದರ ದುರ್ಗಂಧ ಬೇನೆಗಳು ತೊಲಗಿದುವು. ಇಂದ್ರನು ಯುಧಿಷ್ಠಿರನಿಗೆ, "ಯುಧಿಷ್ಠಿರ, ಮಹಾಬಾಹು, ದೇವಗಣಗಳು ನಿನ್ನ ವಿಷಯದಲ್ಲಿ ತುಂಬ ಸಂತುಷ್ಟವಾಗಿವೆ. ಬಾ ಬಾ. ಏನುಮಾಡಿಬಿಟ್ಟೆ. ವಿಭು! ನಿನಗೆ ಸಿದ್ಧಿ ದೊರೆಯಿತು. ಅಕ್ಷಯ ಲೋಕಗಳು ದೊರೆತುವು ಹಾಗೆಯೆ ನಿನ್ನ ಸೋದರರಿಗೆ ಪುತ್ರರಿಗೆ ಕೂಡ ನಿತ್ಯವಾದ ಉತ್ತಮಗತಿ ಸಿಕ್ಕಿತು. ಸ್ವಲ್ಪವಾದರೂ ತಪ್ಪುಮಾಡದ ನಿನಗೆ ನರಕದ ಪರಿಚಯ ಆಗಬೇಕಾಯಿತು. ದ್ರೋಣನ ಮಗನ ವಿಷಯ ನೀನು ಅಸತ್ಯಲೇಪದ ವಾಕ್ಯವನ್ನಾಡಿದ್ದರಿಂದ ನೀನು ವ್ಯಾಜರೂಪವಾಗಿ ನರಕವನ್ನು ನೋಡಿದೆ. ಈಗ ನೀನೂ, ನಿನ್ನವರಾದ ಈ ಎಲ್ಲರೂ, ಕಲ್ಮಷದಿಂದ ಮುಕ್ತರಾದಿರಿ. ನೋಡು. ನಿನ್ನವರೆಲ್ಲ ಸ್ವರ್ಗದಲ್ಲಿದ್ದಾರೆ. ಇನ್ನು ಬಾ. ಈ ದೇವನದಿಯಲ್ಲಿ ಸ್ನಾನಮಾಡು. ನಿನ್ನ ಮಾನುಷ ಭಾವ ಕಳಚಿಹೋಗುತ್ತದೆ," ಎಂದನು. ಧರ್ಮದೇವತೆ ಯುಧಿಷ್ಠಿರನ ಎದುರಿಗೆ ಮೂರ್ತಿಯಾಗಿ

ನಿಂತು, "ಮಗನೆ, ನಾನು ನಿನ್ನ ವಿಷಯದಲ್ಲಿ ತೃಪ್ತನಾದೆನು. ಧರ್ಮವೆಂಬುದರಲ್ಲಿ ಭಕ್ತಿಯಿಂದ, ಸತ್ಯವಾಕ್ಯದಿಂದ, ಕ್ಷಮೆಯಿಂದ, ದಮದಿಂದ, ನೀನು ನನ್ನನ್ನು ಸಂತೋಷಪಡಿಸಿದ್ದೀಯೆ. ಇದು ನಿನಗೆ ಮೂರನೆಯ ಪರೀಕ್ಷೆ ಆಯಿತು. ನೀನು ನಿನ್ನ ಉದಾತ್ತ ಸ್ವಭಾವದಿಂದ ಚಲಿಸಲಿಲ್ಲ. ಯಕ್ಷನಾಗಿ ನಿನ್ನನ್ನು ನಾನು ಪ್ರಶ್ನೆಮಾಡಿದಾಗ ಸರಿಯಾದ ಉತ್ತರಕೊಟ್ಟೆ; ಮಲತಾಯಿ ಮಗನನ್ನು ನಿನ್ನ ಸ್ವಂತ ಸೋದರರಿಗಿಂತ ಹೆಚ್ಚೆಂದು ಬಗೆದು ಪರೀಕ್ಷೆಯಲ್ಲಿ ಗೆದ್ದೆ. ಸೋದರರು ದ್ರೌಪದಿ ತೀರಿ ಹೋದರೆ ಅವರ ಯೋಚನೆಯನ್ನು ಬಿಟ್ಟು ಒಂದು ನಾಯಿಯನ್ನು ನೀನು ಬಿಡಲಾರೆನೆಂದು ಹೇಳಿದೆ: ಆಗ ನಾಯಿರೂಪದಲ್ಲಿ ನಿನ್ನನ್ನು ನಾನು ಪರೀಕ್ಷಿಸಿದೆನು. ಇದು ಮೂರನೆಯ ಪರೀಕ್ಷೆ. ನಿನ್ನ ಸೋದರರು ನಿಜವಾಗಿ ನರಕವನ್ನು ಹೊಗಬೇಕಾದದ್ದಿರಲಿಲ್ಲ. ನೀನೂ ಅಷ್ಟೆ. ಇದನ್ನೆಲ್ಲ ದೇವರಾಜನು ಮಾಯೆಯಿಂದ ನಡೆಸಿದನು. ಬಾ, ನಿನ್ನವರನ್ನು ನೋಡು," ಎಂದನು. ದುರ್ಯೋಧನನನ್ನು ಸ್ವರ್ಗದಲ್ಲಿ ಕಂಡದ್ದು ಎಂಬಲ್ಲಿಂದ ಇಲ್ಲಿಯವರೆಗಿನ ಕಥೆ ಮೂಲದಲ್ಲಿ ಇದಿರಲಾರದು ಎಂದು ಶಂಕೆ ಹುಟ್ಟುತ್ತದೆ. ಯುಧಿಷ್ಠಿರನು ದೇವನದಿಯಲ್ಲಿ ಮಿಂದು ಮಾನುಷ ದೇಹವನ್ನು ತೊರೆದು ದಿವ್ಯದೇಹವನ್ನು ಪಡೆದು ನಿರ್ವೈರನಾಗಿ, ಸಂತಾಪ ರಹಿತನಾಗಿ, ದೇವತೆಗಳೊಂದಿಗೆ ನಡೆದನು. ಸ್ವರ್ಗದಲ್ಲಿ ಕರ್ಣನ ಸಹಿತ ತನ್ನ ಎಲ್ಲ ಸೋದರರನ್ನೂ ದ್ರೌಪದಿಯನ್ನೂ, ಶ್ರೀ ಕೃಷ್ಣನನ್ನೂ ಕಂಡನು. ಪಾಂಚಾಲಿ ಕಮಲೋತ್ಪಲ ಮಾಲಿಕೆಯಂತಾಗಿದ್ದಳು; ತನ್ನ ಆಕಾರದ ಪ್ರಭೆಯಿಂದ ಸ್ವರ್ಗವನ್ನು ತುಂಬಿದ್ದಳು. ಯುಧಿಷ್ಠಿರನು ಅವಳನ್ನು ಸಹಸಾ ಮುಟ್ಟಲು ಇಚ್ಛಿಸಿದನು. ಇಂದ್ರನು ಅವಳ ವೃತ್ತಾಂತವನ್ನು ಹೇಳುತ್ತ ಅವನನ್ನು ಮುಂದೆ ಕರೆದುಕೊಂಡು ಹೋದನು.

ಈ ಕಲ್ಪನೆಯಿಂದ ಮಹಾಭಾರತದ ಕರ್ತೃ ಯುಧಿಷ್ಠಿರನ ಚರಿತ್ರೆಯನ್ನು ಮುಗಿಸಿದ್ದಾನೆ. ಜೊತೆಯ ಒಂದು ನಾಯಿ ಕೂಡ ಯುಧಿಷ್ಠಿರನಿಗೆ ತನ್ನಷ್ಟೇ ಪ್ರಿಯವಾದ ವಸ್ತು. ಆನೃಶಂಸ್ಯ, ಸರ್ವಭೂತವನ್ನೂ ಕುರಿತ ವಾತ್ಸಲ್ಯ, ಇವು ಯುಧಿಷ್ಠಿರನ ಮೂಲ ಮನೋಧರ್ಮ.

ಈ ಮನೋಧರ್ಮದ ಪೂರ್ಣ ಪರಿಪಾಕದಿಂದ ಇವನ ಸಾಹಸ ಇವನದೆ ಆದ ಒಂದು ದಿಕ್ಕಿನಲ್ಲಿ ಪ್ರಕಟವಾಯಿತು. ಉಳಿದವರು ಯುದ್ಧದಲ್ಲಿ ಪರಾಕ್ರಮಿಗಳಾದಂತೆ ಯುಧಿಷ್ಠಿರನು ಕಾರುಣ್ಯದಲ್ಲಿ ಪರಾಕ್ರಮಿಯಾದನು.

## ೧೭

## ದ್ರೌಪದಿ

ದ್ರೌಪದಿ ಭಾರತ ಕಥೆಯ ಏಕಮಾತ್ರ ಸ್ತ್ರೀಮೂರ್ತಿ. ಏಕಮಾತ್ರ ಅಲ್ಲದೆ ಅವಳು ಆ ಕಥೆಯ ಕೇಂದ್ರ ಮೂರ್ತಿಯೂ ಆಗಿದ್ದಾಳೆ. ಸ್ವಯಂವರ ನಡೆದ ದಿನ ಅವಳು ಕಥೆಯಲ್ಲಿ ಮೊದಲು ಕಾಣುತ್ತಾಳೆ. ಸ್ವಯಂವರದಲ್ಲಿ ಕರ್ಣನು ಸ್ಪರ್ಧಿಸಲು ಬಂದನೆಂದೂ ಆಗ ಇವಳು ನಾನು ಸೂತನ ಮಗನನ್ನು ಮದುವೆಯಾಗುವುದಿಲ್ಲವೆಂದು ಹೇಳಿದಳೆಂದೂ ಈಗ ಕಥೆಯಲ್ಲಿ ಒಂದು ಭಾಗವಿದೆ. ಇದು ಮೊದಲಲ್ಲಿ ಇದ್ದಿರಲಾರದು. ಸ್ವಯಂವರಕ್ಕೆ ಬರುವ ವೇಳೆಗೆ ಕರ್ಣನು ಅಂಗದೇಶದ ರಾಜನಾಗಿದ್ದನು. ಸ್ವಯಂವರಮಂಟಪದಲ್ಲಿ ಅವನು ರಾಜರ ಮಧ್ಯದಲ್ಲಿ ಕುಳಿತಿದ್ದನು. ಇಂಥ ಮಾತನ್ನು ಆಡುವುದು ಸ್ವಯಂವರ ವಧುವಿಗೆ ಸೇರಿದ ಅಧಿಕಾರವಾಗಿಯೂ ಇದ್ದಿರಲಾರದು. ಬಡ ಹಾರುವನೊಬ್ಬನು ಲಕ್ಷ್ಯವನ್ನು ಭೇದಿಸಲು ಬಂದಾಗ ಕೂಡ ಇವಳು ಬೇಡವೆನ್ನಲಿಲ್ಲ. ಕಥೆಗೆ ಬಣ್ಣ ಕಟ್ಟುವುದಕ್ಕಾಗಿ ಆಮೇಲಿನ ಕಥನಕಾರರು ಈ ಸಂಗತಿಯನ್ನು ಸೇರಿಸಿರಬೇಕು. ಲಕ್ಷ್ಯವನ್ನು ಭೇದಿಸಿದ ಅರ್ಜುನನೊಂದಿಗೆ ಈ ರಾಜಕುಮಾರಿ ತೀರಾ ಸಹಜವಾಗಿ ಹೊರಟುಬಿಟ್ಟಳು. ಗೆದ್ದವನ ಕುಲಗೋತ್ರವನ್ನು ವಿಚಾರಿಸುವುದು ಕೂಡ ಅವಳ ತಂದೆ ಸೋದರರಿಗೆ ಸೇರಿದ ವಿಷಯವಾಗಿರಲಿಲ್ಲ. ಪಾಂಡವರ ಆವಾಸಕ್ಕೆ ಹೋದ ಒಡನೆ ಇವಳು ಐವರು ಸೋದರರ ಪತ್ನಿಯಾಗಿರಬೇಕೆಂದು ನಿಶ್ಚಯವಾಯಿತು. ಇದನ್ನು ಸರಿಯೆಂದು ಸಮರ್ಥಿಸುವುದಕ್ಕೆ ಈ ಸಂದರ್ಭದಲ್ಲಿ ಬಂದಿರುವ ಆಖ್ಯಾನಗಳು ಕಥೆಗೆ ಆಮೇಲೆ ಸೇರಿದುವು ಎಂದು ಈ ಮೊದಲೆ ಸೂಚಿಸಿದೆ. ಹಲವರು ಸೋದರರು ಒಬ್ಬ ಪತ್ನಿಯನ್ನು ಮಾಡಿಕೊಳ್ಳುವುದು ತಮ್ಮ ಕುಲದಲ್ಲಿ

ಉಂಟು ಎಂದು ಯುಧಿಷ್ಠಿರನು ಹೇಳಿದ ಮಾತು ಈ ಪ್ರಸಂಗದಲ್ಲಿ ದೊರೆಯುತ್ತದೆ. ಇದಕ್ಕೆ ವಿರೋಧವಾದ ಮಾತೆಲ್ಲ ಆಮೇಲೆ ಈ ಕಥೆ ಪ್ರಚಾರಕ್ಕೆ ಬಂದ ದೇಶದ ಆಚಾರದ ತೃಪ್ತಿಗೋಸ್ಕರ ಕಲ್ಪಿತವಾಗಿರಬೇಕು. ಹಲವರು ಒಬ್ಬ ಹೆಂಡಿರನ್ನು ಮಾಡಿಕೊಳ್ಳುವುದು ಪಾಂಡವರಿಗೆ ಕುಲಧರ್ಮ ಆಗಿದ್ದಂತೆ ಪಾಂಚಾಲರಿಗೆ ಕುಲಧರ್ಮ ಆದರೂ ಆಗದಿದ್ದರೂ ಪರಿಚಿತ ಧರ್ಮವಾಗಿದ್ದಿರಬೇಕು. ಈಗಲೂ ಹಿಮಾಲಯದ ಒಂದು ಪ್ರಾಂತದಲ್ಲಿ ಒಂದು ಮನೆತನದ ಹಲವು ಸೋದರರು ಒಬ್ಬ ಹೆಂಗಸನ್ನು ಮದುವೆಯಾಗುವ ಪದ್ಧತಿ ಇದೆ. ಈ ಪ್ರಾಂತ್ಯಗಳು ಪಾಂಚಾಲ ದೇಶಕ್ಕೆ ಸಮೀಪದಲ್ಲಿವೆ. ಬುದ್ಧಚರಿತ್ರೆಯ ಕಾಲಕ್ಕೆ ಹಿಮಾಲಯ ವಾಸಿಗಳಾದ ಈ ಜನರಲ್ಲಿ ಪಾಂಡು ಎಂಬ ಹೆಸರಿನ ಒಂದು ಜನತೆ ಇದ್ದಿತು. ಸ್ವಯಂವರದಲ್ಲಿ ಗೆದ್ದ ತರುಣನೊಂದಿಗೆ ಸಹಜವಾಗಿ ಹೊರಟುಬಂದ ದ್ರೌಪದಿ ಅವನ ಮತ್ತು ಅವನ ನಾಲ್ವರು ಸೋದರರ ಒಬ್ಬಳೇ ಪತ್ನಿಯಾಗಿರಲು ಅಷ್ಟೇ ಸಹಜವಾಗಿ ಒಪ್ಪಿದಳು. ಮದುವೆಯಾದವರು ಯಾರೋ ಅಕಿಂಚನರಲ್ಲ, ಪಾಂಡುರಾಯನ ಪುತ್ರರು, ಎಂದಾಗ ರಾಜಕುಮಾರಿ ತನ್ನ ಆ ಭಾಗ್ಯವನ್ನೂ ಅಷ್ಟೇ ಸಹಜವಾಗಿ ಅಂಗೀಕರಿಸಿದಳು; ಐವರು ಗಂಡಂದಿರೊಂದಿಗೆ ಒಬ್ಬರಾಣಿಯಾಗಿ ಹಸ್ತಿನಾಪುರಕ್ಕೆ ಬಂದಳು. ಗಾಂಧಾರಿ ಅವಳನ್ನು ತುಂಬ ಪ್ರೀತಿಯಿಂದ ಬರಮಾಡಿಕೊಂಡಳಂತೆ. ಹೊಸ ರಾಜಧಾನಿ ಆದ ಖಾಂಡವಪ್ರಸ್ಥಕ್ಕೆ ಹೋಗಿ ದ್ರೌಪದಿ ತನ್ನದೇ ಅರಮನೆಯಲ್ಲಿ ಹಿರಿಯಳಾಗಿ ನಿಂತಳು. ಅವಳ ಐವರು ಗಂಡಂದಿರೂ ಅವಳನ್ನು ಬಹು ಮರ್ಯಾದೆಯಿಂದ ನಡಸಿಕೊಂಡರು ಎನ್ನುವುದು ಕಥೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ದ್ರೌಪದಿ ತನ್ನ ಗಂಡಂದಿರ ವಿಷಯದಲ್ಲಿ ನ್ಯಾಯವಾಗಿ ತುಂಬ ಹೆಮ್ಮೆಯಿಂದ ಸುಖಿಸಿದಳು. ಕುಂತಿ ಈ ಸೊಸೆಯನ್ನು ಅತ್ಯಂತ ವಾತ್ಸಲ್ಯದಿಂದ ನೋಡಿಕೊಂಡಳೆಂದು ಕಾಣುತ್ತದೆ. ತನ್ನ ಬಾಳಿನ ರೀತಿಯನ್ನು ವರ್ಣಿಸುತ್ತ ದ್ರೌಪದಿ ವಿರಾಟ ನಗರದಲ್ಲಿ ಭೀಮಸೇನನಿಗೆ, "ನಾನು ನಿಮಗೆ ಹೆದರಲಿಲ್ಲ; ಅತ್ತೆಯ ಮುಂದೆ ನಡುಗಲಿಲ್ಲ; ಇಲ್ಲಿ ಈ ಹೆರವರಿಗೆ ಅಂಜಿ ನಡೆಯಬೇಕಾಗಿದೆ. ಇವರು ಏನು ಹೇಳುವರೊ ಎಂದು ನಡುಗಬೇಕಾ

ಗಿದೆ,'' ಎಂದಳು. ಈ ಮಾತನ್ನು ಇವಳು ಗಂಡನಿಗೆ ಹೇಳುವುದೆನ್ನುವುದರಲ್ಲಿ ಇವರಿವರ ಸಂಬಂಧ ಎಷ್ಟು ಹದವಾಗಿದ್ದಿತು ಎನ್ನುವುದು ಕಾಣುತ್ತದೆ. ಅಕ್ಕರೆಯಿಂದ ನೋಡುವ ಅತ್ತೆ, ದಾಕ್ಷಿಣ್ಯದಿಂದ ನಡೆಯುವ ಗಂಡಂದಿರು, ಇದಕ್ಕಿಂತ ಹೆಚ್ಚಿನ ಸದವಿ ಹೆಣ್ಣಿಗೆ ಯಾವುದಿದೆ? ರಾಜಸೂಯ ಮುಗಿಯುವವರೆಗೆ ದ್ರೌಪದಿ ಈ ಅಸಾಧಾರಣ ಸುಖಭೋಗದಲ್ಲಿ ಬಾಳಿದಳು. ರಾಜಸೂಯ ನಡೆಯಿತು; ದುರ್ಯೋಧನನ ಹೊಟ್ಟೆಯುರಿ ಜ್ವಲಿಸಿತು; ದ್ರೌಪದಿಯ ಅದೃಷ್ಟಕ್ಕೆ ರಾಹು ಬಡಿಯಿತು. ದುರ್ಯೋಧನನು ಪಾಂಡವರ ಹೊಸ ಅರಮನೆಯಲ್ಲಿ ನೀರನ್ನು ನೆಲವೆಂದು ಭ್ರಮಿಸಿ ಅದರಲ್ಲಿ ಬಿದ್ದನೆಂದೂ ಉಪ್ಪರಿಗೆಯ ಮೇಲೆ ನಿಂತಿದ್ದ ದ್ರೌಪದಿ ಅದನ್ನು ನೋಡಿ ನಕ್ಕಳೆಂದೂ ಒಂದು ಕಥೆಯಿದೆ. ದುರ್ಯೋಧನನು ದ್ರೌಪದಿಯ ವಿಷಯಕ್ಕೆ ಕ್ರೂರನಾಗಿ ನಡೆದುಕೊಂಡದ್ದಕ್ಕೆ ಇದು ಒಂದು ಕಾರಣವೆಂಬ ಸೂಚನೆಯೂ ಇದರಲ್ಲಿದೆ. ಈ ಭಾಗ ಭಾರತದ ಮೊದಲ ಕಲ್ಪನೆಯಲ್ಲಿ ಇದ್ದಿರಲಾರದು. ದುರ್ಯೋಧನನು ಬಿದ್ದಿರಲಾರನೆಂದಲ್ಲ, ಅದನ್ನು ನೋಡಿದ ಹೆಣ್ಣು ಅಪಹಾಸ ಮಾಡಬೇಕೆಂಬ ಉದ್ದೇಶವಿಲ್ಲದೆ ಆ ಕ್ಷಣದಲ್ಲಿ ನಕ್ಕಿರಬಾರದು ಎಂದಲ್ಲ. ಆದರೆ ಪಾಂಡವರನ್ನು ಕುರಿತ ವೈರ ಬೆಳೆದು ಅವರ ಹೆಂಡತಿಯನ್ನು ದುರ್ಯೋಧನನು ಅವಮಾನಪಡಿಸಲು ಬಯಸುವುದಕ್ಕೆ ಈ ಸಂಗತಿ ಅವಶ್ಯಕವಲ್ಲ. ದ್ಯೂತ ನಡೆದು ಯುಧಿಷ್ಠಿರನು ದ್ರೌಪದಿಯನ್ನು ಸೋತನೆಂಬ ಭಾಗ ನಿಜವೆಂದು ಇಟ್ಟುಕೊಂಡರೂ ಅವಳನ್ನು ದುಶ್ಶಾಸನನು ಎಳೆದುಕೊಂಡು ಬಂದನೆನ್ನುವ ಭಾಗ, ಅವಳ ವಸ್ತ್ರವನ್ನು ಅವನು ಬಲಾತ್ಕಾರದಿಂದ ಸೆಳೆದುಹಾಕಿದನೆಂಬ ಭಾಗ, ಪ್ರಾಯಶಃ ಕಲ್ಪಿತ ಎಂದು ಈ ಮೊದಲು ಸೂಚಿಸಿದೆ. ತನ್ನ ಗಂಡನು ತನ್ನನ್ನು ದ್ಯೂತದಲ್ಲಿ ಸೋತನೆಂಬ ಕಾರಣದಿಂದ ಒಬ್ಬಳೆ ಸಭೆಗೆ ಬಂದು ನಿಲ್ಲಬೇಕಾದದ್ದೇ ರಾಜಕುಮಾರಿಗೆ ಅವಮಾನದ ಪ್ರಸಂಗ. ಯುಧಿಷ್ಠಿರನು ದ್ಯೂತದಲ್ಲಿ ಸೋತನೆಂಬ ಕಾರಣದಿಂದ ಅವಳನ್ನು ದಾಸಿಯೆಂದು ಗಣಿಸಿ ಸಭೆಗೆ ಬರಮಾಡಿದ್ದೇ ದುರ್ಯೋಧನನಲ್ಲಿ ಮಹಾಪರಾಧ. ದ್ಯೂತದ ಈ ಭಾಗ ನಡೆಯಲಿಲ್ಲ ಎಂದು ಇಟ್ಟುಕೊಂಡರೂ, ದಾಳಹಾಕಿ ರಾಜ್ಯವನ್ನು ಗೆದ್ದ

ಕಾರಣದಿಂದ ಜ್ಞಾತಿಯಾದವನು ಪಾಂಡವ ಸೋದರರನ್ನು ಕಾಡಿಗೆ ಕಳುಹಿಸಿದ್ದು ಅವರ ಪತ್ನಿಗೆ ಹಿತವಾಗಿ ಕಂಡೀತೆ? ಕಥೆ ಈಗ ಇರುವ ರೀತಿಯಲ್ಲಿ, ದುರ್ಯೋಧನನು ದ್ರೌಪದಿಯನ್ನೇ ಅವಮತಿಸಿದ್ದರಿಂದ ಅವಳು ಅವನ ಮೇಲೆ ಕ್ರೋಧವಿಟ್ಟಳು, ತನ್ನ ಗಂಡಂದಿರು ಅವನನ್ನು ಮನ್ನಿಸಲು ಸಿದ್ಧವಾಗಿದ್ದರೂ ತಾನು ಒಪ್ಪದೆ ಹಟಮಾಡಿ ಕೃಷ್ಣನ ಎದುರಿಗೆ ಗೋಳಾಡಿ ದುರ್ಯೋಧನನನ್ನು ದುಶ್ಶಾಸನನನ್ನು ಕೊಲ್ಲುವುದಕ್ಕಾಗಿ ಯುದ್ಧವನ್ನು ಏರ್ಪಡಿಸಿದಳು, ಎಂಬಂತೆ ಚರಿತ್ರೆ ಸಾಗುತ್ತದೆ. ಮನೆಯ ಗಂಡಸರು ಸಹಿಸಿಕೊಂಡರೂ ಹೆಂಗಸು ಸಹಿಸಲಾರದೆಹೋದಳು ಎನ್ನುವಷ್ಟಕ್ಕೆ ಈ ಭಾವ ಸರಿಯಾದದ್ದೆ. ಆದರೆ ಆ ಸಹಿಸದೆ ಹೋದದ್ದು ಅವಳಿಗೆ ಆದ ಅವಮತಿಯಿಂದಯೆಂದು ಕಲ್ಪಿಸುವುದು ಸಾಧುವಲ್ಲ. ದ್ರೌಪದಿ ತನಗಾದ ಕಷ್ಟವನ್ನು ಬಹುಸಲ ಹೇಳಿಕೊಂಡಿದ್ದಾಳೆ. ಆದರೆ ಬಹುಕಡೆ ತನ್ನ ವಸ್ತ್ರವನ್ನು ದುಶ್ಶಾಸನನು ಸೆಳೆದನು ಎಂಬ ವಿಷಯ ಸೂಚಿತವಾಗುವುದಿಲ್ಲ. ತನಗೆ ಅವಮಾನ ಮಾಡಿದರು ಎಂಬ ಮಾತು ಬಂದಿದೆ: ಆದರೆ ಅದಕ್ಕೂ ಹೆಚ್ಚಾಗಿ ತನ್ನ ಗಂಡಂದಿರನ್ನು ಕಷ್ಟಕ್ಕೆ ಗುರಿ ಮಾಡಿದರು ಎಂಬ ಮಾತು, ತನ್ನ ಅತ್ತೆಯನ್ನು ದಿಕ್ಕುಗೆಡಿಸಿದರು ಎಂಬ ಮಾತು, ಬಂದಿದೆ. ವನವಾಸದಲ್ಲಿ ಅವಳು ಯುಧಿಷ್ಠಿರನನ್ನು ಜ್ಞಾತಿಗಳ ವಿಷಯದಲ್ಲಿ ಸ್ವಲ್ಪ ಕ್ಷಾತ್ರದಿಂದ ನಡೆದುಕೊಳ್ಳಲು ಪ್ರೇರಿಸಿದಳು. ಈ ಮಾತನ್ನು ಹಿಂದೆ ಹೇಳಿದೆ. ಯುಧಿಷ್ಠಿರನು ತಾನು ಧರ್ಮಕ್ಕೆ ಕಟ್ಟು ಬಿದ್ದು ಸುಮ್ಮನಿದ್ದೇನೆಂದು ಹೇಳಿದಾಗ, "ನಾನು ನಿನ್ನನ್ನು ಧರ್ಮವನ್ನು ತ್ಯಜಿಸಲು ಪ್ರೇರಿಸಲಿಲ್ಲ. ನೀನು ನನ್ನನ್ನೂ ನಿನ್ನ ತಮ್ಮಂದಿರನ್ನೂ ಬಿಟ್ಟರೂ ನನಗೆ ಸಮ್ಮತ. ಧರ್ಮವನ್ನು ಬಿಡುವುದು ಬೇಡ. ಆದರೆ ನಿನ್ನ ಧರ್ಮ ಯಾವುದು? ಸಾವಿರ ಜನಕ್ಕೆ ಅನ್ನ ಹಾಕುವುದು, ಯಜ್ಞಗಳನ್ನು ನಡಸುವುದು, ರಾಷ್ಟ್ರವನ್ನು ಕಾಪಾಡುವುದು. ಇದು ಇಲ್ಲದೆ ಹೋಯಿತಲ್ಲ! ನೀನು ವರಿಸಿರುವ ಧರ್ಮ ಕ್ಷತ್ರಿಯನಾದ ನಿನ್ನನ್ನು ಇಂಥ ತಣ್ಣನೆಯ ಮನುಷ್ಯನನ್ನಾಗಿ ಮಾಡಿದೆಯಲ್ಲ, ಅದಕ್ಕೆ ನಮಸ್ಕಾರ. ಹಗೆಗಳು ರಾಜ್ಯವನ್ನು ಕಸಿದುಕೊಂಡಿದಾರೆ, ಅದನ್ನು ತಿರುಗಿ ತೆಗೆದುಕೊ, ಎಂದು ಹೇಳುತ್ತಿದೇನೆ. ಧರ್ಮವನ್ನೂ ಸತ್ಯವನ್ನೂ ಬಿಡು ಎಂದು ನಾನು

ಹೇಳಲಿಲ್ಲ,'' ಎಂದು ಹೇಳಿದಳು. ಯುಧಿಷ್ಠಿರನು ಧರ್ಮದ ಹೆಸರಿನಲ್ಲಿ ದುರ್ಬಲನಂತೆ ಕುಳಿತದ್ದು ಅವಳಿಗೆ ಸಮ್ಮತವಾಗಲಿಲ್ಲ. ವನವಾಸದಲ್ಲಿ ಜಯದ್ರಥನು ದ್ರೌಪದಿಯನ್ನು ಕದ್ದುಕೊಂಡು ಹೋದನೆಂಬ ಭಾಗ ಕಥೆಯ ಮೂಲದ್ದಲ್ಲವೆಂದು ತೋರುತ್ತದೆ. ಜಯದ್ರಥನು ದ್ರೌಪದಿಯನ್ನು ನೋಡಿದಾಗ ಇವರು ಒಬ್ಬರನ್ನೊಬ್ಬರು ಕಾಣದವರಂತೆ ಮಾತನಾಡುತ್ತಾರೆ. ಅವನು ದುರ್ಯೋಧನನ ತಂಗಿ ದುಶ್ಶಲೆಯ ಗಂಡ. ಪಾಂಡವರು ಇಂದ್ರಪ್ರಸ್ಥದಲ್ಲಿ ರಾಜ್ಯವಾಳಿದಷ್ಟು ದಿವಸದಲ್ಲಿ ಜಯದ್ರಥನು ದ್ರೌಪದಿಯನ್ನು, ದ್ರೌಪದಿ ಜಯದ್ರಥನನ್ನು, ನೋಡಿರಲಿಲ್ಲವೆಂಬ ಮಾತು ಕೃತ್ರಿಮ ಎಂದು ಕಾಣುತ್ತದೆ. ಅಜ್ಞಾತವಾಸದಲ್ಲಿ ದ್ರೌಪದಿ ಬಹು ಸಹನೆಯಿಂದ ನಡೆದುಕೊಂಡಳು. ವಿರಾಟನಗರಕ್ಕೆ ಬರುತ್ತ ಇವಳು ದಣಿದಳೆಂದು ಅರ್ಜುನನು ಇವಳನ್ನು ಸ್ವಲ್ಪದೂರ ಎತ್ತಿಕೊಂಡು ನಡೆದನು. ಸಹನೆಯ ಮೇರೆ ಮೀರುವಂತೆ ಕೀಚಕನು ಧೃಷ್ಟತೆಯಿಂದ ನಡೆದಾಗ ಅವಳು ವಿಧಿ ಇಲ್ಲದೆ ಭೀಮಸೇನನಲ್ಲಿ ಸಂಗತಿಯನ್ನು ತಿಳಿಸಿದಳು, ಕೀಚಕನನ್ನು ಕೊಲ್ಲಿಸಿದಳು. ಕೀಚಕನ ದೌಷ್ಟ್ಯವನ್ನು ಇವಳು ವರ್ಣಿಸಿ ಹೇಳಿದಾಗ ಭೀಮಸೇನನು ಉರಿದುಬಿದ್ದನು. ''ಯಾರಿಗೂ ಹೆದರದ ನಾನು ಇವರಿಗೆ ಹೆದರುತ್ತಿದ್ದೇನೆ. ಇವರಿಗೆ ಗಂಧತೆಯ್ದು ನನ್ನ ಕೈ ಜಡ್ಡುಕಟ್ಟಿದೆ ನೋಡು'' ಎಂದು ದ್ರೌಪದಿ ತನ್ನ ಕೈಯನ್ನು ತೋರಿಸಿದಾಗ ಅವನು ಆ ಜಡ್ಡುಕಟ್ಟಿದ ಕೈಯನ್ನು ಕಣ್ಣಿಗೆ ಒತ್ತಿಕೊಂಡನು. ದ್ರೌಪದಿ ಈ ಸೋದರರ ಮನಸ್ಸನ್ನು ಎಷ್ಟುಮಟ್ಟಿಗೆ ಒಪ್ಪಿಸಿದ್ದಳೆನ್ನುವುದು ಇಂಥ ಸಂಗತಿಯಿಂದ ಎದ್ದುಕಾಣುತ್ತದೆ. ಇದು ಹೇಗೆ ಇಂಥ ವೀರರ ಮನಸ್ಸನ್ನು ಇವಳು ಇಷ್ಟುಮಟ್ಟಿಗೆ ಒಲಿಸಿದಳು? ಈ ಪ್ರಶ್ನೆ ಯಾರಿಗಾದರೂ ನ್ಯಾಯವಾಗಿ ತೋರತಕ್ಕದ್ದೆ. ಒಂದುಸಲ ಸತ್ಯಭಾಮೆಗೆ ತೋರಿತಂತೆ: ಅವಳು ದ್ರೌಪದಿಯನ್ನು ಕೇಳಿದಳು. ದ್ರೌಪದಿ ಅವಳಿಗೆ ಉತ್ತರವಾಗಿ ಪತಿವ್ರತಾಧರ್ಮದ ಕೆಲವು ಮುಖ್ಯ ಸೂತ್ರಗಳನ್ನು ವಿವರಿಸಿದಳು.

''ಸ್ತ್ರೀಯಾದವಳು ಪತಿಗೆ ಅಹಿತವಾದ ಕಾರ್ಯವನ್ನು ಮಾಡದೆ ಇರಬೇಕು. ನಾನು ಅಹಂಕಾರವನ್ನು ಬಿಟ್ಟು ಕಾಮಕ್ರೋಧ ಇಲ್ಲದೆ

ನನ್ನ ಗಂಡಂದಿರನ್ನು ಅವರ ಇತರ ಹೆಂಡಿರೊಂದಿಗೆ ಪ್ರಯತ್ನಪೂರ್ವಕ ವಾಗಿ ಉಪಚರಿಸುತ್ತಿದ್ದೇನೆ. ಅವರ ಸೇವೆಯಲ್ಲಿ ಸಲಿಗೆಯನ್ನು ತಡೆದು ಕೊಂಡು ಈ ಕೆಲಸ ಹಿರಿದು ಈ ಕೆಲಸ ಕಿರಿದು ಎನ್ನದಂತೆ ಅವರ ಮನಸ್ಸನ್ನು ಅನುಸರಿಸಿದೇನೆ. ದೇವ ಮನುಷ್ಯ ಗಂಧರ್ವ, ತರುಣರು ಅಲಂಕೃತರು ಶ್ರೀಮಂತರು ರೂಪವಂತರು, ಯಾರೇ ಆಗಲಿ ಇವರಲ್ಲದ ಯಾರೂ ನನ್ನ ಪಾಲಿಗೆ ಗಂಡಲ್ಲ. ಅವರು ಊಟಮಾಡದಿದ್ದರೆ, ಸ್ನಾನ ಮಾಡದಿದ್ದರೆ, ಕುಳ್ಳಿರದಿದ್ದರೆ ನಾನು ಊಟಮಾಡುವುದಿಲ್ಲ, ಸ್ನಾನ ಮಾಡುವುದಿಲ್ಲ, ಕುಳ್ಳಿರುವುದಿಲ್ಲ. ಎಲ್ಲಿಗಾದರೂ ಹೋಗಿದ್ದರು, ಅವರು ಹಿಂದಕ್ಕೆ ಬಂದರೆ ಎದ್ದುಹೋಗಿ ಅವರನ್ನು ಎದಿರುಗೊಂಡು ಉಪಚರಿಸಿ ದ್ದೇನೆ. ಪಾತ್ರೆ ಪದಾರ್ಥಗಳನ್ನು ಚೊಕ್ಕಟವಾಗಿಟ್ಟು ಹೊತ್ತಿಗೆ ಸರಿಯಾಗಿ ರುಚಿಯಾದ ಆಹಾರವನ್ನು ನೀಡಿದ್ದೇನೆ. ಇದ್ದದನ್ನು ಜೋಪಾನವಾಗಿಟ್ಟು ಮನೆಯನ್ನು ಚೊಕ್ಕಟವಾಗಿ ಇರಿಸಿದ್ದೇನೆ. ಅತಿ ನಗೆ, ಅತಿ ರೋಷಗಳನ್ನು, ಕ್ರೋಧಸ್ಥಾನಗಳನ್ನು ತೊರೆದಿದ್ದೇನೆ. ಸದಾ ಗಂಡದಿರ ಉಪಸೇವನೆಯಲ್ಲಿ ನಿರತಳಾಗಿದ್ದೇನೆ. ಗಂಡದಿರು ಊರಲ್ಲಿಲ್ಲ ದಾಗ ಸೊಗಸಿನ ವಸ್ತ್ರಗಳನ್ನು ಧರಿಸದೆ, ಹೂವನ್ನು ಮುಡಿಯದೆ, ವ್ರತ ಚಾರಿಣಿಯಾಗಿ ಇದ್ದಿದೇನೆ. ಗಂಡದಿರು ಒಲ್ಲದ ಹಣ್ಣು ಊಟ ಪಾನ ಗಳನ್ನು ನಾನೂ ಬಿಟ್ಟುಬಿಟ್ಟಿದೇನೆ. ನನ್ನ ಗಂಡದಿರು ಮೃದುಸ್ವಭಾವ ದವರು, ಸತ್ಯಶೀಲರು, ಸತ್ಯಧರ್ಮಗಳನ್ನು ಪಾಲಿಸುವವರು. ಆದರೂ ಕ್ರೂರಿಗಳೂ ಕೋಪಿಷ್ಠರೂ ಆಗಿದ್ದರೆ ಹೇಗೊ ಹಾಗೆ ಎಚ್ಚರದಿಂದ ಪರಿಚರಿಸಿದೇನೆ. ಪತಿಯ ಆಶ್ರಯ ಸ್ತ್ರೀಯರಿಗೆ ಧರ್ಮ. ಹೀಗೆ ನನ್ನ ತಿಳಿವಳಿಕೆ. ಗಂಡನೇ ದೇವರು. ಅವನೇ ಗತಿ. ಇನ್ನು ಅವನ ವಿಷಯ ದಲ್ಲಿ ಯಾವ ಹೆಂಗಸು ವಿಪ್ರಿಯವನ್ನು ಮಾಡಬಹುದು? ನಾನು ಅತ್ತೆಗೆ ಪ್ರತಿನುಡಿದವಳಲ್ಲ. ಆಕೆಯನ್ನು ಅವಧಾನದಿಂದ ಗೌರವಿಸಿದೇನೆ. ಅವರ ಹಿರಿಯಳನ್ನು ನಾನು ಗೌರವಿಸುವೆನಾದಕಾರಣದಿಂದ ನನ್ನ ಗಂಡದಿರು ನನ್ನ ವಶದಲ್ಲಿದ್ದಾರೆ. ಕುಂತೀದೇವಿ ವೀರಸೂನು, ಸತ್ಯವಾದಿನಿ, ಆರ್ಯೆ. ನಾನು ಅವಳನ್ನು ದಿನವೂ ಸ್ವತಃ ಪರಿಚರಿಸಿ ಸ್ನಾನ ಭೋಜನ ಆಚ್ಛಾದನ ಗಳನ್ನು ನೋಡಿಕೊಳ್ಳುತ್ತೇನೆ. ಅವಳಿಗೆ ಇಲ್ಲದ ಊಟ ನಿದ್ದೆಯನ್ನು

ಮಾತಿನಲ್ಲಿ ವಿರಾಟನಿಗೆ ಯುಧಿಷ್ಠಿರನಿಗೆ ಚರ್ಚೆ ಬಂದು ವಿರಾಟನು ಎದುರಿಗಿದ್ದ ಆ ಕಂಕಭಟ್ಟನ ಮುಖವನ್ನು ದಾಳದಿಂದ ಬಡಿದನು. ಯುಧಿಷ್ಠಿರನಿಗೆ ಗಾಯವಾಯಿತು; ಅವನ ಹಣೆಯಿಂದ ರಕ್ತ ಚಿಮ್ಮಿತು. ದ್ರೌಪದಿ ಹತ್ತಿರ ನಿಂತಿದ್ದಳು; ಗಂಡನಿಗೆ ಪೆಟ್ಟಾದುದನ್ನು ನೋಡಿ ಒಡನೆ ಹತ್ತಿರ ಓಡಿದಳು; ತನ್ನ ಸೀರೆಯ ಸೆರಗಿನಿಂದ ಗಾಯವನ್ನು ಒತ್ತಿ ರಕ್ತ ಸೋರದಂತೆ ತಡೆದಳು. ಸಂಬಂಧವಿಲ್ಲದ ಗಂಡಸಿನ ಹಣೆಯ ಗಾಯವನ್ನು ಅರಮನೆಯ ಊಳಿಗದ ಈ ಹೆಂಗಸು ಒತ್ತಿದ್ದನ್ನು ಕಂಡು ವಿರಾಟನು, "ಇದೇನು ಹೀಗೆ ಮಾಡಿದೆ?" ಎಂದನು. ದ್ರೌಪದಿ, "ನಾನು ಈತನನ್ನು ಬಲ್ಲೆ. ಈತನ ಹಣೆಯ ಒಂದು ಬೊಟ್ಟು ರಕ್ತ ನೆಲಕ್ಕೆ ಬಿದ್ದರೆ ನಿನ್ನ ಮನೆ ಹಾಳಾಗುತ್ತದೆ. ಆದ್ದರಿಂದ ಅದನ್ನು ಒರಸಿದೆ," ಎಂದಳು. ಯುಧಿಷ್ಠಿರನ ಸ್ವರೂಪ ಪ್ರಕಟವಾಗಬಾರದೆಂದು ಎಷ್ಟೇ ದೃಢವಾದ ಉದ್ದೇಶವಿದ್ದರೂ ಅವನಿಗೆ ಪೆಟ್ಟು ಬಿದ್ದಾಗ ಈ ಹೆಂಡತಿಗೆ ಅವನ ನೆರವಿಗೆ ಹೋಗದೆ ಇರಲು ಸಾಧ್ಯವಾಗಲಿಲ್ಲ. ಮಾಡಬೇಕಾದ ಸೇವೆಯನ್ನು ಮಾಡಿದಾಗ ಇದೇನೆಂದು ಪ್ರಶ್ನೆಬರಲು ಇವಳು ಒಡನೆ ಒಂದು ಸಮಾಧಾನವನ್ನು ಕಲ್ಪಿಸಿದಳು. ಗಂಡನೆಂದರೆ ಮರುಕ; ಜೊತೆಗೆ ಎಂತಹ ಸಮಯಸ್ಫೂರ್ತಿ! ದ್ರೌಪದೀದೇವಿ ವಾತ್ಸಲ್ಯವಂತೆ; ಹಾಗೆಯೇ ಪ್ರತ್ಯುತ್ಪನ್ನಮತಿವಂತೆ.

ಕೌರವರೊಂದಿಗೆ ಸಮಾಧಾನ ಸರಿಯಲ್ಲವೆಂದು ದ್ರೌಪದಿಯ ಅಭಿಪ್ರಾಯವಾಗಿದ್ದಿತು. ಅವಳ ಇಷ್ಟದಂತೆ ಯುದ್ಧನಡೆಯಿತು. ಯುದ್ಧದಲ್ಲಿ ಪ್ರತಿಪಕ್ಷದ ಜನ ಮಾತ್ರ ಸಾಯಲಿಲ್ಲ. ಇವಳ ಪಕ್ಷದ ಇತರರು ಮಾತ್ರ ಸಾಯಲಿಲ್ಲ. ಐವರು ಪಾಂಡವರ ಮಕ್ಕಳಾಗಿ ದ್ರೌಪದಿ ಹೆತ್ತು ಬೆಳಸಿದ ಉಪಪಾಂಡವರು ಐವರೂ ಯುದ್ಧಕ್ಕೆ ಬಲಿಯಾದರು. ಗಂಡಂದಿರು ಹೊರತು ಉಳಿದೆಲ್ಲ ನಂಟರನ್ನೂ ಕಳೆದುಕೊಂಡ ಈ ಕ್ಷತ್ರಿಯ ರಮಣಿ ಇಂಥ ಶೋಕ ತನ್ನ ಕುಲಧರ್ಮದ ಅಂಶ ಎಂದು ತಿಳಿದು ಅದನ್ನು ಸಹಿಸಿಕೊಂಡಳೆಂದು ಕಾಣುತ್ತದೆ. ತನ್ನ ಗಂಡಂದಿರು ತಮ್ಮ ಸಹಜಧರ್ಮವನ್ನು ಅವಲಂಬಿಸಿ ರಾಜ್ಯವನ್ನು ಆಳಬೇಕೆಂಬ ಅವಳ ಆಸೆ ಫಲಿಸಿತು. ಅವರು ಹಿರಿದಾಗಿ ಬಾಳಿ ಅಶ್ವಮೇಧಯಾಗವನ್ನು ನಡಸಿ

ಲೋಕೋತ್ತರವಾದ ಕೀರ್ತಿಯನ್ನು ಗಳಿಸಿದ್ದನ್ನು ನೋಡಿ ಅವಳು ಹೆಮ್ಮೆಗೊಂಡಳು. ಅವರು ಮಹಾಪ್ರಸ್ಥಾನ ಮಾಡಲು ಹೊರಟಾಗ ಪತ್ನಿ ಅವರ ಹಿಂದೆ ಹೊರಟಳು; ಅವರೆಲ್ಲರ ಬೆನ್ನ ಹಿಂದೆ ಕಣ್ಣು ಮುಚ್ಚಿಕೊಂಡು ಬಿದ್ದಳು. ಅಪರಿಚಿತನಾದ ತರುಣನೊಬ್ಬನ ಹಿಂದೆ ಸ್ವಯಂವರ ಮಂಟಪದಿಂದ ಹೊರಟ ಹೆಣ್ಣು ತಾನು ಹುಟ್ಟಿದ ಅರಮನೆಯ ಭೋಗವನ್ನು ಎಷ್ಟು ನಿಶ್ಚಿಂತೆಯಿಂದ ತೊರೆದು ನಡೆದಳೊ ಅಷ್ಟೇ ನಿಶ್ಚಿಂತೆಯಿಂದ ಐವರು ಪತಿಗಳು ಮುಂದೆ ನಡೆಯುವ ಚಿತ್ರ ಕಣ್ಣೆದುರಿಗಿದ್ದಾಗ ಸಮಾಧಾನವಾಗಿ ಇಹದೇಹವನ್ನು ತ್ಯಜಿಸಿದಳು. ಗಂಡು ವೀರನಾದರೆ ಹೇಗೆ ನಡೆಯಬೇಕು ಎನ್ನುವ ಮಾತಿಗೆ ಮಹಾಭಾರತ ಹಲವು ಜನರ ಚಿತ್ರದಿಂದ ಹಲವುರೀತಿಯ ಉತ್ತರವನ್ನು ಹೇಳುವಂತೆ ಕಾಣುತ್ತದೆ. ಹೆಣ್ಣು ವೀರಳಾದಾಗ ಹೇಗೆ ನಡೆಯಬೇಕು ಎಂದು ಕೇಳಿದರೆ ಅದು ಹೇಳುವುದು ಒಂದೇ ಉತ್ತರ: ದ್ರೌಪದಿಯಂತೆ ನಡೆಯಬೇಕು.

## ೧೮

## ದುರ್ಯೋಧನ

ಪಾಂಡವರಿಗೆ ಪ್ರತಿಕಕ್ಷಿಯಾಗಿ ನಿಂತ ದುರ್ಯೋಧನನ ಚಿತ್ರವನ್ನು ಗ್ರಂಥ ತಕ್ಕಷ್ಟು ವಿವರವಾಗಿ ನಿರ್ಮಿಸಿದೆ. ದುರ್ಯೋಧನನು ತನ್ನ ಜೀವನದ ಒಂದು ದುರ್ದೈವದಿಂದ ಕೆಟ್ಟವನಾಗಿ ಬೆಳೆದನು. ಅವನು ಹುಟ್ಟುತ್ತ ವಿಕಾರವಾದ ಒಂದು ಧ್ವನಿಯಿಂದ ಕೂಗಿದನೆಂದೂ ಇಂಥ ಅವಲಕ್ಷಣದ ಮಗುವನ್ನು ಕೊಂದುಬಿಡುವುದು ಒಳ್ಳೆಯದೆಂದು ಆಗಲೆ ಹಿತಚಿಂತಕರು ಹೇಳಿದರೆಂದೂ ಕಥೆಯಲ್ಲಿ ಉಕ್ತವಾಗಿದೆ. ಇದೆಲ್ಲ ಕೃತಿಯಲ್ಲಿ ಆಮೇಲೆ ಸೇರಿದ ಮಾತು. ದುರ್ಯೋಧನನು ಹುಟ್ಟಿದಾಗ ಅವನು ಬಹಳ ಕೆಡುಕನಾದಾನೆಂದು ಯಾರೂ ಊಹಿಸಿರಲಾರರು. ಅವನನ್ನು ದುರ್ಯೋಧನ ಎಂದು ಮೊದಲಲ್ಲಿ ಕರೆಯಲಿಲ್ಲ ಎಂದೂ ಕಾಣುತ್ತದೆ. ಕೃತಿ ಇವನನ್ನು ಬಹುಸಲ ಸುಯೋಧನ ಎನ್ನುತ್ತದೆ. ಚೆನ್ನಾಗಿ ಯುದ್ಧ ಮಾಡುವವನು, ಪ್ರತಿಭಟಿಸಲು ಕಷ್ಟವಾದವನು,

ಎಂಬ ಅರ್ಥದಲ್ಲಿ ಈ ಸುಯೋಧನ ದುರ್ಯೋಧನ ಶಬ್ದಗಳು ಬಳಕೆಗೆ ಬಂದವು ಹೊರತು, ದುರ್ಯೋಧನನಾಮದ ದುರ್ ಭಾಗ ಮನುಷ್ಯನನ್ನು ಕೆಟ್ಟವನು ಎನ್ನುವುದಕ್ಕಾಗಿ ಪ್ರವೃತ್ತವಾದದ್ದಲ್ಲ. ಆದರೆ ಕುರುಡ ತಂದೆಯ ಮಗನಾಗಿ ಹುಟ್ಟಿ ರಾಜ್ಯಕ್ಕೆ ಸ್ಪಷ್ಟವಾದ ಅಧಿಕಾರ ಇಲ್ಲದೆ ಬೆಳೆದು ಇವನು, ರಾಜನಾಗಿದ್ದ ಚಿಕ್ಕಪ್ಪ ಪಾಂಡುವಿನ ಮಕ್ಕಳು ಕಾಡಿನಿಂದ ಬಂದು ಅರಮನೆಯಲ್ಲಿ ನಿಂತಾಗ, ನಿರಾಶೆಯ ಕತ್ತರಿಯಲ್ಲಿ ಸಿಕ್ಕಿಕೊಂಡನು. ರಾಜ್ಯ ಈ ಹುಡುಗರಿಗೆ ಹೋಗಬೇಕು; ಕಾಲದ್ದಕ್ಕೆ ಯುಧಿಷ್ಠಿರನು ಹಿರಿಯ. ಧೃತರಾಷ್ಟ್ರನು ಪಟ್ಟಾಭಿಷಿಕ್ತನಾದವನಲ್ಲ; ಪಾಂಡು ಪಟ್ಟಾಭಿಷಿಕ್ತನಾದವನು. ಪಾಂಡುವಿನ ಮಗನಾಗಿ ತನಗಿಂತ ಹಿರಿಯನಾದ ಯುಧಿಷ್ಠಿರನ ಮುಂದೆ ತನಗೆ ರಾಜ್ಯದ ವಿಷಯದಲ್ಲಿ ಏನು ಅಧಿಕಾರ? ಈ ಯೋಚನೆ ದುರ್ಯೋಧನನ ಬುದ್ಧಿಯನ್ನು ಕೆಡಿಸಿತು; ಇದರಿಂದ ಅವನ ವರ್ತನೆಯೆಲ್ಲ ಕಲುಷಿತವಾಯಿತು. ಈ ಕಾರಣದಿಂದ ಅವನು ಪಾಂಡವರ ವಿಷಯದಲ್ಲಿ ವೈರವನ್ನು ತಳೆದನು, ಬೆಳಸಿದನು, ಆಚರಿಸಿದನು. ಇದಕ್ಕೆ ತಕ್ಕಂತೆ ಭೀಮಸೇನನು ಇವರೆಲ್ಲರೂ ಹುಡುಗರಾಗಿದ್ದ ದಿವಸದಲ್ಲಿಯೇ ತಾನು ಉಳಿದ ಎಲ್ಲರಿಗಿಂತ ಬಲಿಷ್ಠನಾದ ಕಾರಣ ಆಟದಲ್ಲಿ ಮೊದಲುಗೊಂಡು ಎಲ್ಲಾ ಸಂದರ್ಭದಲ್ಲೂ ಇವರಿಗೆ ವೇಧೆಯನ್ನು ಕೊಟ್ಟನು. ದುರ್ಯೋಧನನು ಸುಮಾರು ಅವನಷ್ಟೇ ವಯಸ್ಸಿನ ತರುಣ. ತನ್ನ ಜೊತೆಯ ಈ ಜ್ಞಾತಿಗೆ ಸಮನಾಗಿ ಇರಬೇಕೆಂದು ಅವನಿಗೆ ಆಸೆ; ಅದು ಸಾಧ್ಯವಾಗಲಿಲ್ಲ. ತಮಗೆ ಕಿರುಕುಳ ಕೊಟ್ಟಿದ್ದಕ್ಕೆ ಪ್ರತಿಯಾಗಿ ಇವನು ಭೀಮನಿಗೆ ಹಿಂಸೆಮಾಡಲು ಯತ್ನಿಸಿದನು. ಅವನಿಗೆ ಆದರಿಂದ ತೊಂದರೆಯಾಗಲಿಲ್ಲ. ಇವನ ಈರ್ಷೆ ಮತ್ತಷ್ಟು ಹೆಚ್ಚಿತು.

ತತೋ ಬಲಮತಿಖ್ಯಾತಂ ಧಾರ್ತರಾಷ್ಟ್ರಃ ಪ್ರತಾಪವಾನ್
ಭೀಮಸೇನಸ್ಯ ತತ್ ಜ್ಞಾತ್ವಾ ದುಷ್ಟಭಾವಮದರ್ಶಯತ್

ಗುರುಗಳಲ್ಲಿ ಇವರು ಶಸ್ತ್ರವಿದ್ಯಾಭ್ಯಾಸಮಾಡುವ ಕಾಲದಲ್ಲಿ ಇವನೂ ಭೀಮನೂ ಗದೆಯನ್ನು ಅಭ್ಯಾಸಮಾಡಿದರು. ವಿದ್ಯೆ ಮುಗಿದು ತರುಣರ ಪ್ರಾವೀಣ್ಯ ಪ್ರದರ್ಶನವಾದ ಸಂದರ್ಭದಲ್ಲಿ ಈ ಇಬ್ಬರೇ ಗದೆಗಳೊಡನೆ

ಯುದ್ಧಕ್ಕೆ ನಿಂತರು. ಸ್ನೇಹಭಾವದಿಂದ ನಡೆಯಬೇಕಾಗಿದ್ದ ಯುದ್ಧ ಇವರಿಬ್ಬರ ಮಧ್ಯದ ವೈರದಿಂದಲೂ ಸ್ಪರ್ಧೆಯಿಂದಲೂ ವಾಸ್ತವವಾದ ಯುದ್ಧದ ಗತಿಗೆ ಮುಂದುವರಿಯಿತು: ಹಿರಿಯರು ಇದನ್ನು ನೋಡಿ ಪ್ರದರ್ಶನವನ್ನು ನಿಲ್ಲಿಸಿದರು. ಪಾಂಡವರು ಬೆಳೆದಂತೆ ದುರ್ಯೋಧನನಿಗೆ ಅವರೊಡನೆ ಬಾಳುವುದು ಅಸಾಧ್ಯವೆಂದು ತೋರಿತು. ಊರ ಜನ ಕೆಲವರು, ಯುಧಿಷ್ಠಿರನು ಒಳ್ಳೆಯವನು, ಅವನು ದೊರೆಯಾಗಲಿ, ಎಂದುಬೇರೆ ಮಾತನ್ನೆತ್ತಿದರು. ದುರ್ಯೋಧನನು ತಂದೆಯ ಹತ್ತಿರಹೋಗಿ ಪಾಂಡವರನ್ನು ಬೇರೆಯ ಕಡೆಗೆ ಕಳುಹಿಸಬೇಕೆಂದು ಸೂಚಿಸಿದನು. ಧೃತರಾಷ್ಟ್ರನಿಗೆ ಇದು ಅಷ್ಟು ಸಮ್ಮತವಲ್ಲ. ಭೀಷ್ಮ ವಿದುರರು ಇದಕ್ಕೆ ಒಪ್ಪುವುದಿಲ್ಲವೆಂದು ಅವನು ಬಲ್ಲನು. ಆದರೆ ಮಗನ ಮಾತು. ಏನು ಮಾಡಬೇಕು? ಅವನು, "ಊರ ಜನ ಇಂಥ ಮಾತಿಂದ ಬೇಸರ ಗೊಂಡಾರು ಸುಮ್ಮನಿರು," ಎಂದನು. ದುರ್ಯೋಧನನು ತಕ್ಕವ ರೊಂದಿಗೆ ಮಾತನಾಡಿ ಅವರು ಪಾಂಡವರ ಬಳಿಗೆ ಹೋಗಿ, "ವಾರಣಾ ವತ ಬಹು ಒಳ್ಳೆಯ ಊರು. ಅಲ್ಲಿ ಒಂದು ಉತ್ಸವ ನಡೆಯುತ್ತಿದೆ. ಅಲ್ಲಿಗೆ ಹೋಗಿ ಉತ್ಸವವನ್ನು ನೋಡಿ," ಎಂದು ಸೂಚಿಸುವಂತೆ ಏರ್ಪಡಿಸಿದನು. ಯುಧಿಷ್ಠಿರನು ಧೃತರಾಷ್ಟ್ರನ ಬಳಿಗೆ ಬಂದು ಕೆಲವು ಜನ ಹೀಗೆನ್ನುತ್ತಿದಾರೆಂದು ತಿಳಿಸಲು ಅವನು, "ಹೌದು. ವಾರಣಾ ವತಕ್ಕೆ ಹೋಗಬಹುದು. ಅಲ್ಲಿರುವುದೇ ಚೆನ್ನವಾದರೆ ಅಲ್ಲಿಯೇ ನಿಲ್ಲಿ, ತಪ್ಪೇನು?" ಎಂದನು. ಯುಧಿಷ್ಠಿರನು ಇಂಥಮಾತಿನ ಸುಳಿವನ್ನು ಬಲ್ಲನು. ತಾವು ಹಸ್ತಿನಾಪುರದಲ್ಲಿರುವುದು ದುರ್ಯೋಧನಾದಿಗಳಿಗೆ, ಪ್ರಾಯಶಃ ಧೃತರಾಷ್ಟ್ರನಿಗೆ, ಇಷ್ಟವಿಲ್ಲ ಎಂದೂ ಧೃತರಾಷ್ಟ್ರನು ತಾವು ವಾರಣಾವತದಲ್ಲಿ ನಿಲ್ಲಬೇಕೆಂದು ಸೂಚಿಸುತ್ತಿದಾನೆ ಎಂದೂ ಅವನು ಗ್ರಹಿಸಿದನು; ಆ ಸೂಚನೆಯನ್ನು ಅಂಗೀಕರಿಸಿ ವಾರಣಾವತಕ್ಕೆ ಹೋಗಲು ನಿಶ್ಚಯಿಸಿದನು. ದುರ್ಯೋಧನನು ಇದರಿಂದ ಸಂತುಷ್ಟ ನಾದನು; ವಾರಣಾವತದಲ್ಲಿ ಪಾಂಡವರನ್ನು ಅರಗಿನ ಮನೆಯಲ್ಲಿ ಸುಡುವುದಕ್ಕೆ ಬೇಕಾದ ಏರ್ಪಾಡನ್ನು ನಡಸಿದನು. ಆ ಏರ್ಪಾಡು ವ್ಯರ್ಥವಾಗಿ ಪಾಂಡವರು ದ್ರೌಪದಿಯ ಸ್ವಯಂವರದಲ್ಲಿ ಅವಳನ್ನು

ಗೆದ್ದಾಗ ದುರ್ಯೋಧನನ ನಿರಾಶೆ ಮತ್ತೊಮ್ಮೆ ತಳವನ್ನು ಮುಟ್ಟಿತು. ಧರ್ಮರಾಯನು ಮತ್ತೆ ಹಸ್ತಿನಾಪುರಕ್ಕೆ ಬಂದು ಸರ್ವರಿಂದಲೂ ಸನ್ಮಾನವನ್ನು ಪಡೆದು ಖಾಂಡವ ಪ್ರಸ್ಥದಲ್ಲಿ ದೊರೆಯಾಗಿ ನಿಂತು, ರಾಜಸೂಯಯಾಗವನ್ನು ನಡಸುವ ಮಟ್ಟಿಗೆ ದೊಡ್ಡವನಾದದ್ದನ್ನು ಇವನು ನೋಡಿ' ಸಹಿಸಬೇಕಾಯಿತು. ರಾಜಸೂಯಯಾಗದಿಂದ ಹಿಂತಿರುಗಿ ಬಂದು ಇವನು ತುಂಬ ಖಿನ್ನನಾಗಿದ್ದನು. ಆಗ ಶಕುನಿ ಇವನಿಗೆ ದ್ಯೂತದಿಂದ ಪಾಂಡವರನ್ನು ಸೋಲಿಸುವ ಉಪಾಯವನ್ನು ಸೂಚಿಸಿದನು. ಆಗಿನಕಾಲಕ್ಕೆ ಪ್ರತಿಪಕ್ಷದವನನ್ನು ಯುದ್ಧದಲ್ಲಿ ಹೇಗೊಹಾಗೆ ದ್ಯೂತದಲ್ಲಿಯೂ ಸೋಲಿಸುವುದು ಕ್ಷತ್ರಿಯೋಚಿತವಾದ ವ್ಯವಹಾರವೆಂದು ತಿಳಿವಳಿಕೆ ಇದ್ದಿರಬೇಕು. ನಳೋಪಾಖ್ಯಾನವನ್ನು ಓದಿದರೆ ಈ ಭಾವ ಉಂಟಾಗುತ್ತದೆ. ಭಾರತದ ಕಥನದಲ್ಲಿ ಇದು ಅಷ್ಟು ಸ್ಪಷ್ಟವಾಗಿ ಬಾರದಿದ್ದರೂ ಯುಧಿಷ್ಠಿರನ ಮಾತಿನಿಂದ ಇಂಥ ಏನೋ ಒಂದು ಸಂಕೇತ ಇದ್ದಿರಬೇಕು ಎಂದು ಕಾಣುತ್ತದೆ. ಯುದ್ಧಕ್ಕೆ ಒಲ್ಲೆನೆನ್ನುವುದು ಹೇಡಿತನ ಹೇಗೊ ಹಾಗೆ ಜೂಜಿಗೆ ಒಲ್ಲೆನೆನ್ನುವುದೂ ರಾಜ್ಯಲೋಭ, ಅಥವಾ ಅರ್ಥಪರತೆ, ಎಂದು ಗಣಿತವಾಗಿದ್ದಿತು ಎಂದು ತೋರುತ್ತದೆ. ಪಾಂಡವರನ್ನು ಯುದ್ಧದಲ್ಲಿ ಗೆದ್ದೇನೆಂಬ ಧೈರ್ಯ ಆಗ ದುರ್ಯೋಧನನಿಗೆ ಇರಲಿಲ್ಲ. ದ್ಯೂತದಲ್ಲಾದರೂ ತಾನು ಗೆದ್ದೇನೆಂಬ ಧೈರ್ಯ ಇರಲಿಲ್ಲ. ಆದರೆ ತನ್ನ ಪರವಾಗಿ ತನ್ನ ಸೋದರಮಾವ ಶಕುನಿ ಆಡುವನು; ಅವನು ಅಕ್ಷ ವಿದ್ಯೆಯಲ್ಲಿ ಬಹಳ ಚತುರನಾದದ್ದರಿಂದ ಗೆಲ್ಲುವನು ಎಂದು ಇವನಿಗೆ ಧೈರ್ಯ. ಈ ಆಶೆಯಿಂದ ದುರ್ಯೋಧನನು ಮತ್ತೆ ತಂದೆಯಬಳಿಗೆ ಹೋಗಿ, ಯುಧಿಷ್ಠಿರನನ್ನು ದ್ಯೂತಕ್ಕೆ ಕರೆಯಿಸ ಬೇಕೆಂದು ಬೇಡಿದನು. ಧೃತರಾಷ್ಟ್ರನಿಗೆ ಮಗನ ದುರುದ್ದೇಶದ ಸುಳಿವು ತಿಳಿಯದೆ ಇರಲಿಲ್ಲ. ಆದರೆ, ದುರ್ಯೋಧನನು ಅವನ ಬುದ್ಧಿವಾದ ವನ್ನು ಲಕ್ಷಿಸಲಿಲ್ಲ. ದ್ಯೂತ ಬೇಡವೆಂದ ವಿದುರನ ಮಾತೂ ವ್ಯರ್ಥ ವಾಯಿತು. ಕೊನೆಗೆ ಅದು ಬರಿಯ ವಿನೋದಕ್ಕೆ ಎಂಬ ಸೋಗಿನಿಂದ ನಡೆದೇ ನಡೆಯಿತು. ಈ ಸಂದರ್ಭದಲ್ಲಿ ದುರ್ಯೋಧನನು ತೀರ ಅನ್ಯಾಯದಿಂದ ನಡೆದುಕೊಂಡನು. ಪಾಂಡವರನ್ನು ಕೆಡಿಸಬೇಕೆಂಬ

ಒಂದು ಹೇರಾಶಿಯಲ್ಲಿ ಇವನ ಜೀವ ಅವರನ್ನು ಕೆಡಿಸುವ ದಾರಿ ಎಷ್ಟೇ ಕೆಟ್ಟದಾದರೂ ಹೇಸದಂತೆ ಕ್ಷುದ್ರವಾಯಿತು. ವಿನೋದಕ್ಕೆಂದು ಮೊದಲಿಟ್ಟ ಆಟ ಇವನಿಗೆ ಗೆಲವನ್ನು ತಂದಾಗ ಇವನು, ಆಟವಾಡಿದ್ದು ವಿನೋದಕ್ಕೆ ಅಲ್ಲ, ನಿಜವಾಗಿಯೂ ಗೆಲ್ಲುವುದಕ್ಕೆ ಸೋಲುವುದಕ್ಕೆ ಎಂಬಂತೆ, ತನ್ನ ಚಿಕ್ಕಪ್ಪನ ಮಕ್ಕಳನ್ನು ದಾಸರೆಂದು ಭಾವಿಸಿದನು, ನಾತನಾಡಿಸಿದನು. ಅವರ ಹೆಂಡತಿಯನ್ನು, ಅವಳು ತನ್ನ ವಂಶದ ಒಬ್ಬ ಕುಲಸ್ತ್ರೀ ಎಂಬ ಪರಿಜ್ಞಾನವಿಲ್ಲದಂತೆ, ಸಭೆಗೆ ಕರೆತರಿಸಿದನು. ಅವಳ ವಸ್ತ್ರವನ್ನು ಅಪಹಾರ ಮಾಡಿಸಿದನೆಂದು ಕಥೆಯಲ್ಲಿ ಹೇಳಿದೆ. ಅಕ್ಷಯ ವಸ್ತ್ರದಾನದ ಭಾಗವನ್ನು ಪವಾಡವೆಂದು ಬಿಡಬೇಕಾದರೂ ಈ ಅತ್ತಿಗೆಗೆ ದಾಸಿಗೆ ಉಚಿತವಾದ ವಸ್ತ್ರಗಳಿಗಿಂತ ಹೆಚ್ಚಿನ ವಸ್ತ್ರಗಳನ್ನು ತೆಗೆದುಹಾಕು ಎಂದು ಅವನು ಆಜ್ಞೆಮಾಡಿದನೆಂಬ ಮಾತು ನಿಲ್ಲುತ್ತದೆ. ದ್ಯೂತದ ಈ ಭಾಗ ನಡೆದದ್ದಾದರೆ ಈ ವರ್ತನ ಇವನ ನಡತೆಯ ಅಧಃಪಾತಾಲ ಎಂದು ಹೇಳಬೇಕು. ದ್ಯೂತದ ಈ ಭಾಗ ನಡೆಯದೆ ಪಾಂಡವರ ರಾಜ್ಯಭ್ರಂಶನದಭಾಗ ನಡೆಯಿತೆಂದರೂ ದುರ್ಯೋಧನನು ಎಂಥ ಕಟುಕನು ಎಂದು ನಮಗೆ ಎನ್ನಿಸಬೇಕು. ಪರಸ್ಪರ ದ್ವೇಷಿಗಳಾದ ರಾಜರು ದ್ಯೂತದಲ್ಲಿ ಒಬ್ಬರ ರಾಜ್ಯವನ್ನು ಒಬ್ಬರು ಕದ್ದು ಗೆದ್ದವನು ಸೋತವನನ್ನು ಕಾಡಿಗೆ ಅಟ್ಟುವುದು ಕ್ಷತ್ರಿಯ ಕುಲಕ್ಕೆ ಉಚಿತವಾಗಿದ್ದಿರ ಬಹುದು. ಇದನ್ನು ಸೋದರರು ಒಬ್ಬರಿಗೊಬ್ಬರು ಮಾಡುವುದೆ? ಧೃತರಾಷ್ಟ್ರನ ಮಗನು ಪಾಂಡುವಿನ ಮಕ್ಕಳಿಗೆ ಮಾಡುವುದೆ? ಈ ಭಾಗ ದಲ್ಲಿಯೂ ದುರ್ಯೋಧನನ ಜೀವ ಅತ್ಯಂತವಾಗಿ ಕ್ಷುದ್ರವಾಗಿ ಹೋಯಿತು. ಪಾಂಡವರು ಕಾಡಿಗೆ ಹೋದರು; ತಮಗೆ ಅರ್ಹವಲ್ಲದ ಜೀವನವನ್ನು ನಡಸಿದರು. ದುರ್ಯೋಧನನು ಊರಲ್ಲಿ ರಾಜಪದವಿ ಯನ್ನು ಅನುಭವಿಸುತ್ತ ತೃಪ್ತನಾದನು. ಆದರೆ, ಸ್ವಲ್ಪದರಲ್ಲೇ ಈ ತೃಪ್ತಿ ಇವನಿಗೆ ಸಾಲದೆಹೋಯಿತು. ಹಗೆಗಳು ಕಷ್ಟದಲ್ಲಿದ್ದಾರೆ; ಅದನ್ನು ನೋಡಬೇಕು. ತಾನು ವೈಭವದಲ್ಲಿ ಇದ್ದಾನೆ; ಇದನ್ನು ಅವರಿಗೆ ತೋರಿಸಬೇಕು. ಹೀಗೆಂದು ಇವನು ಪಾಂಡವರು ವಾಸವಾಗಿದ್ದ ವನಕ್ಕೆ ತನ್ನ ಪರಿವಾರದೊಡನೆ ವಿಹಾರಕ್ಕೆಂದು ಹೋಗಲು ಅಪೇಕ್ಷಿಸಿದನು.

ಈ ಮಾತನ್ನು ಇವನು ತಂದೆಗೆ ತಿಳಿಸಿದಾಗ ಧೃತರಾಷ್ಟ್ರನು ಮುಂದೆ ಅನರ್ಥವುಂಟಾದೀತೆಂದು ಶಂಕಿಸಿ ಈ ಯೋಚನೆಬೇಡ ಎಂದನು. ದುರ್ಯೋಧನನು ಸ್ನೇಹಿತರ ಸಲಹೆಯಿಂದ, "ನಾವು ಪಾಂಡವರನ್ನು ಕುರಿತು ವನಕ್ಕೆ ಹೋಗುವುದಿಲ್ಲ. ಅಲ್ಲಿ ನಮ್ಮ ಆಕಳ ಹಿಂಡುಗಳು ಮೇಯುತ್ತ ಇವೆ. ಅವುಗಳನ್ನು ನೋಡಿಕೊಂಡುಬರಲು ಹೋಗುತ್ತೇವೆ," ಎಂದನು. ಧೃತರಾಷ್ಟ್ರನು, "ಒಳ್ಳೆಯದು, ಈ ಪಕ್ಷಕ್ಕೆ ಹೋಗಿ. ಆದರೆ ಪಾಂಡವರಿರುವ ಕಡೆಗೆ ಹೋಗಬೇಡಿ," ಎಂದು ಅಪ್ಪಣೆ ಮಾಡಿದನು. ದುರ್ಯೋಧನನಿಗೆ ಯಾತ್ರೆ ಹೊರಡುವುದಕ್ಕೆ ಅಪ್ಪಣೆ ಬೇಕಾಗಿದ್ದಿತು ಹೊರತಾಗಿ ಅದರ ನಿಯಮಗಳನ್ನು ಪಾಲಿಸುವ ಯೋಚನೆ ಇರಲಿಲ್ಲ. ದೈವವಶಾತ್ ಇವನಿಗೆ ಈ ಪ್ರಯತ್ನದಿಂದ ಹಾನಿಯೇ ತಟ್ಟಿತು. ಪಾಂಡವರ ಹೊಟ್ಟೆಯನ್ನುರಿಸುವುದಕ್ಕೆ ಹೋಗಿ ಇವನು ಗಂಧರ್ವರೊಂದಿಗೆ ಜಗಳಕಟ್ಟಿಕೊಂಡನು; ಅವರ ಕೈಗೆ ಸಿಕ್ಕಿ ಬಿದ್ದನು; ಸೆರೆಯಾದ ಇವನನ್ನು ಅರ್ಜುನನೂ ಭೀಮನೂ ಬಿಡಿಸಿಕೊಂಡು ಬರಬೇಕಾಯಿತು. ತಾನು ಎಂಥ ಪುಣ್ಯವಂತನು, ಪಾಂಡವರು ಎಷ್ಟು ಅಕಿಂಚನರು, ಎಂದು ತೋರಿಸಲು ಹೋದವನು, ತಾನು ಎಂಥ ನಿಕೃಷ್ಟನು, ಭೀಮಾರ್ಜುನರು ಎಂಥ ವೀರರು, ಯುಧಿಷ್ಠಿರನು ಅದೆಂಥ ಉದಾತ್ತ ಜೀವಿ, ಎಂಬುದನ್ನು ಪ್ರಕಾಶಪಡಿಸಿದನು. ತಮ್ಮಂದಿರು ಇವನನ್ನು ಗಂಧರ್ವರ ಕೈಯಿಂದ ಬಿಡಿಸಿಕೊಂಡು ಯುಧಿಷ್ಠಿರನ ಎದುರಿನಲ್ಲಿ ನಿಲ್ಲಿಸಿದಾಗ ಅವನು ದುರ್ಯೋಧನನಿಗೆ ಪ್ರೀತಿಯ ಮಾತನ್ನಾಡಿದನು. "ಇಂಥ ಸಾಹಸ ಮಾಡಬೇಡಪ್ಪ. ಊರಿಗೆ ಹಿಂತಿರುಗು. ಸುಖವಾಗಿರು," ಎಂದನು. ದುರ್ಯೋಧನನು ಪ್ರತಿಯಾಗಿ ಒಂದು ಮಾತನ್ನಾಡಲಿಲ್ಲ. ನಿಜದಲ್ಲಿ ಅವನಿಗೆ ಯಾವ ಮಾತನ್ನು ಹೇಳುವುದಕ್ಕೂ ತೋರಿರಲಾರದು. ಘೋಷಯಾತ್ರೆಯಿಂದ ತನಗೆ ಉಂಟಾದ ಪರಾಭವದಿಂದ ನೊಂದು ದುರ್ಯೋಧನನು ಜೀವ ತೆಗೆದುಕೊಳ್ಳುವುದೇ ಸರಿ ಎಂದು ಯೋಚಿಸಿದನು. ದುಶ್ಶಾಸನ ಕರ್ಣ ಶಕುನಿಗಳು ಅವನನ್ನು ತಡೆದು ಮುಂದೆ ಪಾಂಡವರನ್ನು ಗೆಲ್ಲಬಹುದು ಎಂಬ ಆಶೆಯನ್ನು ಹುಟ್ಟಿಸಿ ಅವನನ್ನು ಉಳಿಸಿಕೊಂಡು ಊರಿಗೆ ಹಿಂತಿರುಗಿದರು.

ಹನ್ನೆರಡು ವರ್ಷದ ವನವಾಸ ಒಂದು ವರ್ಷದ ಅಜ್ಞಾತವಾಸ ಮುಗಿಯುತ್ತ ಬಂದವು. ಅಜ್ಞಾತವಾಸದಲ್ಲಿ ಪಾಂಡವರನ್ನು ಗುರುತಿಸಲು ದುರ್ಯೋಧನನು ಪ್ರಯತ್ನಗಳನ್ನು ನಡಸಿದನು. ಆದರೆ ಅವು ಫಲಿಸಲಿಲ್ಲ. ವಿರಾಟನಗರದಲ್ಲಿ ಕೀಚಕನನ್ನು ಯಾರೊ ಕೊಂದರು ಎಂದು ತಿಳಿದಾಗ ಆ ಮಹಾಮಲ್ಲನನ್ನು ಕೊಲ್ಲಬಲ್ಲವನು ಭೀಮನಲ್ಲದೆ ಬೇರೆ ಇಲ್ಲವೆಂದು ಇವನಿಗೆ ತೋರಿ ಈ ವಿಷಯವನ್ನು ಸ್ಥಿರಪಡಿಸಿಕೊಳ್ಳುವುದಕ್ಕೆ ಇವನು ವಿರಾಟನ ಗೋವುಗಳ ಗ್ರಹಣದ ಏರ್ಪಾಟನ್ನು ಮಾಡಿದನು. ಇವನು ಮಾಡಿದ ಊಹೆಯೇನೊ ಸರಿಯಾಗಿಯೇ ಇದ್ದಿತು. ಆದರೆ ಇವನ ಪಕ್ಷ ವಿರಾಟನಗರಿಗೆ ಹೋಗಿ ಗೋವುಗಳನ್ನು ಹಿಡಿದು ಅರ್ಜುನನಿಂದ ಸೋಲನ್ನು ಪಡೆಯುವ ದಿನಕ್ಕೆ ಸರಿಯಾಗಿ ಅಜ್ಞಾತದ ವರ್ಷ ಕೊನೆಯಾಯಿತು. ಇವನು ಪಾಂಡವರನ್ನು ಗುರುತು ಹಿಡಿದದ್ದೆನ್ನುವುದು ಆಮೇಲೆ. ಆದರೆ, ಮೊದಲೇ ಗುರುತುಹಿಡಿದೆನೆಂದು ಇವನು ಹಟಮಾಡಿದನು. ಯುಧಿಷ್ಠಿರನು ಮುಖ್ಯವಾಗಿ ಸಂಧಿಯನ್ನು ಬಯಸಿ, ಅದು ಸಾಧ್ಯವಲ್ಲ ಎಂದರೆ ಯುದ್ಧಮಾಡುವೆನು ಎಂದು ತಿಳಿಸಿ, ದುರ್ಯೋಧನನಿಗೆ ಸಂದೇಶವನ್ನಟ್ಟಿದನು. ದುರ್ಯೋಧನನು, "ಸಂಧಿಯ ಮಾತು ತನಗೆ ಒಲ್ಲದು. ಪಾಂಡವರು ಯುದ್ಧಮಾಡಲೇಬೇಕೆಂದರೆ ತನಗೂ ಒಪ್ಪಿಗೆ," ಎಂದನು. ಇವನ ಪರವಾಗಿ ಯುಧಿಷ್ಠಿರನ ಬಳಿಗೆ ಸಂಧಿಗಾಗಿ ಹೋದ ಸಂಜಯನು, "ಯುಧಿಷ್ಠಿರ, ನೀನು ಧರ್ಮಿಷ್ಠನು. ರಾಷ್ಟ್ರಕ್ಕಾಗಿ ಯುದ್ಧಮಾಡಿ ಬಂಧುವಧೆಯನ್ನು ಏರ್ಪಡಿಸುವುದು ನಿನಗೆ ಯೋಗ್ಯವಲ್ಲ. ರಾಜ್ಯಲೋಭದಿಂದ ಉಳಿದವರು ತಪ್ಪಿ ನಡೆಯಲಿ. ನೀನು ಹಾಗೆ ಮಾಡಬೇಡ," ಎಂದನು. ಎಂದರೆ, ರಾಜ್ಯಲೋಭದಿಂದ ಅಯೋಗ್ಯನು ಮುಂದುವರಿದರೆ ಅವನನ್ನು ತಡೆಯುವ ಅಧಿಕಾರ ಕೂಡ ಧರ್ಮಿಷ್ಠನಿಗೆ ಉಳಿದಿರುವುದಿಲ್ಲ. ದುರ್ಯೋಧನನೇ ಈ ಮಾತನ್ನು ಆಡಿರಲಾರನು. ಅವನ ದೂತನು ಆಡಿದ್ದು ಕೂಡ ಸ್ವಲ್ಪ ವಿಚಿತ್ರವಾಗಿದೆ. ಸಂಜಯನ ಮಾತನ್ನೊಪ್ಪದೆ ಯುಧಿಷ್ಠಿರನು ದುರ್ಯೋಧನನ ಬಳಿಗೆ ಕೃಷ್ಣನನ್ನು ಕಳುಹಿಸಿದನು. ಕೃಷ್ಣನು ದೂತನಾಗಿ ಬರುವನೆಂದು ತಿಳಿದು ದುರ್ಯೋಧನನು ಅವನ ಸತ್ಕಾರಕ್ಕೆ ತಕ್ಕ ಏರ್ಪಾಡನ್ನು ಮಾಡಿದನು.

ಶತ್ರುಪಕ್ಷದ ಏರ್ಪಾಡು ಎಂಬ ದೃಷ್ಟಿಯಿಂದ ಕೃಷ್ಣನು ಅದನ್ನು ಸ್ವೀಕರಿಸಲಿಲ್ಲ; ಹಸ್ತಿನಾಪುರಕ್ಕೆ ಬಂದು ಅವನು ವಿದುರನ ಮನೆಯಲ್ಲಿ ಇಳಿದುಕೊಂಡನು. ಇದರಿಂದ ದುರ್ಯೋಧನನಿಗೆ ಆಕ್ರೋಶವುಂಟಾಯಿತು. ಕೃಷ್ಣನು ತನ್ನ ಬಳಿಗೆ ಬಂದಾಗ ದುರ್ಯೋಧನನು ಈ ಮಾತನ್ನು ಎತ್ತಿ ಅವನನ್ನು ಹೀಯಾಳಿಸಿದನು. ಕೃಷ್ಣನು ಯುಧಿಷ್ಠಿರನ ಪರವಾಗಿ ಮಾಡಿದ ಪ್ರಾರ್ಥನೆಗೆ ದುರ್ಯೋಧನನ ಮನಸ್ಸು ಕರಗಲಿಲ್ಲ. ಕೃಷ್ಣನು ಆ ಮಾತನ್ನು ಹೇಳಿದ್ದಾದರೂ ಧೃತರಾಷ್ಟ್ರನಿಗೆ. ಧೃತರಾಷ್ಟ್ರನು ಅವನಿಗೆ ಉತ್ತರವಾಗಿ, "ಆ ಮಾತು ನನಗೆ ಒಪ್ಪಿಗೆ. ಆದರೆ ದುರ್ಯೋಧನನು ನನ್ನ ಅಂಕೆಯಲ್ಲಿಲ್ಲ. ಸ್ವೇಚ್ಛೆಯಿಂದ ವರ್ತಿಸುತ್ತಿದ್ದಾನೆ. ಅವನಿಗೆ ಎರಡು ಬುದ್ಧಿ ಮಾತನ್ನು ಹೇಳಬೇಕು," ಎಂದನು. ಕೃಷ್ಣನು ಆಗ ತನ್ನ ಮಾತನ್ನು ನೇರವಾಗಿ ದುರ್ಯೋಧನನಿಗೇ ತಿಳಿಸಿದನು. ಅವನ ಮಾತನ್ನು ಭೀಷ್ಮಾದಿ ವೃದ್ಧರು ಅನುಮೋದಿಸಿ ದುರ್ಯೋಧನನಿಗೆ ಬುದ್ಧಿ ಹೇಳಿದರು. ಈ ಯಾವ ಮಾತೂ ದುರ್ಯೋಧನನಿಗೆ ರುಚಿಸಲಿಲ್ಲ. ಅವನು ಕೃಷ್ಣನಿಗೆ ಹೀಗೆಂದನು: "ಕೃಷ್ಣ, ನೀನು ಇನ್ನು ಸ್ವಲ್ಪ ವಿವೇಚನೆಯಿಂದ ಮಾತನಾಡು. ನೀನು ಎಲ್ಲ ತಪ್ಪೂ ನಮ್ಮದು ಎನ್ನುತ್ತಿದ್ದೀಯೆ. ನಿನ್ನ ಈ ಮಾತಿನಲ್ಲಿ ಪಕ್ಷಪಾತ ಕಾಣುತ್ತಿದೆ. ಪಾಂಡವರು ಐವರಲ್ಲಿ ಯಾವನಲ್ಲಿಯೂ ನಿನಗೆ ಯಾವ ತಪ್ಪೂ ಕಾಣುತ್ತಿಲ್ಲ. ಇದು ಹೇಗೆ ಸರಿ? ನನಗೊ ಎಷ್ಟು ಯೋಚಿಸಿದರೂ ನಾನು ಮಾಡಿರುವ ತಪ್ಪು ಯಾವುದು ಎಂದು ಒಂದು ಲವಲೇಶ ಕಾಣುತ್ತಿಲ್ಲ. ನಾನು ಪಾಂಡವರನ್ನು ದ್ಯೂತದಲ್ಲಿ ವಂಚನೆಯಿಂದ ಸೋಲಿಸಿದೆನೆ? ಪಾಂಡವರು ತಮ್ಮ ಇಚ್ಛೆಯಿಂದ ದ್ಯೂತದಲ್ಲಿ ಕುಳಿತರು; ಆಟದಲ್ಲಿ ಸೋತರು. ಅವರನ್ನು ನ್ಯಾಯವಾಗಿ ಸೋಲಿಸಿ ನಾನು ರಾಜ್ಯವನ್ನು ಪಡೆದೆನು. ಇದರಲ್ಲಿ ತಪ್ಪೇನು? ಹೀಗಿರುತ್ತ ಪಾಂಡವರು ಯಾವ ತಪ್ಪಿಗಾಗಿ ನನ್ನ ಮೇಲೆ ದ್ವೇಷವನ್ನು ಸಾಧಿಸುತ್ತಿದಾರೆ? ಅವರು ನಮ್ಮ ವಿರೋಧಿಗಳೊಡನೆ ಸೇರಿಕೊಂಡು ನಮ್ಮನ್ನೆಲ್ಲ ಮುಗಿಸಿಬಿಡಬೇಕೆಂದಿದ್ದಾರೆ. ಇದಕ್ಕೆಲ್ಲ ನಾವು ಹೆದರುವವರಲ್ಲ. ನಾವು ಹೆದರಿಕೆಯ ಕಾರಣದಿಂದ ದೇವೇಂದ್ರನಿಗೂ ಮಣಿಯುವವರಲ್ಲ. ಯುದ್ಧದಲ್ಲಿ ನಮ್ಮನ್ನು ಗೆಲ್ಲುವೆವೆಂದು

ಪಾಂಡವರು ತಿಳಿಯದಿರಲಿ. ನಮ್ಮನ್ನು ಗೆಲ್ಲುವುದು ಅಷ್ಟು ಸುಲಭ ವಲ್ಲ. ಹಾಗೂ ಗೆದ್ದರು! ಸಂತೋಷ; ಕ್ರಮವಾಗಿ ಯುದ್ಧಮಾಡಿ ನಾವು ಸಾಯುವುದಕ್ಕೆ ಸಿದ್ಧ. ರಣರಂಗದಲ್ಲಿ ಸಾಯುವುದು ಕ್ಷತ್ರಿಯನಿಗೆ ಶ್ರೇಯಸ್ಸು, ಧರ್ಮ, ಸದ್ಗತಿಯ ಮಾರ್ಗ. ಶತ್ರುಗಳ ಮುಂದೆ ತಲೆಬಾಗಿ ನಿಲ್ಲುವುದಕ್ಕಿಂತ ಅದೆ ಒಳ್ಳೆಯದು. ವೀರನಾದ ನಾನು ಧರ್ಮಕ್ಕಾಗಿ ಬ್ರಾಹ್ಮಣರಿಗೆ ತಲೆಬಾಗುವೆನು. ಉಳಿದ ಯಾವ ಕಾರಣಕ್ಕೂ ಬೇರೆ ಯಾವನಿಗೂ ನಮಿಸುವುದಿಲ್ಲ. ಪಾಂಡವರು ಈಗ ಕೇಳುವುದು ನಮ್ಮ ತಂದೆ ಅವರಿಗೆ ಕೊಟ್ಟಿದ್ದ ರಾಜ್ಯಭಾಗವನ್ನು. ಆ ರಾಜ್ಯಭಾಗ ಈಗ ನಮ್ಮದಾಗಿದೆ. ಅದನ್ನು ನಾವು ಬಿಟ್ಟುಕೊಡುವವರಲ್ಲ. ನಮ್ಮ ತಂದೆ ರಾಜನಾಗಿದ್ದಾನೆ. ಪಾಂಡವರೂ ನಾವೂ ಅವನಿಗೆ ಅಧೀನರಾಗಿ ನಡೆಯ ಬೇಕು. ಇದು ಹೊರತು ಬೇರೆಯ ಮಾತು ನಮಗೆ ಒಪ್ಪಿಗೆಯಿಲ್ಲ. ರಾಜ್ಯದಲ್ಲಿ ಒಂದು ಸೂಜಿಯ ಮೊನೆಯಷ್ಟು ನೆಲವನ್ನು ನಾನು ಪಾಂಡವರಿಗೆ ಸಮ್ಮತಿಸಿ ಕೊಡಲಾರೆನು,'' ಎಂದನು.

ದ್ಯೂತದಲ್ಲಿ ಅನ್ಯಾಯ ನಡೆಯಿತೆಂದು ದುರ್ಯೋಧನನು ಚೆನ್ನಾಗಿ ಬಲ್ಲನು. ಅದು ನ್ಯಾಯವಾಗಿಯೆ ನಡೆಯಿತೆಂದು ಮತ್ತೆ ಮತ್ತೆ ಹೇಳು ವುದರಿಂದ ಅದು ನ್ಯಾಯವಾಗಿಬಿಡುತ್ತದೆಯೆಂದು ನಂಬುವ ಮೂಢನು ಅವನೇನಲ್ಲ. ಆದರೆ, ಮನಸ್ಸು ಅನ್ಯಾಯವೆಂದು ತಿಳಿದಿದ್ದರೂ ಬಾಯಲ್ಲಿ ಅದನ್ನು ಒಪ್ಪಿಕೊಳ್ಳುವುದಕ್ಕೆ ಅವನು ಸಿದ್ಧನಾಗಿರಲಿಲ್ಲ. ಅವನು ಆತ್ಮ ವಂಚನೆಗೆ ಹಿಂಜರಿಯಲಿಲ್ಲ. ''ಕಿಂ ತೇನ ನಕೃತಂ ಪಾಪಂ ಚೋರೇಣ ಆತ್ಮಾಪಹಾರಿಣಾ?'' ಆತ್ಮಾಪಹಾರಿಯಾದ ಮನುಷ್ಯ ಒಬ್ಬ ಕಳ್ಳ. ಅವನು ಮಾಡದ ಪಾತಕ ಯಾವುದು? ತಾನು ಮಾಡುತ್ತಿದ್ದ ತಪ್ಪನ್ನು ತಪ್ಪು ಎಂದು ಹೇಳಿದ್ದರಿಂದ ಇವನು ಕೃಷ್ಣನನ್ನು ಪಕ್ಷಪಾತಿ ಎಂದು ಜರೆದನು. ಕೃಷ್ಣನ ಮಾತನ್ನು ಹಿರಿಯರೆಲ್ಲ ಒಪ್ಪಿದರೆನ್ನುವುದು ಇವನಿಗೆ ಲೆಕ್ಕವಿಲ್ಲ. ಪ್ರತಿಪಕ್ಷವನ್ನು ಸರಿ ಎನ್ನುವವರೆಲ್ಲ ಪಕ್ಷಪಾತಿಗಳು, ಆದ ಕಾರಣದಿಂದ ತನಗೆ ವಿರೋಧಿಗಳು. ತನ್ನಂತೆ ಯಾರು ಮಾತನಾಡುವರು, ಅವರೇ ನ್ಯಾಯಶೀಲರು, ಧರ್ಮವಾದಿಗಳು, ಗೌರವಾರ್ಹರು. ಇದು ಇವನ ಆತ್ಮವಂಚನೆಯ ಒಂದು ಪರಿಣಾಮ. ಲೋಕವೆಲ್ಲ ಪಾಂಡವ

ರನ್ನು ಒಳ್ಳೆಯವರೆನ್ನುತ್ತಿದೆ; ತನ್ನನ್ನು ಕೆಟ್ಟವನೆನ್ನುತ್ತಿದೆ. ನಿಜದಲ್ಲಿ ತಾನೇ ಒಳ್ಳೆಯವನು. ಪಾಂಡವರೇ ರಾಜ್ಯಲೋಭಿಗಳು. ಇದನ್ನು ತಿಳಿಯದೆ ಇರುವುದು ಲೋಕದಲ್ಲಿ ಒಂದು ದೋಷ. ತಾನು ರಾಜ್ಯ ವನ್ನು ಕೊಡಲಿಲ್ಲ. ಸಂಧಿ ಸಾಧ್ಯವಲ್ಲದಿದ್ದರೆ ಯುದ್ಧಮಾಡುತ್ತೇವೆ ಎಂದು ಹೇಳುವರೆ? ಏನು ನಮ್ಮನ್ನು ಇವರು ಹೆದರಿಸುತ್ತಾರೆಯೆ? ಇವರ ಹೆದರಿಕೆಗೆ ಅಂಜುವ ಹೇಡಿಗಳಲ್ಲ ನಾವು. ಸಂಧಿಯ ಮಾತು ಮೊದಲು ಎನ್ನುವುದನ್ನು ಗಣಿಸುವ ಇಷ್ಟವೇ ಇವನಿಗಿಲ್ಲ. ಯಾವುದೊ ರೀತಿಯಲ್ಲಿ ಪಾಂಡವರು ಮಾಡುತ್ತಿರುವುದು ತಪ್ಪೆಂದು ಸಾಧಿಸಬೇಕು. ತನ್ನ ತಂದೆ ಇರುವಾಗ ತನಗಾಗಲಿ ಪಾಂಡುವಿನ ಮಕ್ಕಳಿಗಾಗಲಿ ರಾಜ್ಯದ ಅಧಿಕಾರವೇನು ಎಂದ ಇವನ ವಾದ ಬಹು ಚತುರವಾದದ್ದು. ತಂದೆ ಇದ್ದಾನೆಂದು ಈ ಎರಡು ಪಕ್ಷವೂ ಸುಮ್ಮನೆ ಇದ್ದರೆ ಆ ತಂದೆಯ ಹೆಸರಲ್ಲಿ ತಾನು ಮೇಲುಗೈಯಾಗಿ ನಡೆದುಕೊಳ್ಳಬಹುದು. ಈ ಚತುರತೆ ಯಲ್ಲಿಯೂ ಇವನ ಆತ್ಮವಂಚನೆ ಎದ್ದು ಕಾಣುತ್ತದೆ. ಶತ್ರುವಿಗೆ ಹೆದರಿ ಅವನಿಗೆ ರಾಜ್ಯದಲ್ಲಿ ಒಂದು ಭಾಗವನ್ನು ಕೊಡುವುದಕ್ಕಿಂತ ಯುದ್ಧದಲ್ಲಿ ಸತ್ತುಬಿದ್ದ ವೀರಶಯನ ಲೇಸು ಎಂದ ಇವನ ಮಾತಿಗೆ ಕೃಷ್ಣನು, "ನೀನು ಬಯಸಿದ್ದನ್ನು ಪಡೆದೀಯೆ! ದುಡುಕಬೇಡ," ಎಂದನು. ದುರ್ಯೋಧನನು ಕೋಪಮಾಡಿಕೊಂಡನು; ಹಿರಿಯರೆಲ್ಲ ಕುಳಿತಿರಲು ಯಾವ ಮಾತನ್ನೂ ಆಡದೆ ಎಲ್ಲರನ್ನೂ ಧಿಕ್ಕರಿಸಿ ಸಭೆಯನ್ನು ಬಿಟ್ಟು ಹೊರಟುಹೋದನು. ಧೃತರಾಷ್ಟ್ರನು ಹೇಳಿದ ಹಾಗೆ, ದುರ್ಯೋಧ ನನು ಅಂಕೆಯಿಲ್ಲದ ಮನುಷ್ಯ, ತನಗೆ ಪ್ರತಿಯಾಗಿ ನುಡಿದವರು ಎಂಥ ಹಿರಿಯರಾದರೂ ಅವರನ್ನು ತಿರಸ್ಕರಿಸುವ ಮೂರ್ಖ.

ಯುದ್ಧ ನಡೆಯಿತು. ಪ್ರತಿಪಕ್ಷ ಮೇಲ್ಗೈಯಾಗಿಯೆ ಇದ್ದಿತು. ದುರ್ಯೋಧನನು ಭೀಷ್ಮನನ್ನು ಮತ್ತಷ್ಟು ಪರಾಕ್ರಮದಿಂದ ಯುದ್ಧ ಮಾಡಿ ಹಗೆಯನ್ನು ಗೆಲ್ಲಬೇಕು ಎಂದು ಬೇಡಿಕೊಂಡನು. ಯುದ್ಧ ಮುಂದರಿಯಿತು. ಭೀಷ್ಮನು ಏನುಮಾಡಿದರೂ ಪಾಂಡವರು ಸೋಲ ಲಿಲ್ಲ. ತಕ್ಕಷ್ಟು ಚೆನ್ನಾಗಿ ಯುದ್ಧಮಾಡುತ್ತಿಲ್ಲ ಎಂದು ದುರ್ಯೋಧನನು ಭೀಷ್ಮನನ್ನು ನಿಂದಿಸಿದನು. ಭೀಷ್ಮನಿಗೆ ಯುದ್ಧದಲ್ಲಿ ಅರೆಮನಸ್ಸಿನಿಂದ

ಕಾದುವ ದುರ್ಬುದ್ಧಿ ಇಲ್ಲವೆನ್ನುವುದು ಇವನ ಬುದ್ಧಿಗೆ ತೋರಲಿಲ್ಲ. ಮತ್ತಷ್ಟು ಯುದ್ಧ ನಡೆದು ಮತ್ತೂ ಪಾಂಡವರು ಸೋಲದಿರಲು ದುರ್ಯೋಧನನು ಭೀಷ್ಮನನ್ನು "ನೀನು ಯುದ್ಧಮಾಡಿದ್ದು ಸಾಕು. ನೀನು ಯುದ್ಧ ಭೂಮಿಯಿಂದ ತೊಲಗು" ಎಂದು ನುಡಿದನು. ಎಂಥ ಹಿರಿಯನಿಗೆ ಎಂಥ ಮಾತು ಹೇಳುತ್ತಿದೇನೆಂದು ಇವನಿಗೆ ತೋಚದೆ ಇದ್ದದ್ದು ಆಶ್ಚರ್ಯ. ಈ ನಡತೆಯನ್ನು ಪಾಂಡವರ ನಡತೆಯೊಡನೆ ಹೋಲಿಸಿದರೆ ಇವನ ಅವಿವೇಕ ಮತ್ತಷ್ಟು ಸ್ಪಷ್ಟವಾಗುತ್ತದೆ. ಭೀಷ್ಮನು ತಮ್ಮ ಪಕ್ಷದ ಸೈನ್ಯವನ್ನು, ನಾಯಕರನ್ನು, ಆನೆಯನ್ನು, ಕುದುರೆಯನ್ನು ಎಷ್ಟು ಕೊಂದರೂ ಅವರು ಭೀಷ್ಮನು ತಮ್ಮವನು ಎಂಬುದನ್ನು, ಹಿರಿಯನು ಎಂಬುದನ್ನು, ಮರೆಯಲಿಲ್ಲ. ದುರ್ಯೋಧನನ ಮನಸ್ಸಿನಲ್ಲಿ ಆತ್ಮಪ್ರೇಮದ ಬೇಗೆಯಿಂದ ಇತರರನ್ನು ಕುರಿತ ದಾಕ್ಷಿಣ್ಯದ ತೇವವೇ ಒಣಗಿಹೋಗಿತ್ತು. ಭೀಷ್ಮನು ಶಸ್ತ್ರ ಸಂನ್ಯಾಸ ಮಾಡಿದನು, ಯುದ್ಧ ರಂಗದಿಂದ ಹೊರಕ್ಕೆ ಸಾರಿದನು. ಅಲ್ಲಿ ಅವನನ್ನು ನೋಡಿಕೊಂಡವರು ಪಾಂಡವರು. ದುರ್ಯೋಧನನು ಅವನ ವಿಷಯದಲ್ಲಿ ಆಮೇಲೆ ಬಹಳ ಶ್ರದ್ಧೆಯನ್ನು ತೋರಲಿಲ್ಲ. ದ್ರೋಣನೂ ಕರ್ಣನೂ ಮಡಿದು ದುರ್ಯೋಧನನ ಎಲ್ಲ ಸೋದರರೂ ಮಡಿದರು, ಎಲ್ಲ ಮಕ್ಕಳೂ ಮಡಿದರು, ಎಲ್ಲ ಬಂಧುಗಳೂ ಮಡಿದರು. ಇನ್ನು ಯುದ್ಧವನ್ನು ಗೆದ್ದು ಆಗತಕ್ಕದ್ದೇನಿತ್ತು? ಸೋತು ಸೋಲತಕ್ಕದ್ದೇನಿತ್ತು? ಈ ಸ್ಥಿತಿಯಲ್ಲಿ ದುರ್ಯೋಧನನು ಯುದ್ಧಭೂಮಿಯಿಂದ ಓಡಿ ಒಂದು ಮಡುವಿನಲ್ಲಿ ಅವಿತುಕೊಂಡನು. ಅವನನ್ನು ಹುಡುಕುತ್ತ ಬಂದ ಪಾಂಡವರು ದಾರಿಹೋಕರ ಮಾತಿನಿಂದ ಅವನು ಇಂಥ ಕಡೆ ಅವಿತಿರುವನೆಂದು ತಿಳಿದು ಅವನಿರುವಲ್ಲಿಗೆ ಬಂದರು. ಯುಧಿಷ್ಠಿರನು ಅವನನ್ನು ಕರೆದು, "ಹೇಡಿಯಂತೆ ಅವಿತುಕೊಳ್ಳುವರುಂಟೆ, ಹೊರಕ್ಕೆ ಬಾ, ಯುದ್ಧವನ್ನು ಮುಗಿಸು," ಎಂದನು. ದುರ್ಯೋಧನನು, "ನಾನು ಅವಿತುಕೊಂಡಿರುವುದು ನಿಜ. ಆದರೆ ಸಾಯುವುದಕ್ಕೆ ಹೆದರಿ ಅಲ್ಲ. ದಣಿದಿದ್ದೇನೆ. ದಣಿವು ಹರಿಸಿಕೊಂಡು ನಾಳೆ ನಿಮ್ಮೊಡನೆ ಯುದ್ಧಮಾಡುತ್ತೇನೆ," ಎಂದನು. ಯುಧಿಷ್ಠಿರನು, "ಈಗಲೇ ಬರಬೇಕು," ಎಂದನು. "ನೀವು ಐವರು.

ನಾನು ಒಬ್ಬ. ನನ್ನ ಒಬ್ಬನ ಮೇಲೆ ನೀವು ಐವರು ಕೈಮಾಡುವಿರಾ. ಇದು ಧರ್ಮವೆ?'' ಎಂದು ದುರ್ಯೋಧನನು ಕೇಳಿದನು. ಯುಧಿಷ್ಠಿರನು, ''ನಿನ್ನೊಬ್ಬನ ಮೇಲೆ ನಾವು ಐವರು ಕೈಮಾಡುವುದಿಲ್ಲ. ನಮ್ಮಲ್ಲಿ ಯಾವ ಒಬ್ಬನೊಡನೆ ನೀನು ಬಯಸುತ್ತೀಯೊ ಅವನೊಡನೆ ಕಾದು,'' ಎಂದನು. ಈ ಮಾತನ್ನು ಹೇಳಿದ್ದಕ್ಕಾಗಿ ಕೃಷ್ಣನು ಯುಧಿಷ್ಠಿರನಮೇಲೆ ಕೋಪಮಾಡಿದನೆಂದು ಕಥೆಯಲ್ಲಿ ಬರುತ್ತದೆ. ಈ ಭಾಗ ಕೃಷ್ಣಪರವಾದ ಪಾಠದಲ್ಲಿ ಸೇರಿದ ಸಂಗತಿ ಎಂದು ಕಾಣುತ್ತದೆ. ದುರ್ಯೋಧನನು ಮಡುವಿನಿಂದ ಹೊರಕ್ಕೆ ಬಂದನು; ಭೀಮನೊಡನೆ ಕಾದಿದನು. ಬಾಲ್ಯದಿಂದ ಹಗೆದಿದ್ದ ಆ ಪ್ರತಿಸ್ಪರ್ಧಿಯ ಪೆಟ್ಟಿನಿಂದ ಸೋತು ಭೂಮಿಯಲ್ಲಿ ಬಿದ್ದನು.

ಸಹಜವಾಗಿ ಇಲ್ಲಿಗೆ ಇವನು ಮೊದಲಿಟ್ಟ ಅನ್ಯಾಯದ ಕಥೆ ಮುಗಿಯಬೇಕು. ಆದರೆ ಅದು ಇನ್ನೂ ಸ್ವಲ್ಪ ಉಳಿದಿದ್ದಿತು. ಕೃಪ ಅಶ್ವತ್ಥಾಮರು ಇವನನ್ನು ಹುಡುಕಿಕೊಂಡು ಬಂದು ಇವನು ಸಾವನ್ನು ಎದುರು ನೋಡುತ್ತ ಬಿದ್ದಿರುವುದನ್ನು ಕಂಡರು. ಅಶ್ವತ್ಥಾಮನು ತಾನು ಯುದ್ಧವನ್ನು ಮುಂದರಿಸುವುದಾಗಿಯೂ ಪಾಂಡವರನ್ನು ಕೊಲ್ಲುವುದಾಗಿಯೂ ಶಪಥಮಾಡಿದನು. ದುರ್ಯೋಧನನ ವೈರ ಮತ್ತೆ ಮೊಳೆಯಿತು; ಅಶ್ವತ್ಥಾಮನ ಮಾತಿಗೆ ಅವನು ಸಮ್ಮತಿಕೊಟ್ಟನು. ಆದರೆ ಪಾಂಡವರು ಈ ಆಚಾರ್ಯಪುತ್ರನ ಕೈಯಿಂದ ಮಡಿದಾರೆಂದು ಅವನು ಮಾಡಿಕೊಂಡ ಆಸೆ ವಿಫಲವಾಯಿತು. ಅಶ್ವತ್ಥಾಮನು ಅರ್ಧರಾತ್ರಿಯಲ್ಲಿ ಹೋಗಿ ಅಕಾರ್ಯವನ್ನು ಮಾಡಿ ನಿದ್ರಿಸುತ್ತಿದ್ದ ಪಾಂಡವರನ್ನು ಕೊಲ್ಲುವ ಯೋಚನೆಯಲ್ಲಿ ಐದು ಜನರನ್ನು ಕೊಂದು ಅವರ ತಲೆಗಳನ್ನು ತಂದನು. ಆ ತಲೆಗಳು ಪಾಂಡವರವಲ್ಲ; ದ್ರೌಪದಿಯ ಮಕ್ಕಳವು. ಇದಾದಮೇಲೆ ದುರ್ಯೋಧನನು ಜೀವಬಿಟ್ಟನು.

ಪಾಂಡವರ ವಿಷಯದಲ್ಲಿ ಇಷ್ಟು ದೌಷ್ಟ್ಯದಿಂದ ನಡೆದರೂ ದುರ್ಯೋಧನನು ತನ್ನಷ್ಟಕ್ಕೆ ತಾನು ದುಷ್ಟನಲ್ಲ. ತಮ್ಮ ತಂದೆಯ ಸ್ಥಾನಕ್ಕೆ, ತನ್ನ ಸ್ಥಾನಕ್ಕೆ, ಚ್ಯುತಿತಂದರೆಂಬ ಕಾರಣದಿಂದ ಅವನು ಆ ಜ್ಞಾತಿಗಳ ವಿಷಯದಲ್ಲಿ ಮನಸ್ಸನ್ನು ಕಲ್ಲುಮಾಡಿಕೊಂಡನು; ಅವರ

ಪರವಾಗಿ ಯಾರು ಯಾವಾಗ ಯಾವ ಮಾತನ್ನು ಹೇಳಿದರೂ ಅದಕ್ಕೆ ಕಿವುಡಾದನು. ಉಳಿದಂತೆ ದುರ್ಯೋಧನನು ಜನದಲ್ಲಿ ಪ್ರೀತಿಯಿಂದ ನಡೆದುಕೊಂಡವನು. ' ತಂದೆಯೆಂದರೆ ಅವನಿಗೆ ಭಕ್ತಿ ಸಾಲದಾದರೂ ಮಮತೆ ಕಡಮೆಯಾಗಿರಲಿಲ್ಲ. ತಾಯಿಗೆ ಅವನು ಎದುರು ಮಾತು ಹೇಳಲಿಲ್ಲ. ಅವಳ ಮಾತು ಒಪ್ಪಿಗೆಯಾಗದಿದ್ದಾಗ ಸುಮ್ಮನೆ ದೂರ ನಡೆದುಬಿಟ್ಟನು. ತಮ್ಮಂದಿರೆಂದರೆ ಅವನಿಗೆ ತುಂಬ ಪ್ರೀತಿ. ಆ ತಮ್ಮಂದಿರಲ್ಲಿ ಒಬ್ಬನಾದ ದುಶ್ಶಾಸನನಂತೂ ಇವನ ಒಂದು ನೆರಳಂತೆ ಅನುವರ್ತಿಯಾಗಿದ್ದನು. ಒಬ್ಬ ತಮ್ಮನ ಪ್ರೀತಿಯನ್ನಾದರೂ ಹೀಗೆ ಗಳಿಸುವುದು ಮನುಷ್ಯನಲ್ಲಿ ದೊಡ್ಡ ಶಕ್ತಿಯೇ. ಅದು ಸಾಧ್ಯವಾಗಬೇಕಾದರೆ ತುಂಬ ಗುಣ ಇರಬೇಕು. ದುರ್ಯೋಧನನ ಈ ಗುಣದ ಭಾಗ ಬಹು ಚೆನ್ನಾಗಿ ಪ್ರಕಟವಾಗುವುದು ಪ್ರಾಯಶಃ ಅವನು ಕರ್ಣನನ್ನು ಕಂಡ ರೀತಿಯಲ್ಲಿ. ಲೋಕೋತ್ತರನಾದ ಧನ್ವಿಯೆಂದು ಅರ್ಜುನನು ಹೊಗಳಿಸಿಕೊಂಡು ನಿಂತ ಹೊತ್ತಿನಲ್ಲಿ ಸೂತನ ಮಗ ಕರ್ಣನು ತಾನು ಅವನೊಂದಿಗೆ ಸ್ಪರ್ಧಿಸುವುದಾಗಿ ಕಳಕ್ಕೆ ಬಂದನು. ದ್ವಂದ್ವಯುದ್ಧದ ನಿಯಮಗಳನ್ನು ಬಲ್ಲ ಕೃಪಾಚಾರ್ಯನು, "ಕ್ಷತ್ರಿಯನೊಂದಿಗೆ ಸ್ಪರ್ಧಿಸಬೇಕಾದರೆ ನೀನು ಕ್ಷತ್ರಿಯನಾಗಿರಬೇಕು, ನಿನ್ನ ಕುಲವನ್ನು ಹೇಳು," ಎಂದನು. ಕರ್ಣನಿಗೆ ಉತ್ತರ ಹೇಳಲು ಆಗಲಿಲ್ಲ. ಸೂತನ ಸಾಕುಮಗ: ತಾನು ಯಾವ ಕ್ಷತ್ರಿಯನ ಮಗ ಎಂದು ಹೇಳಿಕೊಳ್ಳಬಹುದು? ಆ ಹೊತ್ತಿನಲ್ಲಿ ದುರ್ಯೋಧನನು ಎದ್ದುನಿಂತು ಕರ್ಣನಿಗೆ ತಾನು ಅಂಗರಾಜ್ಯದ ಅಭಿಷೇಕ ಮಾಡುವುದಾಗಿ ಹೇಳಿದನು; ಅಲ್ಲಿಯೇ ಅವನಿಗೆ ಪಟ್ಟಕಟ್ಟಿದನು; "ಈಗ ಇವನು ಕ್ಷತ್ರಿಯನು. ಇವನಿಗೆ ಯುದ್ಧಮಾಡುವುದಕ್ಕೆ ಅಪ್ಪಣೆಕೊಡಿ," ಎಂದನು. ಈ ಸಂದರ್ಭದ ಇವನ ನಡತೆ ಇವನ ಕ್ಷಿಪ್ರಸಂಕಲ್ಪವನ್ನು, ಇವನ ಔದಾರ್ಯವನ್ನು, ಇವನ ಸಮಯ ಸ್ಫೂರ್ತಿಯನ್ನು ಪ್ರಕಟಿಸುತ್ತದೆ. ವಿರೋಧಿಯಾದ ಅರ್ಜುನನಿಗೆ ಒಬ್ಬ ಶತ್ರುವನ್ನು ಉತ್ಥಾಪನೆ ಮಾಡುವೆನೆಂಬ ಕಾರಣದಿಂದ ಇವನು ಇಷ್ಟು ಉದಾರಿಯಾದನೆಂದು ನಾವು ವಾದಿಸಬಹುದು. ಆದರೆ ಶಕ್ತಿವಂತನಾದ ಕರ್ಣನಂಥ ಮನುಷ್ಯನಿಗೆ ಒಂದು ರಾಜ್ಯವನ್ನು ಅರೆಕ್ಷಣದಲ್ಲಿ ದಾನಮಾಡಿಬಿಡುವುದೆಂದರೆ

ಮೂರನೆಯವರ ಹಗೆ ಅಷ್ಟರಿಂದ ಸಾಧ್ಯ ಆಗತಕ್ಕ ಸಂಗತಿಯಲ್ಲ. ಕರ್ಣ ನಿಗೆ ಅವಮಾನವಾಗುವಂತೆ ಕೃಪನು ಆಡಿದ ಮಾತು ದುರ್ಯೋಧನನ ದೊಡ್ಡ ಮನಸ್ಸಿಗೆ ಸಣ್ಣತನದ ಮಾತೆಂದು ಕಾಣಿಸಿತು. ಕರ್ಣನಂಥ ಶಕ್ತನಿಗೆ ಕ್ಷತ್ರಿಯತ್ವಕ್ಕೆ ಕೊರೆಯೆ? ಅದರೆ, ಕುಲದಲ್ಲಿ ತನಗಿಂತ ಕಡಮೆ ಯಾದವನನ್ನು ಶೂರನೆಂಬ ಕಾರಣದಿಂದ ತನಗೆ ಸಮನಾಗಿ ಮಾಡಿ ಕೊಳ್ಳುವುದಕ್ಕೆ ದುರ್ಯೋಧನನು ಒಪ್ಪಿದನು. ಅವನು ಈ ಸಂದರ್ಭ ದಲ್ಲಿ ಗುಣವನ್ನು ಕುರಿತು ಪಕ್ಷಪಾತವನ್ನು ತೋರಿದನು. ಅದನ್ನೂ ತನ್ನ ಸಾಮ್ರಾಜ್ಯದ ಒಂದು ಭಾಗವನ್ನು ಶೌರ್ಯಕ್ಕೆ ಕಾಣಿಕೆಯಾಗಿ ಒಪ್ಪಿಸಿ ತೋರಿದನು. ದುರ್ಯೋಧನನ ಆಡಳಿತ ದುಷ್ಟರಾಜನ ಆಡಳಿತವಾಗಿರ ಲಿಲ್ಲ. ಅವನು ಪ್ರಜೆಗಳನ್ನು ಸರಿಯಾಗಿ ನೋಡಿಕೊಂಡನು; ರಾಜಧರ್ಮ ವನ್ನು ಸರಿಯಾಗಿ ಪಾಲಿಸಿದನು; ರಾಜ್ಯದ ಪ್ರಮುಖರ ಮೆಚ್ಚಿಗೆಯನ್ನು ಗಳಿಸಿದನು. ಯುಧಿಷ್ಠಿರನು ರಾಜನಾಗಿ ಹಲವು ವರ್ಷ ಆಳಿದ ಮೇಲೆ ಧೃತರಾಷ್ಟ್ರನು ಕಾಡಿಗೆ ಹೊರಟಾಗ ನಗರದ ಜನ ಅವನನ್ನು ಸ್ವಲ್ಪ ದೂರ ಹಿಂಬಾಲಿಸಿದರು. ಆಗ ಅವನು, "ನನ್ನ ಮಗನ ತಪ್ಪು, ನನ್ನ ತಪ್ಪು, ಏನೇ ಇದ್ದರೂ ನೀವು ಮರೆಯಬೇಕು. ಯುಧಿಷ್ಠಿರನ ವಿಷಯದಲ್ಲಿ ಅನುರಕ್ತರಾಗಿರಿ. ಅವನು ನಿಮ್ಮನ್ನು ನೋಡಿಕೊಳ್ಳುತ್ತಾನೆ," ಎಂದು ಹೇಳಿದಾಗ ಆ ಜನರು, "ದೊರೆಗಳೆ, ನಿಮ್ಮ ಮಗ ನಮ್ಮ ವಿಷಯ ದಲ್ಲಿ ಯಾವ ತಪ್ಪನ್ನೂ ಮಾಡಲಿಲ್ಲ. ನಮ್ಮನ್ನು ಸರಿಯಾಗಿ ನೋಡಿ ಕೊಂಡನು. ರಾಜ್ಯವನ್ನು ಧರ್ಮದಿಂದ ಆಳಿದನು," ಎಂದು ಧೈರ್ಯ ಹೇಳಿದರು. ಇದು ಹೊರಟು ಹೋಗುವ ಮುದುಕನಿಗೆ ಹೇಳಿದ ಉಪ ಚಾರದ ಮಾತಲ್ಲ. ಬರಿಯ ಉಪಚಾರವಾದರೆ ಈ ಮಾತನ್ನು ಹೇಳ ಬೇಕಾಗಿರಲಿಲ್ಲ. ಜ್ಞಾತಿವೈರ ಮತ್ತು ಅದರ ಶಾಖೆಗಳಾಗಿ ಮೂಡಿದ ರಾಜ್ಯಲೋಭ, ಆತ್ಮವಂಚನೆ, ಕುಟಿಲವರ್ತನೆ, ಮೂರ್ಖತೆ, ದುರ್ವಿ ನಯ, ಇವು ಹೊರತಾಗಿ ದುರ್ಯೋಧನನಲ್ಲಿ ಬೇರೆಯ ದುರ್ಗುಣವಿರಲಿಲ್ಲ. ಜ್ಞಾತಿವೈರದಿಂದ ಬಂದವೆಂಬ ದುರ್ಗುಣಗಳೂ ಕೂಡ ಆ ಜ್ಞಾತಿಗಳನ್ನು ಕುರಿತ ವ್ಯವಹಾರದಲ್ಲಿ ಮುಖವಿಟ್ಟವು ಹೊರತಾಗಿ ಇವನ ಉಳಿದ ಜೀವನ ದಲ್ಲಿ ಮುಖವಿಟ್ಟವೆಂದು ಹೇಳಲು ಕಾರಣವಿಲ್ಲ.

## ೧೯
## ದುಶ್ಶಾಸನ

ದುರ್ಯೋಧನನ ತಮ್ಮಂದಿರಲ್ಲಿ ದುಶ್ಶಾಸನ ಒಬ್ಬ ಮಾತ್ರ ಕಥೆಯಲ್ಲಿ ತಕ್ಕಮಟ್ಟಿಗೆ ಒಬ್ಬ ಮೂರ್ತಿ ಆಗುತ್ತಾನೆ. ಉಳಿದವರು ಹೆಸರೆಷ್ಟೋ ಅಷ್ಟೇ ಆಗಿ ಉಳಿಯುತ್ತಾರೆ; ಯುದ್ಧದಲ್ಲಿ ಅಳಿಯುತ್ತಾರೆ. ದುಶ್ಶಾಸನನು ಅಣ್ಣನಿಗೆ ತುಂಬ ಪ್ರೀತಿಯ ಸೋದರನಾಗಿ ಬೆಳೆದನು. ಅವನ ಹೆಸರು ಮುಂದೆ ಬರುವುದು ಮುಖ್ಯವಾಗಿ ದ್ರೌಪದೀ ವಸ್ತ್ರಾಪಹರಣದ ಪ್ರಸಂಗದಲ್ಲಿ. ಭಾರತ ಈಗಿರುವ ರೀತಿಯಲ್ಲಿ ಈ ವಸ್ತ್ರಾಪಹರಣದ ಪ್ರಸಂಗ ಅದರಲ್ಲಿ ಒಂದುಕಡೆ ಸೂಚಿತವಾಗುತ್ತದೆ. ಅದಕ್ಕೂ ಮೊದಲು ದುಶ್ಶಾಸನನು ಅಂತಃಪುರಕ್ಕೆ ಹೋಗಿ ದ್ರೌಪದಿಯನ್ನು ಎಳೆದು ತಂದ ನೆಂದು ಕಥೆಯಲ್ಲಿ ಬರುತ್ತದೆ. ಕೆಲವು ಕಥೆಗಳಲ್ಲಿ ಇಷ್ಟೇ ಸಂಗತಿಯಿಂದ ಕಥಕನಿಗೆ ತೃಪ್ತಿಯಾಗದೆ ದುಶ್ಶಾಸನನು ಯುಧಿಷ್ಠಿರನ ರಾಣಿಗೆ ಅಶ್ಲೀಲ ವನ್ನು ನುಡಿದನೆಂಬಂತೆ ಮಾತುಬರುತ್ತದೆ. ಈ ಮೊದಲೆ ಸೂಚಿಸಿರು ವಂತೆ, ದ್ಯೂತ ಅನುದ್ಯೂತ ಎಂದು ಎರಡು ದ್ಯೂತಪ್ರಸಂಗಗಳು ಬಂದಿರು ವುದು ಎರಡು ಪಾಠಗಳ ಜೋಡಣೆಯಿಂದ ಎಂದು ಕಾಣುತ್ತದೆ: ಎಂದರೆ, ದ್ಯೂತ ನಡೆಯಿತು ಅಥವಾ ಅನುದ್ಯೂತ ಮಾತ್ರ ನಡೆಯಿತು. ಎರಡು ಪಾಠವೂ ಸೇರಿದಕಾಲಕ್ಕೆ ಎರಡನೆಯ ಪಾಠದ ದ್ಯೂತ ಅನುದ್ಯೂತ ಎನ್ನಿಸಿ ಕೊಂಡಿತು. ದ್ರೌಪದಿಯ ಅವಮಾನದ ಮಾತು ಬರುವುದು ದ್ಯೂತದ ಮೊದಲನೆಯ ಪ್ರಸಂಗದಲ್ಲಿ. ಕಥೆಯಲ್ಲಿ ಈಗ ಇರುವಂತೆಯೆ ಪ್ರಾತಿ ಕಾಮಿಯೊಬ್ಬನು ಹೋಗಿ ದ್ರೌಪದಿಯನ್ನು ಸಭೆಗೆ ಬರಬೇಕೆಂದು ಕರೆ ದಾಗ ಅವಳು ಒಂದೆರಡು ಪ್ರಶ್ನೆಯನ್ನು ಕೇಳಿದಳು, ಅವನು ಬಂದು ಆ ಮಾತನ್ನು ತಿಳಿಸಿ, ಆ ಪ್ರಶ್ನೆಗಳನ್ನು ಅವಳೇ ಕೇಳಲಿ ಎಂಬ ಉತ್ತರ ವನ್ನು ತೆಗೆದುಕೊಂಡುಹೋಗಿ ಮತ್ತೆ ಅವಳಿಗೆ ತಿಳಿಸಿದನು, ಆಗ ದ್ರೌಪದಿ ಸಭೆಗೆ ಬಂದಳು, ಎಂದಿದೆ. ಇದಾದಮೇಲೆ, "ಈ ಪ್ರಾತಿಕಾಮಿ ಭೀಮನಿಗೆ ಹೆದರಿ ದ್ರೌಪದಿಯನ್ನು ಕರೆತರಲು ಹಿಂಜರಿಯುತ್ತಿದಾನೆ. ನೀನು ಹೋಗಿ ಅವಳನ್ನು ಕರೆದು ತಾ," ಎಂದು ದುರ್ಯೋಧನನು ದುಶ್ಶಾಸನನಿಗೆ ಹೇಳಿದನೆಂದು ಇದೆ. ದ್ರೌಪದಿ ಸಭೆಗೆ ಬಂದಳೆಂದು

ಹೇಳಿದಮೇಲೆ ದುರ್ಯೋಧನನು ದುಶ್ಶಾಸನನಿಗೆ ಈ ಮಾತನ್ನು ಹೇಳ ಬೇಕಾದ ಕಾರಣವೇನು? ಇದು ಸೇರಿದ ಕಥೆ. ಆಮೇಲೆ ಇವಳ ವಸ್ತ್ರವನ್ನು ಸೆಳೆ ಎಂದು ದುರ್ಯೋದನನು ಹೇಳಿದಂತೆ, ತಮ್ಮನು ಸೆಳೆ ದಂತೆ, ಸೋತು ಬಿದ್ದಂತೆ, ಕಥೆಯಿದೆ. ಏಕೆ ಸೋತನೆಂದು ಸ್ಪಷ್ಟ ವಾಗಿಲ್ಲ. ವಸ್ತ್ರ ಅಕ್ಷಯವಾಯಿತು ಎಂದು ವಾಕ್ಯವಿದೆ. ಈ ಸಂಗತಿ ನಡೆದದ್ದೇ ಆದರೆ ಇದರ ಅರ್ಥ ಇಷ್ಟೇ ಇರಬೇಕು. ಅವನು ಅದೆಷ್ಟು ಸೆಳೆದರೂ ವಸ್ತ್ರವನ್ನು ತೆಗೆಯಲಾಗಲಿಲ್ಲ. ಏತರಿಂದಲೊ ನಾವು ಊಹಿಸ ಬೇಕಾದದ್ದಿಲ್ಲ. ಊಹಿಸಲೇಬೇಕೆಂದು ಯಾರಾದರೂ ಬಯಸುವುದಾದರೆ, ತನ್ನ ಮರ್ಯಾದೆಯ ರಕ್ಷಣೆಗಾಗಿ ದ್ರೌಪದಿ ಅದನ್ನು ಹಿಡಿದಿದ್ದ ಪಟ್ಟು ಅಷ್ಟು ಗಟ್ಟಿಯಾಗಿತ್ತು, ಎನ್ನಬಹುದು. ಮೊತ್ತದಲ್ಲಿ, ದುಶ್ಶಾಸನನು ಈ ಸಂದರ್ಭದಲ್ಲಿ ದ್ರೌಪದಿಯನ್ನು ಎಳೆದುತಂದು ಅವಳ ವಸ್ತ್ರವನ್ನು ಸೆಳೆದುಹಾಕಿ ಅನ್ಯಾಯಮಾಡಿದನೆಂಬ ಭಾಗ ಆಮೇಲಿನ ಕಥೆ ಸೇರಿಸಿದ ಭಾಗವೆಂದು ತೋರುತ್ತದೆ. ದುರ್ಯೋಧನನು ಪಾಂಡವರಿಗೆ ಅನ್ಯಾಯ ಮಾಡಿದ್ದು ನಿಜ; ಅದರಲ್ಲಿ ದುಶ್ಶಾಸನನು ಭಾಗಿ ಆಗಿದ್ದನು ಎನ್ನು ವುದೂ ನಿಜ; ಇಲ್ಲಿ ಇನ್ನೆಲ್ಲ ಮಾತು ಪ್ರಶ್ನಾರ್ಹವಾದದ್ದು. ಅಜ್ಞಾತ ವಾಸ ಮುಗಿದು ಪಾಂಡವರ ಪರವಾಗಿ ಕೃಷ್ಣನು ಸಂಧಿಗೆಂದು ಬಂದಾಗ ದುರ್ಯೋಧನನು ಕೃಷ್ಣನನ್ನಲ್ಲದೆ ತನ್ನಪಕ್ಷದ ಎಲ್ಲ ಹಿರಿಯರನ್ನೂ ಕೂಡ ಎದುರಿಸಿ ನಿಲ್ಲಬೇಕಾಯಿತು. ಆಗ ಅವನಿಗೆ ಜೊತೆ ನಿಂತವರೆಂದರೆ ಶಕುನಿ ಕರ್ಣ ದುಶ್ಶಾಸನರು ಮೂವರೇ. ದುಶ್ಶಾಸನನು ಅಣ್ಣನಿಗೆ, "ಅಣ್ಣಾ, ಇವರ ಮಾತಿಗೆಲ್ಲ ನೀನು ಮನಸ್ಸುಕೊಡಬೇಡ. ನೀನು ಒಪ್ಪುವುದಾದರೆ ಇವರು ನಮ್ಮನ್ನು ಕಟ್ಟಿ ಪಾಂಡವರ ಕೈಗೆ ಒಪ್ಪಿಸಿ ಬಿಟ್ಟಾರು. ಇವರ ಬುದ್ಧಿ ಅಷ್ಟು ದೂರ ನಮ್ಮ ಹಗೆಗಳ ಕಡೆಗೆ ವಾಲಿ ಇದೆ. ನಡೆ. ಇವರ ಮಾತು ಸಾಕು," ಎಂದನು. ಇದೂ ಇವನ ಭ್ರಾತೃಪ್ರೇಮವನ್ನು ತೋರಿಸುತ್ತದೆ. ಯುದ್ಧದಲ್ಲಿ ಹದಿನೇಳನೆಯ ದಿನ ಇವನು ಭೀಮನಿಗೆ ಕೊನೆಯಸಲ ಎದುರುಬಿದ್ದನು. ಆಗ ಭೀಮನ ಪೆಟ್ಟಿನಿಂದ ಸತ್ತನು; ಭ್ರಾತೃಪ್ರೇಮದ ಕಾಣಿಕೆಯನ್ನು ಕೊಟ್ಟು ಮುಗಿಸಿದನು.

## ೨೦
## ಕರ್ಣ

ದುರ್ಯೋಧನನಿಗೆ ಸೋದರನಾಗಿ ಹುಟ್ಟದೆ ಒಬ್ಬ ಸೋದರನಿಗಿಂತ ಹೆಚ್ಚಾಗಿ ಹತ್ತಿರದ ಬಂಧುವಾದವನು ಕರ್ಣ. ಕರ್ಣನು, ಕುಂತೀದೇವಿ ಕನ್ಯೆಯಾಗಿದ್ದಾಗ ಅವಳಲ್ಲಿ ಸೂರ್ಯನಿಂದ ಹುಟ್ಟಿದ ಮಗನೆಂದು ಕಥೆ ಹೇಳುತ್ತದೆ. ಇದರ ಅರ್ಥ ಏನೊ ಈಗ ನಾವು ನಿಷ್ಕರ್ಷೆಯಿಂದ ಹೇಳು ವಂತಿಲ್ಲ. ಇಷ್ಟನ್ನು ಮಾತ್ರ ನಿಜವೆಂದು ಇಟ್ಟುಕೊಳ್ಳಬಹುದು: ಕರ್ಣನು ಕುಂತಿ ಮದುವೆಯಾಗುವ ಮುನ್ನ ಹೆತ್ತ ಮಗ. ಅವಳು ಅವನನ್ನು ನೀರ ಮೇಲೆ ತೇಲಿಸಿಬಿಟ್ಟಳು. ಮಗು ಸೂತನ ಕೈಗೆಸಿಕ್ಕಿತು; ಅವನು ಮಗುವನ್ನು ತನ್ನ ಹೆಂಡತಿ ರಾಧೆಯ ಕೈಗೆ ಸಾಕಲು ಕೊಟ್ಟನು. ಹೀಗೆ ಇವನು ಸೂತನ ಸಾಕುಮಗನಾದನು. ಕರ್ಣನಿಗೆ ಸಹಜವಾದ ಕವಚ ಕುಂಡಲಗಳು ಇದ್ದುವೆಂದು ಕತೆ ಹೇಳುತ್ತದೆ. ಇದರ ಅರ್ಥ ವಾದರೂ ಏನು ಎಂದು ನಾವು ಈಗ ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಕರ್ಣನ ಶಸ್ತ್ರವಿದ್ಯಾಭ್ಯಾಸವನ್ನು ಕುರಿತು ಭಾರತದ ಉತ್ತರಾರ್ಧದಲ್ಲಿ ಒಂದು ಕಥೆಯಿದೆ. ಕ್ಷತ್ರಿಯರಿಗೆ ಪಾಠ ಹೇಳುವುದಿಲ್ಲವೆಂದು ಶಪಥ ಮಾಡಿದ್ದ ಪರಶುರಾಮನ ಬಳಿಗೆ ಇವನು ಹೋಗಿ ತಾನು ಕ್ಷತ್ರಿಯ ನೆಂಬುದನ್ನು ತಿಳಿಸದೆ ಶಿಷ್ಯನಾಗಿ ಅವನಿಂದ ವಿದ್ಯೆಯನ್ನು ಕಲಿತನೆಂದೂ ವಿದ್ಯೆಯನ್ನು ಇನ್ನೇನು ಮುಗಿಸಿದನೆಂಬ ಕಾಲದಲ್ಲಿ ಒಂದು ದಿನ ಗುರು ಇವನ ತೊಡೆಯಮೇಲೆ ತಲೆಯನ್ನಿಟ್ಟುಕೊಂಡು ಮಲಗಿರುವಾಗ ಒಂದು ಕಾಡು ದುಂಬಿ ಬಂದು ಇವನ ತೊಡೆಯ ಮೇಲೆ ಕುಳಿತು ಅದನ್ನು ಕೊರೆಯುವುದಕ್ಕೆ ಮೊದಲುಮಾಡಿತೆಂತಲೂ ಅದನ್ನು ಏನಾದರೂ ಮಾಡು ವುದಕ್ಕೆ ಹೋದರೆ ತನ್ನ ಮೈ ಅಲುಗಿ ಗುರುವಿಗೆ ನಿದ್ರಾಭಂಗ ಆದೀತು ಎಂಬ ಕಾರಣದಿಂದ ಕರ್ಣನು ಆ ನೋವನ್ನು ಸಹಿಸಿಕೊಂಡು ಸುಮ್ಮನೆ ಕುಳಿತಿದ್ದನೆಂದೂ, ಗುರು ಎಚ್ಚತ್ತು ರಕ್ತವನ್ನು ಕಂಡು ಕಾರಣವನ್ನು ತಿಳಿದು, "ನೀನು ಕ್ಷತ್ರಿಯನಲ್ಲದೆ ಇದ್ದರೆ ಈ ನೋವನ್ನು ಹೀಗೆ ಸಹಿಸಿ ಕೊಳ್ಳುತ್ತಿರಲಿಲ್ಲ. ನನಗೆ ಸುಳ್ಳನ್ನು ಹೇಳಿ ನನ್ನ ಹತ್ತಿರ ವಿದ್ಯೆ ಕಲಿತಿ ದ್ದೀಯೆ. ಈ ವಿದ್ಯೆ ನಿನಗೆ ಫಲಿಸದೆ ಹೋಗಲಿ," ಎಂದು ಶಾಪಕೊಟ್ಟ

ನೆಂದೂ ಈ ಕಥೆ. ಇದು ಕೇವಲ ಕಲ್ಪನೆ ಎಂದು ತೋರುತ್ತದೆ. ಕರ್ಣನ ವಿಷಯದಲ್ಲಿ ಈ ಭಾಗದಿಂದ ನಾವು ಅವನು ಪರಶುರಾಮನಿಂದ ವಿದ್ಯೆಯನ್ನು ಕಲಿತನು ಎಂಬ ಇಷ್ಟನ್ನು ಮಾತ್ರ ಗ್ರಹಿಸಬಹುದು. ಏನನ್ನಾದರೂ ಮರೆಮಾಚಿದನೆಂದು, ಯಾವುದಾದರೂ ಶಾಪವನ್ನು ಪಡೆದನೆಂದು, ಹೇಳುವ ಮಾತು ಇವನು ಸೋತಮೇಲೆ ಜನ ಒಂದು ಕಾರಣವನ್ನು ಹುಡುಕಿ ಕಲ್ಪಿಸಿದ್ದಿರಬೇಕು. ಸೂತನ ಹೆಂಡತಿ ರಾಧೆ ಸಾಕಿದ ಈ ಮಗ ಧನುರ್ವಿದ್ಯೆಯಲ್ಲಿ ಸಿದ್ಧಿಯನ್ನು ಪಡೆದನು; ಪಾಂಡವ ಕೌರವ ತರುಣರ ಪ್ರಾವೀಣ್ಯದ ಪ್ರದರ್ಶನದ ದಿವಸ ಅರ್ಜುನನಿಗೆ ಎದುರಾಳಾಗಿ ಮುಂದೆ ಬಂದನು. ಆಗ ನಡೆದ ಸಂಗತಿಯನ್ನೆಲ್ಲ ಈ ಮೊದಲೆ ಹೇಳಿದೆ. ಕೃಪನ ಪ್ರಶ್ನೆಗೆ ಉತ್ತರ ಹೇಳಲಾಗದೆ ಇವನು ಮುಖ ಕೆಟ್ಟು ನಿಂತಾಗ ರಾಜಕುಮಾರ ದುರ್ಯೋಧನನು ಇವನ ಮರ್ಯಾದೆಯನ್ನುಳಿಸಿದನು. ತಾನು ಎಷ್ಟಾದರೂ ಒಬ್ಬ ಸೂತನ ಮಗ; ರಾಜಕುಮಾರನೆಲ್ಲಿ, ತಾನೆಲ್ಲಿ? ಇಂಥದರಲ್ಲಿ ಧೃತರಾಷ್ಟ್ರನ ಹಿರಿಯ ಮಗ ತನ್ನನ್ನು ಒಬ್ಬ ಸಮಾನನೆಂಬಂತೆ ನಡಸಿಕೊಂಡು, ಅಂಗರಾಜ್ಯದ ಪಟ್ಟವನ್ನು ಕಟ್ಟಿದ್ದು ಕರ್ಣನನ್ನು ದುರ್ಯೋಧನನಿಗೆ ಆಜೀವ ಋಣಿಯಾಗಿ ಮಾಡಿತು. ದುರ್ಯೋಧನನ ಔದಾರ್ಯದಿಂದಲ್ಲವೆ ಅವನೂ ಕ್ಷತ್ರಿಯರಲ್ಲಿ ಒಂದು ಸ್ಥಾನವನ್ನು ಪಡೆದನು? ದುರ್ಯೋಧನನ ವಿಷಯದಲ್ಲಿ ಇವನಲ್ಲಿ ಅಂದು ಮೂಡಿದ ಕೃತಜ್ಞತೆ ಸ್ವಲ್ಪವೂ ಕಡಮೆಯಾಗದೆ ಇವನು ಸಾಯುವವರೆಗೂ ಇವನ ಜೀವನವನ್ನು ತಿದ್ದಿತು; ಪ್ರಾಯಶಃ ಎಲ್ಲ ಸಂದರ್ಭದಲ್ಲಿಯೂ ಇವನಿಗೆ ದುರ್ಯೋಧನನ ನಡತೆ ಸರಿ ಎಂದು ಕಾಣುವಂತೆಮಾಡಿತು. ಅವನ ಹಗೆಗಳೆಂಬ ಕಾರಣದಿಂದ ಇವನು ಪಾಂಡವರನ್ನು ಅವನು ಹಗೆಯುವುದಕ್ಕಿಂತ ಹೆಚ್ಚಾಗಿಯೊ ಎಂಬಂತೆ ಹಗೆದನು. ಯಾವಾಗಲಾದರೂ ಒಂದು ಸಲ ಇವನ ಅಭಿಪ್ರಾಯ ದುರ್ಯೋಧನನ ಅಭಿಪ್ರಾಯದಿಂದ ಬೇರೆಯಾಗಿ ಇದ್ದರೆ, ಆ ಪ್ರಭುವಿನ ಅಭಿಪ್ರಾಯ ಏನು ಎಂದು ತಿಳಿದ ಒಡನೆ ಇವನು ಅವನ ಅಭಿಪ್ರಾಯಕ್ಕೆ ಸಮ್ಮತಿಸುತ್ತಿದ್ದನು. ದ್ರೌಪದೀ ಸ್ವಯಂವರದಲ್ಲಿ ಇವನು ಸೋತು, ಬ್ರಾಹ್ಮಣ ವೇಷಧಾರಿಯಾದ ಅರ್ಜುನನು ಗೆದ್ದು ಇವನಿಗೆ ತನ್ನ ಧನುರ್ವಿದ್ಯೆಯ ವಿಷಯವಾದ

ಅಭಿಮಾನ ಮತ್ತೆ ಮುರಿಯಿತು. ಆ ಗೆದ್ದವನು ಅರ್ಜುನನೆಂದು ತಿಳಿದ ಮೇಲಂತೂ ಅವನನ್ನು ಕುರಿತ ಇವನ ಈರ್ಷೆ ಮತ್ತಷ್ಟು ಬಲವಾಯಿತು. ದುರ್ಯೋಧನನು ಗಂಧರ್ವರ ಕೈಗೆ ಸಿಕ್ಕಿಕೊಂಡಾಗಲೂ ಕರ್ಣನು ಅವನನ್ನು ಬಿಡಿಸಲಾರದೆ ಸೋತು, ಅರ್ಜುನನು ಅವನನ್ನು ಬಿಡಿಸಿ ತಂದನು. ಈ ಸಂದರ್ಭದಲ್ಲಿ ದುರ್ಯೋಧನನು ಪ್ರಾಯೋಪವೇಶ ಮಾಡುವೆನೆನ್ನಲು ಕರ್ಣನು ಅವನಿಗೆ ಧೈರ್ಯ ಹೇಳಿ ಅವನನ್ನು ಉಳಿಸಿದನು. ಉತ್ತರ ಗೋಗ್ರಹಣದಲ್ಲಿ ಮತ್ತೆ ಇವನು ಸೋತನು, ಅರ್ಜುನನು ಗೆದ್ದನು. ದುರ್ಯೋಧನನ ದುರದೃಷ್ಟ ಇವನ ವಿಕ್ರಮಕ್ಕೆ ಒಂದು ರಾಹು ಆಯಿತು. ಯುದ್ಧ ಆರಂಭವಾದಾಗ ಇವನು ಸ್ವಲ್ಪ ಪ್ರತಾಪ ಹೇಳಿಕೊಂಡ ಕಾರಣ ಭೀಷ್ಮನು ಇವನ ಜಂಭವನ್ನು ಮುರಿಯುವ ಮಾತನ್ನು ಆಡಬೇಕಾಯಿತು. ಆಗ ಕರ್ಣನು ತನ್ನ ತೂಕವನ್ನು ಮರೆತನು; ಭೀಷ್ಮನನ್ನು ಜರೆದನು; ಅವನು ಸೇನಾಧಿಪತಿಯಾಗಿರುವಾಗ ತಾನು ಯುದ್ಧಮಾಡುವುದಿಲ್ಲ ಎಂದು ಶಪಥಮಾಡಿದನು. ಆ ಹೊತ್ತಿನಲ್ಲಿ ಕರ್ಣನು ತನ್ನ ಒಡೆಯನ ಹಿತಕ್ಕಿಂತ ತನ್ನ ಅಭಿಮಾನವನ್ನು ಹಿರಿದಾಗಿ ಮಾಡಿಕೊಂಡನೆಂದು ಹೇಳಬೇಕು. ಇದಕ್ಕೆ ಮೊದಲೆ ಇವನು ತನ್ನ ಸಹಜವಾದ ಕವಚಕುಂಡಲಗಳನ್ನು ವಿಪ್ರವೇಷದಲ್ಲಿ ಬಂದ ಇಂದ್ರನಿಗೆ, ಅವನು ವೇಷಧಾರಿಯಾದ ಇಂದ್ರನೆಂದು ತಿಳಿದಿದ್ದರೂ, ತನ್ನ ತಂದೆ, ಸೂರ್ಯನು, ಹಾಗೆ ಇಂದ್ರನು ಬಂದಾಗ "ಕವಚಕುಂಡಲಗಳನ್ನು ಕೊಡುವುದು ಬೇಡ" ಎಂದು ಎಚ್ಚರಿಕೆ ಹೇಳಿದ್ದರೂ, "ಕೇಳಿದವರಿಗೆ ಇಲ್ಲ ಎನ್ನುವುದಿಲ್ಲ" ಎಂಬ ಒಂದು ಉದಾತ್ತ ಘೋರಣೆಯಿಂದ ಕೊಟ್ಟುಬಿಟ್ಟನು ಎಂದು ಕಥೆಯಿದೆ. ಈ ಎಲ್ಲದರ ಅರ್ಥ ಏನೆಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಇಷ್ಟು ಮಾತು ಇದರಿಂದ ಗ್ರಾಹ್ಯ. ಕರ್ಣನು ಉದಾರಿ; ದಾನ ಶೌಂಡೀರ. ಇವನ ಈ ಗುಣ ಲೋಕಪ್ರಸಿದ್ಧವಾಗಿದ್ದಿತು. ಭೀಷ್ಮನೊಂದಿಗೆ ಜಗಳ ಮಾಡಿಕೊಂಡು ಯುದ್ಧದಿಂದ ಹೊರಗೆ ನಿಂತರೂ ಭೀಷ್ಮನು ಯುದ್ಧವನ್ನು ನಿಲ್ಲಿಸಿ ಶರಶಯ್ಯೆಯಲ್ಲಿ ಮಲಗಿ ಸಾವನ್ನು ಎದುರು ನೋಡುತ್ತ ಇರುವಾಗ ಕರ್ಣನು ಯುದ್ಧಕ್ಕೆ ಹೊರಟು ಮೊದಲಲ್ಲಿ ಆ ಪಿತಾಮಹನ ಬಳಿಗೆ ಸಾರಿದನು; ಭಕ್ತಿಯಿಂದ ಅವನಿಗೆ ನಮಸ್ಕಾರಮಾಡಿ ಅವನ

ಆಶೀರ್ವಾದವನ್ನು ಬೇಡಿದನು. ಭೀಷ್ಮನೂ ಕೂಡ ಇವನನ್ನು ಪ್ರೇಮ ದಿಂದ ಬರಮಾಡಿಕೊಂಡು, ಇವನಿಗೆ ಒಳ್ಳೆಯ ಮಾತನ್ನು ಹೇಳಿ ಇವನನ್ನು ಸಂತೋಷದಿಂದ ಹರಸಿದನು. ಈ ಸಂದರ್ಭದಲ್ಲಿ ಇಬ್ಬರ ವರ್ತನೆಯೂ ಉದಾತ್ತವೇ ಆಯಿತು ಸರಿ. ಅದರಲ್ಲಿ ಯಾವ ಒಬ್ಬರ ವರ್ತನೆ ಹೆಚ್ಚು ಉದಾತ್ತವಾಯಿತು ಎಂದು ಕೇಳುವುದಾದರೆ ಕರ್ಣನದು ಎನ್ನ ಬೇಕು. ಅಭಿಮಾನ ನೊಂದ ಹೊತ್ತಿನಲ್ಲಿ ಕ್ರೋಧಕ್ಕೆ ವಶನಾಗಿ ತಪ್ಪಿ ನಡೆದ ಇವನು ಆಮೇಲೆ ತನ್ನ ತಪ್ಪನ್ನು ಕಂಡುಕೊಂಡನು; ಯಾವ ಅಭಿಮಾನಕ್ಕೆ ಅವಕಾಶ ಕೊಟ್ಟು ಈ ತಪ್ಪನ್ನು ಮಾಡಿದನೊ ಆ ಅಭಿಮಾನ ವನ್ನು ದಮಿಸಿ, ಆ ಹಿರಿಯನ ಬಳಿಗೆ ಹೋಗಿ ಯುಕ್ತರೀತಿಯಲ್ಲಿ ನಡೆದು ಕೊಂಡನು. ಕರ್ಣನು ಸಹಜವಾಗಿ ದೊಡ್ಡದಕ್ಕೆ ಬಾಗುವ ವಿನೀತಸ್ವಭಾವ ದವನು. ಯುದ್ಧಕ್ಕೆ ಮೊದಲು ಕೃಷ್ಣನು ಸಂಧಿಗಾಗಿ ಬಂದ ಹೊತ್ತಿನಲ್ಲಿ ಕರ್ಣನನ್ನು ಏಕಾಂತಕ್ಕೆ ಕರೆದು ಇವನಿಗೆ ಇವನ ಜನ್ಮವೃತ್ತಾಂತವನ್ನು ತಿಳಿಸಿ, "ಸೋದರರಾದ ಪಾಂಡವರೊಡನೆ ಸೇರು, ಎರಡು ಪಕ್ಷವೂ ನಿನ್ನನ್ನು ರಾಜನನ್ನಾಗಿ ಮಾಡುತ್ತದೆ. ನೀನು ದೊರೆಯಾಗು. ಕ್ಷತ್ರಿಯ ವಂಶಕ್ಕೆ ಬಂದಿರುವ ಮಹಾ ವಿಪತ್ತನ್ನು ತಪ್ಪಿಸು," ಎಂದನು. ಕರ್ಣನು ಅವನಿಗೆ, "ಇಷ್ಟು ದಿನ ದುರ್ಯೋಧನನಿಂದ ಇಷ್ಟೆಲ್ಲ ಉಪಕಾರವನ್ನು ಪಡೆದು ಈಗ ನಾನು ಅವನನ್ನು ತೊರೆದು ಪರಪಕ್ಷಕ್ಕೆ ಬರಲೆ? ಇದು ಕೃತಘ್ನತೆಯಾಗುತ್ತದೆ. ನಾಸಿದನ್ನು ಮಾಡಲಾರೆ ಮನ್ನಿಸು," ಎಂದನು. ಇದಾದ ಮೇಲೆ ಕುಂತಿ ಅವನನ್ನು ಏಕಾಂತದಲ್ಲಿ ಕಂಡಳು. "ತಮ್ಮಂದಿ ರನ್ನು ಹಗೆಯೆಂದು ಭಾವಿಸಿ ನೀನೂ ಕೆಟ್ಟು ಅವರನ್ನೂ ಕೆಡಿಸಬೇಡ," ಎಂದು ಹೇಳಿದಳು. ಕರ್ಣನು, "ತಾಯಿ, ನೀನು ಇಂಥ ಹೊತ್ತಿನಲ್ಲಿ ನನ್ನನ್ನು ಪಾಂಡವರ ಪಕ್ಷಕ್ಕೆ ಬಾ ಎನ್ನುತ್ತೀಯೆ. ನಾನು ಹಾಗೆ ಮಾಡಿದರೆ ನಾನು ಭಯದಿಂದ ನನ್ನ ಒಡೆಯನನ್ನು ತೊರೆದೆನೆಂದು ಲೋಕ ಹೇಳುವುದಿಲ್ಲವೆ? ಲೋಕ ಬೇಕಾದದ್ದನ್ನು ಹೇಳಲಿ ಎಂದರೂ ದುರ್ಯೋಧನನು ನನಗೆ ಮಾಡಿರುವ ಉಪಕಾರವನ್ನೆಲ್ಲ ನಾನು ಹೇಗೆ ಮರೆಯಲಿ? ಉಪಕಾರವನ್ನು ಮರೆತೆನು, ಅವನು ನನ್ನನ್ನು ನಂಬಿ, ಯುದ್ಧದಲ್ಲಿ ಜಯವಾಗುವುದೆಂದು ಮುಂದರಿದಿದ್ದಾನಲ್ಲ! ಅವನ

ವಿಶ್ವಾಸವನ್ನು ಹೇಗೆ ಘಾತಿಸಲಿ? ಇಷ್ಟು ದಿನ ಒಡೆಯನ ಅನ್ನವನ್ನುಂಡ ದ್ದಾಯಿತು. ಈಗ ಅದಕ್ಕೆ ಪ್ರತಿಯಾಗಿ ಸೇವೆ ಸಲ್ಲಿಸಬೇಕಾಗಿದೆ. ಅದನ್ನು ಸಲ್ಲಿಸದಿದ್ದರೆ ನಾನು ಅರಸನ ಪಿಂಡವನ್ನು ಕದ್ದ ಕಳ್ಳನಾಗುತ್ತೇನೆ. ಇದನ್ನು ನಾನು ಮಾಡಲಾರೆನು. ನಾನು ದುರ್ಯೋಧನನಿಗಾಗಿ ಆದಷ್ಟು ಚೆನ್ನಾಗಿ ಕಾದುವುದೇ ನಿಜ. ಆದರೆ ನಿನಗೆ ಒಂದು ಮಾತನ್ನು ಕೊಡು ತ್ತೇನೆ. ಅರ್ಜುನನೊಬ್ಬನನ್ನು ಹೊರತು ನಿನ್ನ ಉಳಿದ ಮಕ್ಕಳನ್ನು ನಾನು ಕೊಲ್ಲುವುದಿಲ್ಲ,'' ಎಂದನು. ಕರ್ಣನ ಧರ್ಮನಿಷ್ಠೆ ಈ ಎರಡು ಮಾತಿನಿಂದಲೂ ಎದ್ದು ಕಾಣುತ್ತದೆ. ಅವನಿಗೆ ಕೃಷ್ಣನ ವಿಷಯದಲ್ಲಿ ಬಹಳ ಗೌರವವಿದ್ದಿತು; ಕುಂತಿಯ ಮಗನೆನಿಸಿಕೊಳ್ಳುವುದು ಇಷ್ಟವಾದ ಮಾತೂ ಹೌದು. ಆದರೆ ಮಗುವಾದಾಗ ತನ್ನನ್ನು ಸಾಕಿದ ಸೂತನ ಪತ್ನಿ ರಾಧೆಯನ್ನು ತೊರೆದು ಕುಂತಿಯ ಮಗ ಎಂದು ಕರೆಯಿಸಿಕೊಳ್ಳಲು ಅವನು ಇಷ್ಟಪಡಲಿಲ್ಲ; ದುರ್ಯೋಧನನ ರಾಜ್ಯ ತನಗೇ ಆಗಬಹುದೆಂಬ ಆಸೆಗೆ ಮನಸ್ಸಿನಲ್ಲಿ ಎಡೆಕೊಡಲಿಲ್ಲ. ಹೆತ್ತ ತಾಯಿ ಬಂದು ಮಾಡಿದ ಪ್ರಾರ್ಥನೆ ತೀರಾ ವ್ಯರ್ಥವಾಯಿತು ಎನ್ನಿಸದಂತೆ ಅವಳ ಮಾತಿಗೂ ಸ್ವಲ್ಪ ಬೆಲೆ ಕೊಟ್ಟು ಯುಧಿಷ್ಠಿರ ಭೀಮ ನಕುಲ ಸಹದೇವರನ್ನು ಕೊಲ್ಲು ವುದಿಲ್ಲವೆಂದು ವಾಗ್ದಾನ ಮಾಡಿದನು. ಒಂದರ್ಥದಲ್ಲಿ ಈ ಕೊನೆಯ ಮಾತು ಇವನ ಹಿರಿತನವನ್ನು ತೋರಿಸುವಂತೆ ಇನ್ನೊಂದರ್ಥದಲ್ಲಿ ಒಂದು ಅಲ್ಪತನವನ್ನು ತೋರಿಸುತ್ತದೆ. ಕೊನೆಗೂ ಇವನಿಗೆ ಅರ್ಜುನನನ್ನು ಕುರಿತ ಸ್ಪರ್ಧಾಬುದ್ಧಿ ಉಳಿದು ನಿಂತಿತು. ಯುದ್ಧದಲ್ಲಿ ಕರ್ಣನು ಬಹು ಪರಾಕ್ರಮದಿಂದ ಹೋರಿದನೆನ್ನುವುದನ್ನು ಹೇಳಬೇಕಾಗಿಲ್ಲ. ಕೊನೆಗೆ ಇವನು ಅರ್ಜುನನ ಎದುರಿಗೆ ನಿಂತು ಯುದ್ಧಮಾಡಿ ಅವನ ಬಾಣ ದಿಂದ ಸತ್ತನು. ಚಿಕ್ಕಂದು ಸೂತನ ಮಗನೆನಿಸಿಕೊಂಡು ಒಂದು ಅಲ್ಪಸ್ಥಾನದಿಂದ ಜೀವನವನ್ನು ಆರಂಭಿಸಿದವನು ತನ್ನ ಶೌರ್ಯದಿಂದ, ಪರಾಕ್ರಮದಿಂದ, ಉದಾತ್ತ ವರ್ತನೆಯಿಂದ, ತತ್ತ್ವನಿಷ್ಠೆಯಿಂದ ದುರ್ಯೋಧನನ ಪಕ್ಷದ ಅತ್ಯಂತ ಶ್ರೇಷ್ಠ ನಾಯಕನೆಂದು ಕೀರ್ತಿ ಗಳಿಸಿದನು. ಭಾರತ ಇತಿಹಾಸದ ಅತ್ಯಂತ ಪ್ರಮುಖನಾಯಕರಲ್ಲಿ ಒಬ್ಬನಾದನು.

## ೨೧
## ಕೃಷ್ಣ

ಎರಡು ಪಕ್ಷಕ್ಕೂ ಬಂಧುವಾಗಿದ್ದು, ಕುಂತೀದೇವಿ ತಂದೆಯ ಸೋದರಿ ಎಂಬ ಕಾರಣದಿಂದ ಪಾಂಡವರಿಗೆ ಸ್ವಲ್ಪ ಹೆಚ್ಚು ಹತ್ತಿರದವನಾಗಿ, ಸದಾ ಅವರ ವಿಷಯದಲ್ಲಿ ಮರುಕದಿಂದ ನಡೆದುಕೊಂಡ ಕೃಷ್ಣನು ಭಾರತದ ಕಥೆಯ ಹಿನ್ನೆಲೆಯನ್ನು ತುಂಬಿರುವ ಮಹಾಮೂರ್ತಿ. ಭಾರತದ ಕಥೆಯಲ್ಲಿ ಇವನು ಆಕ್ರಮಿಸಿದ ಸ್ಥಾನ ಮೊದಲಲ್ಲಿ ತಕ್ಕಷ್ಟು ಹಿರಿದಾಗಿದ್ದಿತು. ಆಮೇಲೆ ಇಂಥ ಮಹಾಪುರುಷನು ಬರಿಯ ಮನುಷ್ಯನಷ್ಟೇ ಅಲ್ಲ ಎಂಬ ಭಾವ ಬೆಳೆದು, ಇತಿಹಾಸಕಾರರು ಇವನಿಗೆ ಕಥೆಯಲ್ಲಿ ಮತ್ತಷ್ಟು ಸ್ಥಾನವನ್ನು ಕಲ್ಪಿಸಿಕೊಟ್ಟರು. ಇವನನ್ನು ವಿಷ್ಣುವಿನ ಅವತಾರವೆಂದು ಗಣಿಸುವ, ಸಿದ್ಧಾಂತಮಾಡುವ, ಹಲವಾರು ಸಂಗತಿ ಹೀಗೆ ಕಥೆಗೆ ಸೇರಿತು; ಅನುಕ್ರಮಣಿಕಾ ಅಧ್ಯಾಯದಲ್ಲಿ ಅಧ್ಯಾಯಕಾರನು ಭಾರತವನ್ನು "ನಾರಾಯಣ ಕಥಾಮಿಮಾಂ" ಎಂದು ಕರೆಯುವಂತೆ ಆಯಿತು. ದ್ರೌಪದಿಯ ಅಕ್ಷಯವಸ್ತ್ರದ ಪವಾಡ, ಕಾಮ್ಯಕವನದಲ್ಲಿ ದುರ್ವಾಸಾತಿಥ್ಯದ ಸಂದರ್ಭದಲ್ಲಿ ಅಕ್ಷಯ ಪಾತ್ರೆಯಲ್ಲಿ ಉಳಿದಿದ್ದ ಒಂದು ಅಗುಳನ್ನು ತಿಂದು ಸಾವಿರಾರು ಅತಿಥಿಗಳ ಹಸಿವನ್ನು ನೀಗಿದನೆಂಬ ಪವಾಡ, ಸಂಧಿಗಾಗಿ ಬಂದ ಹೊತ್ತಿನಲ್ಲಿ ದುರ್ಯೋಧನನ ಸಭೆಯಲ್ಲಿ ವಿಶ್ವರೂಪವನ್ನು ತೋರಿಸಿದ ಪವಾಡ, ಗೀತೆಯ ಉಪದೇಶದಲ್ಲಿ ಅರ್ಜುನನಿಗಾಗಿ ವಿಶ್ವರೂಪವನ್ನು ತೋರಿಸಿದನೆಂಬ ಪವಾಡ, ಒಂದು ಸಂಜೆಯೊಳಗಾಗಿ ಜಯದ್ರಥನನ್ನು ಕೊಲ್ಲುವೆನೆಂದು ಅರ್ಜುನನು ಶಪಥಮಾಡಿದಾಗ, ಜಯದ್ರಥನು ಅವಿತುಕೊಂಡು ಸಂಜೆ ಮುಗಿಯುವ ಸ್ಥಿತಿಗೆ ಬಂದಿರಲು, ಇವನು ತನ್ನ ಚಕ್ರವನ್ನು ಸೂರ್ಯನಿಗೆ ಅಡ್ಡವಿಟ್ಟು ಸಂಜೆಯಾಯಿತೆಂಬ ಭ್ರಾಂತಿಯನ್ನು ಹುಟ್ಟಿಸಿ ಜಯದ್ರಥನು ಹೊರಗೆ ಬರುವಂತೆ ಮಾಡಿ ಅವನನ್ನು ಅರ್ಜುನನ ಎದುರಿಗೆ ತಂದು ಕೊಲ್ಲಿಸಿ ಅರ್ಜುನನನ್ನು ಉಳಿಸಿದನೆಂಬ ಪವಾಡ, ಇವೆಲ್ಲ ಈ ರೀತಿಯಲ್ಲಿ ಕಥೆಗೆ ಸೇರಿಕೊಂಡ ಸಂಗತಿಗಳು. ಹಾಗೆಯೆ ಸಭಾಪರ್ವದಲ್ಲಿ ಶಿಶುಪಾಲನು ಕೃಷ್ಣನನ್ನು ಜರೆದಾಗ ಭೀಷ್ಮನು ಇವನನ್ನು ಕುರಿತು

ಹೇಳುವ ಅವತಾರ ಚರಿತೆ, ಅಂತೆಯೆ ಈ ಅರ್ಥದಲ್ಲಿ ಆಗಾಗ ಆ ವೃದ್ಧನೂ ವಿದುರನೂ ಇತರರೂ ಹೇಳುವ ಮಾತುಗಳು, ಇವೆಲ್ಲ ಕಥೆಗೆ ಆಮೇಲೆ ಸೇರಿದ ಸಂಗತಿಗಳು. ಭಾರತದ ಕೃಷ್ಣನ ಸರಿಯಾದ ಒಂದು ಮೂರ್ತಿ ನಮಗೆ ದೊರೆಯಬೇಕಾದರೆ ನಾವು ಈ ಸಂಗತಿಗಳನ್ನು ಬಿಡಬೇಕು. ಅವನು ಬಹು ಹಿರಿಯನಾದ ಒಬ್ಬ ಮಾನುಷ ವ್ಯಕ್ತಿ ಎಂದು ಅವನ ಚರಿತೆಯನ್ನು ನೋಡಬೇಕು.

ಕೃಷ್ಣನು ಮೊದಲಿಂದಲೂ ಪಾಂಡವರ ವಿಷಯದಲ್ಲಿ ಮಮತೆಯಿಂದ ನಡೆದ ಹಿರಿಯ. ಅವನು ನಮಗೆ ಮೊದಲು ಕಾಣುವುದು ದ್ರೌಪದೀ ಸ್ವಯಂವರ ಕಾಲದಲ್ಲಿ. ಉಳಿದ ರಾಜರಂತೆ ಅವನೂ ಆ ಉತ್ಸವಕ್ಕೆ ಬಂದಿದ್ದನು. ಆ ಮೊದಲು ಅವನಿಗೆ ಪಾಂಡವರು ವಾರಣಾವತದಲ್ಲಿ ಅರಗಿನ ಮನೆಯಿಂದ ತಪ್ಪಿಸಿಕೊಂಡು ಹೋಗಿದ್ದರು ಎಂಬಷ್ಟರ ಸುದ್ದಿ ಮಾತ್ರ ತಿಳಿದಿದ್ದಿತು. ಪಾಂಡವ ಸೋದರರು ಬ್ರಾಹ್ಮಣ ಸಮೂಹದ ಮಧ್ಯೆ ಕುಳಿತಿರುವಲ್ಲಿ ಕೃಷ್ಣನು ಅವರನ್ನು ಗುರುತಿಸಿದನು; ಅವರ ಸಂಗತಿಯನ್ನು ಅಣ್ಣ ಬಲರಾಮನಿಗೆ ತಿಳಿಸಿದನು. ಸ್ವಯಂವರದಲ್ಲಿ ಅರ್ಜುನನು ದ್ರೌಪದಿಯನ್ನು ಪಡೆದು ಮನೆಗೆ ಹೋದಮೇಲೆ ಇವನು ಬಂದು ಅತ್ತೆ ಕುಂತಿಯನ್ನೂ ಮೈದುನರು ಐವರು ಸೋದರರನ್ನೂ ನೋಡಿ ಪ್ರೀತಿಯಿಂದ ಮಾತನಾಡಿಸಿದನು; ಆಮೇಲೆ ತನ್ನ ಊರಿಗೆ ಹೋದನು. ಈ ವೇಳೆಗೆ ಕೃಷ್ಣನು ತನ್ನ ದೇಶದಲ್ಲಿ ದೌಷ್ಟ್ಯದಿಂದ ನಡೆದಿದ್ದ ತನ್ನ ಮಾವ ಕಂಸನನ್ನು ಕೊಂದು ಸೆರೆಯಲ್ಲಿದ್ದ ತಾತ ಉಗ್ರಸೇನನನ್ನು ರಾಜನಾಗಿ ನಿಲ್ಲಿಸಿ, ತಾನು ರಾಜ್ಯದ ಒಬ್ಬ ಪ್ರಮುಖ ನಾಗಿ ಧರ್ಮಪಕ್ಷಪಾತಿಯೆಂದು ಹೆಸರು ಗಳಿಸಿದ್ದನು. ಪಾಂಡವರು ರಾಜಸೂಯವನ್ನು ಮಾಡಿದಾಗ ಇವನಿಗೆ ಅಗ್ರಪೂಜೆ ಆಯಿತು. ನೆರೆದ ಎಲ್ಲರಾಜರ ಮಧ್ಯೆ ಹಿರಿಯನೆಂದು ಮಾಡುವ ಪೂಜೆ ಈ ಪೂಜೆ. ಇದನ್ನು ಒಂದು ಪಕ್ಷ ಒಪ್ಪಲಿಲ್ಲ. ಆ ಪಕ್ಷದ ಮುಂದಾಳು ಶಿಶುಪಾಲ. ಶಿಶು ಪಾಲನೂ ಕೃಷ್ಣನ ಸಂಬಂಧದ ಒಬ್ಬ ರಾಜ. ಆಗಿನಕಾಲಕ್ಕೆ ಕೃಷ್ಣನ ಪಕ್ಷ ಒಂದು, ಅವನ ವಿರೋಧ ಪಕ್ಷ ಒಂದು, ಎಂಬ ಭೇದ ಯಾವ ಕಾರಣದಿಂದ ಏರ್ಪಟ್ಟಿತೊ ಈಗ ನಾವು ಖಂಡಿತವಾಗಿ ಹೇಳುವಂತಿಲ್ಲ.

ಕೃಷ್ಣನ ಪಕ್ಷ ಕ್ಷತ್ರಿಯಕುಲ ಎಂಬ ಒಂದು ಸಂಕುಚಿತ ಜನಸ್ತೋಮಕ್ಕೆ ಸೇರಿದ್ದಲ್ಲ ಎಂಬುದು ಒಂದು ಕಾರಣ ಇದ್ದಿರಬೇಕು. ಕೃಷ್ಣನು ಗೋಪಾಲ: ರಾಜ್ಯವನ್ನಾಳುವ ರಾಜನಲ್ಲ. ಯಜ್ಞಗಳು ಆವಶ್ಯಕವಲ್ಲವೆಂದು ಕೃಷ್ಣನ ವಾದವಾಗಿದ್ದು, ಸಾಂಪ್ರದಾಯಿಕವಾದ ಕರ್ಮಗಳು ಮುಖ್ಯ ಎಂದು ಪ್ರತಿಪಕ್ಷ ಹೇಳುತ್ತ ಇದ್ದಿತೆಂದು ಕಾಣುತ್ತದೆ. ಯಾವುದೇ ಕಾರಣದಿಂದ ಉಂಟಾದ ಈ ಪಕ್ಷಗಳ ವಿರೋಧದಲ್ಲಿ ಕೃಷ್ಣನು ಒಂದು ಪಕ್ಷದ ಪ್ರಮುಖನಾಗಿ ಅನೇಕ ದೊಡ್ಡ ಪುಟ್ಟ ಶತ್ರು ರಾಜರನ್ನು ಆ ಮೊದಲು ತೀರಿಸಿದ್ದನು. ಇದರಿಂದ ಈ ಎಲ್ಲ ವಿರೋಧಕ್ಕೂ ಇವನೇ ಕಾರಣ ಎಂಬ ಒಂದು ಭಾವನೆ ಪ್ರತಿಪಕ್ಷದಲ್ಲಿ ಹರಡಿದ್ದಿತು. ಶಿಶುಪಾಲನು ಕೃಷ್ಣನನ್ನು ನಿಂದಿಸಿ, "ಅವನು ರಾಜನೂ ಅಲ್ಲ, ವೃದ್ಧನೂ ಅಲ್ಲ, ಜ್ಞಾನಿಯೂ ಅಲ್ಲ, ಪರಾಕ್ರಮಿಯೂ ಅಲ್ಲ, ನೀತಿವಂತನೂ ಅಲ್ಲ. ಯಾವ ದೃಷ್ಟಿಯಿಂದ ತೆಗೆದುಕೊಂಡರೂ ಸಭೆಯಲ್ಲಿ ಅವನಿಗಿಂತ ಹಿರಿಯರು ಇದ್ದಾರೆ. ಅಗ್ರಮರ್ಯಾದೆ ಅವರಲ್ಲಿ ಒಬ್ಬರಿಗೆ ಸಲ್ಲಬೇಕು. ಇವನಿಗಲ್ಲ," ಎಂದು ವಾದಿಸಿದನು. ಕೃಷ್ಣನಿಗಿಂತ ಹಿರಿಯನೂ ಅಗ್ರಪೂಜೆಗೆ ನಿಜವಾಗಿ ಅರ್ಹನೂ ಎಂದು ಇವನು ಹೊಗಳಿದವರಲ್ಲಿ ಭೀಷ್ಮನು ಒಬ್ಬನು. ಆ ಭೀಷ್ಮನೇ ಶಿಶುಪಾಲನ ಈ ಮಾತನ್ನು ಒಪ್ಪಲಿಲ್ಲ; ಕೃಷ್ಣನಿಗೆ ತನಗಿಂತ ಈ ಪೂಜೆಗೆ ಹೆಚ್ಚಿನ ಅಧಿಕಾರ ಇದೆ ಎಂದು ಹೇಳಿದನು. ಆದರೆ ಶಿಶುಪಾಲನು ಸುಮ್ಮನಾಗಲಿಲ್ಲ. ತನ್ನ ಹೊಟ್ಟೆಯ ಉರಿಯನ್ನು ತೀರಿಸಿಕೊಳ್ಳುವುದಕ್ಕೆ ಕೃಷ್ಣನನ್ನು ಬಾಯಿತುಂಬ ಬಯ್ದನು. ಅವನನ್ನು ವಿರೋಧಿಸಿ ಸಹದೇವನು ಕೂಗಾಡಿದನು; ಭೀಮಸೇನನು ಉರಿದೆದ್ದನು; ಭೀಷ್ಮಾದಿಗಳು ಅವರನ್ನು ತಡೆದು, ಶಿಶುಪಾಲನ ಧಾರ್ಷ್ಟ್ಯ ಸ್ವಲ್ಪ ಹೊತ್ತಿನಮೇಲೆ ಶಮನಕ್ಕೆ ಬಂದೀತೆಂದು ನಿರೀಕ್ಷಿಸಿದರು. ಈ ನಿರೀಕ್ಷೆ ನಡೆಯಲಿಲ್ಲ. ಅವನ ಪಕ್ಷಕ್ಕೆ ಕೆಲವು ಜನ ಬೆಂಬಲವಾಗಿರುವುದೂ ಕಂಡಿತು. ಯಾಗ ವಿಧ್ಯುಕ್ತವಾಗಿ ಪೂರ್ತಿಯಾಗದಿದ್ದರೆ ರಾಷ್ಟ್ರಕ್ಕೆ ಅಶುಭ. ಈ ಕಾರಣದಿಂದ ಯುಧಿಷ್ಠಿರನು ಕಳವಳಪಡುತ್ತಿದ್ದನು. ಇಷ್ಟೆಲ್ಲ ವಾದ ನಡೆದರೂ ಕೃಷ್ಣನು ಬಹಳ ಮಾತನ್ನಾಡಲಿಲ್ಲ: ಶಿಶುಪಾಲನಿಗೆ ನನ್ನ ಮೇಲೆ ಅಸೂಯೆ ಆದ್ದರಿಂದ ಹೀಗೆ ಮಾತನಾಡುತ್ತಿದಾನೆ ಎಂದಷ್ಟೆ

ಮಧ್ಯೆ ನಾಲ್ಕು ಶಬ್ದವನ್ನು ಉಚ್ಚರಿಸಿದನು. ಶಿಶುಪಾಲನು ಇದನ್ನು ತಪ್ಪಾಗಿ ತಿಳಿದುಕೊಂಡನೆಂದು ಕಾಣುತ್ತದೆ. ಅವನು ಮತ್ತಷ್ಟು ಒದರಿದನು; ಯಾಗವನ್ನು ಕೆಡಿಸಿಯೇ ಬಿಡುತ್ತೇನೆ ಎಂಬಂತೆ ಆರ್ಭಟಿಸಿದನು. ನೋಡುವಷ್ಟು ನೋಡಿ ಕೊನೆಗೆ ಕೃಷ್ಣನು ತನ್ನ ಚಕ್ರಾಯುಧವನ್ನು ಅವನ ಕೊರಳಿಗೆ ಗುರಿಯಿಟ್ಟು ಎಸೆದನು; ಶಿಶುಪಾಲನು ಸತ್ತುಬಿದ್ದನು. ಕೃಷ್ಣನು ವಿಷ್ಣುವಿನ ಅವತಾರವೆಂದೂ, ಅವನು ಎಸೆದ ಈ ಚಕ್ರ ವಿಷ್ಣುವಿನ ಚಕ್ರವೆಂದೂ ಕಥೆಯಲ್ಲಿ ಈಗ ಕಾಣುತ್ತದೆ. ವಿಷ್ಣುವಿನ ಚಕ್ರ ಬಂದಿರುವ ಮಾತು, ಅದು ಈ ಭೂಮಿಯಲ್ಲಿ ಒಬ್ಬರ ಕೈಯಲ್ಲಿ ಇದ್ದು ಆಯುಧವಾಗಿ ಹರಿದು ಒಬ್ಬರನ್ನು ಕೊಂದಿತೆಂಬ ಮಾತು, ನಿಜವೆಂದು ನಾವು ಒಪ್ಪಬೇಕಾದದ್ದಿಲ್ಲ. ಧರ್ಮಕ್ಕಾಗಿ ಹೋರುವ ಎಲ್ಲ ಆಯುಧವೂ ವಿಷ್ಣುವಿನದೇ. ಕೃಷ್ಣನು ಒಂದು ಚಕ್ರವನ್ನು ತನ್ನ ಆಯುಧವಾಗಿ ಇಟ್ಟುಕೊಂಡಿದ್ದನು. ಒಬ್ಬರಿಗೆ ಬಿಲ್ಲು; ಒಬ್ಬರಿಗೆ ಗದೆ; ಕೃಷ್ಣನಿಗೆ ಚಕ್ರ: ಕಥೆಗೆ ಇಷ್ಟು ಸಾಕು. ಶಿಶುಪಾಲನು ತನ್ನನ್ನು ಬೈದ ಕಾರಣದಿಂದ ಕೃಷ್ಣನು ಅವನನ್ನು ಕೊಲ್ಲಲಿಲ್ಲ: ಅವನು ಬೈದನೆಂಬ ಕಾರಣದಿಂದ ಇವನಿಗೆ ಕೋಪವೇ ಬರಲಿಲ್ಲ. ಅವನು ಮಾಡಿದ ಆಕ್ಷೇಪಕ್ಕೆ ಇತರರು ಸಹಾಯಮಾಡಿ ಯಾಗಕ್ಕೆ ವಿಘ್ನವಾದರೆ ಯುಧಿಷ್ಠಿರನ ಮನಸ್ಸಿಗೆ ಕಷ್ಟವಾಗುತ್ತದೆ ಎಂಬ ಕಾರಣದಿಂದ, ಮತ್ತು ತಾನು ಸರಿಯೆಂದು ತಿಳಿದಿದ್ದ ಪಕ್ಷಕ್ಕೆ ವಿರೋಧಿಯಾದ ಪಕ್ಷದಲ್ಲಿ ಮುಂದಾಳಾಗಿ ನಿಂತು ಮೇರೆ ಮೀರಿದ ಧೃಷ್ಟತನದಿಂದ ಸ್ಥಳಸಂದರ್ಭದ ಔಚಿತ್ಯವನ್ನು ಮರೆತು ನಡೆದನೆಂಬ ಕಾರಣದಿಂದ, ಅವನು ಶಿಶುಪಾಲನ ಪ್ರಾಣವನ್ನು ತೆಗೆದನು. ದ್ಯೂತ ನಡೆಯುವ ಕಾಲಕ್ಕೆ ಕೃಷ್ಣನು ತನ್ನ ರಾಜ್ಯವನ್ನು ಒಬ್ಬ ಹಗೆಯಿಂದ ರಕ್ಷಿಸಿಕೊಳ್ಳುವ ಕೆಲಸದಲ್ಲಿ ನಿರತನಾಗಿದ್ದನು. "ಜೂಜು ನಡೆಯುವುದೆಂಬ ಮಾತು ತಿಳಿದಿದ್ದರೆ ನಾನು ಬಂದು ಅದು ಅನರ್ಥಕರವೆಂದು ತಿಳಿಸಿ ಅದನ್ನು ತಪ್ಪಿಸುತ್ತಿದ್ದೆನು," ಎಂದು ಅವನು ಆಮೇಲೆ ಯುಧಿಷ್ಠಿರನಿಗೆ ಹೇಳಿದನು. ಪಾಂಡವರು ಅರಣ್ಯಕ್ಕೆ ಹೋದ ಮೇಲೆ ಯಾದವ ಪ್ರಮುಖರು ಅವರ ಆಶ್ರಮಕ್ಕೆ ಹೋಗಿ ಅವರನ್ನು ನೋಡಿಕೊಂಡು ಹಿಂತಿರುಗಿದರು. ಅಜ್ಞಾತವಾಸ ಮುಗಿದು ಕೃಷ್ಣನು ಪಾಂಡವರ

ಪರವಾಗಿ ಸಂಧಿಯ ಮಾತನ್ನಾಡುವುದಕ್ಕೆ ದುರ್ಯೋಧನನ ಬಳಿಗೆ ಬಂದ ಸಂದರ್ಭ ಅವನು ಎಷ್ಟು ದೊಡ್ಡವನು ಎಂಬುದನ್ನು ತೋರಿಸುತ್ತದೆ. ಯುಧಿಷ್ಠಿರನಿಗೆ ಯುದ್ಧ ಬೇಕಿರಲಿಲ್ಲ; ಭೀಮನಾದರೂ ರಾಜ್ಯಕ್ಕಾಗಿ ಬಂಧು ನಾಶವಾಗಬೇಕೆಂಬ ಯೋಚನೆಯಿಂದ ಹಿಂಜರಿದನು; ಅರ್ಜುನ ನಕುಲರ ಮಾತು ಅಷ್ಟೆ. ಸಹದೇವನೊಬ್ಬನು ಯುದ್ಧ ಆಗಲೇ ಬೇಕೆಂದನು. ದ್ರೌಪದಿ, ದಾಯಾದಿಗಳು ಕೊಟ್ಟಿರುವ ಕಷ್ಟಕ್ಕೆ, ಮಾಡಿರುವ ಅವಮಾನಕ್ಕೆ, ಪ್ರತಿಯಾಗಿ ಅವರನ್ನು ಧ್ವಂಸಮಾಡುವುದೇ ಸರಿ, ಎಂದು ಕ್ರೋಧದಿಂದ ನುಡಿದಳು. ದುರ್ಯೋಧನನು ರಾಜ್ಯಲೋಭಿ; ಜ್ಞಾತಿ ವೈರಿ; ಭಾಗಕೊಡುವುದಿಲ್ಲ ಎಂದೇ ಹೇಳುವನು: ಇದನ್ನು ಎಲ್ಲರೂ ಬಲ್ಲರು. ಆದರೂ ಅವನಿಗೆ ಯಾವ ರೀತಿಯಲ್ಲಿ ಯಾವ ಮಾತನ್ನು ಹೇಳಬೇಕೊ ಅದನ್ನು ಸಮಯನೋಡಿ ಹೇಳಿ ಯುದ್ಧವನ್ನು ತಪ್ಪಿಸುವ ಬುದ್ಧಿ ಉಳ್ಳ ನಿಯೋಗಿ ಒಬ್ಬನು ಬೇಕು. ಯಾರು ಇದನ್ನು ಮಾಡಬಹುದು? ಕೃಷ್ಣನನ್ನು ಬಿಟ್ಟರೆ ಯುಧಿಷ್ಠಿರನಿಗೆ ಬೇರೆ ಯಾರೂ ಕಾಣಲಿಲ್ಲ. ಅವನು ಲೋಕಪೂಜ್ಯನಾಗಿ ಎರಡು ಪಕ್ಷಕ್ಕೂ ಹಿರಿಯನೆನಿಸಿಕೊಂಡು, ಮಾತಿನಲ್ಲಿ ಚತುರನಾಗಿದ್ದ ಕ್ಷತ್ರಿಯ ಪ್ರಮುಖನು. ತನ್ನ ನಿಯೋಗಿಯಾಗಿ ಹೋಗುವುದು ಅಂಥ ಹಿರಿಯನಿಗೆ ಕೆಲಸವಲ್ಲ. ಅದರಲ್ಲಿಯೂ ಯುಕ್ತಾಯುಕ್ತ ವಿವೇಚನೆ ಇಲ್ಲದ ದುರ್ಯೋಧನನ ಬಳಿಗೆ ಹೋಗುವುದಕ್ಕೆ ಕೃಷ್ಣನೇ? ಈ ಕಾರಣದಿಂದ ಯುಧಿಷ್ಠಿರನು ತನ್ನ ಮನಸ್ಸನ್ನೆಲ್ಲ ಹೇಳಿ, "ನೀನು ನಮಗೆಲ್ಲ ಹಿರಿಯನು. ಎರಡು ಕಡೆಗೂ ಬೇಕಾದವನು. ಈ ತೊಡಕನ್ನು ಹೇಗೆ ಸರಿಪಡಿಸುತ್ತೀಯೊ! ಯೋಚಿಸಿ ನಮಗೆ ದಾರಿತೋರಿಸು," ಎಂದನು. ಕೃಷ್ಣನಿಗೆ ಅವನ ಇಂಗಿತ ತಿಳಿಯಿತು. ಅವನು, "ನಾನು ಹೋಗಿ ಸಂಧಿಮಾಡಿಕೊಂಡು ಬರುತ್ತೇನೆ," ಎಂದನು. ಯುಧಿಷ್ಠಿರನು, "ಕೃಷ್ಣ ಇದು ನಿನಗೆ ತಕ್ಕ ಕೆಲಸವಲ್ಲ. ಆ ಅಯೋಗ್ಯನ ಬಳಿಗೆ ನೀನು ಹೋಗುವುದು ನನಗೆ ಇಷ್ಟವಿಲ್ಲ," ಎಂದನು. ಕೃಷ್ಣನು, "ಸರಿ. ನಾನೂ ಇದನ್ನು ಬಲ್ಲೆ. ಆದರೆ ಸಾಧ್ಯವಾದರೆ ಯುದ್ಧವನ್ನು ತಪ್ಪಿಸಬೇಕು. ಆ ದೊಡ್ಡ ಕಲ್ಯಾಣಕ್ಕಾಗಿ ನಾನೇ ಈ ಕೆಲಸವನ್ನು ನಡಸಬೇಕು. ಪ್ರಾಯಶಃ ನನ್ನ ಪ್ರಯತ್ನ

ವ್ಯರ್ಥವಾಗುತ್ತದೆ. ಆದರೂ ಶಾಂತಿಗಾಗಿ ಪ್ರಯತ್ನಮಾಡುತ್ತೇನೆ,'' ಎಂದನು; ಹಸ್ತಿನಾಪುರಕ್ಕೆ ಹೋದನು. ದಾರಿಯಲ್ಲಿ ಜನರು ಮಾಡಿದ ಸತ್ಕಾರಗಳನ್ನು ಸ್ವೀಕರಿಸಿ, ದುರ್ಯೋಧನನು ಮಾಡಿಸಿದ್ದ ಏರ್ಪಾಡುಗಳನ್ನು ಬಳಸಿಕೊಳ್ಳದೆ, ಹಸ್ತಿನಾಪುರದಲ್ಲಿ ವಿದುರನ ಮನೆಗೆ ಬಂದು ಇಳಿದನು. ವಿದುರನು ಕೃಷ್ಣನು ಬಂದ ಉದ್ದೇಶವನ್ನು ತಿಳಿದು,

ನೇದಂ ಸಮ್ಯಕ್ ವ್ಯವಸಿತಂ ಕೇಶವಾಗಮನಂ ತವ.
ಅರ್ಥಧರ್ಮಾತಿಗೋ ಮೂಢಃ ಸಂರಂಭೀ ಚ ಜನಾರ್ದನ
ಮಾನಘ್ನೋ ಮಾನಕಾಮಶ್ಚ ವೃದ್ಧಾನಾಂ ಶಾಸನಾತಿಗಃ
ಧರ್ಮಶಾಸ್ತ್ರಾತಿಗೋ ಮಂದೋ ದುರಾತ್ಮಾಪ್ರಗ್ರಹಂ ಗತಃ
ಅನೇಯಃ ಶ್ರೇಯಸಾಂ ಪಾಪೋ ಧಾರ್ತರಾಷ್ಟ್ರೋ ಜನಾರ್ದನ.

*   *   *

ಸಂವಿಚ್ಚ ಧಾರ್ತರಾಷ್ಟ್ರಾಣಾಂ ಸರ್ವೇಷಾಮೇವ ಕೇಶವ
ಶಮೇ ಪ್ರಯತಮಾನಸ್ಯ ತವ ಸೌಭ್ರಾತ್ರಕಾಂಕ್ಷಿಣಃ
ನ ಪಾಂಡವಾನಾಂ ಅಸ್ಮಾಭಿಃ ಪ್ರತಿದೇಯಂ ಯಥೋಚಿತಂ
ಇತಿ ವ್ಯವಸಿತಾಃ ತೇಷು ವಚನಂಸ್ಯಾತ್ ನಿರರ್ಥಕಂ
ಯತ್ರ ಸೂಕ್ತಂ ದುರುಕ್ತಂ ಚ ಸಮಂಸ್ಯಾತ್ ಮಧುಸೂದನ
ನ ತತ್ರ ಪ್ರಲಪೇತ್ ಪ್ರಾಜ್ಞೋ ಬಧಿರೇಷ್ವಿವ ಗಾಯನಃ.

*   *   *

ಸೋಯಂ ಬಲಸ್ಥೋ ಮೂಢಶ್ಚ ನ ಕರಿಷ್ಯತಿ ತೇ ವಚಃ
ತಸ್ಮಿನ್ ನಿರರ್ಥಕಂ ವಾಕ್ಯಂ ಉಕ್ತಂ ಸಂಪತ್ಸ್ಯತೇ ತವ.
ತೇಷಾಂ ಸಮುಪವಿಷ್ಟಾನಾಂ ಸರ್ವೇಷಾಂ ಪಾಪಚೇತಸಾಂ
ತವ ಮಧ್ಯಾವತರಣಂ ಮಮ ಕೃಷ್ಣ ನ ರೋಚತೇ.

*   *   *

ಅನುಪಾಸಿತ ವೃದ್ಧತ್ವಾತ್ ಶ್ರಿಯಾ ಮೋಹಾಚ್ಚದರ್ಪಿತಃ
ವಯೋ ದರ್ಪಾದಮರ್ಷಾಚ್ಚ ನ ತೇ ಶ್ರೇಯೋ ಗ್ರಹಿಷ್ಯತಿ

*   *   *

ತ್ವಯ್ಯಸ್ತಿ ಮಹತೀ ಶಂಕಾ ನ ಕರಿಷ್ಯತಿ ತೇ ವಚಃ
ತೇಷ್ವೇವಮುಪಪನ್ನೇಷು ಕಾಮಕ್ರೋಧಾನುವರ್ತಿಷು
ಸಮರ್ಥಮಪಿ ತೇವಾಕ್ಯಂ ಅಸಮರ್ಥಂ ಭವಿಷ್ಯತಿ

*   *   *

ತೇಷಾಂ ಸಮುಪವಿಷ್ಟಾನಾಂ ಬಹೂನಾಂ ದುಷ್ಟಚೇತಸಾಂ
ಕಥಂಮುದ್ಯಂ ಪ್ರಪದ್ಯೇಥಾಃ ಶತ್ರೂಣಾಂ ಶತ್ರುಕರ್ಶನ.

''ಕೇಶವ, ನೀನು ಇಲ್ಲಿಗೆ ಬಂದದ್ದು ಸರಿ ಎಂದು ತೋರಲಿಲ್ಲ. ದುರ್ಯೋಧನನು ಅರ್ಥ ಧರ್ಮಗಳನ್ನು ಮೀರಿ ನಡೆಯುವವನು; ಅವನ ಬುದ್ಧಿ ಕೆಟ್ಟಿದೆ. ಅವನು ಸಂರಂಭಿ. ಹತ್ತಿರ ಬಂದವರ ಮರ್ಯಾದೆ ಕೆಡಿಸುವವನು. ತಾನು ಮಾತ್ರ ಮರ್ಯಾದೆಯನ್ನು ಬಯಸುವವನು. ಹಿರಿಯರ ಮಾತನ್ನು ಮೀರುವವನು; ಧರ್ಮಶಾಸ್ತ್ರಗಳನ್ನು ಮೀರಿದವನು; ಮಂದಬುದ್ಧಿ, ದುರಾತ್ಮನು; ಮೊದಲೇ ನಿಶ್ಚಯಮಾಡಿಕೊಂಡಿರುವವನು; ಹೇಳಿದ ಮಾತನ್ನು ಕೇಳುವವನಲ್ಲ; ಪಾಪಬುದ್ಧಿಯವನು. ಸೋದರರಲ್ಲಿ ಸ್ನೇಹವನ್ನು ಉಳಿಸಲು ಬಂದಿರುವ ನಿನ್ನ ವಿಷಯದಲ್ಲಿ ಈ ಧಾರ್ತರಾಷ್ಟ್ರರ ನಿಶ್ಚಯ ಈಗಾಗಲೆ ಆಗಿದೆ. 'ನಾವು ಪಾಂಡವರಿಗೆ ಅವರಿಗೆ ಸಲ್ಲಬೇಕಾದದನ್ನು ಕೊಡಬಾರದು:' ಹೀಗೆ ಅವರು ನಿಶ್ಚಯಿಸಿಕೊಂಡಿದ್ದಾರೆ. ಇಂಥವರಲ್ಲಿ ನೀನು ಮಾತನಾಡುವುದು ವ್ಯರ್ಥ. ಯಾರಲ್ಲಿ ಒಳ್ಳೆಯ ಮಾತು ಹೇಳಿದರೂ ಒಂದೆ, ಕೆಟ್ಟಮಾತು ಹೇಳಿದರೂ ಒಂದೆ ಆಗುತ್ತದೊ ಅಂಥವನಲ್ಲಿ ಕಿವುಡನಲ್ಲಿ ಹೇಗೆ ಹಾಡಬಾರದೊ ಹಾಗೆ ಪ್ರಾಜ್ಞನಾದವನು ಪ್ರಲಾಪಿಸಬಾರದು. ದುರ್ಯೋಧನನು ತನ್ನ ಶಕ್ತಿಯ ಮೇಲೆ ಭಾರಹಾಕಿ ನಿಂತಿದಾನೆ; ತಾನು ಎಷ್ಟು ಶಕ್ತನೆಂಬ ಕಲ್ಪನೆಯಲ್ಲಿ ಒಳ್ಳೆಯದು ಯಾವುದು ಎಂದು ತಿಳಿಯಲಾರದೆ ಇದಾನೆ. ಅವನು ನಿನ್ನ ಮಾತನ್ನು ಕೇಳುವುದಿಲ್ಲ. ಆದಕಾರಣ ನಿನ್ನ ಮಾತು ಯಾವುದಿದೆ ಅದನ್ನು ವ್ಯರ್ಥವಾಗಿ ಆಡಿದ್ದಾಗುತ್ತದೆ. ಪಾಪಚೇತನರಾದ ಈ ಜನ ಕುಳಿತಿರುವ ಕಡೆಗೆ ನೀನು ಹೋಗಿ ನಿಲ್ಲುವುದು ನನಗೇಕೋ ರುಚಿಸಲಿಲ್ಲ. ಹಿರಿಯರನ್ನು ಪೂಜಿಸಿದವನಲ್ಲ; ಐಶ್ವರ್ಯದಿಂದ ಮೋಹದಿಂದ ಬೀಗಿರುವವನು; ವಯಸ್ಸಿನ ಬಿಗುಮಾನ ಬೇರೆ; ಆಸಹನೆ ಬೇರೆ: ದುರ್ಯೋಧನನು ನಿನ್ನ ಹಿತವಚನಕ್ಕೆ ಕಿವಿಕೊಡಲಾರನು. ಅವನಿಗೆ ನಿನ್ನ ವಿಷಯದಲ್ಲಿ ಸಂದೇಹ ಬೇರೆ; ಅವನು ನಿನ್ನ ಮಾತನ್ನು ನಡಸುವುದಿಲ್ಲ. ಕಾಮಕ್ರೋಧಾನುವರ್ತಿಯಾಗಿ ಹೀಗೆ ನಿಶ್ಚಯಮಾಡಿಕೊಂಡಿರುವ ದುರ್ಯೋಧನನಲ್ಲಿ ನೀನು ಎಷ್ಟು ಸರಿಯಾದ

ಮಾತನ್ನು ಹೇಳಿದರೂ ಅದು ವ್ಯರ್ಥವಾಗುತ್ತದೆ. ದುಷ್ಟಚೇತನರು ಅವರು ಅಷ್ಟು ಜನ ಕುಳಿತಿರಲಾಗಿ ಶತ್ರುಕರ್ಶನನಾದ ನೀನು ನಿನ್ನನ್ನು ಶತ್ರು ಎನ್ನುವ ಅವರ ಮಧ್ಯೆ ಹೇಗೆ ಹೋಗುವೆ?'' ಎಂದನು. ಕೃಷ್ಣನು,

ಧರ್ಮಾರ್ಥ ಯುಕ್ತಂ ತಥ್ಯಂ ಚ ಯಥಾತ್ವಯ್ಯುಪಪದ್ಯತೇ
ತಥಾ ವಚನಮುಕ್ತೋಽಸ್ಮಿ ತ್ವಯೈತತ್ ಪಿತೃಮಾತೃವತ್
ಸತ್ಯಂ ಪ್ರಾಪ್ತಂ ಚ ಯುಕ್ತಂ ಚ ಅಪ್ಯೇವಮೇವ ಯಥಾತ್ಥಮಾಂ
ಶೃಣುಷ್ವಾಗಮನೇ ಹೇತುಂ ವಿದುರಾವಹಿತೋ ಭವ
ದೌರಾತ್ಮ್ಯಂ ಧಾರ್ತರಾಷ್ಟ್ರಸ್ಯ ಕ್ಷತ್ರಿಯಾಣಾಂ ಚ ವೈರಿಣಾಂ
ಸರ್ವಮೇತದಹಂ ಜಾನನ್ ಕ್ಷತ್ತಃ ಪ್ರಾಪ್ತೋಽದ್ಯ ಕೌರವಾನ್
ಪರ್ಯಸ್ತಾಂ ಪೃಥಿವೀಂ ಸರ್ವಾಂ ಸಾಶ್ವಾಂಚ ರಥ ಕುಂಜರಾಂ
ಯೋ ಮೋಚಯೇತ್ ಮೃತ್ಯುಪಾಶಾತ್ ಪ್ರಾಪ್ನುಯಾತ್ ಧರ್ಮಮುತ್ತಮಂ
ಧರ್ಮಕಾರ್ಯಂ ಯತನ್‌ಶಕ್ತ್ಯಾ ನ ಚೇತ್ ಶಕ್ನೋತಿ ಮಾನವಃ
ಪ್ರಾಪ್ತೋ ಭವತಿ ತತ್ಪುಣ್ಯಂ ಅತ್ರ ಮೇ ನಾಸ್ತಿ ಸಂಶಯಃ
ಸೋಽಹಂ ಯತಿಷ್ಯೇ ಪ್ರಶಮಂ ಕ್ಷತ್ತಃ ಕರ್ತುಮಮಾಯಯಾ
ಕುರೂಣಾಂ ಸೃಂಜಯಾನಾಂಚ ಸಂಗ್ರಾಮೇ ವಿನಶಿಷ್ಯತಾಂ
ಸೇಯಮಾಪನ್ ಮಹಾಘೋರಾ ಕುರುಷ್ವೇವ ಸಮುತ್ಥಿತಾ
ಕರ್ಣ ದುರ್ಯೋಧನ ಕೃತಾ ಸರ್ವೇಹ್ಯೇತೇ ತದಾನ್ವಯಾಃ
ವ್ಯಸನೈಃ ಕ್ಲಿಶ್ಯಮಾನಂಹಿ ಯೋ ಮಿತ್ರಂ ನಾಭಿಪದ್ಯತೇ
ಅನುನೀಯ ಯಥಾಶಕ್ತಿ ತಂ ನೃಶಂಸಂ ವಿದುರ್ಬುಧಾಃ
ಆಕೇಶಗ್ರಹಣಾತ್ ಮಿತ್ರಂ ಅಕಾರ್ಯಾತ್ ಸನ್ನಿವರ್ತಯನ್
ಅವಾಚ್ಯಃ ಕಸ್ಯಚಿತ್‌ಭವತಿ ಕೃತಯತ್ನೋ ಯಥಾಬಲಂ.

* * *

ಹಿತಂ ಹಿ ಧಾರ್ತರಾಷ್ಟ್ರಾಣಾಂ ಪಾಂಡವಾನಾಂ ತಥೈವಚ
ಪೃಥಿವ್ಯಾಂ ಕ್ಷತ್ರಿಯಾಣಾಂಚ ಯತಿಷ್ಯೇಽಹಮಮಾಯಯಾ
ಹಿತೇ ಪ್ರಯತಮಾನಂ ಮಾಂ ಶಂಕೇದ್ದುರ್ಯೋಧನೋ ಯದಿ
ಹೃದಯಸ್ಯಚ ಮೇ ಪ್ರೀತಿಃ ಆನೃಣ್ಯಂಚ ಭವಿಷ್ಯತಿ.
ಜ್ಞಾತೀನಾಂ ಹಿ ಮಿಥೋ ಭೇದೇ ಯನ್ಮಿತ್ರಂ ನಾಭಿಪದ್ಯತೇ
ಸರ್ವಯತ್ನೇನ ಮಧ್ಯಸ್ಥಂ ನ ತನ್ ಮಿತ್ರಂ ವಿದುರ್ಬುಧಾಃ
ನಮಾಂ ಬ್ರೂಯುರಧರ್ಮಜ್ಞಾ ಮೂಢಾ ಅಸುಹೃದಸ್ತಥಾ
ಶಕ್ತೋ ನಾವಾರಯತ್ ಕೃಷ್ಣಃ ಸಂರಬ್ಧಾನ್ ಕುರು ಪಾಂಡವಾನ್
ಉಭಯೋಃ ಸಾಧಯನ್ನರ್ಥಂ ಅಹಮಾಗತ ಇತ್ಯುತ
ತತ್ರ ಯತ್ನಮಹಂ ಕೃತ್ವಾಗಚ್ಛೇಯಂ ನೃಷ್ವವಾಚ್ಯತಾಂ

ಮಮ ಧರ್ಮಾರ್ಥಯುಕ್ತಂ ಹಿ ಶ್ರುತ್ವಾವಾಕ್ಯಮನಾಮಯಂ
ನಚೇದಾದಾಸ್ಯತೇ ಬಾಲೋ ದಿಷ್ಟಸ್ಯ ವಶಮೇಷ್ಯತಿ

"ನಿನಗೆ ತಕ್ಕುದಾದ ಧರ್ಮಾರ್ಥಯುಕ್ತವಾದ ತಥ್ಯವಾದ ಮಾತನ್ನು ನೀನು ಒಬ್ಬ ತಂದೆ ಒಬ್ಬ ತಾಯಂತೆ ನನಗೆ ಹೇಳಿದ್ದೀಯೆ. ನೀನು ಯಾವುದನ್ನು ನನಗೆ ಹೇಳಿದ್ದೀಯೆ ಇದು ಸತ್ಯ, ಉಚಿತ, ಯುಕ್ತ. ಹೀಗಿದ್ದರೂ ನಾನು ಬಂದ ಕಾರಣವನ್ನು ಹೇಳುತ್ತೇನೆ, ಕೇಳು. ದುರ್ಯೋಧನನ ದೌರಾತ್ಮ್ಯವನ್ನು, ಅವನನ್ನು ಸುತ್ತಿಕೊಂಡಿರುವ ಕ್ಷತ್ರಿಯರ ವೈರಬುದ್ಧಿಯನ್ನು, ಇದೆಲ್ಲವನ್ನೂ ತಿಳಿದೂ ನಾನು ಕೌರವರ ಬಳಿ ಬಂದಿದೇನೆ. ಏಕೆ? ಸರ್ವ ಪೃಥಿವಿ ಆನೆ ಕುದುರೆ ರಥ ಸಮೇತವಾಗಿ ನಾಶವಾಗುವ ಗತಿ ಒದಗಿದೆ. ಅದನ್ನು ಮೃತ್ಯುಪಾಶದಿಂದ ಬಿಡಿಸುವವನು ಉತ್ತಮ ಪುಣ್ಯವನ್ನು ಗಳಿಸುತ್ತಾನೆ. ಕೈಯಲ್ಲಾದಷ್ಟು ಪ್ರಯತ್ನ ಮಾಡಿ ಒಂದು ಒಳ್ಳೆಯ ಕಾರ್ಯವನ್ನು ಸಾಧಿಸಲಾಗಲಿಲ್ಲ ಎನ್ನು. ಯತ್ನಮಾಡಿದವನು ಆ ಕಾರ್ಯವನ್ನು ಸಾಧಿಸಿದ ಪುಣ್ಯವನ್ನು ಪಡೆಯುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಆದಕಾರಣ ಸಂಗ್ರಾಮದಲ್ಲಿ ಸಾಯುವುದಕ್ಕೆ ಕಾದಿರುವ ಕುರುಸೃಂಜಯರಲ್ಲಿ ನಾನು ಸಮಾಧಾನವನ್ನು ತರಲು ನಿರ್ವಂಚನೆಯಿಂದ ಯತ್ನಮಾಡುತ್ತೇನೆ. ಕುರುಗಳಲ್ಲಿ ಈ ಮಹಾ ಘೋರವಾದ ಆಪತ್ತು ಎದ್ದಿದೆ. ಕರ್ಣ ದುರ್ಯೋಧನರು ಇದನ್ನು ಹೂಡಿದ್ದಾರೆ. ಉಳಿದವರು ಅವರ ಹಿಂದೆ ಇದ್ದಾರೆ. ದುರ್ವ್ಯಸನದಲ್ಲಿ ಬಿದ್ದಿರುವ ಮಿತ್ರನನ್ನು ಯಥಾಶಕ್ತಿಯಾಗಿ ಬುದ್ಧಿಹೇಳಿ ಯಾವನು ಉಳಿಸಲು ಯತ್ನಿಸುವುದಿಲ್ಲ ಅವನನ್ನು ಬಲ್ಲವರು ನೃಶಂಸನೆನ್ನುವರು. ಜುಟ್ಟು ಹಿಡಿದಾದರೂ ಸ್ನೇಹಿತನನ್ನು ಅಕಾರ್ಯದಿಂದ ಹಿಂತಿರುಗಿಸಬೇಕು. ಇದು ಆಗಲಿಲ್ಲ, ತನ್ನ ಶಕ್ತಿ ಇದ್ದಷ್ಟು ಈ ಪ್ರಯತ್ನ ಮಾಡಿದವನು ಜನರ ನಿಂದೆಯಿಂದಲಾದರೂ ತಪ್ಪಿಸಿಕೊಳ್ಳುವನು. ಆದಕಾರಣ ನಾನು ಪಾಂಡವರ ಹಿತವನ್ನು ಹೇಗೊ ಹಾಗೆ ಧೃತರಾಷ್ಟ್ರಕುಮಾರರ ಹಿತವನ್ನೂ, ಹಾಗೆಯೆ ಲೋಕದ ಅರಸರ ಹಿತವನ್ನೂ, ಸಾಧಿಸಲು ನಿರ್ವಂಚನೆಯಿಂದ ತೊಡಗಿದ್ದೇನೆ. ತನ್ನ ಹಿತವನ್ನು ಸಾಧಿಸಲು ಹೊರಟನನ್ನ ವಿಷಯದಲ್ಲಿ ದುರ್ಯೋಧನನು ಸಂದೇಹ ಪಟ್ಟನಾದರೆ ಪಡಲಿ.

ನನ್ನ ಮನಸ್ಸಿಗಾದರೂ ತೃಪ್ತಿಯಾಯಿತು; ನನ್ನ ಕೆಲಸ ನಾನು ಮಾಡಿದೆನೆಂಬ ಸಮಾಧಾನ ದೊರೆಯಿತು. ಬಂಧುಗಳಲ್ಲಿ ಎರಡು ಪಕ್ಷದ ಮಧ್ಯೆ ವಿವಾದ ಉಂಟಾದಾಗ ಯಾವನು ಸರ್ವಯತ್ನದಿಂದ ಮಧ್ಯಸ್ಥ ಮಾಡದೆ ಬಿಡುತ್ತಾನೆ, ಬಲ್ಲವರು ಅವನನ್ನು ಮಿತ್ರನೆನ್ನುವುದಿಲ್ಲ. ಕುರು ಪಾಂಡವರು ಕ್ರೋಧವಶರಾದಾಗ ಅವರನ್ನು ತಡೆಯುವ ಶಕ್ತಿಯಿದ್ದೂ ಕೃಷ್ಣನು ಸುಮ್ಮನಿದ್ದನು, ಎಂದು ಅಧರ್ಮಜ್ಞರೂ, ವಿಷಯ ಪರಿಜ್ಞಾನವಿಲ್ಲದವರೂ ಆದ ನನ್ನ ಹಗೆಗಳು ನನ್ನನ್ನು ದೂರದೆ ಇರಲಿ. ಎರಡು ಪಕ್ಷದ ಶುಭವನ್ನೂ ಸಾಧಿಸುವುದಕ್ಕೆ ನಾನು ಬಂದವನು. ಈ ಪ್ರಯತ್ನವನ್ನು ಮಾಡಿ ಜನರ ಬಾಯಿಂದ ತಪ್ಪಿಸಿಕೊಳ್ಳುತ್ತೇನೆ. ಧರ್ಮಾರ್ಥಯುಕ್ತವಾದ, ಹಿತಕರವಾದ, ನನ್ನ ಮಾತನ್ನು ಕೇಳದೆ ಹೋಗುವುದಾದರೆ ದುರ್ಯೋಧನನು ಹುಡುಗುಬುದ್ಧಿಯಿಂದ ಅವನ ವಿಧಿಯ ವಶವಾಗುತ್ತಾನೆ,'' ಎಂದನು.

ಕೃಷ್ಣನು ಕೌರವ ಪಾಂಡವರ ಯುದ್ಧ ನಡೆಯಬೇಕೆಂದೇ ಉದ್ದೇಶಿಸಿದನು ಎಂದೂ ಸಂಧಿಯಾಗಲೆಂದು ಅವನು ನಿಜವಾಗಿ ಯತ್ನಮಾಡಲಿಲ್ಲ ಎಂದೂ ಆಮೇಲೆ ಭಾರತದ ಕಥನ ಮಾರ್ಪಟ್ಟಿತು. ವಿಷ್ಣುವಿನ ಅವತಾರವಾಗಿ ಭೂಭಾರವನ್ನು ಇಳಿಸುವ ಯೋಚನೆ ಮಾಡಿದ ಕೃಷ್ಣನು ನಿಜವಾಗಿ ಯುದ್ಧವನ್ನು ತಪ್ಪಿಸಹೋಗುವನೆ? ಇಲ್ಲ. ಯುದ್ಧ ನಡೆಯಬೇಕೆಂದೇ ಅವನ ಅಭಿಮತ. ಹಾಗಾದರೆ ಈ ಸಂಧಿಯ ಮಾತನ್ನು ತೆಗೆದುಕೊಂಡು ಹೋಗಿ ಮನಸ್ಸಿನಲ್ಲಿ ಇಲ್ಲದ ಅರ್ಥವನ್ನು ನಾಲಗೆಯಿಂದ ಆಡಿ ಇಷ್ಟೆಲ್ಲ ಕಷ್ಟವನ್ನು ಏಕೆ ಪಟ್ಟನು? ಓ ಅವನು ಕಪಟನಾಟಕ ಸೂತ್ರಧಾರಿ! ಹೀಗೆಂದು ಆಮೇಲಿನ ಕಥನ ಕೌಶಲ ಅವನ ಸ್ವಭಾವವನ್ನು ವಿವರಿಸಿತು. ಕೃಷ್ಣನನ್ನು ಕುರಿತ ಈ ಕಲ್ಪನೆ ಒಂದು ಪ್ರಚಾರದಲ್ಲಿರಬಹುದು; ಅವನ ದಿವಸದಲ್ಲೂ ಇದ್ದಿರಬಹುದು. ಆದರೆ ಅವನು ಸಂಧಿಬೇಡ ಎಂದು, ಯುದ್ಧ ಆಗಲಿ ಎಂದು, ಬಯಸಿದನೆಂದು ಹೇಳುವ ಮಾತು ಅವನು ವಿದುರನಿಗೆ ಹೇಳಿದಮೇಲಣ ವಾಕ್ಯಗಳಿಂದ ತಪ್ಪೆನಿಸುತ್ತದೆ. ದ್ರೌಪದಿ, ತನಗೆ ಅವಮಾನ ಮಾಡಿದ ಧೃತರಾಷ್ಟ್ರ ಕುಮಾರರೊಂದಿಗೆ ಯುದ್ಧವಲ್ಲದೆ ಸಮಾಧಾನ ತಕ್ಕದಾದೀತೆ, ಎಂದು ಹೇಳಿ ಕಣ್ಣೀರು ಸುರಿಸಿದಾಗ

ಕೃಷ್ಣನು, "ಅಕ್ಕ, ಅಳಬೇಡ. ನಿನಗೆ ಅವಮಾನ ಮಾಡಿದವರ ಮನೆಯ ಹೆಣ್ಣುಮಕ್ಕಳು ನಿನ್ನಂತೆ ಕಣ್ಣೀರು ಸುರಿಸುತ್ತಾರೆ. ತಡೆದುಕೊ," ಎಂದನು, ಎಂದು ಕಥೆಯಲ್ಲಿ ಉಕ್ತವಾಗಿದೆ. ಕೃಷ್ಣನು ಈ ಶಬ್ದಗಳನ್ನು ಆಡಿದರೂ ಆಡದಿದ್ದರೂ, ಸಂಧಿಯ ಮಾತು ದುರ್ಯೋಧನನಿಗೆ ಬಹುಪಾಲು ಒಪ್ಪಿಗೆಯಾಗುವುದಿಲ್ಲ, ಬಹುಪಾಲು ಯುದ್ಧವೇ ನಡೆಯಬೇಕಾದೀತು, ಎಂದು ಅವನು ತಿಳಿದಿದ್ದನು. ಆದರೆ, ಈ ತಿಳಿವಿನ ಕಾರಣ ಅವನ ಉದ್ದೇಶ ಹಾಗೆ ಇದ್ದದ್ದಲ್ಲ; ಅವನ ಆಶೆ ಹಾಗೆ ಇದ್ದದ್ದಲ್ಲ. ಅವನು ಮನುಷ್ಯರನ್ನು ಬಲ್ಲನು; ದುರ್ಯೋಧನನನ್ನು ಬಹುಕಾಲದಿಂದ ಕಂಡಿದ್ದನು; ತಾನು ಹೋಗುತ್ತಿರುವ ಪ್ರಯಾಣ ವ್ಯರ್ಥವಾದೀತೆಂದು ಅವನಿಗೆ ಅರಿವು ಉಂಟು. ಆದರೂ ಅವನು ಸಂಧಿ ಆದರೆ ಆಗಲಿ ಎಂಬ ಶತಾಂಶದ ಆಶೆಗಾಗಿ ಅದಷ್ಟು ಪ್ರಯತ್ನಮಾಡಿದನು. ಕೃಷ್ಣನು ಪಾಂಡವರ ಪಕ್ಷಪಾತಿ ಎಂದು ಹೇಳುವುದು ವಾಡಿಕೆ. ಅವನ ಮನಸ್ಸಿನಲ್ಲಿ ಪಾಂಡವರ ಹಿತ ಮುಖ್ಯ ಸ್ಥಾನವನ್ನು ಪಡೆದಿದ್ದುದು ನಿಜ; ಆದರೆ ಅವನು ಅದನ್ನು ಸಾಧಿಸುವುದಕ್ಕೆ ಇತರರ ಹಿತವನ್ನು ಕಡೆಗಣಿಸಲಿಲ್ಲ. ಸಂಧಿಯ ಮಾತನ್ನಾಡುವಾಗ ಪಾಂಡವರ ಹಿತ ಎಷ್ಟೋ ಅಷ್ಟೇ ಮುಖ್ಯವಾಗಿ ಕೌರವರ ಹಿತವನ್ನೂ ಲೋಕದ ಎಲ್ಲ ಕ್ಷತ್ರಿಯರ ಹಿತವನ್ನೂ ಅವನು ಕೋರಿದನು. ಕೃಷ್ಣನಿಗೆ ಇದು ಒಂದು ಹೊಣೆಯೆಂದು ಕಂಡಿತು. ಲೋಕ ತನ್ನಿಂದ ಈ ಮಿತ್ರ ಕಾರ್ಯವನ್ನು ನಿರೀಕ್ಷಿಸುತ್ತದೆ ಎಂದು ಅವನು ತಿಳಿದಿದ್ದನು. ಆದಕಾರಣ ಅದನ್ನು ಅವನು ಕೈಗೊಂಡನು. ದುರ್ಯೋಧನನು ಸಂಧಿಗೆ ಒಡಂಬಟ್ಟನೇ, ಎಷ್ಟು ಅನರ್ಥ ತಪ್ಪಿತು; ಎಷ್ಟು ಶುಭ ಕೈಗೂಡಿತು! ಒಪ್ಪಲಿಲ್ಲ, ವಿಧಿಯಿಲ್ಲ. ಅವನು ಅವನ ಅದೃಷ್ಟದಂತೆ ಕೆಟ್ಟದನ್ನು ಉಣ್ಣುತ್ತಾನೆ. ಪಾಂಡವರು ವಿಧಿಯಿಲ್ಲದೆ ಒಂದಷ್ಟು ಕಷ್ಟಪಟ್ಟು ತಮ್ಮ ಭಾಗ್ಯವನ್ನು ಗಳಿಸಬೇಕಾಗುತ್ತದೆ. ತಾನು ಎರಡು ಪಕ್ಷಕ್ಕೂ ಬೇಕಾದವನೂ ಹಿರಿಯನೂ ಆದದ್ದಕ್ಕೆ ತಕ್ಕಂತೆ ತನ್ನಿಂದ ಆದ ಸಂಧಿಯತ್ನವನ್ನು ಮಾಡಿದ್ದಾಯಿತು. ಈ ಯತ್ನವನ್ನೇ ಮಾಡದೆ ಯುದ್ಧ ನಡೆದು ಆಮೇಲೆ "ಅಯ್ಯೊ, ಯತ್ನಮಾಡಿದ್ದರೆ ಸಂಧಿ ಆಗುತ್ತಿದ್ದಿತೇನೊ!" ಎಂದು ಚಿಂತಿಸಿ ಏನುಫಲ? ಸಂಧಿ ಆಗುವ ಆಶೆ ಎಷ್ಟೇ ಕಡಮೆಯಾದರೂ ಈಗ

ಮಾಡುವ ಯತ್ನವನ್ನು ಮಾಡಿದರೆ, ಆಮೇಲೆ ವ್ಯರ್ಥ ಮನಸ್ಸನ್ನು ಕೊರೆಯುವ ಕಾರಣವಿಲ್ಲ.

ಸಂಧಿಯ ಮಾತನ್ನು ಆಡುವ ಹೊತ್ತಿನಲ್ಲೂ ಕೃಷ್ಣನು ಇದೇ ಪರಿಶುದ್ಧಭಾವದಿಂದ ವರ್ತಿಸಿದನು: ಧೃತರಾಷ್ಟ್ರನಿಗೆ, "ಸಂಧಿಯೆ ತಕ್ಕದು; ಯುದ್ಧದಿಂದ ಪ್ರಯೋಜನವಿಲ್ಲ," ಎಂಬ ಅರ್ಥದ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿಯೂ ನಯವಾಗಿಯೂ ತಿಳಿಸಿದನು. ಧೃತರಾಷ್ಟ್ರನು, "ಸಂಧಿಯ ಮಾತು ತನಗೆ ಒಪ್ಪಿಗೆ; ಆದರೆ ದುರ್ಯೋಧನನನ್ನು ನೀನೇ ಒಪ್ಪಿಸಬೇಕು," ಎಂದಾಗ ಕೃಷ್ಣನು ದುರ್ಯೋಧನನನ್ನು ತುಂಬ ಪ್ರೀತಿಯಿಂದಲೆ ನುಡಿಸಿದನು; ಅವನನ್ನು ಕುರುಕುಲದ ಶ್ರೇಷ್ಠ ಎಂದು ಕರೆದನು; "ನೀನು ಸಾಮಾನ್ಯನಲ್ಲ. ಶಾಸ್ತ್ರಗಳನ್ನು ಕೇಳಿರುವವನು. ಸದ್ವೃತ್ತವಂತನು, ಗುಣಶಾಲಿ. ಇಂಥವನು ದುಷ್ಟರ ಮಾರ್ಗವನ್ನು ಹಿಡಿಯಬಾರದು. ನೀನು ಯೋಚಿಸಿರುವ ಮಾರ್ಗ ದುಷ್ಟರದು. ನಿನಗೆ ತಕ್ಕದ್ದಲ್ಲ. ಶಾಂತಿ ಎಲ್ಲರಿಗೂ ಸುಖವನ್ನು ತರುವುದು. ಯುದ್ಧ ಯಾರಿಗೂ ಲಾಭಕರವಲ್ಲ. ನಿನ್ನ ಹಿರಿಯರಿಗೆ ಸಂಧಿ ಇಷ್ಟವಾಗಿದೆ. ನೀನು ಅವರ ಇಷ್ಟವನ್ನು ನಡಸು," ಎಂದು ಬಹುವಿಶ್ವಾಸದ ಮಾತಿನಿಂದ, ಹೊಗಳಿಕೆ ಎಚ್ಚರಿಕೆಗಳನ್ನು ಬೆರಸಿ, ಮಾತನಾಡಿದನು. ಯುದ್ಧ ನಡೆಯದೆ ಕೌರವ ಪಾಂಡವರ ಮಧ್ಯದ ವಿವಾದ ಮುಗಿಯುವುದಿಲ್ಲವೆಂಬುದು ಸ್ಪಷ್ಟವಾದಾಗ ಕೃಷ್ಣನು ಹಿರಿಯರನ್ನು ನೋಡಿ, "ಇಲ್ಲಿ ನಡೆದ ಸಂಗತಿಯೆಲ್ಲ ನಿಮಗೆ ಸ್ವತಃ ತಿಳಿದಿದೆ. ದುರ್ಯೋಧನನು ಸರಿಯಾಗಿ ನಡೆಯುತ್ತಿಲ್ಲ. ಧೃತರಾಷ್ಟ್ರನು ತನಗೆ ಅವನನ್ನು ತಿದ್ದುವ ಶಕ್ತಿಯಿಲ್ಲವೆಂದು ಹೇಳುತ್ತಿದ್ದಾನೆ. ಇನ್ನು ನಾನು ಏನನ್ನೂ ಮಾಡುವಂತಿಲ್ಲ. ಧರ್ಮರಾಜನ ಬಳಿಗೆ ಹಿಂತಿರುಗುತ್ತೇನೆ," ಎಂದು ಹೊರಟನು. ಮಧ್ಯೆ ಬರುವ ವಿಶ್ವರೂಪದರ್ಶನದ ಮಾತು ಆಮೇಲೆ ಸೇರಿದ್ದು ಎಂದು ಈ ಮೊದಲೇ ಸೂಚಿಸಿದೆ. ಈ ನಯದ ಮಾತನ್ನು ಹೇಳಿ, ಹಿರಿಯರ ಅನುಮತಿಯನ್ನು ಪಡೆದು ಹೊರಡುವುದರಲ್ಲಿಯೂ ಕೃಷ್ಣನು ನಿಯೋಗಿಯ ಧರ್ಮದ ಅತ್ಯುನ್ನತ ಪದ್ಧತಿಯೊಂದನ್ನು ಅನುಸರಿಸಿದನು ಅಥವಾ ನಿರ್ಮಿಸಿದನು. ದುರ್ಯೋಧನನ ದರ್ಪಕ್ಕೆ ಕರ್ಣನು ಜೊತೆಗಿರುವನೆಂಬುದು ಮುಖ್ಯ

ಕಾರಣವೆಂದು ಕೃಷ್ಣನಿಗೆ ಗೊತ್ತು. ಆದ್ದರಿಂದ ಅವನು ಕರ್ಣನಿಗೆ ಅವನ ಜನ್ಮ ವಿಚಾರವನ್ನು ತಿಳಿಸಿ ಅವನನ್ನು ದುರ್ಯೋಧನನ ಪಕ್ಷದಿಂದ ಬಿಡಿಸಲು ಪ್ರಯತ್ನಮಾಡಿದನು. ಆ ಮೇಲಿನ ಕಥಕರು ಇದನ್ನು ಪಾಂಡವರ ಪಕ್ಷಪಾತದಿಂದ ಕೃಷ್ಣನು ನಡಸಿದ ಒಂದು ತಂತ್ರ ಎಂಬಂತೆ ಬೆಳಸಿದರು. ಕಥೆಯ ಮುಖ್ಯ ಸೂತ್ರವನ್ನು ಹಿಡಿದು ನೋಡಿದರೆ ಕೃಷ್ಣನು ಇದನ್ನು ಮಾಡಿದ್ದಕ್ಕೆ ಕಾರಣ ಪಾಂಡವ ಪಕ್ಷಪಾತವಲ್ಲ. ಲೋಕದ ಹಿತಾಕಾಂಕ್ಷೆ, ಶಾಂತಿಪಕ್ಷಪಾತ. ಅವನು ಕರ್ಣನಿಗೆ ಈ ಸಂಗತಿಯನ್ನು ತಿಳಿಸಿದ ಮಾತೂ ಗಂಭೀರವಾಗಿದೆ ಹೊರತಾಗಿ ಕುತಂತ್ರದ ಮಾತಾಗಿಲ್ಲ. ಪಾಂಡವ ಪಕ್ಷಪಾತಿ ಧರ್ಮರಾಯನಿಗೆಂದು ಉದ್ದೇಶಿಸಿದ್ದ ಸಿಂಹಪೀಠವನ್ನು ಕರ್ಣನದಾಗಿ ಮಾಡುವೆನು ಎಂದಿರಬಹುದೆ? ಅಲ್ಲದೆ ಇವನ ಮಾತನ್ನು ಕೇಳಿದ ಕರ್ಣನು ಅದನ್ನು ಸಹಜವಾದ ಒಂದು ಸೂಚನೆಯೆಂದು ತಿಳಿದನು ಹೊರತಾಗಿ ಕುತಂತ್ರದ ಮಾತು ಎಂದು ಶಂಕಿಸಿ ಕೇಳಲಿಲ್ಲ; ಕೃಷ್ಣನ ಮಾತು ವಾಸ್ತವದಲ್ಲಿ ಅವನು ತನ್ನ ವಿಷಯದಲ್ಲಿ ಪ್ರೇಮದಿಂದ, ಹಿತಕಾಂಕ್ಷೆಯಿಂದ, ಮನಃಪೂರ್ವಕವಾಗಿ ನುಡಿಯುತ್ತಿರುವುದೆಂಬುದನ್ನು ಒಪ್ಪಿದನು. ಆದರೆ ಆ ಸೂಚನೆಯನ್ನು ಅಂಗೀಕರಿಸಲಾರದೆ ಅದಕ್ಕೆ ಕಾರಣವನ್ನು ತಿಳಿಸಿ ಕೃಷ್ಣನನ್ನು ಅಪ್ಪಿಕೊಂಡು ಅವನ ಅಪ್ಪಣೆಯನ್ನು ಪಡೆದು ಹೊರಟನು.

ಕೃಷ್ಣನಿಗೆ ಯುದ್ಧ ಇಷ್ಟವಲ್ಲ ಎನ್ನುವುದಕ್ಕೆ ಬಹು ಪ್ರಬಲವಾದ ಮತ್ತೊಂದು ಪ್ರಮಾಣ ಅವನು ಯುದ್ಧದಲ್ಲಿ ಆಯುಧ ಹಿಡಿಯುವುದಿಲ್ಲ ಎಂದು ನಿಶ್ಚಯಮಾಡಿಕೊಂಡದ್ದು. ಯಾದವರ ಕಡೆಯಿಂದ ಯುದ್ಧಕ್ಕೆ ಬಂದವರು ದುರ್ಯೋಧನನ ಕಡೆಗೆ ಸೇರಿದರು. ಕೃಷ್ಣನು ಪಾಂಡವರ ಪಕ್ಷಕ್ಕೆ ನಿಂತನು. ಆಯುಧ ಹಿಡಿಯುವವನಲ್ಲ: ಆದಕಾರಣ ಯುಧಿಷ್ಠಿರನು ಅವನನ್ನು ಅರ್ಜುನನ ಸಾರಥಿಯಾಗಿರಬೇಕೆಂದು ಪ್ರಾರ್ಥಿಸಿದನು. ರಥಿಕನೊಬ್ಬನಿಗೆ ಸಾರಥಿಯಾಗುವುದು ಕಡಮೆಯ ಒಂದು ಸ್ಥಾನವೆಂಬಂತೆ ಆಮೇಲಿನ ಕಥನ ಬೆಳೆದಿದೆ. ಆದರೆ ಕುರುಕ್ಷೇತ್ರದ ಯುದ್ಧದ ಕಾಲದಲ್ಲಿ ರಥಿಕನು ಶ್ರೇಷ್ಠ, ಸಾರಥಿ ಕಡಮೆ, ಎಂಬ ಭಾವ ಇದ್ದಂತೆ ಕಾಣುವುದಿಲ್ಲ. ರಥಿಕನ ಜಯಕ್ಕೆ ಸಾರಥ್ಯ ಒಂದು ಮುಖ್ಯ

ಸಾಧನ; ಶಲ್ಯನಂಥ ಅಭಿಷಿಕ್ತ ರಾಜನು ಕರ್ಣನಿಗೆ ಸಾರಥಿಯಾದದ್ದೇ ಇದಕ್ಕೆ ಸಾಕ್ಷಿ. ಇದು ನಿಜವಾದರೂ ಅರ್ಜುನನಿಗೆ ಸಾರಥಿಯಾಗಲು ಒಪ್ಪಿದ್ದು ಕೃಷ್ಣನಲ್ಲಿ ಅತ್ಯಂತ ವಿನಯದ ವರ್ತನೆ ಎನ್ನುವುದರಲ್ಲಿ ಸಂದೇಹವಿಲ್ಲ. ಯುದ್ಧ ಇಷ್ಟವಲ್ಲದ ಸಂಗತಿ; ಆದರೆ ಅಧರ್ಮಿಗಳು ಹಟಮಾಡಿ ಧರ್ಮಿಗಳಿಗೆ ಯುದ್ಧ ಹೊರತು ಬೇರೆ ದಾರಿ ಇಲ್ಲವಾದಾಗ, ಅನಿಷ್ಟವಾದರೂ ಯುದ್ಧವನ್ನು ಮಾಡಬೇಕು; ಧರ್ಮಿಷ್ಠರು ಧರ್ಮ ಸಂಸ್ಥಾಪನೆಗಾಗಿ ಅದರಲ್ಲಿ ಭಾಗ ವಹಿಸಬೇಕು. ಯುದ್ಧವೆಂದಮೇಲೆ ಜೀವಗಳು ಹೋಗದೆ ವಿಧಿಯಿಲ್ಲ; ಆದರೆ ಮನಸ್ಸಿಲ್ಲದವನು ಅದರಲ್ಲಿ ತನ್ನ ಕೈಯಿಂದ ಜೀವವನ್ನು ತೆಗೆಯಬೇಕಾದದ್ದಿಲ್ಲ. ಜೀವ ತೆಗೆಯುವ ಒಂದು ಕೆಲಸವನ್ನು ಉಳಿದು ಬೇರೆ ಯಾವುದೇ ರೀತಿಯಲ್ಲಿ ಸೇವೆ ಸಲ್ಲಿಸ ಬಹುದು; ಅದೂ ಧರ್ಮದ ಪಕ್ಷಕ್ಕೆ ಸಲ್ಲಿಸಿದ ಸೇವೆಯೇ ಸರಿ. ಹೀಗೆ ಕೃಷ್ಣನು ತನ್ನ ಜೀವನದಲ್ಲಿ ಧರ್ಮದ ಸೇವೆಯೊಂದಿಗೆ ಅಹಿಂಸಾತತ್ತ್ವ ವನ್ನು ಸಮನ್ವಯ ಮಾಡಿದನು.

ಯುದ್ಧದಲ್ಲಿ ಪಾಂಡವರಿಗೆ ಜಯವಾಗುವುದಕ್ಕಾಗಿ ಕೃಷ್ಣನು ಅನೇಕ ತಂತ್ರಗಳನ್ನು ಮಾಡಿದಂತೆ ಆ ಮೇಲಿನ ಕಥನ ಇತಿಹಾಸವನ್ನು ಬೆಳೆ ಯಿಸಿತು. ಇದೆಲ್ಲ ಕೃಷ್ಣನನ್ನು ಕುರಿತ ಆರಂಭದ ಚರಿತೆಯೊಂದಿಗೆ ಹೊಂದುವುದಿಲ್ಲ. ಈ ಸಂಗತಿಗಳನ್ನು ನಾವು ಇಲ್ಲಿ ಪ್ರಸ್ತಾಪಿಸಬೇಕಾಗಿಲ್ಲ. ಹಾಗೆಯೆ ಕೃಷ್ಣನು ಭೀಮನನ್ನು ಧೃತರಾಷ್ಟ್ರನ ಕೈಯಿಂದ ಉಳಿಸಿದ ನೆಂಬುದು, ಗಾಂಧಾರಿ ಕೃಷ್ಣನಿಗೆ ಶಾಪಕೊಟ್ಟಳು ಎಂಬುದು, ಇವೂ ಆಮೇಲೆ ಸೇರಿದ ಮಾತುಗಳು. ಗದಾಯುದ್ಧದ ರಾತ್ರಿ ಅಶ್ವತ್ಥಾಮನು ಪಾಂಡವರನ್ನು ಕೊಲ್ಲಬೇಕೆಂದು ಬಂದಾಗ ಕೃಷ್ಣನು ವ್ಯಾಜಾಂತರದಿಂದ ಅವರನ್ನು ಬೇರೆಯ ಕಡೆಗೆ ಕರೆದುಕೊಂಡು ಹೋಗಿದ್ದನೆಂಬುದು ಸಹಜ ವಾಗಿ ಕಾಣುತ್ತದೆ. ಯುದ್ಧ ಮುಗಿದನಂತರ ಯುಧಿಷ್ಠಿರನಿಗೆ ಪಟ್ಟಾಭಿಷೇಕ ಆಗುವುದಕ್ಕೆ ಏರ್ಪಡಿಸಿ, ದೊರೆಯಾಗುವವನು ಭೀಷ್ಮನಿಂದ ರಾಜಧರ್ಮದ ಉಪದೇಶವನ್ನು ಪಡೆಯುವಂತೆ ಕೃಷ್ಣನು ಪ್ರೇರಿಸಿದನು. ಯುಧಿಷ್ಠಿರನು ರಾಜ್ಯವನ್ನಾಳುತ್ತ ಬಾಳಿದ ದಿವಸದಲ್ಲಿ ಕೃಷ್ಣನು ತನ್ನಂತೆ ತಾನು ದ್ವಾರಕಿಯಲ್ಲಿರುತ್ತಿದ್ದನು. ಆದರೂ ಎಲ್ಲ ವಿಷಯದಲ್ಲಿಯೂ

ಪಾಂಡವ ಸೋದರರು ಅವನ ಇಚ್ಛೆಯನ್ನು ತಿಳಿದು ನಡೆಯುತ್ತಿದ್ದರು. ಕಾಲ ಹರಿದು ಯಾದವರಲ್ಲಿ ಕಲಹಗಳು ಹುಟ್ಟಿ ಕೃಷ್ಣನ ಜ್ಞಾತಿಗಳು ಒಬ್ಬರನ್ನೊಬ್ಬರು ಧ್ವಂಸಮಾಡಿ ಯದುಕುಲ ದುಃಖಕ್ಕೀಡಾಯಿತು. ಕೃಷ್ಣನಿಗೆ ಜೀವನ ಸಾಕೆನಿಸಿತೆಂದು ಕಾಣುತ್ತದೆ. ಜರಾ ಎಂಬ ಒಬ್ಬ ಬೇಡನು, ಮಲಗಿದ್ದ ಕೃಷ್ಣನ ಕಾಲನ್ನು ದೂರದಿಂದ ನೋಡಿ ಒಂದು ಹಕ್ಕಿ ಎಂದು ಬಗೆದು, ಒಂದು ಬಾಣದಿಂದ ಹೊಡೆದನೆಂದೂ ಅದರಿಂದ ಕೃಷ್ಣನು ತೀರಿಕೊಂಡನೆಂದೂ ಕಥೆ ಇದೆ. ಬೇಡನೊಬ್ಬನು ಹೊಡೆದಿರಬಹುದು; ಇಲ್ಲವೆ ಮುಪ್ಪು ಬಂದು ಕಾಲಿನಲ್ಲಿ ಏನೊ ಗಾಯವಾಗಿ ಕೃಷ್ಣನು ದೇಹದಿಂದ ಮುಕ್ತನಾಗಿರಬಹುದು. ಅಂತೂ ಪಾಂಡವರು ಇನ್ನೂ ರಾಜ್ಯವನ್ನು ಆಳುತ್ತಿರುವ ಕಾಲದಲ್ಲಿ ಒಂದು ದಿನ ಕೃಷ್ಣನು ದಿವಂಗತನಾದನೆಂಬ ಸುದ್ದಿ ಯುಧಿಷ್ಠಿರನಿಗೆ ಬಂದಿತು. ಇವರಿವರಿಗೆ ಇದ್ದ ಪ್ರೀತಿಯಲ್ಲಿ ಯುಧಿಷ್ಠಿರನಿಗೆ ತನ್ನ ಬಾಳುವೆ ಇನ್ನು ರುಚಿಸಲಾರದೆ ಹೋಯಿತು. ನಂಟನ ಕಾರಣದಿಂದ, ಅದಕ್ಕೂ ಮಿಗಿಲಾಗಿ ಒಟ್ಟಿನಲ್ಲಿ ಧರ್ಮಕ್ಕೆ ಕಟ್ಟುಬಿದ್ದವರೆಂಬ ಕಾರಣದಿಂದ, ಕೃಷ್ಣನು ಪಾಂಡವರ ಪ್ರಿಯ ಬಂಧು, ಮುಖ್ಯ ಸಹಾಯಕ, ಏಕಮಾತ್ರ ಗತಿ ಆದನು; ತಾನಾಗಿ ವಹಿಸಿಕೊಂಡ ಹೊಣೆಯನ್ನು ಹೊತ್ತು ಅವರನ್ನು ಕಷ್ಟದಿಂದ ಪಾರು ಮಾಡಿ ರಾಜ್ಯ ಪಾಲನಕ್ಕೆ ನಿಲ್ಲಿಸಿ ತನ್ನ ಮನಸ್ಸನ್ನು ಒಪ್ಪಿಸಿದನು. ಕೃಷ್ಣನು ದೇವರ ಅವತಾರ ಅಹುದೆ ಅಲ್ಲವೆ, ಈ ಪ್ರಶ್ನೆ ದೊಡ್ಡದಲ್ಲ. ದೇವರೇ ಭೂಮಿಗೆ ಇಳಿದು ಬಂದರೆ ಇಂಥ ಸಂದರ್ಭದಲ್ಲಿ ಹೇಗೆ ನಡೆದಿರಬಹುದು ಎಂದರೆ ಕೃಷ್ಣನು ನಡೆದಂತೆ ಎನ್ನದೆ ಬೇರೆ ಉತ್ತರವಿಲ್ಲ. ಕೃಷ್ಣನ ಪರಾಕ್ರಮ, ಕೃಷ್ಣನ ಧರ್ಮಪಕ್ಷಪಾತ, ಕೃಷ್ಣನ ಶಾಂತಿಪ್ರೇಮ, ಕೃಷ್ಣನ ಸೌಜನ್ಯ, ದಾಕ್ಷಿಣ್ಯ, ವಿನಯ, ಆಶ್ರಿತವಾತ್ಸಲ್ಯ, ಕೃಷ್ಣನೊಬ್ಬನಿಗೆ ಸಾಧ್ಯವೇ ಹೊರತಾಗಿ ಉಳಿದವರಿಗೆ ಸಾಧ್ಯವಲ್ಲ.

## ೨೨

## ಬಲರಾಮ

ಕೃಷ್ಣನ ಜೊತೆಯಲ್ಲಿ ಅವನ ಅಣ್ಣ ಬಲರಾಮನ ಚಿತ್ರ ಅಷ್ಟೇನೂ ಸ್ಪಷ್ಟವಾಗಿ ಅಲ್ಲದಿದ್ದರೂ ತಕ್ಕಷ್ಟು ಚೆನ್ನಾಗಿ ಕಾಣುವ ಆಕಾರವಾಗಿ

ನಿಲ್ಲುತ್ತದೆ. ವಯಸ್ಸಿನಿಂದ ಹಿರಿಯನಾದರೂ ಬಲರಾಮನು ತಮ್ಮನಾದ ಕೃಷ್ಣನು ಜನರನ್ನು ನಡಸಿಕೊಳ್ಳುವುದರಲ್ಲಿ ತನಗಿಂತ ಚತುರನೆಂಬುದನ್ನು ಚಿಕ್ಕಂದೇ ಕಂಡುಕೊಂಡಿರಬೇಕು. ಸಾಲದ್ದಕ್ಕೆ ಬಲರಾಮನಿಗೆ ಮುಂದಾಳಾಗಿರಬೇಕೆಂಬ ಪ್ರವೃತ್ತಿ ಇರಲಿಲ್ಲ ಎಂದು ಕಾಣುತ್ತದೆ. ಈ ಎರಡೂ ಕಾರಣದಿಂದ ಯದುವಂಶದ ಜೀವನದಲ್ಲಿಯೂ ಯಾದವರು ಇತರರೊಡನೆ ನಡಸಬೇಕಾಗಿ ಬಂದ ವ್ಯವಹಾರದಲ್ಲಿಯೂ ಅವನು ಕೃಷ್ಣನ ಪ್ರಭಾವ ಮುಂದಾಗುವುದನ್ನು ಒಪ್ಪಿ ಕೊಂಡನು. ಬಲರಾಮನು ಸ್ವಲ್ಪ ಮಟ್ಟಿಗೆ ಅಲಸನೆಂದೂ ಮದ್ಯದ ಚಟಕ್ಕೆ ಒಳಗಾಗಿದ್ದನೆಂದೂ ಕತೆಯಲ್ಲಿ ಸೂಚನೆ ಇದೆ; ಇದರಲ್ಲಿ ಸ್ವಲ್ಪ ನಿಜ ಇದ್ದಿರಬಹುದು. ಹೀಗಾಗಿ ಕೃಷ್ಣನು ಬಲರಾಮನಿಗಿಂತ ಕಿರಿಯನಾದರೂ ಆ ತಲೆಮಾರಿನ ಲೋಕ ಜೀವನದಲ್ಲಿ ಬಲರಾಮನಿಗಿಂತ ಮೇಲಿನ ಒಂದು ಸ್ಥಾನದಲ್ಲಿ ನಿಂತನು. ಸಾಮಾನ್ಯವಾಗಿ ಇಂಥ ಸಂದರ್ಭದಲ್ಲಿ ಅಣ್ಣನಾದವನಿಗೆ ತಮ್ಮನ ವಿಷಯದಲ್ಲಿ ಅಸೂಯೆ ಹುಟ್ಟುವುದು ಸಹಜ. ಬಲರಾಮನು ಕೃಷ್ಣನ ವಿಷಯದಲ್ಲಿ ಹೀಗೆ ಅಸೂಯೆಪಟ್ಟಿದ್ದರೆ ಆಶ್ಚರ್ಯಕ್ಕೆ ಕಾರಣವಿರಲಿಲ್ಲ; ಆದರೆ, ಈ ಸೋದರರ ಬಾಂಧವ್ಯದಲ್ಲಿ ಆ ಭಾವಕ್ಕೆ ಎಡೆ ಇರಲಿಲ್ಲ. ಹಿರಿಯನೂ ಕಿರಿಯನೂ ಒಂದು ಕ್ಷಣದ ಅಂತರದಲ್ಲಿ ಹುಟ್ಟಿದ ಯಮಳ ರಂತೆ, ಸಮಯಬಿದ್ದಾಗ ಕೃಷ್ಣನೇ ಅಣ್ಣ, ರಾಮ ತಮ್ಮ ಎಂಬಂತೆ, ನಡೆದುಕೊಂಡರು. ಅಣ್ಣನ ಮನಸ್ಸಿನಲ್ಲಿ ಇಂಥ ಹೊತ್ತಿನಲ್ಲಿ ಈಷತ್ತಾದರೂ ಕಳಂಕ ಇದ್ದುದ್ದರ ಸೂಚನೆ ಕಾಣುವುದಿಲ್ಲ: ಬಲರಾಮನ ಸೋದರಪ್ರೇಮ ಅಷ್ಟು ನಿಷ್ಕಲ್ಮಷ, ಅಷ್ಟು ಪರಿಶುದ್ಧ. ಇದು ಅವನ ದೊಡ್ಡತನವನ್ನು ತೋರಿಸುತ್ತದೆ. ಜೊತೆಗೆ ಕೃಷ್ಣನೂ ಅಣ್ಣನ ವಿಷಯದಲ್ಲಿ ಎಷ್ಟು ಅಕುಟಿಲವಾದ ಪ್ರೇಮ ಭಕ್ತಿಗಳಿಂದ ನಡೆದುಕೊಂಡಿರಬೇಕು ಎಂಬುದನ್ನು ಸೂಚಿಸುತ್ತದೆ. ದ್ರೌಪದಿಯ ಸ್ವಯಂವರದಲ್ಲಿ ಕೃಷ್ಣನು ಬಲರಾಮನಿಗೆ ಪಾಂಡವರು ಬಂದಿದಾರೆಂಬ ಸಂಗತಿಯನ್ನು ಕಂಡೊಡನೆ ತಿಳಿಸಿದನು. ಸುಭದ್ರೆ ಅರ್ಜುನನನ್ನು ವರಿಸುವ ಸಂದರ್ಭದಲ್ಲಿ ಬಲರಾಮನು ಅದಕ್ಕೆ ವಿರೋಧವಾಗಿದ್ದನೆಂದೂ ಕೃಷ್ಣನು ತಂತ್ರದಿಂದ ಅವಳನ್ನು ಅರ್ಜುನನ ಪಾಲುಮಾಡಿದನೆಂದೂ ಕತೆ ಬೆಳೆದಿದೆ. ಈ ಕಥೆಯ ಬಹುಭಾಗ ಆಮೇಲೆ

ಸೇರಿದ್ದು. ಈ ಸೇರಿದ ಭಾಗವನ್ನು ಬಿಟ್ಟರೆ ಇಷ್ಟು ಮಾತೇನೊ ಉಳಿಯು ತ್ತದೆ. ಅರ್ಜುನನು ಸಂನ್ಯಾಸಿಯಾಗಿ ಬಂದಿರುವುದು ಬಲರಾಮನಿಗೆ ತಿಳಿಯದು; ಇದನ್ನು ಕೃಷ್ಣನು ಕಂಡುಕೊಂಡನು. ಸುಭದ್ರೆ ಅರ್ಜುನ ನಿಗೆ ಒಲಿದಳು, ಬಲರಾಮನನ್ನು ಕೇಳದೆ ಅವನನ್ನು ವರಿಸಿದಳು; ಕೃಷ್ಣನು ಇದನ್ನು ಬಲ್ಲನು, ಇದಕ್ಕೆ ಒಪ್ಪಿಗೆ ಕೊಟ್ಟನು. ತಂಗಿ ಸ ಭದ್ರೆ ಪಾಂಡವರ ಮನೆಯನ್ನು ಹೊಗುವುದು ಪ್ರಾಯಶಃ ಬಲರಾಮನಿಗೆ ಇಷ್ಟವಾಗಿರಲಿಲ್ಲ; ಆದರೂ ಮದುವೆಯಾದ ಮೇಲೆ ಅವನು ಯಾವ ತಪ್ಪು ಮಾತನ್ನೂ ಆಡಲಿಲ್ಲ, ನಡೆದ ವಿವಾಹವನ್ನು ಉಚಿತ ರೀತಿಯಲ್ಲಿ ಒಪ್ಪಿಕೊಂಡನು. ದ್ಯೂತ ನಡೆದು ಪಾಂಡವರು ಕಾಡಿಗೆ ಹೋದಮೇಲೆ ಯಾದವರು ಅವರನ್ನು ವನವಾಸದಲ್ಲಿ ಕಾಣಲು ಬಂದಾಗ ಬಲರಾಮನು ಈ ದ್ಯೂತ ವನವಾಸಗಳ ವಿಷಯವಾಗಿ ತನ್ನ ಅಸಮಾಧಾನವನ್ನು ಪ್ರಕಟಿಸಿದನು. ಅಜ್ಞಾತವಾಸ ಮುಗಿದು ಸಂಧಿ ಅಥವಾ ಯುದ್ಧದ ಚರ್ಚೆ ನಡೆದಾಗ ಬಲರಾಮನು ಸ್ವಲ್ಪ ಕೌರವರ ಪಕ್ಷವಾಗಿ ಮಾತನಾಡಿದಂತೆ ಕಾಣು ತ್ತದೆ. ಆದರೂ ಅವನು ಕೃಷ್ಣನ ನಿರ್ಣಯಕ್ಕೆ ವಿರೋಧವಾಗಿ ಹೋಗ ಲಿಲ್ಲ. ತನ್ನ ಜನ ಕೌರವರ ಕಡೆಗೆ, ಕೃಷ್ಣನು ಪಾಂಡವರ ಕಡೆಗೆ, ಸೇರುವುದೆಂದು ಗೊತ್ತಾದಾಗ ತಾನು ಯಾವ ಪಕ್ಷಕ್ಕೂ ಸೇರಲೊಲ್ಲದೆ, ಕೃಷ್ಣನ ಪ್ರತಿಪಕ್ಷದಲ್ಲಿ ನಿಲ್ಲಲು ಇಷ್ಟವಿಲ್ಲದೆ, ತೀರ್ಥಯಾತ್ರೆಗೆ ಹೊರಟನು. ಭೀಮ ದುರ್ಯೋಧನ ಇಬ್ಬರಿಗೂ ಬಲರಾಮನು ಗದಾ ವಿದ್ಯೆಯನ್ನು ಕಲಿಸಿದ್ದನಂತೆ. ತನಗೆ ಪ್ರಿಯರಾದ ಇವರಿಬ್ಬರು ಒಬ್ಬರ ನ್ನೊಬ್ಬರು ಕ್ರೋಧದಿಂದ ಬಡಿಯುವುದನ್ನು ತಾನು ನೋಡಲಾರೆನೆಂದು ಬಲರಾಮನು ಹೇಳಿದನು. ಅವನ ದೈವ ಅವನನ್ನು ಆ ಯುದ್ಧದ ದಿನಕ್ಕೆ ಸರಿಯಾಗಿ ಹಿಂದಕ್ಕೆ ಕರೆ ತಂದಿತು. ಬಲರಾಮನು ತೀರ್ಥ ಯಾತ್ರೆಗೆ ಹೊರಟಾಗ ಕೃಷ್ಣನು ಹಿರಿಯನ ಜೊತೆಗೆ ತಾನೂ ಸ್ವಲ್ಪ ದೂರ ಹೋದನಂತೆ. ಬಲರಾಮನು ಭ್ರಾತೃಸ್ನೇಹದಿಂದ ಅವನನ್ನು ತಡೆದು, ಅವನು ನಿಲ್ಲಬೇಕೆಂದು ಅನುಜ್ಞೆಮಾಡಿದನು; ಕೃಷ್ಣನು ನಿಂತನು. ಈ ಒಂದು ಸಂಗತಿ ಈ ಸೋದರರ ಪರಸ್ಪರ ಪ್ರೇಮದ ಸ್ವರೂಪವನ್ನು ಪ್ರಕಟಿಸುತ್ತದೆ. ಗದಾಯುದ್ಧದ ಹೊತ್ತಿಗೆ ಬಂದ

ಬಲರಾಮನು ಅದು ನಡೆದಸ್ಥಳದಲ್ಲಿ ಭೀಮನಿಂದ ಏನೋ ತಪ್ಪಾಯಿತು ಎಂದು ನಿಂದಿಸಿದಂತೆ ಕತೆಯಿದೆ. ತೊಡೆಯ ಮೇಲೆ ಹೊಡೆಯುವುದು ತಪ್ಪು ಎಂಬ ಮಾತು ಅಲ್ಲಿ ಬಂದಿದೆ ಹೊರತಾಗಿ, ಗದಾಯುದ್ಧದಲ್ಲಿ ಅದು ಒಂದು ನಿಯಮ ಎಂದು ಎಣಿಸುವುದಕ್ಕೆ ಬೇರೆ ಎಲ್ಲಿಯೂ ಕಾರಣ ಕಾಣುವುದಿಲ್ಲ. ಆ ಮೇಲಣ ವಿವೇಚನೆ ಕೃಷ್ಣಾವತಾರದ ಬಲರಾಮನನ್ನು ರಾಮಾವತಾರದ ಲಕ್ಷ್ಮಣನ ಪುನರ್ಜನ್ಮವೆಂದು ನಿರ್ಧರಿಸಿತು. ಆ ಜನ್ಮದಲ್ಲಿ ತಮ್ಮನಿಂದ ಸೇವೆಯನ್ನು ಕೊಂಡ ರಾಮನು ಈ ಜನ್ಮದಲ್ಲಿ ತಮ್ಮನಾಗಿ ಸೇವೆಮಾಡಿ ಹಿಂದಿನ ಜನ್ಮದ ಸಾಲವನ್ನು ಹರಿಸಲು ಯತ್ನ ಮಾಡಿದನಂತೆ. ಈ ಕಲ್ಪನೆ ತುಂಬ ಸುಂದರವಾಗಿದೆ. ನಿಜದಲ್ಲಿ ರಾಮನಿಗೆ ತಮ್ಮನಾಗಿ ಲಕ್ಷ್ಮಣನು ಅಣ್ಣನ ಮಹಿಮೆಯನ್ನು ಮೆಚ್ಚಿ ತನ್ನ ವ್ಯಕ್ತಿತ್ವವನ್ನು ಎಷ್ಟು ಸ್ಥೈರ್ಯದಿಂದ ಅಡಗಿಸಿಕೊಂಡನೊ ಅಷ್ಟೇ ಸ್ಥೈರ್ಯದಿಂದ ಬಲರಾಮನು ತಮ್ಮನ ಪ್ರಭಾವವನ್ನು ಮೆಚ್ಚಿ ತನ್ನ ವ್ಯಕ್ತಿತ್ವವನ್ನು ಒಂದು ಬದಿಗಿರಿಸಿದನು. ಲೋಕ ವ್ಯವಹಾರದಲ್ಲಿ ಒಬ್ಬ ಮುಂದಾಳಾಗಬೇಕೆಂದು ಇವನು ಬಯಸಿದ್ದರೆ ಅದು ಇವನಿಗೆ ಕಷ್ಟವಾಗಿರಲಿಲ್ಲ; ಆದರೆ ಇವನು ಅದನ್ನು ಬಯಸಲಿಲ್ಲ. ಎಂಥೆಂಥ ಅಸಮರ್ಥ ಜನರೂ ಅಧಿಕಾರವನ್ನು ಬಯಸುವ ಲೋಕದಲ್ಲಿ ಸಮರ್ಥರಾದವರು ಆತ್ಮನಿರಸನ ಮಾಡಿಕೊಳ್ಳುವುದು ಅತ್ಯಂತ ಅಪೂರ್ವ. ಅದನ್ನು ಮಾಡಿ ಅತೃಪ್ತನಾಗದೆ ತಮ್ಮನ ಮೇಲ್ಮೆಯನ್ನು ತನ್ನದೇ ಎಂಬಂತೆ ಅನುಭವಿಸಿ ಸಂತೋಷಪಟ್ಟ ಉದಾತ್ತ ಜೀವನ ಬಲರಾಮನದು.

## ೨೩
## ಧರ್ಮ ಉತ್ತಮ

ಇನ್ನು ಈ ಉಪಾಖ್ಯಾನಗಳಲ್ಲಿ, ಈ ವ್ಯಕ್ತಿ ಚಿತ್ರಗಳಲ್ಲಿ, ರೂಪುಗೊಂಡಿರುವ ಜೀವನ ಧರ್ಮ, ಮಾನವ ಧ್ಯೇಯ, ಲೋಕನೀತಿ, ಇವುಗಳನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

### (i) ಧರ್ಮಂ ಚರ

"ಧರ್ಮಲಾಭಾತ್ ಪರಂ ನ ಸ್ಯಾತ್ ತಸ್ಮಾತ್ ಧರ್ಮಂ ಚರ ಉತ್ತಮಂ:" ಇದು ಭಾರತದ ಸಾರತತ್ತ್ವ. ಧರ್ಮಕ್ಕಿಂತ ಶ್ರೇಷ್ಠವಾದ

ಸಂಪಾದನೆ ಬೇರೆ ಒಂದಿಲ್ಲ, ಆದಕಾರಣ ಎಲ್ಲಕ್ಕಿಂತ ಉತ್ತಮವಾದ ಈ ಧರ್ಮ ಎಂಬುದನ್ನು ನಡಸು. "ನ ಜಾತು ಕಾಮಾತ್ ನ ಭಯಾತ್ ನ ಲೋಭಾತ್, ಧರ್ಮಂ ತ್ಯಜೇತ್ ಜೀವಿತಸ್ಯಾಪಿ ಹೇತೋಃ." ಯಾವುದೇ ಕಾರಣದಿಂದ ಧರ್ಮವನ್ನು ಬಿಡುವುದು ಬೇಡ.

ಜೀವನದ ಮುಖ್ಯ ಉದ್ದೇಶ ಧರ್ಮವನ್ನು ಗಳಿಸತಕ್ಕದ್ದು. ಮನುಷ್ಯನಿಗೆ ಬೇಕಾದ ಒಳ್ಳೆಯದನ್ನು ಧರ್ಮ ಅರ್ಥ ಕಾಮ ಮೋಕ್ಷ ಎಂದು ವಿಭಾಗಿಸಬಹುದು. ಲೋಕಯಾತ್ರೆಗೆ ಧನಕನಕ ವಸ್ತ್ರವಾಹನ ಗೃಹ ಆರಾಮ ಈ ಎಲ್ಲ ಸಂಪತ್ತೂ ಬೇಕು; ಇದೆಲ್ಲ ಅರ್ಥ ಎಂಬ ರಾಶಿಯಲ್ಲಿ ಬರುತ್ತದೆ. ಮನುಷ್ಯನಿಗೆ ಆಶೆಗಳಿವೆ, ಆಕಾಂಕ್ಷೆಗಳಿವೆ, ಪ್ರವೃತ್ತಿಗಳಿವೆ; ಇವುಗಳನ್ನು ತುಂಬುವುದರಿಂದ, ತಣಿಸುವುದರಿಂದ ಸುಖ ದೊರೆಯುತ್ತದೆ; ಈ ಸುಖವನ್ನು ಅವನು ಬಯಸುತ್ತಾನೆ; ಎಲ್ಲ ರೀತಿಯ ಈ ಸುಖದ ಅಪೇಕ್ಷೆ ಕಾಮ. ಇದನ್ನು ತೃಪ್ತಿಪಡಿಸುವುದಕ್ಕಾಗಿ ಅರ್ಥಬೇಕು. ಇವೆರಡನ್ನೂ ಮನುಷ್ಯನು ಧರ್ಮದ ಮೂಲಕ ಸಾಧಿಸಬೇಕು. ಹಾಗೆ ಸಾಧಿಸಿದವನಿಗೆ ಮೋಕ್ಷ ದೊರೆಯುತ್ತದೆ. ಲೋಕದ ವ್ಯವಹಾರದಲ್ಲಿ, ಆಶೆಗಳನ್ನು ತುಂಬಿಕೊಳ್ಳುವ ಆತುರದಲ್ಲಿ, ಮನುಷ್ಯನು ತಾನು ಮಾಡುತ್ತಿರುವುದು ಧರ್ಮವೇ ಎಂದು ಯೋಚಿಸುತ್ತ ಮುಂದೆ ಹೆಜ್ಜೆಯಿಡಬೇಕು. ಕಾಮವನ್ನು ಹೇಗೊ ತೀರಿಸಿಕೊಳ್ಳುವುದು, ಅರ್ಥವನ್ನು ಹೇಗೊ ಗಳಿಸಿಬಿಡುವುದು, ಮನುಷ್ಯನ ಗುರಿಯಲ್ಲ. ಆಶೆಯನ್ನು ಸರಿಯಾದ ರೀತಿಯಿಂದ ತೀರಿಸಿಕೊಳ್ಳಬೇಕು; ಅರ್ಥವನ್ನು ಸರಿಯಾದ ರೀತಿಯಿಂದ ಗಳಿಸಬೇಕು. ಹೌದು, ಧರ್ಮ ಧರ್ಮ ಎನ್ನುತ್ತ ಎಲ್ಲಹೊತ್ತಿನಲ್ಲೂ ಹಿಂದಕ್ಕೆ ಹೆಜ್ಜೆಯಿಡುತ್ತಿದ್ದರೆ, ಆಸೆ ತೀರದೆ ಹೋಗಬಹುದು, ಅರ್ಥ ಕೈಸೇರದಿರಬಹುದು; ಆಗ ಏನುಮಾಡುವುದು? ಇದಕ್ಕೆ ಸಮಾಧಾನ, ಧರ್ಮಾದರ್ಥಂಚ ಕಾಮಂಚ, ಎನ್ನುವುದು. ಧರ್ಮದಿಂದ ಅರ್ಥವನ್ನೂ ಕಾಮವನ್ನೂ ಸಾಧಿಸಬಹುದು; ಅಷ್ಟೇ ಅಲ್ಲ, ಧರ್ಮದಿಂದ ಸಾಧಿಸಿದ ಅರ್ಥವೇ ಅರ್ಥ, ಧರ್ಮದಿಂದ ಸಾಧಿಸಿದ ಕಾಮವೇ ಕಾಮ. ಅಧರ್ಮದಿಂದ ಸಾಧಿಸಿದ ಅರ್ಥ ಅರ್ಥವಲ್ಲ; ಅಧರ್ಮದಿಂದ ಸಾಧಿಸಿದ ಕಾಮ ಕಾಮವಲ್ಲ.

ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿತಯಂ ಜೀವಿತೇ ಫಲಂ
ಏತತ್ತ್ರಯಮವಾಪ್ತವ್ಯಂ ಅಧರ್ಮ ಪರಿವರ್ಜಿತಂ

ಅಧರ್ಮದಿಂದ ಒಂದು ಆಸೆಯನ್ನು ತೀರಿಸಿಕೊಳ್ಳುವವನು ನಿಜವಾದ ಸುಖವನ್ನು ಪಡೆಯಲಾರನು. ಅಧರ್ಮದಿಂದ ಧನವನ್ನು ಗಳಿಸಿಕೊಂಡವನು ಅದರಿಂದ ಶ್ರೇಯಸ್ಸನ್ನು ಪಡೆಯಲಾರನು. ಇಹದಲ್ಲಿ ಮಾತ್ರ ಸುಖಪಡಲಾರನು ಎಂದಲ್ಲ,

ಅಧರ್ಮೋಪಾರ್ಜಿತೈಃ ಅರ್ಥೈಃ ಯಃ ಕರೋತಿ ಔರ್ಧ್ವದೇಹಿಕಂ
ನ ಸ ತಸ್ಯ ಫಲಂ ಪ್ರೇತ್ಯ ಭುಂಕ್ತೇ ಅರ್ಥಸ್ಯ ದುರಾಗಮಾತ್

ಅಧರ್ಮದಿಂದ ಆರ್ಜಿಸಿದ ಧನದಿಂದ ಪರಲೋಕದಲ್ಲಿ ಸುಖ ದೊರೆಯಲೆಂದು ಧರ್ಮವನ್ನು ಮಾಡಿದರೆ ಅದರ ಫಲ ಆ ಅಧರ್ಮಿಗೆ ಲಭಿಸುವುದಿಲ್ಲ: ಅದಕ್ಕೆ ಕಾರಣ ಧನ ಅಧರ್ಮದಿಂದ ಆರ್ಜಿತವಾದದ್ದು ಎನ್ನುವುದು.

## (ii) ಅದ್ಯೈವ ಕುರು

ಮಾನವ ಜೀವನಕ್ಕೆ ಒಂದೇ ಗುರಿ ಧರ್ಮ ಎಂದು ಕಂಡುಕೊಳ್ಳುವುದೇ ಜನ್ಮ ಸಾರ್ಥಕ್ಯದ ಮೊದಲ ಹೆಜ್ಜೆ.

ಧರ್ಮೇಣೈವರ್ಷಯಸ್ತೀರ್ಣಾಃ ಧರ್ಮೇ ಲೋಕಾಃ ಪ್ರತಿಷ್ಠಿತಾಃ
ಧರ್ಮೇಣ ದೇವಾ ದಿವಿಜ ಧರ್ಮೇ ಚಾರ್ಥಃ ಸಮಾಹಿತಃ
ಪ್ಲವಂತೇ ಧರ್ಮಲಘವೋ ಲೋಕೋಽಂಭಸಿ ಯಥಾಪ್ಲವಾಃ
ಮಜ್ಜಂತಿ ಪಾಪ ಗುರವಃ ಶಸ್ತ್ರಂ ಸ್ಕನ್ನಮಿವೋದಕೇ

ಇದನ್ನು ಮನುಷ್ಯನು ಬೇಗನೆ ಕಂಡುಕೊಳ್ಳಬೇಕು. ಬೇಗನೆ ಧರ್ಮಪಥದಲ್ಲಿ ಅಡಿಯಿಡಬೇಕು.

ಅದ್ಯೈವ ಕುರುಯತ್ ಶ್ರೇಯೋ ಮಾ ತ್ವಾಂ ಕಾಲೋತ್ಯಗಾದಯಂ
ಅಕೃತೇಷ್ವೇವ ಕಾರ್ಯೇಷು ಮೃತ್ಯುರ್ವೈ ಸಂಪ್ರಕರ್ಷತಿ
ಶ್ವಃ ಕಾರ್ಯಮದ್ಯಕುರ್ವೀತ ಪೂರ್ವಾಹ್ಣೇಚ ಅಪರಾಹ್ಣಿಕಂ
ನಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನವಾ ಕೃತಂ
ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯು ಕಾಲೋ ಭವಿಷ್ಯತಿ
ಯುವೈವ ಧರ್ಮಶೀಲಸ್ಯಾತ್ ಅನಿತ್ಯಂ ಖಲು ಜೀವಿತಂ

ಯಾವುದು ಒಳ್ಳೆಯದು ಅದನ್ನು ಈಗಲೆ ಮಾಡು: ಈ ಕ್ಷಣ ನಿನ್ನ ಕೈಯಿಂದ ಮಿಂಚಿಹೋಗುವುದು ಬೇಡ. ಮಾಡಬೇಕೆಂದಿರುವ ಕೆಲಸ

ಗಳು ಹಾಗೆಯೇ ಉಳಿಯುತ್ತವೆ: ಸಾವು ಮನುಷ್ಯನನ್ನು ಕೊಂಡು ಹೋಗುತ್ತದೆ. ನಾಳೆ ಮಾಡತಕ್ಕುದಾದ ಕೆಲಸವನ್ನು ಇಂದು ಮಾಡಿ ಮುಗಿಸು; ಮಧ್ಯಾಹ್ನದವರೆಗೆ ತಡೆಯುಬಹುದಾದದ್ದನ್ನು ಮುಂಜಾನೆ ಮಾಡಿ ತೀರಿಸು. ಮೃತ್ಯು ಬಂದು ನಿನ್ನ ಕೆಲಸ ಆಯಿತೆ ಆಗಲಿಲ್ಲವೆ ಎಂದು ನೋಡಿ ಆಗಲಿಲ್ಲ ಎಂಬ ಕಾರಣದಿಂದ ತಡಮಾಡುವುದಿಲ್ಲ. ಅದರ ಕಾಲವಾದರೂ ಮನುಷ್ಯನಿಗೆ ತಿಳಿಯದು. ಯಾರು ಯಾವಾಗ ಸಾಯುತ್ತಾರೆ ಇದನ್ನು ಯಾರು ಬಲ್ಲರು? ಆದ್ದರಿಂದ ವಯಸ್ಸಾದ ಮೇಲೆ ಒಳ್ಳೆಯವನಾಗುತ್ತೇನೆ ಎಂದು ಕಾಲಹರಣಮಾಡದೆ, ಬುದ್ಧಿ ಬಂದ ಯೌವನದಲ್ಲಿಯೇ ಧರ್ಮಶೀಲನಾಗಬೇಕು. ಆಗಲಿಲ್ಲ.

ತಂ ಪುತ್ರ ಪಶುಸಂಪನ್ನಂ ವ್ಯಾಸಕ್ತ ಮನಸಂ ನರಂ
ಸುಪ್ತಂ ವ್ಯಾಘ್ರೋ ಮೃಗಮಿವ ಮೃತ್ಯುರಾದಾಯ ಗಚ್ಛತಿ
ರಾತ್ರ್ಯಾಂ ರಾತ್ರ್ಯಾಂ ವ್ಯತೀತಾಯಾಂ ಆಯುರಲ್ಪತರಂ ಯದಾ
ತದೈವ ವಂಧ್ಯಂ ದಿವಸಂ ಇತಿವಿನ್ದ್ಯಾತ್ ವಿಚಕ್ಷಣಃ
ಪೂರ್ವೇ ವಯಸಿ ತತ್ಕುರ್ಯಾತ್ ಯೇನ ವೃದ್ಧಃ ಸುಖಂ ವಸೇತ್
ಯಾವಜ್ಜೀವಂತು ತತ್ಕುರ್ಯಾತ್ ಯೇನ ಪ್ರೇತ್ಯ ಸುಖಂ ವಸೇತ್

ಮಕ್ಕಳು ಮರಿ, ದನ ಕರು ಎಂದು ದಿನದ ಬಾಳುವೆಯಲ್ಲಿ ಸಿಲುಕಿಕೊಂಡಿರುವ ಮನುಷ್ಯನನ್ನು ನಿದ್ರಿಸುತ್ತಿರುವ ಮೃಗವನ್ನು ಹುಲಿ ಹೊತ್ತುಕೊಂಡು ಹೋಗುವ ಹಾಗೆ ಮೃತ್ಯು ಹೊತ್ತುಕೊಂಡು ಹೋಗುತ್ತದೆ.

### (iii) ಧರ್ಮ ಏಕೋನು ಗಚ್ಛತಿ

ಮನುಷ್ಯನು ಒಂಟಿಯಾಗಿ ಹುಟ್ಟುತ್ತಾನೆ; ಒಂಟಿಯಾಗಿ ಸಾಯುತ್ತಾನೆ. ಒಂಟಿಯಾಗಿ ಕಷ್ಟದಿಂದ ಪಾರಾಗುತ್ತಾನೆ; ಒಂಟಿಯಾಗಿ ದುರ್ಗತಿಯನ್ನು ಸೇರುತ್ತಾನೆ. ತಾಯಿ, ತಂದೆ, ಒಡಹುಟ್ಟು, ಮಗ, ಗುರು, ಜ್ಞಾತಿ, ಸಂಬಂಧಿ, ಗೆಳೆಯ ಯಾರೂ ಈ ವಿಷಯಗಳಲ್ಲಿ ಜೊತೆ ಅಲ್ಲ. ಸತ್ತ ದೇಹವನ್ನು ಕಲ್ಲುಕೊರಡು ಎಂಬಂತೆ ಇವರೆಲ್ಲ ಬಿಟ್ಟು ಹೋಗುತ್ತಾರೆ. ಅವರು ಹೀಗೆ ತೊರೆಯುವ ದೇಹದಲ್ಲಿದ್ದ ಜೀವವನ್ನು ಅದರ ಧರ್ಮ ಒಂದು ಅನುಸರಿಸಿಬರುತ್ತದೆ. ಆದಕಾರಣ ಈ ಒಂದೇ ಒಂದಾದ ಜೊತೆಗಾಗಿ ನಾವು ಧರ್ಮವನ್ನು ಸೇವಿಸಬೇಕು.

ಏಕಃ ಪ್ರಸೂಯತೇ ರಾಜನ್ ಏಕ ಏವ ವಿನಶ್ಯತಿ
ಏಕಸ್ತರತಿ ದುರ್ಗಾಣಿ ಗಚ್ಛತ್ಯೇಕಸ್ತು ದುರ್ಗತಿಂ
ನ ಸಹಾಯಃ ಪಿತಾಮಾತಾ ತಥಾ ಭ್ರಾತಾ ಸುತೋಗುರುಃ
ಜ್ಞಾತಿ ಸಂಬಂಧಿ ವರ್ಗಶ್ಚ ಮಿತ್ರವರ್ಗಸ್ತಥೈವಚ
ಮೃತಂ ಶರೀರಂ ಉತ್ಸೃಜ್ಯ ಕಾಷ್ಠಲೋಷ್ಟ ಸಮಂಜನಾಃ
ಮುಹೂರ್ತಮುಪಯುಂಜ್ಯಾಥ ತತೋಯಾಂತಿ ಪರಾಙ್ಮುಖಾಃ
ತೈಸ್ತಚ್ಛರೀರಮುತ್ಸೃಷ್ಟಂ ಧರ್ಮ ಏಕೋನುಗಚ್ಛತಿ
ತಸ್ಮಾದ್ಧರ್ಮಸ್ಸಹಾಯಾರ್ಥೇ ಸೇವಿತವ್ಯಃ ಸದಾ ನೃಪ
ಉತ್ಸೃಜ್ಯ ವಿನಿವರ್ತಂತೇ ಜ್ಞಾತಯಃ ಸುಹೃದಃ ಸುತಾಃ
ಅಪುಷ್ಪಾನಫಲಾನ್ ವೃಕ್ಷಾನ್ ಯಥಾ ತಾತ ಪತತ್ರಿಣಃ
ಅಗ್ನೌ ಪ್ರಾಸ್ತಂತು ಪುರುಷಂ ಕರ್ಮಾನ್ವೇತಿ ಸ್ವಯಂ ಕೃತಂ
ತಸ್ಮಾತ್ತು ಪುರುಷೋಯತ್ನಾತ್ ಧರ್ಮಂ ಸಂಚಿನುಯಾತ್ ಶನೈಃ

ಧರ್ಮದಲ್ಲಿ ನಡೆಯುವವನು ಜೊತೆಗಾರನನ್ನು ಹುಡುಕಬಾರದು. ಒಬ್ಬೊಬ್ಬನೂ ತನಗೆ ಧರ್ಮವೆಂದು ಕಂಡದ್ದನ್ನು ತಾನು ಮಾಡಬೇಕು. ಅದನ್ನು ಎಲ್ಲರಿಗೂ ತೋರಿಸಿಕೊಳ್ಳುತ್ತ ಹೋಗಬಾರದು, ಅದರಿಂದ ಪ್ರಯೋಜನವನ್ನು ಬಯಸಬಾರದು.

ಏಕ ಏವ ಚರೇದ್ಧರ್ಮಂ ನಧರ್ಮಧ್ವಜಿಕೋ ಭವೇತ್
ಧರ್ಮವಾಣಿಜಕಾ ಹ್ಯೇತೇ ಯೇ ಧರ್ಮಮುಪಭುಂಜತೇ
ಅರ್ಚೇದ್ದೇವಾನ್ ಅದಂಭೇಣ ಸೇವೇತಾಮಾಯಯಾ ಗುರೂನ್
ಧನಂ ನಿದದ್ಯಾತ್ ಪಾತ್ರೇಷು ಪರತ್ರಾರ್ಥ ಸಮಾವೃತಂ

## (iv) ವರ್ಣ, ಆಶ್ರಮ

ಹಾಗಾದರೆ ಈ ಧರ್ಮ ಎಂಬುದು ಯಾವುದು? ಪ್ರತಿಯೊಬ್ಬ ಮನುಷ್ಯನಿಗೂ ಅವನ ಜೀವನದ ಸನ್ನಿವೇಶದಿಂದ ಅವನ ಧರ್ಮದ ಸ್ವರೂಪ ನಿಶ್ಚಯವಾಗುತ್ತದೆ. ಇದನ್ನು ಭಾರತದಲ್ಲಿ ವರ್ಣದ ದೃಷ್ಟಿಯಿಂದ ಆಶ್ರಮದ ದೃಷ್ಟಿಯಿಂದ ವಿವರಿಸಿದೆ. ಭಾರತದ ಸಂಗತಿ ನಡೆದ ಕಾಲಕ್ಕೆ ವರ್ಣಗಳು ಒಂದರಿಂದ ಒಂದು ಬೇರೆಯಾದ ನಾಲ್ಕು ಬೇರೆ ಬೇರೆಯ ಪಂಗಡಗಳಾಗಿದ್ದಂತೆ ಕಾಣುವುದಿಲ್ಲ. ಹುಟ್ಟಿನಿಂದ ಎಲ್ಲರೂ ಬ್ರಾಹ್ಮಣರೇ.

ನ ವಿಶೇಷೋಽಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್
ಬ್ರಾಹ್ಮಣಾಃ ಪೂರ್ವ ಸೃಷ್ಟಾಹಿ ಕರ್ಮಭಿಃ ವರ್ಣತಾಂ ಗತಾಃ
ಬ್ರಹ್ಮ ಚೈವ ಪರಂ ಸೃಷ್ಟಂ ಯೇತು ಜಾನಂತಿ ತೇ ದ್ವಿಜಾಃ
ಐಶ್ವರ್ಯ ಕಾಮಾಯೇ ಚಾಪಿ ಸಾವಿಷಾವಾಽಪಿ ಭಾರತ
ನಿಗ್ರಹಾನುಗ್ರಹ ರತಾನ್ ತಾನ್ದ್ವಿಜಾನ್ ಕ್ಷತ್ರಿಯಾನ್ ವಿದುಃ
ಅಶಕ್ತಃ ಕ್ಷತ್ರ ಧರ್ಮೇಣ ವೈಶ್ಯ ಧರ್ಮೇಣ ವರ್ತಯೇತ್
ಕೃಷಿಂ ಗೋರಕ್ಷಮಾಸ್ಥಾಯ ವ್ಯಸನೇ ವೃತ್ತಿ ಸಂಕ್ಷಯೇ
ಶೌಚೇನ ಸತತಂ ಯುಕ್ತಃ ಸದಾಚಾರ ಸಮನ್ವಿತಃ
ಸಾನುಕ್ರೋಶಶ್ಚ ಭೂತೇಷು ತದ್ದ್ವಿಜಾತಿಷು ಲಕ್ಷಣಂ
ತಪಃ ಶ್ರುತಂ ಚ ಯೋನಿಶ್ಚಾಪ್ಯೇತದ್ಬ್ರಾಹ್ಮಣ್ಯಕಾರಣಂ
ತ್ರಿಭಿರ್ಗುಣೈಃ ಸಮುದಿತಃ ಸ್ನಾತೋಭವತಿ ವೈದ್ವಿಜಃ

ಅಭಿರುಚಿಯನ್ನನುಸರಿಸಿ ಬೇರೆ ಬೇರೆ ವೃತ್ತಿಗಳನ್ನವಲಂಬಿಸಿ ಅವಕ್ಕೆ ಅನುಗುಣವಾದ ಚರ್ಯೆಯಿಂದ ನಡೆದು ಮನುಷ್ಯರು ನಾಲ್ಕು ವರ್ಣಗಳಾದರು. ಹೀಗೆ ಏರ್ಪಟ್ಟ ವರ್ಣಗಳಲ್ಲಿ ಹುಟ್ಟಿದವರು ಸಾಮಾನ್ಯವಾಗಿ ಆಯಾ ವರ್ಣದ ವೃತ್ತಿಯನ್ನು ಅವಲಂಬಿಸಿ ಅದರದರ ಗುಣಗಳನ್ನು ಬೆಳೆಸಿಕೊಂಡು ಆಯಾ ವರ್ಣಕ್ಕೆ ಸೇರಿದವರೆನಿಸಿಕೊಂಡರು. ವೃತ್ತಿಯಿಂದ ಆಯಾ ವರ್ಣಕ್ಕೆ ಸೇರಿದವರಾದರೂ ಇಂಥ ಜನ ಗುಣದಿಂದ ಬೇರೆಯ ವರ್ಣದವರಂತೆ ಇರುವುದಕ್ಕೆ ಅಡ್ಡಿಯಿರಲಿಲ್ಲ. ಅವರವರ ಮನೋಧರ್ಮದಂತೆ ಅವರು ಮೇಲೆಂಬ ವರ್ಣದ ಗುಣಗಳನ್ನು ಬೆಳೆಸಿಕೊಳ್ಳಬಹುದು, ಕೀಳೆಂಬ ವರ್ಣದ ಗುಣಗಳನ್ನು ಬೆಳೆಸಿಕೊಳ್ಳಬಹುದು. ಹೀಗೆ ಮಾಡಿದಾಗ್ಗೆ ಅವರು ಹುಟ್ಟಿನಿಂದ ಒಂದು ವರ್ಣಕ್ಕೆ ಸೇರಿ ಅದರ ವೃತ್ತಿಯನ್ನು ನಡಸುತ್ತಿದ್ದರೂ ಗುಣದಿಂದ ಆ ಮೇಲ್ಪಟ್ಟ ಅಥವಾ ಕೀಳ್ಪಟ್ಟ ಜಾತಿಯನ್ನು ಸಾಧಿಸಿದಂತೆಯೇ. ವೃತ್ತಿಯ ದೃಷ್ಟಿಯಿಂದ ಹುಟ್ಟು ಮುಖ್ಯ; ಸಿದ್ಧಿಯ ದೃಷ್ಟಿಯಿಂದ ಗುಣ ಮುಖ್ಯ.

ಇಷ್ಟೀಶ್ಚ ವಿವಿಧಾಃ ಪ್ರಾಪ್ಯ ಕ್ರತೂಂಶ್ಚೈವಾಪ್ತ ದಕ್ಷಿಣಾನ್
ಪ್ರಾಪ್ನೋತಿ ನೈವ ಬ್ರಾಹ್ಮಣ್ಯಂ ಅವಿಜ್ಞಾನಾತ್ಕಥಂಚ ನ
ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನಬಿಭ್ಯತಿ
ಯದಾನೇಚ್ಛತಿ ನದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ
ಕಾಮಬಂಧನ ಮುಕ್ತೋಹಿ ಬ್ರಹ್ಮಭೂಯಾಯ ಕಲ್ಪತೇ

ದ್ವಾರಾಣಿ ಯಸ್ಯ ಸರ್ವಾಣಿ ಸುಗುಪ್ತಾನಿ ಮನೀಷಿಣಃ
ಉಪಸ್ಥಮುದರಂ ಪಾಣೀ ವಾಕ್ಚತುರ್ಥೀ ಸವೈದ್ವಿಜಃ
ಸರ್ವಭಕ್ಷರತಿರ್ನಿತ್ಯಂ ಸರ್ವಕರ್ಮಕರೋಽಶುಚಿಃ
ತ್ಯಕ್ತವೇದಸ್ತ್ವನಾಚಾರಃ ಸವೈಶೂದ್ರ ಇತಿ ಸ್ಮೃತಃ
ಶೂದ್ರೇಚೈತದ್ಭವೇಲ್ಲಕ್ಷ್ಯಂ ದ್ವಿಜೇತಚ್ಚನವಿದ್ಯತೇ
ನವೈ ಶೂದ್ರೋ ಭವೇಚ್ಛೂದ್ರೋ ಬ್ರಾಹ್ಮಣೋ ನ ಚ ಬ್ರಾಹ್ಮಣಃ
ಶೂದ್ರಯೋನೌ ಹಿಜಾತಸ್ಯ ಸದ್ಗುಣಾನುಪತಿಷ್ಠತಃ
ಆರ್ಜವೇ ವರ್ತಮಾನಸ್ಯ ಬ್ರಾಹ್ಮಣ್ಯಮಭಿಜಾಯತೇ
ಬ್ರಾಹ್ಮಣಃ ಪತನೀಯೇಷು ವರ್ತಮಾನಃ ವಿಕರ್ಮಸು
ದಾಂಭಿಕೋ ದುಷ್ಕೃತ ಪ್ರಾಯಃ ಶೂದ್ರೇಣ ಸದೃಶೋ ಭವೇತ್
ಯಸ್ತು ಶೂದ್ರೋದಮೇ ಸತ್ಯೇ ಧರ್ಮೇಚ ಸತತೋತ್ಥಿತಃ
ತಂ ಬ್ರಾಹ್ಮಣಮಹಂ ಮನ್ಯೇ ವೃತ್ತೇನ ಹಿ ಭವೇದ್ದ್ವಿಜಃ

ಸಮಾಜದ ವ್ಯವಸ್ಥೆಗಾಗಿ ವರ್ಣಗಳು ಏರ್ಪಟ್ಟಂತೆ ವ್ಯಕ್ತಿಯ ಬೆಳವಣಿಗೆಗೆಂದು ಆಶ್ರಮಗಳು ಏರ್ಪಟ್ಟವು. ಒಂದೊಂದು ಆಶ್ರಮಕ್ಕೂ ಉಚಿತವಾದ ಜೀವನಕ್ರಮ ಉಂಟು. ಬಾಲ್ಯ ತಾರುಣ್ಯದಲ್ಲಿ ಬ್ರಹ್ಮಚರ್ಯ ದಿಂದ ವಿದ್ಯಾರ್ಜನ ಮಾಡಬೇಕು. ಯೌವನದಲ್ಲಿ ಗೃಹಸ್ಥ ಧರ್ಮವನ್ನು ಆಚರಿಸಬೇಕು. ವಯಸ್ಸು ಬಂದಂತೆ ಸಂಸಾರದ ಗೊಂದಲದಿಂದ ಬಿಡಿಸಿ ಕೊಂಡು ವಾನಪ್ರಸ್ಥದ ವಿವಿಕ್ತವಾದ ಬಾಳುವೆಯನ್ನು ಬಾಳಬೇಕು. ಕೊನೆಗೆ ವೈರಾಗ್ಯವನ್ನು ತಂದುಕೊಂಡು ಲೋಕವ್ಯವಹಾರದಿಂದ ಬಿಡಿಸಿ ಕೊಂಡು ಸಂನ್ಯಾಸಿ ಆಗಬೇಕು.

ಭಾರತದಲ್ಲಿ ಹೀಗೆ ಸೂಕ್ಷ್ಮವಾಗಿ ರೂಪುಗೊಂಡ ಒಂದು ಧರ್ಮದ ಕಲ್ಪನೆ ಆಮೇಲೆ ಬಹು ವಿಸ್ತಾರವಾಗಿ ಬೆಳೆಯಿತು. ಈಗಿರುವಂತೆ ಮಹಾಭಾರತದಲ್ಲಿ ವರ್ಣಗಳ ವೃತ್ತಿಗಳನ್ನು ಕುರಿತು, ಬ್ರಾಹ್ಮಣರ ಕ್ಷತ್ರಿಯರ ಮಹಿಮೆಗಳನ್ನು ಕುರಿತು, ಅನೇಕ ಅಧ್ಯಾಯಗಳು ಸೇರಿವೆ. ಹಾಗೆಯೆ ಆಶ್ರಮಗಳ ಧರ್ಮವನ್ನು ಕುರಿತೂ ಬಹು ವಿಸ್ತಾರವಾದ ವಿವರಣೆ ಇದೆ. ಅದನ್ನೆಲ್ಲ ಅದು ಈಗ ಗ್ರಂಥದಲ್ಲಿ ದೊರೆಯುವ ರೂಪ ದಲ್ಲಿ ಪರಿಶೀಲಿಸುವುದು ಇಲ್ಲಿ ಪ್ರಕೃತವಲ್ಲ. ವರ್ಣಗಳು ಯಾವುದೇ ಕಾಲದಲ್ಲಿ ಸ್ಪಷ್ಟವಾಗಿ ನಾಲ್ಕು ಇದ್ದು ಒಂದೊಂದೂ ತನ್ನ ಕರ್ಮವನ್ನು ಶಾಸ್ತ್ರೋಕ್ತವಾಗಿ ನಡಸುತ್ತ ಇದ್ದಿತು ಎನ್ನುವುದು ಪ್ರಾಯಶಃ ಒಂದು

ಕಲ್ಪಿತಧ್ಯೇಯ. ಮನುಷ್ಯನು ಸ್ವಭಾವತಃ ಇಲ್ಲವೆ ಜ್ಞಾನ ಪಿಪಾಸು ವಾಗಿರುತ್ತಾನೆ; ಇಲ್ಲವೆ ಅಧಿಕಾರಾಕಾಂಕ್ಷಿಯಾಗಿರುತ್ತಾನೆ; ಇಲ್ಲವೆ ವ್ಯವಹಾರ ವಿಹಾರಿ ಆಗಿರುತ್ತಾನೆ; ಇಲ್ಲವೆ ಸೇವಾವೃತ್ತಿಗೆ ಒಪ್ಪುವವ ನಾಗಿರುತ್ತಾನೆ. ಜ್ಞಾನಪಿಪಾಸುವಾದವನು ಬ್ರಾಹ್ಮಣ; ಅಧಿಕಾರಾ ಕಾಂಕ್ಷಿ ಕ್ಷತ್ರಿಯ; ವ್ಯವಹಾರ ವಿಹಾರಿ ವೈಶ್ಯ; ಸೇವಾವಲಂಬಿ ಶೂದ್ರನು. ಎಲ್ಲ ಕಾಲದಲ್ಲಿಯೂ ಈ ನಾಲ್ಕು ರೀತಿಯ ಜನ ಇರು ತ್ತಾರೆ. ಯಾವ ಒಂದು ಕುಲದಲ್ಲಿ ಹುಟ್ಟಿದವನೂ ಈ ನಾಲ್ಕರಲ್ಲಿ ಯಾವ ಒಂದು ಮನೋಧರ್ಮದವನಾಗಿಯೂ ಇರಬಹುದು. ಆಶ್ರಮಗಳ ಮಾತೂ ಅಷ್ಟೇ ನಾಲ್ಕು ಆಶ್ರಮ ಇದ್ದರೂ

ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಥ ಭಿಕ್ಷುಕಃ
ಯಥೋಕ್ತಕಾರಿಣಸ್ಸರ್ವೇ ಗಚ್ಛಂತಿ ಪರಮಾಂ ಗತಿಂ
ಏಕೋವಾಪ್ಯಾಶ್ರಮಾನೇತಾನ್ ಯೋನುತಿಷ್ಠೇದ್ಯಥಾ ವಿಧಿ
ಅಕಾಮದ್ವೇಷಸಂಯುಕ್ತಃ ಸಪರತ್ರ ಮಹೀಯತೇ

ಮಾನವ ಎಂಬ ಒಂದು ಸಾಮಾನ್ಯ ಕುಲಕ್ಕೆ ಸೇರಿದವರೆಂಬ ದೃಷ್ಟಿಯಿಂದ ನಮ್ಮಲ್ಲಿ ಪ್ರತಿಯೊಬ್ಬನೂ ತನ್ನ ವೃತ್ತಿಯಲ್ಲಿ ಧ್ಯೇಯವನ್ನು ಕಂಡು ಕೊಂಡು ಅದನ್ನು ಸಾಧಿಸಲು ಯತ್ನಮಾಡಬೇಕಾಗಿದೆ. ಜೊತೆಗೆ ಯಾವನೂ ಹುಟ್ಟಿನಿಂದ ಹೀನಕುಲದವನೆಂಬ ಕಾರಣಕ್ಕಾಗಿ ಜೀವನದ ಧ್ಯೇಯವನ್ನೇ ಕಡಮೆಮಾಡಿಕೊಳ್ಳಬೇಕಾದ ಕಾರಣವಿಲ್ಲ. ಮಾಂಸ ಮಾರುವವನು ಕೂಡ ಧರ್ಮಿಷ್ಠನಾಗಿರಬೇಕು; ಮುಕ್ತಿಯನ್ನು ಗುರಿ ಯಾಗಿರಿಸಿಕೊಳ್ಳಬೇಕು.

## (v) ದೇಹ, ಆತ್ಮ, ಪರಮಾತ್ಮ

ಮನುಷ್ಯನಿಗೆ, ಅರ್ಥ ಕಾಮ ಅಲ್ಲ, ಧರ್ಮ ಮುಖ್ಯ ಆಗುವುದಕ್ಕೆ ಕಾರಣ ಅವನು ಅಂತತಃ ದೇಹ ಅಲ್ಲ ಒಂದು ಆತ್ಮ ತತ್ವ ಎಂಬುದು. ದೇಹವನ್ನೂ ಅದರಿಂದ ಉಪಲಬ್ಧವಾಗಿರುವ ಇಂದ್ರಿಯಗಳು ಮನಸ್ಸು ಎಲ್ಲವನ್ನೂ ಬಳಸಿ ಬಾಳುವೆಯನ್ನು ಅನುಭವಿಸುತ್ತಿರುವ ತತ್ವ ಒಂದಿದೆ. ಅದು 'ನಾನು' ಎನ್ನುತ್ತದೆ. ಅದು ಆತ್ಮ. ಮನುಷ್ಯನು ತಾನು ಆತ್ಮ

ಎಂಬುದನ್ನು, ಹಾಗೆಯೆ ತನ್ನ ಎದುರಿಗೆಲ್ಲ ತನ್ನಂತೆಯೆ ಆತ್ಮ ತತ್ತ್ವವಿದೆ ಎಂಬುದನ್ನು, ಗುರುತಿಸಬೇಕು. ಜೀವನದಲ್ಲಿ ಸದಾ ಇದನ್ನು ನೆನೆದು ನಡೆಯಬೇಕು.

ಏವಮೇಷ ಜಗತ್ಸೃಷ್ಟಿಂ ಕುರುತೇ ಮಾಯಯಾ ಪ್ರಭುಃ
ನಜಾನಾತಿ ವಿಮೂಢಾತ್ಮಾ ಕಾರಣಂ ಚಾತ್ಮನೋಽಹ್ಯಸೌ
ಧ್ಯಾತಾ ದ್ರಷ್ಟಾ ತಥಾ ಮಂತಾ ಬೋದ್ಧಾದೃಷ್ಟಾನ್ಸಏವ ಸಃ
ಕೋ ವಿದ್ವಾನ್ ಪರಮಾತ್ಮಾನಂ ಅನಂತಂ ಲೋಕಭಾವನಂ
ಏವಂ ಸರ್ವೇಷು ಭೂತೇಷು ಗೂಢಶ್ಚರತಿ ಸಂವೃತಃ
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ತತ್ತ್ವದರ್ಶಿಭಿಃ
ತಂ ಪೂರ್ವಾಪರ ರಾತ್ರೇಷು ಯುಂಜಾನಃ ಸತತಂ ಬುಧಃ
ಲಘ್ವಾಹಾರೋ ವಿಶುದ್ಧಾತ್ಮಾ ಪಶ್ಯತ್ಯಾತ್ಮಾನಮಾತ್ಮನಿ
ಯಾತಿ ದೇಹಾಂತರಂ ಪ್ರಾಣೀ ಶರೀರಂತು ವಿಶೀರ್ಯತೇ
ನಶರೀರಾಶ್ರಿತೋ ಜೀವಃ ತಸ್ಮಿನ್ನಷ್ಟೇ ಪ್ರಣಶ್ಯತಿ
ಸ ತಸ್ಮಿನ್ ಸಂಶ್ರಿತೋ ದೇಹೇಹ್ಯಬ್ಬಿಂದುರಿವ ಪುಷ್ಕರೇ
ಕ್ಷೇತ್ರಜ್ಞಂ ತಂ ವಿಜಾನೀಹಿ ನಿತ್ಯಂ ಲೋಕಹಿತಾತ್ಮಕಂ

## (vi) ಇಂದ್ರಿಯ ನಿಗ್ರಹ

ನಾನು ಎನ್ನುವುದು ದೇಹಕ್ಕಿಂತ ಹೆಚ್ಚಾಗಿ ಆತ್ಮ ಆದಕಾರಣದಿಂದ ಮನುಷ್ಯನು ತನ್ನ ದೇಹದ ಸುಖವನ್ನು ಮಾತ್ರ ಎಣಿಸಿದರೆ ಆಗದು. ತನ್ನ ಎಲ್ಲ ಸಂಪತ್ತನ್ನೂ ಆತ್ಮದ ಕ್ಷೇಮಕ್ಕಾಗಿ ವಿನಿಯೋಗಿಸಬೇಕು. ಎಂದರೆ, ಇಂದ್ರಿಯಗಳನ್ನು ಬಳಸುತ್ತ ಅವುಗಳಿಂದ ಸುಖವನ್ನು ಪಡೆಯುತ್ತ ಅವನು ಇಂದ್ರಿಯಗಳ ಅಥವಾ ಅವು ತರುವ ಸುಖಗಳ ದಾಸನಾಗ ಬಾರದು. ತಾನು ಧಣಿ, ಅವು ಆಳಿಗ, ಎಂಬುದನ್ನು ಜ್ಞಾಪಕದಲ್ಲಿಟ್ಟು ಕೊಳ್ಳಬೇಕು; ಇಂದ್ರಿಯಗಳು ಎಳೆದಲ್ಲಿಗೆ ಹೋಗದೆ ಅವುಗಳನ್ನು ತಡೆದು ತನ್ನ ಅಂಕೆಯಲ್ಲಿ ಇಟ್ಟುಕೊಳ್ಳಬೇಕು. ಇದೇ ಇಂದ್ರಿಯ ನಿಗ್ರಹ.

ಧರ್ಮವ್ಯಾಧನು ಕೌಶಿಕನಿಗೆ ಮಾಡಿದ ಉಪದೇಶದಲ್ಲಿ ಜೀವನಿಗೆ ಶರೀರವು ರಥ ಎಂದು ವರ್ಣಿಸಿದೆ. ಇದು ಉಪನಿಷತ್ತುಗಳಲ್ಲಿ ಬರುವ ಉಪಮಾನ. ಈ ರಥಕ್ಕೆ ಆತ್ಮ ಸಾರಥಿ, ಇಂದ್ರಿಯಗಳು ಕುದುರೆಗಳು. ರಥದಲ್ಲಿ ಕುಳಿತವನು ಕ್ಷೇಮದಿಂದ ಮುಂದರಿಯಬೇಕಾದರೆ ಕುದುರೆಗಳು

ಸಾರಥಿಯ ಸ್ವಾಧೀನದಲ್ಲಿರಬೇಕು. ಸಾರಥಿ ಕುದುರೆಗಳನ್ನು ಕಡಿವಾಣ ದಿಂದ ತನ್ನ ಅಧೀನದಲ್ಲಿರಿಸಿಕೊಂಡಿರುವಂತೆ ಮನುಷ್ಯನು ತನ್ನ ಇಂದ್ರಿಯ ಗಳನ್ನು ನಿಗ್ರಹಿಸಿ ಬಾಳಬೇಕು. ಹಾಗಲ್ಲದೆ ತಾನೇ ಇಂದ್ರಿಯಗಳಿಗೆ ಅಧೀನನಾದರೆ ಅವನ ಬುದ್ಧಿಯನ್ನು ಅವನ ಮನಸ್ಸು ನಾಶಮಾಡುತ್ತದೆ. ಸಮುದ್ರದಲ್ಲಿ ಬಿರುಗಾಳಿ ನಾವೆಯನ್ನು ಮುಳುಗಿಸುವಂತೆ ಅವನ ಇಂದ್ರಿಯಗಳು ಮನಸ್ಸನ್ನು ಮುಳುಗಿಸಿಬಿಡುವುವು. ಇಂದ್ರಿಯಗಳಿಂದ ಬರುವ ಸುಖಕ್ಕೆ ಮನುಷ್ಯನು ಮೋಸ ಹೋಗಬಾರದು. ಇಂದ್ರಿಯ ನಿಗ್ರಹವೇ ತಪಸ್ಸು. ಅವುಗಳ ನಿಗ್ರಹ ಸ್ವರ್ಗ: ಅನಿಗ್ರಹ ನರಕ.

ಷಣ್ಣಾಂ ಆತ್ಮನಿಯುಕ್ತಾನಾಂ ಇಂದ್ರಿಯಾಣಾಂ ಪ್ರಮಾಥಿನಾಂ
ಯೋ ಧೀರೋ ಧಾರಯೇದ್ರಶ್ಮೀನ್ ಸಸ್ಯಾತ್ ಪರಮಸಾರಥಿಃ
ಇಂದ್ರಿಯಾಣ್ಯೇವ ಸಂಯಮ್ಯ ತಪೋಭವತಿ ನಾನ್ಯಥಾ
ಇಂದ್ರಿಯಾಣ್ಯೇವ ತತ್ಸರ್ವಂ ಯತ್ಸ್ವರ್ಗನರಕಾವುಭೌ
ನಿಗೃಹೀತ ವಿಸೃಷ್ಟಾನಿ ಸ್ವರ್ಗಾಯ ನರಕಾಯಚ

ಇಂದ್ರಿಯ ನಿಗ್ರಹಮಾಡಬೇಕೆನ್ನುವುದಕ್ಕೆ ಮುಖ್ಯಕಾರಣ, ಅವು ಗಳನ್ನು ಅನುಭವದಿಂದ ತೃಪ್ತಿಗೊಳಿಸಲಾಗುವುದಿಲ್ಲ, ಎನ್ನುವುದು. ಯಯಾತಿ ಇದನ್ನು ತನ್ನ ಜೀವನದಲ್ಲಿ ಕಂಡುಕೊಂಡನು. ಕಾಮ ಉಪಭೋಗದಿಂದ ಶಮನವಾಗುವುದಿಲ್ಲ. ಆಶೆಗೆ ದಾರಿಕೊಡುತ್ತಾ ಹೋದರೆ ಚತುಸ್ಸಮುದ್ರ ಪರ್ಯಂತವಾದ ಭೂಮಿಯೆಲ್ಲ ಕೈ ಸೇರಿದರೂ ಅದು ಕೊನೆಗಾಣುವುದಿಲ್ಲ. ಲೋಕದಲ್ಲಿರುವ ಎಲ್ಲ ವ್ರೀಹಿಯವವನ್ನೂ ಎಲ್ಲ ಹಿರಣ್ಯ ಪಶುವನ್ನೂ ಸ್ತ್ರೀ ಸಮುದಾಯವನ್ನೂ ಒಬ್ಬನ ಪಾಲಿಗೆ ಕೊಡಬಹುದು. ಆಗಲೂ ಅವನ ಆಶೆ ತೀರುವುದಿಲ್ಲ; ಹೆಚ್ಚುತ್ತದೆ.

ಯಥೈವ ಶೃಂಗಂ ಗೋಃ ಕಾಲೇ ವರ್ಧಮಾನಸ್ಯ ವರ್ಧತೇ
ತಥೈವ ತೃಷ್ಣಾ ವಿತ್ತೇನ ವರ್ಧಮಾನೇನ ವರ್ಧತೇ

ಇನ್ನೊಂದು ಕಾರಣ ಈ ಆಸೆ ಎನ್ನುವುದು ಬರಿಯ ದಾಹ ಹೊರತಾಗಿ ಅನುಭವದ ಶಕ್ತಿಗೆ ಅನುಗುಣವಾದಷ್ಟು ಮಾತ್ರ ಇರುವುದಿಲ್ಲ.

ಯ ಇಮಾಂ ಪೃಥಿವೀಂ ಕೃತ್ಸ್ನಾಂ ಏಕಚ್ಛತ್ರಾಂ ಪ್ರಶಾಸ್ತಿಹ
ಏಕಮೇವ ಸ ವೈ ರಾಜಾ ಪುರಮಧ್ಯಾವಸತ್ಯುತ

ತತ್ಪುರೇ ಚೈಕಮೇವಾಸ್ಯ ಗೃಹಂ ಯದಧಿತಿಷ್ಠತಿ
ಗೃಹೇಽಶಯನಮಸ್ಯೈಕಂ ನಿಶಾಯಾಂ ಯತ್ರಲೀಯತೇ
ಶಯ್ಯಾರ್ಧಂ ತತ್ರ ಚಾಸ್ಯತ್ರ ಸ್ತ್ರೀಪೂರ್ವಮಧಿತಿಷ್ಠತಿ
ತದನೇನ ಪ್ರಸಂಗೇನ ಫಲೇನಾಲ್ಪೇನ ಯುಜ್ಯತೇ

ಎಂಥ ಪುಣ್ಯವಂತನಾದ ರಾಷ್ಟ್ರಾಧೀಶನಾದರೂ ಎಷ್ಟು ದೊಡ್ಡ ಅರಮನೆ ಯಲ್ಲಿ ವಾಸಮಾಡಿದರೂ ಸುಖದ ಎಷ್ಟು ಉಪಕರಣಗಳನ್ನು ಒದಗಿಸಿ ಕೊಂಡಿದ್ದರೂ ಯಾವುದೊ ಒಂದು ಹೊತ್ತಿನಲ್ಲಿ ತನ್ನ ಅರಮನೆಯ ಒಂದು ಕೋಣೆಯಲ್ಲಿ ಒಂದು ಮಿತಿಯ ಉದ್ದಗಲದ ಹಾಸಿಗೆಯಲ್ಲಿ ಒಂದು ಮಿತಿಯ ಸುಖವನ್ನು ಪಡಬಹುದು ಹೊರತಾಗಿ ತುಂಬ ಊಟ ಇದೆಯೆಂದು ಹತ್ತು ಜನದ ಊಟವನ್ನು ಮಾಡಲಾಗುವುದಿಲ್ಲ, ಅನೇಕ ಹೆಂಡಿರಿರುವರೆಂದು ನೂರು ಜನರನ್ನು ಭೋಗಿಸಲಾಗುವುದಿಲ್ಲ. ಆಸ್ತಿ ಯನ್ನು ಬೆಳಸಿಕೊಳ್ಳುವುದೂ ಉಪಭೋಗ ಸಾಮಗ್ರಿಯನ್ನು ಮಿತಿಮೀರಿ ಕೂಡಿಡುವುದೂ ಶೇಖರಿಸಬೇಕೆಂಬ ಚಾಪಲ್ಯದ ತೃಪ್ತಿಗಾಗಿ ಹೊರತು ಬೇರೆ ಅಲ್ಲ. ಎಷ್ಟು ಸಾಮಗ್ರಿ ಇದ್ದರೂ ಪಡೆಯಬಹುದಾದ ಸುಖ ಶಕ್ತಿಯನ್ನು ಅವಲಂಬಿಸಿರುತ್ತದೆ. ಅದು ಪುಣ್ಯವಂತನಿಗೆ ಹೆಚ್ಚಲ್ಲ; ಬಡವನಿಗೆ ಕಡಮೆಯಲ್ಲ. 'ಸಹಸ್ರಿಣೋಽಪಿ ಜೀವಂತಿ ಶತಿನೋಽಪಿ ಜೀವಂತಿ' ಸಾವಿರವಿದೆಯೆಂದು ಧನಿಕನು ಹೊನ್ನನ್ನು ತಿನ್ನುವುದಿಲ್ಲ. ಇರುವುದು ನೂರೇ ಎಂದು ಬಡವನು ಜೀವಿಸದೆ ಹೋಗುವುದಿಲ್ಲ. ಆದ ಕಾರಣ ವಿದುರನು 'ಧೃತರಾಷ್ಟ್ರ ವಿಮುಂಚ ಇಚ್ಛಾಂ ನತ ಕಶ್ಚಿತ್ ನ ಜೀವತಿ' ಎಂದನು.

ಈ ಮಿತಿಯನ್ನರಿತು ಬಾಳುವುದಾದರೆ ಸಾಮಾನ್ಯವಾದ ಜೀವನ ವನ್ನು ನಡಸುವುದು ತಪ್ಪಲ್ಲ.

ಸಂಭಾವ್ಯ ಪುತ್ರಾನ್ ಕಾಲೇನ ಯೌವನಸ್ಥಾನ್ನಿವೇಶ್ಯಚ
ಸಮರ್ಥಾನ್ ಜೀವನೇ ಜ್ಞಾತ್ವಾ ಮುಕ್ತಶ್ಚರ ಯಥಾಸುಖಂ
ಭಾರ್ಯಾಂ ಪುತ್ರವತೀಂ ವೃದ್ಧಾಂ ಲಾಲಿತಾಂ ಪುತ್ರವತ್ಸಲಾಂ
ಜ್ಞಾತ್ವಾ ಪ್ರಜಹಿ ಕಾಲೇನ ಪರಾರ್ಥಮನುವೃಶ್ಯಚ

ಮನೆ ಇರಲಿ ಮಠ ಇರಲಿ, ಮದುವೆಯಾಗು, ಧನವನ್ನು ಗಳಿಸು, ಮಕ್ಕ ಳನ್ನು ಪಡೆದು ಅವರನ್ನು ಬೆಳೆಸಿ ಹಿರಿಯರನ್ನು ಮಾಡು. ಎಲ್ಲ ಆದ

ಮೇಲೆಯೆ ವೈರಾಗ್ಯವನ್ನು ಅಂಗೀಕರಿಸಿ ಸಂಸಾರದಿಂದ ವಿಮುಖನಾಗು. ವೈರಾಗ್ಯಕ್ಕೆ ಎಂದು ಅವಸರಪಡಬೇಕಾದದ್ದಿಲ್ಲ. ಹಿಡಿತದಲ್ಲಿಟ್ಟುಕೊಂಡು ಇಂದ್ರಿಯಗಳನ್ನು ಬಳಸಿಕೊಂಡವನು ಅವುಗಳನ್ನು ಜಯಿಸಿದಂತೆಯೇ ಸರಿ.

## ೨೪
## ಭೂತಹಿತ ಧರ್ಮ

### (i) ಪ್ರಾಣ

ಇಂದ್ರಿಯಗಳನ್ನು ನಿಗ್ರಹಿಸಿ ಆತ್ಮದ ಶ್ರೇಯಸ್ಸಿಗಾಗಿ ಬಾಳುವ ಮನುಷ್ಯನು ಧರ್ಮದಲ್ಲಿ ನಡೆಯುತ್ತಿದ್ದಾನೆ. ಧರ್ಮ ಯಾವುದು ಎಂದು ಬಾಯಿಂದ ವರ್ಣಿಸಿ ಹೇಳುವುದು ಸುಲಭವಲ್ಲ. ಧರ್ಮದ ಸ್ವರೂಪ ಬಹು ಸೂಕ್ಷ್ಮ. ಅದನ್ನು ಶ್ರುತಿ ಪ್ರಮಾಣ ಎಂದು ಹಿರಿಯರು ಹೇಳುವರು. ಧರ್ಮದಲ್ಲಿ ಅನೇಕ ಕವಲು ಇದೆ. ಅದು ಅನಂತ ಬೇರೆ ಆಗಿದೆ. ಮುಖ್ಯವಾಗಿ ಒಂದು ಚರ್ಯೆ ಧರ್ಮವೆ ಅಧರ್ಮವೆ ಎನ್ನುವಲ್ಲಿ ಅದನ್ನು ನಿಶ್ಚಯಿಸುವ ಲಕ್ಷಣ ಇದು. ಪ್ರಾಣಿಗಳಿಗೆ ಹಿತವಾದದ್ದು ಯಾವುದು ಅದು ಧರ್ಮ. ಹಿತವಲ್ಲದ್ದೆಲ್ಲ ಅಧರ್ಮ.

ಪ್ರಭವಾರ್ಥಾಯ ಭೂತಾನಾಂ ಧರ್ಮಪ್ರವಚನಂ ಕೃತಂ
ಯಃ ಸ್ಯಾತ್ಪ್ರಭವಸಂಯುಕ್ತಃ ಸ ಧರ್ಮ ಇತಿ ನಿಶ್ಚಯಃ

ಈ ಪ್ರಾಣಿ ಎನ್ನುವುದು ಮನುಷ್ಯ ಮಾತ್ರ ಅಲ್ಲ. ಎಲ್ಲ ಜೀವಗಳಲ್ಲಿಯೂ ಪ್ರಾಣವಿದೆ; ವೃಕ್ಷ ಗುಲ್ಮಲತೆಗಳಲ್ಲಿ ಪ್ರಾಣವಿದೆ.

ಘನಾನಾಮಪಿವೃಕ್ಷಾಣಾಂ ಆಕಾಶೋಽಸ್ತಿ ನ ಸಂಶಯಃ
ತೇಷಾಂ ಪುಷ್ಪಫಲವ್ಯಕ್ತಿಃ ನಿತ್ಯಂ ಸಮುಪಪದ್ಯತೇ
ಊಷ್ಮತೋಮ್ಲಾಯತೇ ವರ್ಣಂ ತ್ವಕ್ಫಲಂ ಪುಷ್ಪಮೇವಚ
ಮ್ಲಾಯತೇ ಶೀರ್ಯತೇ ಚಾಪಿ ಸ್ಪರ್ಶಸ್ತೇನಾತ್ರವಿದ್ಯತೇ
ವಲ್ಲೀ ವೇಷ್ಟಯತೇ ವೃಕ್ಷಂ ಸರ್ವತಶ್ಚೈವ ಗಚ್ಛತಿ
ನ ಹ್ಯದೃಷ್ಟೇಶ್ಚ ಮಾರ್ಗೋಽಸ್ತಿ ತಸ್ಮಾತ್ಪಶ್ಯಂತಿ ಪಾದಪಾಃ
ಸುಖದುಃಖಯೋಶ್ಚಗ್ರಹಣಾತ್ ಛಿನ್ನಸ್ಯಚ ವಿರೋಹಣಾತ್
ಜೀವಂ ಪಶ್ಯಾಮಿ ವೃಕ್ಷಾಣಾಂ ಅಚೈತನ್ಯಂ ನ ವಿದ್ಯತೇ

ಎಲ್ಲ ತೆರತೆರನ ಪ್ರಾಣಿಗಳ ವಿಷಯದಲ್ಲಿಯೂ ನಾವು ಹಿತವನ್ನಾಚರಿಸ ಬೇಕು. ಧರ್ಮರಾಯನು ಧರ್ಮದಮೂರ್ತಿ ಎನ್ನಿಸಿಕೊಂಡದ್ದು ಜೊತೆಗೆ ಬಂದ ನಾಯನ್ನು ಬಿಟ್ಟು ಸ್ವರ್ಗಕ್ಕೆ ಹೋಗಲು ಒಲ್ಲದ ಕಾರಣದಿಂದ. ಎಷ್ಟೋ ಕಷ್ಟದಿಂದ ಧರ್ಮವನ್ನಾಚರಿಸಿ ಬಂದ ಅಂಥ ಮಹನೀಯ ಜೀವಕ್ಕಾದರೂ ಈ ಪರೀಕ್ಷೆ ಒಂದು ಕೊನೆಯ ಪರೀಕ್ಷೆ ಆಗಿ ಬಂದಿತು. 'Love me, love my dog,' ಎನ್ನುವುದು ಆಂಗ್ಲರಲ್ಲಿ ಒಂದು ಹಾಸ್ಯದ ಗಾದೆ. ಎಂದರೆ ಮನುಷ್ಯನೇನೊ ನಮಗೆ ಬೇಕಾಗಬಹುದು, ಆ ಕಾರಣ ದಿಂದ ಅವನ ನಾಯನ್ನೂ ನಾವು ಒಪ್ಪಿಕೊಳ್ಳಲಾಗುತ್ತದೆಯೆ, ಎಂದು. ಭಾರತದ ಧರ್ಮದಲ್ಲಿ ಇದು ಹಾಸ್ಯದ ಗಾದೆಯಲ್ಲ: ಶಿಷ್ಟಾಚಾರದ ಒಂದು ಸೂತ್ರ. ದೇವತೆಗಳು ಯುಧಿಷ್ಠಿರನನ್ನು ಮಾತ್ರ ಸ್ವರ್ಗಕ್ಕೆ ಕರೆದರೆ ಅವನು ಅವರ ಆಹ್ವಾನವನ್ನು ಸ್ವೀಕರಿಸುವಂತಿಲ್ಲ. ಅದೇನು ಅವನು ಬಹುದಿವಸ ಸಾಕಿ ಅವನ ಜೊತೆಯಲ್ಲಿ ಬೆಳೆದು ಅವನಿಗೆ ಸೇವೆ ಸಲ್ಲಿಸಿದ್ದ ನಾಯಿ ಅಲ್ಲ: ಅವನು ಊರಿಂದ ಹೊರಟಾಗ ತಾನಾಗಿ ಬಂದು ಜೊತೆಗೆ ಸೇರಿಕೊಂಡಿತು. ಉಳಿದವರೆಲ್ಲ ತೀರಿಕೊಂಡು ಜೊತೆಗೆ ಇದ್ದ ಇವನೊಬ್ಬನೂ ಸ್ವರ್ಗಕ್ಕೆ ಹೊರಟು ಹೋದರೆ ಅದಕ್ಕೆ ಅಲ್ಲಿ ಜೊತೆ ಯಾರು ? ಯುಧಿಷ್ಠಿರನ ಮನಸ್ಸಿನ ಈ ಮರುಕ ಅವನನ್ನು ದೇವಲೋಕದ ಉಳಿದೆಲ್ಲ ವಾಸಿಗಳಿಗಿಂತ ಹಿರಿಯನೆನಿಸಿತು.

ಜೊತೆಯ ಜೀವದ ವಿಷಯದಲ್ಲಿ ಹೀಗೆ ದಾಕ್ಷಿಣ್ಯದಿಂದ, ಕನಿಕರ ದಿಂದ ನಡೆದುಕೊಳ್ಳುವುದು ಆನೃಶಂಸ್ಯ. ಆನೃಶಂಸ್ಯ ಯಾವುದೇ ಜೀವದಲ್ಲಿ ಉನ್ನತಾನುಭವದ ಕ್ಷಣಗಳಲ್ಲಿ ವ್ಯಕ್ತವಾಗಬಹುದು. ತನ್ನ ಕಷ್ಟ ತನ್ನ ಸುಖ ಎನ್ನುವುದನ್ನು ಮುಂದುಮಾಡಿಕೊಳ್ಳದೆ ಇನ್ನೊಂದು ಜೀವದ ಕಷ್ಟಸುಖಗಳನ್ನು ಮುಖ್ಯ ಎಂದೆಣಿಸಿ ನಡೆದುಕೊಳ್ಳುವುದೇ ಚಿನ್ನ.

ಜ್ಯೋತಿರಾತ್ಮನಿನಾನ್ಯತ್ರ ಸರ್ವಜಂತುಷು ತತ್ಸಮಂ
ಸ್ವಯಂ ಚ ಶಕ್ಯತೇ ದ್ರಷ್ಟುಂ ಸುಸಮಾಹಿತ ಚೇತಸಾ

ಬಹುಪಾಲು ಒಳ್ಳೆಯವನಾದ ಯುಧಿಷ್ಠಿರನು ಮಾತ್ರ ಅಲ್ಲ, ಇವನಿಗಿಂತ ಎಷ್ಟೋ ಕಡಮೆಯ ಪರಿಪಾಕದ ಜನ ಈ ಗುಣದಿಂದ ಒಳ್ಳೆಯವರು.

ಎನ್ನಿಸಿಕೊಂಡಿದ್ದಾರೆ. ಕುಂತಿ ವೀರರಾದ ತನ್ನ ಮಕ್ಕಳಿಗಾಗಿ ಕೊರಗಿದಳು. ದ್ರೌಪದಿ ವೀರಮಾತೆಯಾದ ತನ್ನ ಅತ್ತೆಗಾಗಿ ಕೊರಗಿದಳು. ಪಾಂಡವ ಸೋದರರು ಸುಕುಮಾರಿಯಾದ ಪಾಂಚಾಲಪುತ್ರಿ ತಮ್ಮ ರಾಣಿ ಕಷ್ಟಪಡುವಳಲ್ಲಾ ಎಂದು ನೊಂದರು. ಕರ್ಣನು ತನ್ನನ್ನು ನಂಬಿದ ದುರ್ಯೋಧನನು ಉದ್ಧಾರವಾಗಲಿಲ್ಲವಲ್ಲ ಎಂದು ಖೇದಪಟ್ಟನು. ದುರ್ಯೋಧನನು ತಮ್ಮ ದುಶ್ಶಾಸನನಿಗಾಗಿ ಗೋಳಾಡಿದನು. ಈ ಎಲ್ಲ ಜೀವ ಆ ಕ್ಷಣದಲ್ಲಿ ಬೇರೊಂದು ಪ್ರಾಣಕ್ಕೆ ಹಿತವನ್ನು ಕೋರಿತು, ಅಹಿತವಾಯಿತೇ ಎಂದು ನೊಂದಿತು.

ಆನೃಶಂಸ್ಯದ ಒಂದು ರೂಪ ಆಶ್ರಯಾಭಿಮಾನ. ಕೆಲವು ಕಾಲ ನಮ್ಮನ್ನು ಕಾಪಾಡಿದ ಸ್ಥಳ ದುರ್ಗತಿಗೆ ಬರಬಹುದು: ಅಷ್ಟುಮಾತ್ರಕ್ಕೆ ಅದನ್ನು ಬಿಡಬಾರದು. ಒಂದು ಮರದ ಮೇಲೆ ಬಾಳಿದ ಗಿಳಿ ಆ ಮರ ಒಣಗಲಾರಂಭಿಸಿದಾಗ ಅದನ್ನು ಬಿಡಲಿಲ್ಲ. ಇಂದ್ರನು ಬಂದು ಇದೇನು ಕಾರಣದಿಂದ ಎಂದು ಕೇಳಿದನು. ಗಿಳಿ "ಸಮಸ್ಥಮುಪಜೀವನ್ ವೈ ವಿಷಮಸ್ಥಂ ಕಥಂ ತ್ಯಜೇತ್" ಎಂದು ಉತ್ತರಕೊಟ್ಟಿತು. ಇಂದ್ರನು ಮರಕ್ಕೆ ಅಮೃತಸೇಚನ ಮಾಡಿದನು. ಮರ ಮತ್ತೆ ಚಿಗುರಿತು.

ಕೃತಜ್ಞತೆ, ಗುರುಭಕ್ತಿ, ದೇಶಪ್ರೇಮ, ಲೋಕಸೇವಾ ಪ್ರವೃತ್ತಿ ಇವೆಲ್ಲ ಈ ಸೂತ್ರದಿಂದ ಮೂಡುತ್ತವೆ.

ಸರ್ವಭೂತಹಿತೇರತಃ: ಎಲ್ಲ ಜೀವಿಗಳ ವಿಷಯದಲ್ಲಿ ಹಿತವನ್ನು ಆಚರಿಸಿದನು: ಎನ್ನುವುದು ಅತ್ಯುತ್ತಮನಾದ ಮಾನವನ ಅತ್ಯುನ್ನತಸ್ತುತಿ.

## (ii) ಅಹಿಂಸೆ

ಇಂಥ ಮನುಷ್ಯನು ಅವಶ್ಯವಾಗಿ ಕೆಲವು ಜೀವನ ಸೂತ್ರಗಳನ್ನು ಅವಲಂಬಿಸುತ್ತಾನೆ. ಅವುಗಳಲ್ಲಿ ಮೊದಲನೆಯದು ಅಹಿಂಸೆ. ಎಂದರೆ ಎದುರ ಜೀವಕ್ಕೆ ಹಿಂಸೆ ಆಗದಂತೆ ನಡೆದುಕೊಳ್ಳುವುದು. ಅದು ಉಳಿದೆಲ್ಲ ಸೂತ್ರಗಳನ್ನು ಒಳಗೊಳ್ಳುತ್ತದೆ.

**ಯಥಾನಾಗಪದೇಽನ್ಯಾನಿ ಪದಾನಿ ಪದಗಾಮಿನಾಂ**
**ಸರ್ವಾಣ್ಯೇವಾಪಿಧೀಯಂತೇ ಪದಜಾತಾನಿಕೌಂಜರೇ**

ಏವಂ ಲೋಕೇಷ್ವಹಿಂಸಾತು ನಿರ್ದಿಷ್ಟಾ ಧರ್ಮತಃ ಪುರಾ
ಪ್ರಾಣಾಯಥಾತ್ಮನೋಽಭೀಷ್ಟಾ ಭೂತಾನಾಮಪಿ ವೈ ತಥಾ
ಆತ್ಮೌಪಮ್ಯೇನ ಗಂತವ್ಯಂ ಬುದ್ಧಿಮದ್ಭಿಃ ಕೃತಾತ್ಮಭಿಃ
ಅಹಿಂಸಾಪರಮೋಧರ್ಮಃ ತಥಾಽಹಿಂಸಾ ಪರಂತಪಃ
ಅಹಿಂಸಾ ಪರಮಂ ಸತ್ಯಂ ತತೋ ಧರ್ಮಃ ಪ್ರವರ್ತತೇ

ಧರ್ಮವ್ಯಾಧನು "ಅಹಿಂಸಾ ಪರಮೋಧರ್ಮಃ ಸ ಚ ಸತ್ಯೇ ಪ್ರತಿಷ್ಠಿತಃ" ಎಂದು ಹೇಳುತ್ತಾನೆ. ಆದರೆ ಜೀವ ಜೀವವನ್ನು ಹಿಂಸಿಸದೆ ಬಾಳುವುದು ಸಾಧ್ಯವೇ ಎಂದು ಸಂದೇಹ ಹುಟ್ಟುತ್ತದೆ. "ಜೀವಾಹಿ ಬಹವೋ ಬ್ರಹನ್ ವೃಕ್ಷೇಷು ಚ ಫಲೇಷು ಚ । ಉದಕೇ ಬಹವಶ್ಚಾಪಿ ತತ್ರಕಿಂ ಪ್ರತಿಭಾತಿತೇ ?" ಕಣ್ಣಿಗೆ ಕಂಡು ಕಣ್ಣಿಗೆ ಕಾಣದೆ ಎಲ್ಲಿಯೂ ಜೀವ; ಎಷ್ಟೋ ಜೀವ. ಜೀವವನ್ನು ತೆಗೆಯದೆ ಉಸಿರಾಡುವಂತಿಲ್ಲ, ನೀರು ಕುಡಿಯುವಂತಿಲ್ಲ. ಏನನ್ನೂ ಚೇಯಿಸುವಂತಿಲ್ಲ, ಯಾವುದನ್ನೂ ತಿನ್ನುವಂತಿಲ್ಲ. "ಕೇ ನ ಹಿಂಸಂತಿ ಜೀವಾನ್ ವೈ ಲೋಕೇಸ್ಮಿನ್ ದ್ವಿಜಸತ್ತಮ। ಬಹು ಸಂಚಿಂತ್ಯ ಇಹ ವೈ ನಾಸ್ತಿಕಶ್ಚಿತ್ ಅಹಿಂಸಕಃ." ನಿಜವಾಗಿ ನೋಡಿದರೆ, ಅಹಿಂಸಕನೊಬ್ಬನೂ ಇಲ್ಲ.

ಎಂದರೆ, ಪ್ರತ್ಯಕ್ಷವಾಗಿ ಜೀವವನ್ನು ತೆಗೆಯುವವರೂ ಅನಿವಾರ್ಯವಾಗಿ ತಾವೇ ಅರಿಯದೆ ಯಾವುದೋ ಜೀವಕ್ಕೆ ಕೊನೆಯನ್ನು ತರುವವರೂ ಒಂದೇ ಸಮನೆಂದಲ್ಲ. ಅನುಶಾಸನಿಕ ಪರ್ವದಲ್ಲಿ ಅಹಿಂಸೆಯ ವಿಚಾರವನ್ನು ಸ್ವಲ್ಪ ವಿಸ್ತಾರವಾಗಿ ಪರಿಶೀಲಿಸಿದೆ. ಜೀವವನ್ನು ತೆಗೆಯುವುದು ಹಿಂಸೆ ಎಂದು ಭಾವಿಸುವುದಾದರೆ, ಹಾಗೆ ಮಾಡುವ ಜನರನ್ನು ಮೂರು ಗುಂಪಾಗಿ ವಿಂಗಡಿಸಬಹುದು. ವೇದೋಕ್ತವಾದ ಕರ್ಮಕ್ಕೆಂದು ಒಂದು ಜೀವವನ್ನು ತೆಗೆಯುವವರು, ತಮ್ಮ ಹೊಟ್ಟೆಯನ್ನು ತುಂಬಿಕೊಳ್ಳುವುದಕ್ಕೆಂದು ಒಂದು ಜೀವವನ್ನು ತೆಗೆಯುವವರು, ತಿಳಿಯದೆ ಜೀವವನ್ನು ತೆಗೆಯುವವರು. ಮಹಾಭಾರತದಲ್ಲಿ ಈ ವಿಷಯವನ್ನು ಪರಿಶೀಲಿಸಿದವರು ಎರಡು ಮೂರು ಜನ ಇದ್ದಂತೆ ಕಾಣುತ್ತದೆ. ಅಹಿಂಸೆ ಸರ್ವಥಾ ಅನುಷ್ಠೇಯ ಎಂದು ತಿಳಿದವರು ವೇದೋಕ್ತವಾದ ಕರ್ಮಕ್ಕಾದರೂ ಕೂಡ ಜೀವ ತೆಗೆಯಬಾರದು ಎಂದರು; ಪಶುಹಿಂಸೆ ಮಾಡುವ ಯಜ್ಞ, ಅದು ಏತರ ಯಜ್ಞ? ಅಂಥ ಯಜ್ಞ ತ್ಯಾಜ್ಯ ಎಂದರು;

ಮಾಂಸವನ್ನು ಬಾಯಿಗೆ ಹಾಕಿಕೊಳ್ಳುವುದೇ ಬೇಡ ಎಂದರು. ಯಜ್ಞದಲ್ಲಿ ಕೊಲ್ಲುವುದು ಮೃಗವನ್ನಲ್ಲ; ಧರ್ಮವನ್ನು.

ಸತು ಧರ್ಮೋ ಮೃಗೋ ಭೂತ್ವಾ ಬಹು ವರ್ಷೋಷಿತೋ ವನೇ
ತಸ್ಯ ನಿಷ್ಕೃತಿಮಾಧತ್ತ ನತ್ವಸೌ ಯಜ್ಞಸಂವಿಧಿಃ
ತಸ್ಯ ತೇನಾನುಭಾವೇನ ಮೃಗಹಿಂಸಾತ್ಮನಸ್ತಥಾ
ತಪೋಮಹತ್ಸಮುಚ್ಛಿನ್ನಂ ತಸ್ಮಾತ್ ಹಿಂಸಾನಯಜ್ಞಿಯಾ
ಅಹಿಂಸಾ ಪರಮೋ ಧರ್ಮೋ ಹಿಂಸಾ ಧರ್ಮಸ್ತಥಾಹಿತಃ
ಸತ್ಯಂ ತೇಽಹಂ ಪ್ರವಕ್ಷ್ಯಾಮಿ ನೋ ಧರ್ಮಃ ಸತ್ಯವಾದಿನಾಂ

ಇನ್ನೊಂದು ಪಂಗಡದವರು, "ಯಜ್ಞಯಾಗಗಳು ವೇದೋಕ್ತ ಕರ್ಮಗಳು; ಅವು ನಡೆಯಬೇಕು. ಅವಕ್ಕಾಗಿ ಪಶುವಧೆ ನಡೆಯಬೇಕು. ಇದನ್ನು ಹಿಂಸೆಯೆಂದು ಎಣಿಸಬಾರದು. ಅಂಥ ಕರ್ಮದ ಅಂಗವಾಗಿ ಯಜ್ಞಪಶುವಿನ ಮಾಂಸದ ತುಣುಕುಗಳನ್ನು ಬಾಯಿಗೆ ಹಾಕಿಕೊಳ್ಳಬಹುದು. ಇಷ್ಟರಿಂದ ಅಹಿಂಸಾವ್ರತ ಕೆಡುವುದಿಲ್ಲ," ಎಂದರು. ಒಟ್ಟಿನಲ್ಲಿ ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ ಪ್ರಾಣಿವಧೆ ಮಾಡುವುದು ತಪ್ಪು ಎಂದು ಈ ಪ್ರಕರಣದ ಅಭಿಪ್ರಾಯ.

ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿಯೆ ಮಾಂಸವನ್ನು ಬಯಸಿದ ಜನಕ್ಕೆ ಧರ್ಮವ್ಯಾಧನು ಅದನ್ನು ಒದಗಿಸುತ್ತಿದ್ದನಲ್ಲ! ಇದು ಹೇಗೆ? ಧರ್ಮವ್ಯಾಧನು ತನಗಾಗಿ ಮಾಂಸವನ್ನು ಬಯಸಿ ಪ್ರಾಣಿವಧೆಯನ್ನು ಮಾಡುತ್ತಿರಲಿಲ್ಲ. ಮಾಂಸವನ್ನು ಒದಗಿಸುವುದು ಅವನ ಕುಲದ ಧರ್ಮ. ಅವನು ಅದನ್ನು ಒದಗಿಸುತ್ತಿದ್ದನು. ಹಾಗೆ ಮಾಡುವುದರಲ್ಲಿ ತಾನು ಹೋಗಿ ಯಾವುದೇ ಜೀವವನ್ನು ತೆಗೆಯುತ್ತಿರಲಿಲ್ಲ. ಅದನ್ನು ಬೇರೆಯ ಜನ ಮಾಡುವರು. ಅವರು ತಂದ ಮಾಂಸವನ್ನು ಇವನು ವ್ಯಾಪಾರದ ಕಟ್ಟೆಯಲ್ಲಿಟ್ಟು ಜನರಿಗೆ ಮಾರುವನು.

ಎಂದರೆ, ಮಾಂಸಾಹಾರ ಒಳ್ಳೆಯದಲ್ಲವೆಂದು ಅದನ್ನು ಯಾವನೂ ತಿನ್ನದೇ ನಿಲ್ಲಿಸುವಂತಿಲ್ಲ. ಆನುಶಾಸನಿಕ ಪರ್ವದಲ್ಲಿ ಹೇಳಿದೆ: ಮಾಂಸವನ್ನು ತಿಂದವನಿಗೆ ಅದರ ರುಚಿ ಬಹಳ ಹತ್ತುತ್ತದೆ. ಮಾಂಸಾಹಾರದ ಸುಖವನ್ನು ಕಂಡವನು ಅದನ್ನು ಸುಲಭದಲ್ಲಿ ಬಿಡಲಾಗುವುದಿಲ್ಲ. ಹೀಗೆ ಲೋಕದಲ್ಲಿ ಮಾಂಸಾಹಾರ ಅನಿವಾರ್ಯವಾಗಿ ನಡೆಯುವುದೆ ಆದರೆ

ಅದಕ್ಕಾಗಿ ಮಾಂಸವನ್ನು ಒದಗಿಸುವ ಜನ ಕೆಲವರಿರಬೇಕು. ಅಂಥವರು ವಿಧಿಯಿಲ್ಲದೆ ಪ್ರಾಣಿಗಳನ್ನು ಕೊಲ್ಲಲೂಬೇಕು. ಆದರೆ ಇದು ಎಷ್ಟು ಕಡಮೆಯಾದರೆ ಅಷ್ಟು ಒಳ್ಳೆಯದು.

ಅನಿಷ್ಟಂ ಸರ್ವಭೂತಾನಾಂ ಮರಣಂ ನಾಮ ಭಾರತ

ಸಾಧ್ಯವಾದರೆ ಲೋಕದಲ್ಲಿ ಮಾಂಸಾಹಾರದ ಪದ್ಧತಿ ನಿಂತುಹೋಗಬೇಕು.

ನಹಿಮಾಂಸಂ ತೃಣಾತ್ ಕಾಷ್ಠಾತ್ ಉಪಲಾದ್ವಾಪಿ ಜಾಯತೇ
ಹತ್ವಾ ಜಂತುಂ ತತೋ ಮಾಂಸಂ ತಸ್ಮಾದ್ದೋಷಸ್ತುಭಕ್ಷಣೇ
ಪ್ರಾಣದಾನಾತ್ ಪರಂ ದಾನಂ ನ ಭೂತಂ ನ ಭವಿಷ್ಯತಿ

ಯಜ್ಞದಲ್ಲಿ ಪಶುವಧೆ ಮಾಡುವುದೂ ನಿಂತುಹೋಗ ಬೇಕು. ಒಂದು ಜೀವ ಮತ್ತೊಂದು ಜೀವಕ್ಕೆ ಹಿಂಸೆಮಾಡುವುದೆನ್ನುವುದು ಸಾಧ್ಯವಾದಷ್ಟು ಮಟ್ಟಿಗೆ ತಪ್ಪಬೇಕು.

## (iii) ಸತ್ಯ

ವ್ಯಕ್ತಿ ಜೀವನ ಉತ್ತಮವಾಗಬೇಕಾದರೆ ಅಹಿಂಸೆಯಷ್ಟೆ ಮುಖ್ಯ ವಾಗಿ ಸತ್ಯವೂ ವ್ರತವಾಗಬೇಕು. ಸತ್ಯ ಎನ್ನುವುದು ಜೀವನದಲ್ಲಿ ಹಲವು ರೂಪವನ್ನು ಧರಿಸುತ್ತದೆ. ಅದರ ಒಂದು ರೂಪ ಕಂಡದ್ದನ್ನು ಹೇಳುವುದರಲ್ಲಿದೆ. ಆದರೆ, ಎಲ್ಲ ವೇಳೆಯಲ್ಲಿಯೂ ಕಂಡದ್ದನ್ನು ಹೇಳಿ ಬಿಡುವುದು ಧರ್ಮವಾಗಲಾರದು. ಘಾತುಕನೊಬ್ಬನು ಯಾರನ್ನೊ ಪೀಡಿಸುವುದಕ್ಕೆ ಅಟ್ಟಿಸಿಕೊಂಡು ಬರುವನು. ಅವನಿಂದ ತಪ್ಪಿಸಿಕೊಂಡು ಅವರು ಒಂದು ಕಡೆ ಅವಿತುಕೊಳ್ಳುವರು. ಅಲ್ಲಿದ್ದ ಒಬ್ಬ ಮನುಷ್ಯನು ಅದನ್ನು ಬಲ್ಲನು. ಘಾತುಕನು ಇವನನ್ನು, ''ಆ ಜನ ಎಲ್ಲಿ ಅವಿತು ಕೊಂಡರು,'' ಎಂದು ಕೇಳಿದರೆ ಇವನು ತಾನು ಕಂಡದ್ದನ್ನು ಹೇಳಬೇಕೆ? ಸತ್ಯ ಎಂಬ ಶಬ್ದಕ್ಕೆ ನಿಷ್ಠುರವಾದ ವ್ಯಾಪನೆಯನ್ನು ಹೇಳಿದರೆ ಕಂಡ ದ್ದನ್ನು ಇವನು ಹೇಳಲೇಬೇಕು. ಆದರೆ ಈ ವ್ಯಾಪನೆ ನಿಷ್ಠುರ ಮಾತ್ರ ಅಲ್ಲದೆ ಸಂಕುಚಿತವೂ ಆಗುತ್ತದೆ. ಈ ಕಾರಣದಿಂದ ಸತ್ಯ ಶಬ್ದಕ್ಕೆ ಈ ಅರ್ಥ ದುಷ್ಟ. ಈ ಹೊತ್ತಿನಲ್ಲಿ ಮನುಷ್ಯನು ತಾನು ಕಂಡದ್ದನ್ನು ಹೇಳಬೇಕಾದದ್ದಿಲ್ಲ. ಹೇಳದಿದ್ದರೆ ಅದು ಅಸತ್ಯವಲ್ಲ.

ಪ್ರಾಣಾತ್ಯಯೇ ವಿವಾಹೇ ಚ ವಕ್ತವ್ಯಮನೃತಂ ಭವೇತ್
ಅರ್ಥಸ್ಯ ರಕ್ಷಣಾರ್ಥಾಯ ಪರೇಷಾಂ ಧರ್ಮಕಾರಣಾತ್

ಜೀವಗಳಿಗೆ ಯಾವುದು ಹಿತ, ಆ ವಸ್ತುಸ್ಥಿತಿವಾಚನ ಸತ್ಯ.

ಯದ್ಭೂತಹಿತಮತ್ಯಂತಂ ತತ್ಸತ್ಯಮಿತಿಧಾರಣಾ

ಸತ್ಯದ ಇನ್ನೊಂದು ರೂಪ ಹೇಳಿದ ಮಾತನ್ನು ನಡೆಯಿಸುವುದು. ಭಾರತದ ಹರಿಶ್ಚಂದ್ರನು ಸತ್ಯಕ್ಕೆ ಈ ಅರ್ಥದಲ್ಲಿ ಪರಾಕಾಷ್ಠೆಯ ನಿದರ್ಶನ. "ನೀನು ಬಯಸಿದರೆ ನಾನು ನನ್ನ ರಾಜ್ಯವನ್ನಾದರೂ ಕೊಟ್ಟೇನು. ಅಧರ್ಮವನ್ನು ನಾನು ಮಾಡಲಾರೆನು," ಎಂದು ಅವನು ಹೇಳಿದನಂತೆ. ವಿಶ್ವಾಮಿತ್ರನು "ನೀನು ಅಂಥ ಧರ್ಮಿಷ್ಠನೊ? ಒಳ್ಳೆಯದು. ಧರ್ಮಿಷ್ಠನಾಗಿರು. ನಾನು ಬಯಸಿದರೆ ನನಗೆ ರಾಜ್ಯವನ್ನು ಕೊಡುತ್ತೇನೆ ಎಂದೆಯಲ್ಲಾ? ಹೌದು ನಾನು ಬಯಸುತ್ತೇನೆ. ರಾಜ್ಯವನ್ನು ಕೊಡು," ಎಂದನು. ತುಟಿಯಿಂದ ದಾಟಿದ ಮಾತು: ರಾಜ್ಯವನ್ನು ಕೊಡುತ್ತೇನೆ ಎನ್ನುವುದು ಉದ್ದೇಶವಲ್ಲ; ಧರ್ಮದಲ್ಲಿ ತನಗೆ ಎಷ್ಟು ಶ್ರದ್ಧೆ ಎನ್ನುವುದನ್ನು ತಿಳಿಸುವುದು ಉದ್ದೇಶ. ಆದರೂ ತುಟಿಯಿಂದ ಮೀರಿ ಬಂದ ಮಾತಿಗೆ ಉದ್ದೇಶಿಸದ ಅರ್ಥ ಆದರೂ ಅದನ್ನು ನಡಸಬೇಕು. ಈ ವ್ರತಕ್ಕಾಗಿ ಹರಿಶ್ಚಂದ್ರನು ಋಷಿಗೆ ರಾಜ್ಯವನ್ನು ಕೊಟ್ಟನು; ಪಡಬಾರದ ಕಷ್ಟವನ್ನು ಪಟ್ಟನು; ಆದರೂ ಖಿನ್ನನಾಗಲಿಲ್ಲ. ಪರೀಕ್ಷೆಯೆಲ್ಲ ಮುಗಿದು ಋಷಿ ಅವನಿಗೆ, "ನಿನ್ನ ರಾಜ್ಯವನ್ನು ಹಿಂದಕ್ಕೆ ತೆಗೆದುಕೊ," ಎಂದನು. ಹರಿಶ್ಚಂದ್ರನು, "ನಾನು ನಿಮಗೆ ಒಂದು ಸಲ ಕೊಟ್ಟೆ ಎಂದು ಕೊಟ್ಟ ರಾಜ್ಯವನ್ನು ಮರಳಿ ಹೇಗೆ ಹಿಂದಕ್ಕೆ ತೆಗೆದುಕೊಳ್ಳಲಿ? ನನಗೆ ರಾಜ್ಯ ಬೇಡ," ಎಂದನು. ಸತ್ಯವಾನನು ಇನ್ನೊಂದು ವರ್ಷದಲ್ಲಿ ಸಾಯುವನೆಂಬ ಮಾತು ತಿಳಿಯದೆ ಇದ್ದ ಹೊತ್ತಿನಲ್ಲಿ ಸಾವಿತ್ರಿ ಅವನನ್ನು ಮದುವೆಯಾಗುವೆನೆಂದು ಹೇಳಿದಳು. ಒಂದು ವರ್ಷದ ಕೊನೆಗೆ ಅವನು ಮೃತನಾಗುವನೆಂಬ ಸಂಗತಿ ನಾರದನಿಂದ ತಿಳಿಯಿತು. ಸತ್ಯವಾನನನ್ನು ಮದುವೆಯಾಗುವುದು ಬೇಡ ಎಂದು ಅವಳ ತಂದೆ ಹೇಳಿದನು. ನಾರದನೂ ಅವನ ಅಭಿಪ್ರಾಯವನ್ನು ಅನುಮೋದಿಸಿದನು. ಸಾವಿತ್ರಿ ಒಪ್ಪಲಿಲ್ಲ. "ದಾಳ ಬೀಳುವುದು ಒಮ್ಮೆ. ಸತ್ಯವಂತರು

ಕೊಟ್ಟೆ ಎಂದು ಹೇಳುವುದು ಒಮ್ಮೆ. ಬಿದ್ದ ದಾಳದ ಗರವನ್ನು ಇಲ್ಲದೆ ಮಾಡುವುದು ಎಷ್ಟು ಅಸಾಧ್ಯವೊ ಸತ್ಯವಂತರ ಮಾತನ್ನು ತಪ್ಪಿಸುವುದೂ ಅಷ್ಟು ಅಸಾಧ್ಯ,'' ಎಂದಳು. ಮಾತನಾಡುವುದಕ್ಕೆ ಮೊದಲು ಬೇಕಾದಷ್ಟು ಎಚ್ಚರಿಕೆಯಿಂದ ಪರಿಶೀಲನೆ ಮಾಡಬಹುದು. ಮಾತನ್ನು ಆಡಿದ ಮೇಲೆ ಅದನ್ನು ಅಕ್ಷರಶಃ ನಡಸಿಕೊಡುವುದು ಸತ್ಯವಂತರ ಹೊಣೆ.

ಕನ್ನಡ ಜನಪದ ಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ ಗೋವಿನ ಕಥೆಯು ಪುಣ್ಯಕೋಟಿ ಭಾರತದ ಒಂದು ಆಖ್ಯಾನದ ನಾಯಕಿ.

ಸತ್ಯದ ಇನ್ನೊಂದು ರೂಪ ಕರ್ತವ್ಯನಿಷ್ಠೆಯಾಗುತ್ತದೆ. ತನ್ನ ಕರ್ತವ್ಯ ತನಗೆ ರುಚಿಸದೆ ಇರಬಹುದು: ಆದರೆ ಅದು ಕರ್ತವ್ಯ; ಅದನ್ನು ಮಾಡದೆ ವಿಧಿಯಿಲ್ಲ. ಹರಿಶ್ಚಂದ್ರನು ಶ್ಮಶಾನದಲ್ಲಿ ಕಾವಲಿರುವ ಹೊತ್ತಿನಲ್ಲಿ ಅವನ ಹೆಂಡತಿ ಮಗನ ಕಳೇಬರವನ್ನು ಅಂತ್ಯಕ್ರಿಯೆಗಾಗಿ ಹೊತ್ತುತಂದಳು. ಶ್ಮಶಾನದ ಸುಂಕದ ಹೊನ್ನನ್ನು ಕೊಡದೆ ಅಂತ್ಯಕ್ರಿಯೆಯನ್ನು ಮಾಡುವಂತಿಲ್ಲ; ಅವಳ ಹತ್ತಿರವೊ ಹಣ ಇರಲಿಲ್ಲ. ಅವಳು ತನ್ನ ರಾಣಿಯೆಂದು, ಎದುರಿಗೆ ನೆಲದ ಮೇಲೆ ಹಾಕಿರುವ ಶವ ತನ್ನ ಮಗನದೆಂದು, ತಿಳಿದೂ ಹರಿಶ್ಚಂದ್ರನು ಸುಂಕವನ್ನು ತೆತ್ತಲ್ಲದೆ ಅಂತ್ಯಕ್ರಿಯೆಗೆ ಅವಕಾಶವಿಲ್ಲವೆಂದನು. ಆ ಹೆಂಡತಿ ಮಗನ ಶವವನ್ನು ಗಂಡನ ಹತ್ತಿರ ಬಿಟ್ಟು, ಹಣತರುವುದಕ್ಕೆಂದು ಒಡತಿಯ ಮನೆಗೆ ಹೊರಟಳು; ಕೊಲೆಗಾತಿಯೆಂದು ತಪ್ಪುಹೊತ್ತು ತಲೆದಂಡವನ್ನು ಕೊಡಲು ರಾಜಭಟರೊಂದಿಗೆ ಹಿಂದಿರುಗಿ ಬಂದಳು. ತನ್ನ ರಾಣಿ ಯಾರನ್ನೂ ಕೊಲೆ ಮಾಡಿರಲಾರಳು: ಇದನ್ನು ಹರಿಶ್ಚಂದ್ರನು ಬಲ್ಲನು. ಆದರೆ ಅಧಿಕಾರವುಳ್ಳವರಿಂದ ಆಜ್ಞೆ ಆಗಿದೆ: ಅದು ಸರಿಯೆ, ತಪ್ಪೆ ಎಂಬು ನೋಡುವುದು ತನ್ನ ಭಾಗದ ಕೆಲಸ ಅಲ್ಲ; ಅಪರಾಧಿನಿಯ ತಲೆಯನ್ನು ತೆಗೆಯಬೇಕು. ಅಪರಾಧಿನಿ ತನ್ನ ಪ್ರೇಮದ ರಾಣಿ: ಆದರೆ ಆ ಸನ್ನಿವೇಶದಲ್ಲಿ ಇವನು ಪತಿಯಲ್ಲ, ಅವಳು ಪತ್ನಿಯಲ್ಲ. ಇವನು ದಂಡನೆಯನ್ನು ನಡಸುವ ಸೇವಕ; ಅವಳು ದಂಡನೆಗೆ ಗುರಿಯಾಗಿ ಬಂದಿರುವ ಅಪರಾಧಿನಿ. ಹರಿಶ್ಚಂದ್ರನು ಅವಳ ತಲೆಯನ್ನು ಕಡಿಯುವುದಕ್ಕೆ ಕತ್ತಿಯನ್ನೆತ್ತಿದನು.

ಅವನ ಪರೀಕ್ಷೆ ಮುಗಿಯಿತು. ಅವನನ್ನು ದೇವತೆಗಳು ಒಪ್ಪಿಕೊಂಡರು; ಪರೀಕ್ಷಿಸಿದ ಋಷಿಯೂ ಮೆಚ್ಚಿಕೊಂಡನು.

ಜೀವನದ ಒಂದೊಂದು ಸಂಬಂಧವೂ ಮನುಷ್ಯನಿಂದ ಹೀಗೆ ಹೀಗೆ ನಡೆದುಕೊಳ್ಳುತ್ತೇನೆ ಎಂಬ ವಾಗ್ದಾನವನ್ನು ಒಳಗೊಂಡಿರುತ್ತದೆ. ಅಂಥ ವಾಕ್ಯವನ್ನು ನಡಸುವುದು ಆ ಸಂಬಂಧಕ್ಕೆ ಅಂಟಿಬಂದ ಸತ್ಯ.

ಒಡೆಯನಿಗೆ ಸಲ್ಲಬೇಕಾದ ಒಂದು ಕಾಸಿನ ಕಿಲುಬನ್ನೂ ಬಿಟ್ಟು ಕೊಡುವುದಿಲ್ಲ ಎಂದ ಸ್ವಾಮಿನಿಷ್ಠೆ, ತನ್ನ ಮಗನ ಕಳೇಬರವನ್ನಾದರೂ ಶ್ಮಶಾನದಲ್ಲಿ ಕೊಳೆಹಾಕಿ ತನ್ನ ಪ್ರಿಯ ಭಾರ್ಯೆಯನ್ನೇ ಕೊಲ್ಲಲು ಪ್ರೇರಿಸಿದ ಕರ್ತವ್ಯನಿಷ್ಠೆ, ಹರಿಶ್ಚಂದ್ರನನ್ನು ಸತ್ಯದ ಅನುಪಮ ಮೂರ್ತಿಯನ್ನಾಗಿಮಾಡಿವೆ.

## (iv) ಅಂತಸ್ಸಾಕ್ಷಿ

ಸತ್ಯವನ್ನು ಹೇಳುವುದರಲ್ಲಿ, ಹೇಳಿದ್ದನ್ನು ನಡಸುವುದರಲ್ಲಿ, ಸೇವಾ ವೃತ್ತಿಯಲ್ಲಿ ಅದ್ರೋಹದಿಂದ ನಡೆದುಕೊಳ್ಳುವಲ್ಲಿ, ಅನಿಷ್ಟವಾದರೂ ಕರ್ತವ್ಯವನ್ನು ನಡಸುವುದರಲ್ಲಿ, ಮನುಷ್ಯನು ಸ್ವಾರ್ಥವನ್ನು ಒಂದು ಬದಿಗಿಟ್ಟು ಪರಹಿತವನ್ನು ಸಾಧಿಸುತ್ತಾನೆ. ಈ ಕಾರಣದಿಂದಲೆ ಸತ್ಯ ಅಷ್ಟು ಶ್ರೇಷ್ಠ ಪದಾರ್ಥ. ಈ ಶ್ರೇಷ್ಠ ಪದಾರ್ಥ ಇತರರ ಮೆಚ್ಚಿಗೆಯಿಂದ ಶ್ರೇಷ್ಠವಾಗುವುದಿಲ್ಲ. ಮನುಷ್ಯನು ಇದನ್ನು ಕಳೆದುಕೊಂಡರೆ ಅಷ್ಟು ಮಟ್ಟಿಗೆ ಮಾನವ ಪದದಿಂದ ಭ್ರಷ್ಟನಾಗುತ್ತಾನೆ. ಅವನು ಭ್ರಷ್ಟ ನಾದನೆನ್ನುವುದು ಬೇರೆಯವರಿಗೆ ತಿಳಿಯದೆ ಇರಬಹುದು; ಆಗ ಕೂಡ ಅವನು ಭ್ರಷ್ಟನಾದದ್ದು ನಿಜವೇ. ಮನುಷ್ಯನು ಸತ್ಯದಿಂದ ನಡೆದು ಒಂದು ಧ್ಯೇಯವನ್ನು ಸಾಧಿಸುತ್ತಾನೆ. ಅದನ್ನು ಸಾಧಿಸಿಯೇ ಅವನು ಗೆಲ್ಲಬೇಕು; ಅದನ್ನು ಸಾಧಿಸದೆ ಇದ್ದರೆ ಅವನು ಸೋತನು. ಹಸಿದ ಮನುಷ್ಯ ಊಟಮಾಡಿದರೆ ಹಸಿವು ತುಂಬಿತು; ಮಾಡಲಿಲ್ಲ ಹಸಿವು ಉಳಿಯಿತು. ಅವನು ಉಂಡನೆ ಇಲ್ಲವೆ ಎನ್ನುವುದು ಇತರರಿಗೆ ತಿಳಿದು ಏನೂ ಆಗಬೇಕಾದದ್ದಿಲ್ಲ. ಉಣ್ಣದೆ ಇದ್ದರೂ ಉಂಡಂತೆ ನಟಿಸಿದರೆ ಹಸಿವು ತೀರುವುದಿಲ್ಲ. ಮಾನವ ಧ್ಯೇಯ ಆತ್ಮದ ಹಸಿವು; ಅದನ್ನು

ತುಂಬುವುದು ಮುಖ್ಯ. ತುಂಬದಿದ್ದರೆ ಹಸಿವು ಇದ್ದೇ ಇರುತ್ತದೆ. ನಿಜದಲ್ಲಿ ಊಟಮಾಡದವನನ್ನು ಹೆರವರು ಊಟಮಾಡಿದ್ದಾನೆ ಎಂದು ತಿಳಿದರೆ ಅವನ ಹೊಟ್ಟೆ ತುಂಬುವುದಿಲ್ಲ: ನಿಜದಲ್ಲಿ ಸುಳ್ಳನಾದವನನ್ನು ಹೆರವರು ಸತ್ಯವಂತನೆಂದರೆ ಅವನ ಆತ್ಮ ತುಂಬುವುದಿಲ್ಲ.

ತಪ್ಪು ಇತರರಿಗೆ ತಿಳಿದಿಲ್ಲವೆನ್ನುವಷ್ಟರಿಂದ ಪ್ರಯೋಜನವಿಲ್ಲ.

ಕುರ್ವಾಣಂ ಹಿ ನರಂ ಕರ್ಮ ಪಾಪಂ ರಹಸಿ ಸರ್ವದಾ
ಪಶ್ಯನ್ತಿ ಋತವಶ್ಚಾಪಿ ತಥಾ ದಿನನಿಶೇಽಪ್ಯುತ
ಅಹೋರಾತ್ರಂ ವಿಜಾನಾತಿ ಋತವಶ್ಚಾಪಿನಿತ್ಯಶಃ
ಪುರುಷೇ ಪಾಪಕಂ ಕರ್ಮ ಶುಭಂ ವಾಽಶುಭ ಕರ್ಮಣಃ

ಇದನ್ನೇ ಶಕುಂತಲೆ ದುಷ್ಯಂತನಿಗೆ ವಿವರಿಸಿ ಹೇಳುವುದು. "ಯಾರೂ ಕಾಣದವೇಳೆ ನನ್ನನ್ನು ಸ್ವೀಕರಿಸಿದೆ ಎಂದು ನೀನು ತಿಳಿಯಬೇಡ. ನಿನ್ನೊಳಗೆ ಒಬ್ಬ ಸಾಕ್ಷಿ ಇದ್ದಾನೆ. ಅವನು ಇದನ್ನು ಬಲ್ಲನು. ಈ ನಡೆದ ಸಂಗತಿಯನ್ನು ಹಗಲು ರಾತ್ರಿ ಪಂಚಭೂತಗಳು ಬಲ್ಲವು." ಈ ಒಳಗಿನ ಸಾಕ್ಷಿ ಯಾರ ಅಂಕೆಗೂ ಸಿಕ್ಕಿದವನಲ್ಲ. ಲೋಕವನ್ನೇ ಧಿಕ್ಕರಿಸಬಹುದು; ಇವನನ್ನು ಧಿಕ್ಕರಿಸುವುದು ಸಾಧ್ಯವಲ್ಲ. ಅಷ್ಟೊ ಮೀರಿದರೆ, "ತನ್ನ ಒಳಗು ಒಂದಲ್ಲವೆ? ಅಗಲಿ ಬಿಡು, ಉಳಿದವರಿಗೆ ನಾನು ದೊಡ್ಡ ಮನುಷ್ಯನಾಗಿ ಕಾಣುತ್ತೇನೆ," ಎನ್ನಬಹುದು. ಅಂತಸ್ಸಾಕ್ಷಿಯ ಒಪ್ಪಿಗೆಯಿಲ್ಲದೆ ಎಲ್ಲಲೋಕದ ಮೆಚ್ಚಿಗೆ ದೊರೆತರೆ ಅದಕ್ಕೆ ಸ್ವಲ್ಪವೂ ಬೆಲೆಯಿಲ್ಲ. ಲೋಕವೇ ಖಂಡಿಸಿದರೂ ಅಂತಸ್ಸಾಕ್ಷಿ ಒಪ್ಪಿತಾದರೆ ಆ ಖಂಡನೆಗೂ ಬೆಲೆಯಿಲ್ಲ. ಮನುಷ್ಯನು ತನ್ನೊಳಗಿನ ಈ ದಿವ್ಯ ತತ್ತ್ವವನ್ನು ಒಪ್ಪಿಸಿ ನಡೆಯುವುದು ಸತ್ಯದ ಅವಶ್ಯ ಲಕ್ಷಣ.

ಅಂತಸ್ಸಾಕ್ಷಿಯನ್ನು ಮೀರಿ ಹೊರಗೆ ಒಳ್ಳೆಯವನಾಗಿ ಕಾಣಿಸಿಕೊಳ್ಳುವವನು ತನ್ನನ್ನು ತಾನೆ ಕದಿಯುವ ಕಳ್ಳ. ಈ ಕಳ್ಳತನದ ಪಾಪ ಉಳಿದೆಲ್ಲ ಪಾಪಕ್ಕಿಂತ ಹಿರಿಯದು. ಇದು ಒಂದನ್ನು ಮಾಡಿದರೆ ಮನುಷ್ಯನು ಉಳಿದೆಲ್ಲ ಪಾತಕವನ್ನೂ ಮಾಡಿದಂತೆಯೆ. ಆತ್ಮಾಪಹರಣ ಆತ್ಮಹನನ, ನಾಯಕ ಪಾತಕ.

ಯೋಽನ್ಯಥಾ ಸಂತಮಾತ್ಮಾನಂ ಅನ್ಯಥಾ ಪ್ರತಿಪದ್ಯತೇ
ಕಿಂತೇನ ನ ಕೃತಂ ಪಾಪಂ ಚೋರೇಣ ಆತ್ಮಾಪಹಾರಿಣಾ

ಸ್ವಾರ್ಥವನ್ನು ಬಿಡುವುದು, ಪರಹಿತವನ್ನು ಸಾಧಿಸುವುದು ಸಂತತವಾದ ಅಭ್ಯಾಸದಿಂದ, ನಿರಂತರ ಅನುಷ್ಠಾನದಿಂದ ಬರುವ ಮನೋಧರ್ಮ.

ಯಥಾ ಯಥಾಹಿ ಪುರುಷಃ ಕಲ್ಯಾಣೇ ಕುರುತೇ ಮನಃ
ತಥಾ ತಥಾಸ್ಯ ಸರ್ವಾರ್ಥಾಃ ಸಿದ್ಧ್ಯನ್ತೇ ನಾತ್ರಸಂಶಯಃ
ನಷ್ಟಪ್ರಜ್ಞಃ ಪಾಪಮೇವ ನಿತ್ಯಮಾರಭತೇ ನರಃ
ಪುಣ್ಯಂ ಪ್ರಜ್ಞಾಂ ವರ್ಧಯತಿ ಕ್ರಿಯಮಾಣಂ ಪುನಃ ಪುನಃ
ದುರ್ಭಿಕ್ಷಾದೇವದುರ್ಭಿಕ್ಷಂ ಕ್ಲೇಶಾತ್ ಕ್ಲೇಶಂ ಭಯಾದ್ಭಯಂ
ಮೃತೇಭ್ಯಃ ಪ್ರಮೃತಾಯಾನ್ತಿ ದರಿದ್ರಾಃ ಪಾಪಕಾರಿಣಃ
ಉತ್ಸವಾದುತ್ಸವಂ ಯಾನ್ತಿ ಸ್ವರ್ಗಾತ್ಸ್ವರ್ಗಂ ಸುಖಾತ್ಸುಖಂ
ಶ್ರದ್ಧಧಾನಾಶ್ಚದಾನ್ತಾಶ್ಚ ಸತ್ವಸ್ಥಾಃ ಶುಭಕಾರಿಣಃ

ಇಷ್ಟು ಕಷ್ಟವಾದದ್ದರಿಂದಲೆ ಭಾರತದ ಋಷಿ ಸತ್ಯವನ್ನು ಹೊಗಳಿ ಹೊಗಳಿ ಹೊಗಳುತ್ತಾನೆ; ಹೊಗಳಿ ಹೊಗಳಿ ತೃಪ್ತಿಪಡದೆ ಇದ್ದಾನೆ.

ಸತ್ಯಂ ಬ್ರಹ್ಮತಪಸ್ಸತ್ಯಂ ಸತ್ಯಂ ಸೃಜತಿಚಪ್ರಜಾಃ
ಸತ್ಯೇನ ಧಾರ್ಯತೇ ಲೋಕಃ ಸ್ವರ್ಗಂ ಸತ್ಯೇನ ಗಚ್ಛತಿ
ಸ್ವರ್ಗಃ ಪ್ರಕಾಶ ಇತ್ಯಾಹುಃ ನರಕಂ ತಮ ಏವ ಚ
ಸತ್ಯಾನೃತಾತ್ತದುಭಯಂ ಪ್ರಾಪ್ಯತೇ ಜಗತೀ ಚರೈಃ
ನಾಯಂಲೋಕೋಽಸ್ತಿನಪರೋ ನಚ ಪೂರ್ವಾನ್ ಸತಾರಯೇತ್
ಕುತ ಏವ ಪರಾನ್ ರಾಜನ್ ಮೃಷಾವಾದಪರಾಯಣಃ
ನಯಜ್ಞಾಧ್ಯಯನೇದಾನಂ ನಿಯಮಾಃ ತಾರಯನ್ತಿ ಹಿ
ಯದಾಸತ್ಯಂಪರೇ ಲೋಕೇ ತಥೇಹಪುರುಷರ್ಷಭ
ಯತೋಧರ್ಮಃ ತತಸ್ಸತ್ಯಂ ಸರ್ವಂ ಸತ್ಯೇನ ವರ್ಧತೇ
ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ

ಸತ್ಯವೇ ಬ್ರಹ್ಮ, ತಪಸ್ಸು; ಲೋಕ ಸತ್ಯದಿಂದ ನಿಂತಿದೆ, ಸತ್ಯದಿಂದ ಸ್ವರ್ಗವನ್ನು ಪಡೆಯುತ್ತದೆ. ಸತ್ಯ ಬೆಳಕು, ಸ್ವರ್ಗ; ಅನೃತ ಕತ್ತಲು, ನರಕ. ಅಸತ್ಯವಂತನಿಗೆ ಒಳಿತು ಬರುವುದಿಲ್ಲ. ಅವನನ್ನು ಯಾವುದೂ ಕಾಯಲಾರದು.

ಅಶ್ವಮೇಧ ಸಹಸ್ರಂ ಚ ಸತ್ಯಂ ಚ ತುಲನಾಧೃತಂ
ಅಶ್ವಮೇಧ ಸಹಸ್ರಾದ್ಧಿ ಸತ್ಯಮೇವ ವಿಶಿಷ್ಯತೇ
ಸತ್ಯೇನ ಸೂರ್ಯಸ್ತಪತಿ ಸತ್ಯೇನಾಗ್ನಿಃ ಪ್ರದೀಪ್ಯತೇ

ಸತ್ಯೇನ ಪುರುತೋಽಪ್ನೋತಿ ಸತ್ಯೇ ಸರ್ವಂ ಪ್ರತಿಷ್ಠಿತಂ
ಸತ್ಯೇನ ದೇವಾಃ ಪ್ರೀಯಂತೇ ಪಿತರೋ ಬ್ರಾಹ್ಮಣಾಸ್ತಥಾ
ಸತ್ಯಂ ಆಹುಃಪರೋಧರ್ಮಃ ತಸ್ಮಾತ್ ಸತ್ಯಂ ನ ಲೋಪಯೇತ್

ಒಂದುಸಾವಿರ ಅಶ್ವಮೇಧಗಳನ್ನು ತ್ರಾಸಿನ ಒಂದು ಕಡೆ ಇಟ್ಟು ಇನ್ನೊಂದು ಕಡೆಗೆ ಸತ್ಯವನ್ನು ಇಟ್ಟದ್ದಾದರೆ, ಸಾವಿರ ಅಶ್ವಮೇಧ ಯಜ್ಞಕ್ಕಿಂತ ಸತ್ಯದ ತೂಕ ಹೆಚ್ಚೆಂದು ಕಾಣುತ್ತದೆ. ಸೂರ್ಯನು ಸುಡುತ್ತಿರುವುದು ಸತ್ಯದಿಂದ, ಅಗ್ನಿ ಉರಿಯುವುದು ಸತ್ಯದಿಂದ. ಗಾಳಿ ಬೀಸುವುದು ಸತ್ಯದಿಂದ; ಸಮಸ್ತವೂ ಸತ್ಯದಲ್ಲಿ ನಿಂತು ನಡೆಯುತ್ತಿದೆ. ಸತ್ಯದಿಂದ ದೇವತೆಗಳು ಸಂತುಷ್ಟರಾಗುತ್ತಾರೆ; ಪಿತೃಗಳು ಬ್ರಾಹ್ಮಣರು ಸಂತುಷ್ಟರಾಗುತ್ತಾರೆ. ಸತ್ಯವನ್ನು ಉಳಿದೆಲ್ಲಕ್ಕಿಂತ ಹೆಚ್ಚಿನ ಧರ್ಮ ಎಂದು ಹೇಳಿದೆ. ಆದಕಾರಣ ಸತ್ಯವನ್ನು ಲೋಪ ಮಾಡುವುದು ಸರ್ವಥಾ ಬೇಡ.

ಸಾವಿರ ಅಶ್ವಮೇಧಕ್ಕಿಂತ ಸತ್ಯವಾದಿತೆ ಹೆಚ್ಚು ಎಂದರೆ ಅತಿಶಯೋಕ್ತಿ ಎಂದು ತೋರುವ ಸಂಭವ ಇದೆ. ಇದು ಅತಿಶಯೋಕ್ತಿ ಅಲ್ಲ, ಕೇವಲ ವಸ್ತುಸ್ಥಿತಿ ವರ್ಣನೆ, ಎನ್ನುವುದು ಮನಮುಟ್ಟಬೇಕಾದರೆ ಯುಧಿಷ್ಠಿರನ ಅಶ್ವತ್ಥಾಮೋ ಹತಃ ಕುಂಜರಃ ವಾಕ್ಯದ ಕಥೆಯನ್ನು ನೆನೆಯಬೇಕು. ಆ ಒಂದು ವಾಕ್ಯವನ್ನು ಆಡದೆ ಇದ್ದಿದ್ದರೆ ಯುಧಿಷ್ಠಿರನು ಅದೆಷ್ಟು ಇನ್ನೂ ದೊಡ್ಡವನಾಗುತ್ತಿದ್ದನು, ಊಹಿಸುವುದು ಸಾಧ್ಯವೆ? ಸಾವಿರ ಅಶ್ವಮೇಧವನ್ನು ಮಾಡಿದನೆಂದರೆ, ಒಂದನ್ನು ಮಾಡಿದವನು ಇನ್ನು ಒಂಬೈನೂರ ತೊಂಬತ್ತೊಂಬತ್ತನ್ನು ಮಾಡಿದನು, ಅದರಲ್ಲಿ ವಿಶೇಷವೇನು? ಈ ಒಂದು ವಾಕ್ಯವನ್ನು ಆಡದೆ ಇದ್ದಿದ್ದರೆ ಅವನು ಅದೆಂಥ ನಿರ್ದುಷ್ಟ ರತ್ನವಾಗುತ್ತಿದ್ದನು! ಸತ್ಯವಾದಿತೆ ಸಾವಿರ ಅಶ್ವಮೇಧ ಯಜ್ಞಕ್ಕಿಂತ ಹೆಚ್ಚಿನ ಬೆಲೆಯ ಪದಾರ್ಥ ಎನ್ನುವುದು ಸಹಜೋಕ್ತಿ.

## (v) ಕ್ಷಮೆ

ವ್ಯಕ್ತಿತ್ವ ಬೆಳೆಯುವುದಕ್ಕೆ ಕ್ಷಮೆ ಅವಶ್ಯಸಾಧನ.

ಏಕಃ ಕ್ಷಮಾವತಾಂದೋಷೋ ದ್ವಿತೀಯಂ ನೋಪಪದ್ಯತೇ
ಯದೇನಂ ಕ್ಷಮಯಾಯುಕ್ತಂ ದುರ್ಬಲಂ ಮನ್ಯತೇಜನಃ

ಕ್ಷಮಾವಶೀಕೃತಿರ್ಲೋಕೇ ಕ್ಷಮಯಾ ಕಿಂ ನ ಸಾಧ್ಯತೇ
ಶಾನ್ತಿಖಡ್ಗಃ ಕರೇಯಸ್ಯ ಕಿಂಕರಿಷ್ಯತಿ ದುರ್ಜನಃ
ಸೋಸ್ಯದೋಷೋನಮಂತವ್ಯಃ ಕ್ಷಮಾಹಿ ಪರಮಂ ಬಲಂ
ಕ್ಷಮಾಗುಣೋಹ್ಯಶಕ್ತಾನಾಂ ಶಕ್ತಾನಾಂ ಭೂಷಣಂ ಕ್ಷಮಾ

ಭಾರತದ ಇಬ್ಬರು ಮಹಾವ್ಯಕ್ತಿಗಳು ಕ್ಷಮೆಯ ಜೀವಂತ ಮೂರ್ತಿಗಳು. ಶಿಶುಪಾಲನು ಕೃಷ್ಣನನ್ನು ವಾಚಾಮಗೋಚರವಾಗಿ ಬಯ್ಯುತ್ತಿರುವ ಹೊತ್ತಿನಲ್ಲಿ ಯಾರುಯಾರಿಗೋ ಕೋಪಬಂದದ್ದು ಕಥೆಯಲ್ಲಿ ಉಕ್ತವಾಗಿದೆ: ಕೃಷ್ಣನಿಗೆ ಮಾತ್ರ ಕೋಪ ಬರಲಿಲ್ಲವೆಂದು ಕಾಣುತ್ತದೆ. ಈ ದುಷ್ಟ ಏಕೆ ಇಷ್ಟು ಹುಚ್ಚು ಮಾತನ್ನಾಡುತ್ತಿದ್ದಾನೆ ಎಂದು ತೋರಿದ ಪ್ರಶ್ನೆಗೆ ಕೃಷ್ಣನು, "ಇವನು ರುಕ್ಮಿಣಿ ತನ್ನ ಹೆಂಡಿರಾಗಬಹುದೆಂದು ನಿರೀಕ್ಷಿಸಿದ್ದನು. ನನ್ನಿಂದ ಅದು ತಪ್ಪಿತು. ಈ ಕಾರಣದಿಂದ ಇವನಿಗೆ ನನ್ನ ಮೇಲೆ ತುಂಬ ಆಗ್ರಹ," ಎಂದನು. ಈ ಮಾತನ್ನಾಗಲಿ ಗಟ್ಟಿಸಿ ಹೇಳಿದನೆಂದು ಕಾಣುವುದಿಲ್ಲ. ಶಿಶುಪಾಲನು, "ಎಲೋ ಕೃಷ್ಣ, ನಿನ್ನ ಹೆಂಡತಿಯ ಮಾತನ್ನು ಹೀಗೆ ಎಲ್ಲರ ಎದುರಿಗೆ ಹೇಳುವುದಕ್ಕೆ ನಾಚಿಕೆಯಾಗುವುದಿಲ್ಲವೇ ?" ಎಂದು ಕೇಳಿದನು. ಕೃಷ್ಣನಿಗೆ ನಾಚಿಕೆಯೂ ಆಗಲಿಲ್ಲ; ಕೋಪವೂ ಬರಲಿಲ್ಲ. ಶಿಶುಪಾಲನು ಕೃಷ್ಣನನ್ನು ಬಯ್ಯುವಷ್ಟೇ ಕೆಲಸವನ್ನು ಎಷ್ಟು ಹೊತ್ತು ಮಾಡಿದನೋ ಅಷ್ಟು ಹೊತ್ತೂ ಅಡ್ಡಿಯೇ ಇಲ್ಲದೆ ಕೂಗಾಡಿದನು; ಅವನನ್ನು ಕೃಷ್ಣನು ತಡೆಯಲಿಲ್ಲ. ಅವನ ಕೂಗಾಟ ಕೂಗಿನಲ್ಲಿ ಮುಗಿಯದೆ ಅವನ, ಅವನ ಜೊತೆಯವರ, ಧೂರ್ತತೆಯಿಂದ ಯಜ್ಞ ವಿಘಾತ ಆಗಬಹುದು ಎಂದು ಕಂಡಾಗ ಕೃಷ್ಣನು ಒಂದು ಮಾತನ್ನಾಡದೆ, ಒಂದು ಕ್ಷಣ ತಡೆಯದೆ, ಚಕ್ರವನ್ನು ಎಸೆದು ಅವನ ಕಥೆಯನ್ನು ಮುಗಿಸಿದನು. ದುಷ್ಟನೆಂಬ ಕಾರಣದಿಂದ ಅಲ್ಲ; ತಪ್ಪಿಗೆ ಶಿಕ್ಷೆ ಎಂದಲ್ಲ; ತನ್ನನ್ನು ಬಯ್ದನೆಂಬ ಕೋಪದಿಂದ ಅಲ್ಲ: ಯಜ್ಞಕ್ಕೆ ವಿಘಾತ ಉಂಟಾಗಬಾರದು ಎಂದು. ಕೃಷ್ಣನ ಈ ಮನೋಧರ್ಮವನ್ನು ಆಮೇಲೆ ವರ್ಣಿಸಿದ ಋಷಿ ಧರ್ಮಪಕ್ಷಪಾತಿಗಳಿಗೆ ಒಂದು ಸೂತ್ರವನ್ನು ಒದಗಿಸಿದನು. ಅದು "ಯುಧ್ಯಸ್ವ ವಿಗತಜ್ವರಃ". ತಪ್ಪು ಮಾಡುವವರ ವಿಷಯದಲ್ಲಿ ಕೋಪಬೇಡ; ನಿನ್ನ ಮನಸ್ಸು ಉದ್ವೇಗ

ಗೊಳ್ಳುವುದುಬೇಡ; ಧರ್ಮಕ್ಕೆ ಯಾವುದು ಅಡ್ಡಿಯಾಗಿದೆ, ಅದರ ಮೇಲೆ ಸಮಾಧಾನ ಚಿತ್ತದಿಂದ ಕೈಮಾಡು, ಧರ್ಮದ ದಾರಿಯಿಂದ ಅದನ್ನು ತೆಗೆದು ಒಗೆ. ಕಾಲಿಗೆ ಚುಚ್ಚಿದ ಮುಳ್ಳನ್ನು ತೆಗೆಯುವಲ್ಲಿ ನಾವು ಅದರ ಮೇಲೆ ಕೋಪಮಾಡುವುದಿಲ್ಲ; ಅದನ್ನು ವೈರದಿಂದ ಕಾಣುವುದಿಲ್ಲ. ಧರ್ಮವಿರೋಧಿಯನ್ನು ಇದೇ ಔದಾಸೀನ್ಯದಿಂದ ನಿವಾರಿಸಬೇಕು. ಈ ವರ್ತನೆಯಲ್ಲಿ ಮುಖ್ಯಗುಣ ಕ್ಷಮೆ.

ಕೃಷ್ಣನಂತೆಯೆ ಯುಧಿಷ್ಠಿರನೂ ಕ್ಷಮೆಯ ಪ್ರತ್ಯಕ್ಷ ವಿಗ್ರಹ. ಕ್ಷಮೆಯನ್ನು ಅನುಷ್ಠಿಸಿದರೂ ಕೃಷ್ಣನು ಯಾರ ಎದುರಿಗಾದರೂ ತನ್ನ ನಡತೆಯನ್ನು ಸಮರ್ಥಿಸಬೇಕಾಗಿಬರಲಿಲ್ಲ. ಯುಧಿಷ್ಠಿರನ ಅದೃಷ್ಟ ಅವನ ತಮ್ಮ ಭೀಮನಿಂದ, ರಾಣಿ ದ್ರೌಪದಿಯಿಂದ, ಅವನ ಕ್ಷಮೆ ಅತಿಯಾಯಿತೆಂಬ ದೂರನ್ನು ತಂದಿತು. ದ್ರೌಪದಿ, "ಎಲ್ಲ ಹೊತ್ತೂ ಕೋಪ ಹೇಗೆ ತಪ್ಪೋ ಹಾಗೆಯೇ ಎಲ್ಲ ಹೊತ್ತೂ ಕ್ಷಮೆಯೂದರೂ ತಪ್ಪೇ. ಪ್ರಹ್ಲಾದ ಹೀಗೆಂದ," ಎಂದಳು.

ನಶ್ರೇಯಂ ಸತತಂ ತೇಜಃ ನನಿತ್ಯಂ ಶ್ರೇಯಸೀ ಕ್ಷಮಾ
ಇತಿ ತಾತ ವಿಜಾನೀಹಿ ದ್ವಯಮೇತದಸಂಶಯಂ
ಯೋನಿತ್ಯಂ ಕ್ಷಮತೇ ತಾತ ಬಹೂನ್ ದೋಷಾನ್ ಸವಿಂದತಿ
ತಸ್ಮಾನ್ನಿತ್ಯಂ ಕ್ಷಮಾ ತಾತ ಪಂಡಿತೈರಪಿ ವರ್ಜಿತಾ
ಅಸ್ಥಾನೇ ಯದಿವಾಸ್ಥಾನೇ ಸತತಂ ರಜಸಾವೃತಃ
ಅಪ್ನೋತಿ ದ್ವೇಷತಾಂ ಚೈವ ಲೋಕಾತ್ ಸ್ವಜನತಸ್ತಥಾ

ಯುಧಿಷ್ಠಿರನು ಆಗ ಅದನ್ನು ಸಮರ್ಥಿಸಬೇಕಾಯಿತು.

ಕ್ಷಮಾಧರ್ಮಃ ಕ್ಷಮಾಯಜ್ಞಃ ಕ್ಷಮಾವೇದಾಃ ಕ್ಷಮಾಶ್ರುತಂ
ಯಸ್ತಮೇವ ವಿಜಾನಾತಿ ಸ ಸರ್ವಂ ಕ್ಷಂತುಮರ್ಹತಿ
ಕ್ಷಮಾಬ್ರಹ್ಮ ಕ್ಷಮಾಸತ್ಯಂ ಕ್ಷಮಾಭೂತಂ ಚ ಭಾವಿ ಚ
ಕ್ಷಮಾತಪಃ ಕ್ಷಮಾಶೌಚಂ ಕ್ಷಮಯೇದಂ ಧೃತಂ ಜಗತ್
ಕ್ಷಮಾತೇಜಸ್ವಿನಾಂ ತೇಜಃ ಕ್ಷಮಾಬ್ರಹ್ಮ ತಪಸ್ವಿನಾಂ
ಕ್ಷಮಾಸತ್ಯಂ ಸತ್ಯವತಾಂ ಕ್ಷಮಾಯಜ್ಞಃ ಕ್ಷಮಾಶಮಃ
ಯೇಷಾಂ ಮನ್ಯುಃ ಮನುಷ್ಯಾಣಾಂ ಕ್ಷಮಯಾಭಿಹತಾಸದಾ
ತೇಷಾಂ ಪರತರೇ ಲೋಕಾಃ ತಸ್ಮಾತ್ ಕ್ಷಾಂತಿಃ ಪರಾಮತಾ
ಸುಯೋಧನೋ ನಾರ್ಹತೀತಿ ಕ್ಷಮಾ ಮಾಮೇವ ವಿಂದತಿ

ಅರ್ಹನ್ನತ್ರಾಹಮಿತ್ಯೇವಂ ತಸ್ಮಾನ್ಮಾಂ ವಿಂದತೇ ಕ್ಷಮಾ
ಏತದಾತ್ಮವತಾವೃತ್ತಂ ಏಷ ಧರ್ಮಃ ಸನಾತನಃ
ಕ್ಷಮಾಚೈವಾನೃಶಂಸ್ಯಂಚ ತತ್ಕರ್ತಾಸ್ಮ್ಯಹಮಂಜಸಾ

"ಮನುಷ್ಯನಿಗೆ ಧರ್ಮದಿಂದ, ಯಜ್ಞದಿಂದ, ವೇದಾಧ್ಯಯನದಿಂದ, ಶಾಸ್ತ್ರಾಭ್ಯಾಸದಿಂದ ದೊರೆಯಬಹುದಾದ ಎಲ್ಲ ಫಲ ಕ್ಷಮೆ ಒಂದರಿಂದ ಕೈ ಸೇರುತ್ತದೆ. ಕ್ಷಮೆಯಿಂದಲೇ ಮನುಷ್ಯನು ಬ್ರಹ್ಮದಲ್ಲಿ ನಿಲ್ಲುವುದು, ಬ್ರಹ್ಮಜ್ಞಾನ ಪಡೆಯುವುದು. ಮುನಿಗಳು ತಪಸ್ಸನ್ನು ಮಾಡುವರು: ತಪಸ್ಸಿನ ಫಲವೇನು? ಕ್ಷಮೆ. ತಪಸ್ಸು ಉಳಿಯಬೇಕು: ಸಾಧನ ಯಾವುದು? ಕ್ಷಮೆ. ಕ್ಷಮೆ ಉಳ್ಳವನೇ ಪರಿಶುದ್ಧ ಜೀವ. ತನ್ನ ಪಾಲಿಗೆ ಬಂದ ಭಾರವನ್ನು ಸಹಿಸಿ ಲೋಕ ನಿಂತಿದೆ. ಲೋಕ ನಿಲ್ಲುವುದಕ್ಕೆ ಕ್ಷಮೆ ಮುಖ್ಯ ಸೂತ್ರ. ತೇಜೋವಂತನಿಗೆ ತೇಜಸ್ಸಿನ ಪರಾಕಾಷ್ಠೆ ಕ್ಷಮೆ. ಬ್ರಹ್ಮವನ್ನು ಬಯಸತಕ್ಕವನಿಗೆ ಕ್ಷಮೆಯೇ ಬ್ರಹ್ಮ. ಸತ್ಯಶೀಲರು ಕ್ಷಮೆಯೇ ಸತ್ಯವೆಂದು ಕಾಣುತ್ತಾರೆ. ಕ್ಷಮೆ ಎನ್ನುವುದು ಇಷ್ಟು ಶ್ರೇಷ್ಠ ವಸ್ತುವಾಗಿರುವಾಗ ನಾನು ಅದನ್ನು ಹೇಗೆ ತೊರೆಯಲಿ? ರಾಜ್ಯಭಾರಕ್ಕೆ ಅರ್ಹನಾಗಬೇಕೆಂಬವನು ಕ್ಷಮೆಯನ್ನು ಅಭ್ಯಾಸಮಾಡಬೇಕು. ನಾನು ಕ್ಷಮೆಯನ್ನು ಅನುಷ್ಠಾನ ಮಾಡುತ್ತಿದ್ದೇನೆ. ಅದರಿಂದಲೇ ರಾಜ್ಯಕ್ಕೆ ಅರ್ಹತೆ." ಘೋಷಯಾತ್ರೆಯ ಸಂದರ್ಭದಲ್ಲಿ ಯುಧಿಷ್ಠಿರನು ಈ ಕ್ಷಮೆಯ ಪ್ರಶಂಸೆ ಬರಿಯ ಮಾತಲ್ಲ ಎನ್ನುವುದನ್ನು ತೋರಿದನು. ತನ್ನೆದುರಲ್ಲಿ ವೈಭವವನ್ನು ಮೆರೆದು ತನ್ನ ದಾರಿದ್ರ್ಯವನ್ನು ನೋಡಿ ಸಂತೋಷಪಡಬೇಕೆಂದು ಬಂದ ಜ್ಞಾತಿ ಸೋದರನನ್ನು ಅವನು ಹಗೆಯ ಕೈಯಿಂದ ಬಿಡಿಸಿ ಕಾಪಾಡಿ ಕಳುಹಿದನು. ಆ ಹೊತ್ತಿನಲ್ಲಿ ಅವನು ಜ್ಞಾತಿಯನ್ನು ಕಾಪಾಡಿದಷ್ಟೇ ನಿಜವಾಗಿ ತನ್ನ ಕ್ಷಮಾವ್ರತವನ್ನು ಕಾಪಾಡಿಕೊಂಡನು, ಶೀಲವನ್ನು ಉಳಿಸಿಕೊಂಡನು. ವಿರಾಟನು ಕೋಪದಿಂದ ದಾಳವನ್ನು ಇವನ ಮುಖದಮೇಲೆ ಎಸೆದಾಗ ಯುಧಿಷ್ಠಿರನ ಮೊದಲ ಯೋಚನೆ, ಇದು ತಮ್ಮಂದಿರಿಗೆ ತಿಳಿದು ಇನ್ನು ರಂಪಾದೀತು, ಎನ್ನುವುದು. ಆದರೆ ಅತಿಯಾಯಿತೆಂದು ಕಂಡ ಈ ಎಲ್ಲ ಕ್ಷಮೆಯಿಂದ ಯುಧಿಷ್ಠಿರನು ಮತ್ತಷ್ಟು ಹಿರಿಯನಾದನು ಹೊರತಾಗಿ ನಷ್ಟಪಡಲಿಲ್ಲ.

ಅವನ ಶಾಳ್ಮೆಯನ್ನು ಒಪ್ಪದಿದ್ದವರು ಕೂಡ ಅವನ ಸ್ವಭಾವ ಹೀಗೆಂದು ಒಪ್ಪಿಕೊಂಡರು, ಅವನ ಅಂಕೆಯಲ್ಲಿ ನಿಂತರು.

ಕ್ಷಮೆಯು, ಅಹಿಂಸೆಯು, ಅಂಗವಾಗಿ ಎಲ್ಲ ಪ್ರಾಣಿಗಳನ್ನು ಕುರಿತ ದಯೆ ಮೈತ್ರಿ ನಿರ್ವೈರ ಅವಶ್ಯಧರ್ಮ.

ನಹೀದೃಶಂ ಸಂವನನಂ ತ್ರಿಷು ಲೋಕೇಷು ವಿದ್ಯತೇ
ದಯಾ ಮೈತ್ರೀಚ ಭೂತೇಷು ದಾನಂಚ ಮಧುರಾಚವಾಕ್

ದಯೆ ಮೈತ್ರಿ ದಾನ ವಾಙ್ಮಾಧುರ್ಯ ಇವುಗಳಿಗೆ ಸಮನಾದ ಹೋಮ ಹವನ ಇಲ್ಲ. ಮನುಷ್ಯನು ಈ ಲೋಕದಲ್ಲಿರುವುದು ಬಹಳಕಾಲವೇನಲ್ಲ. ಆ ಅಲ್ಪಕಾಲದಲ್ಲಿ ಯಾವುದೇ ಭಾಗವನ್ನು ವೈರದಲ್ಲಿ ಕಳೆಯುವುದು ಬೇಡ ಎನ್ನುವುದು ಭಾರತದ ಒಂದು ವಾಕ್ಯ.

ನ ಹಿಂಸ್ಯಾತ್ ಸರ್ವಭೂತಾನಿ ಮೈತ್ರಾಯಣ ಚರೋಭವೇತ್
ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್

## (vi) ತ್ಯಾಗ

ವ್ಯಕ್ತಿಜೀವನ ಉತ್ತಮವಾಗಬೇಕಾದರೆ ಆಶೆಯನ್ನು ತಡೆದುಕೊಳ್ಳ ಬೇಕು ಎಂದು ಹೇಳಿದೆ. ನಿಜದಲ್ಲಿ ಆಶೆಯನ್ನು ತಡೆದರೆ ಅಷ್ಟೆ ಸಾಲದು; ಅದನ್ನು ಬಿಡುವುದಕ್ಕೇ ಪ್ರಯತ್ನಮಾಡಬೇಕು. ಆಶೆಯನ್ನು ಬಿಟ್ಟು ನಡೆಯುವ ಮನೋಧರ್ಮ ವೈರಾಗ್ಯ. ಬ್ರಹ್ಮವನ್ನು ಸಾಧಿಸುವವನು ವೈರಾಗ್ಯವನ್ನು ಅನುಷ್ಠಿಸಲೇಬೇಕು. ವೈರಾಗ್ಯ ಎಂದರೆ ಬಡತನವನ್ನು ಅರಸುವುದು ಎಂದಲ್ಲ. ಐಶ್ವರ್ಯದಲ್ಲಿ ಇದ್ದೂ ಮನುಷ್ಯನು ಸಾಧು ವಾಗಿರಬಹುದು; ರಿಕ್ತನಾಗಿದ್ದೂ ಮನುಷ್ಯನು ಲೋಭಿಯಾಗಿರಬಹುದು. ಕೈಬರಿದಾದ ಮಾತ್ರಕ್ಕೆ ವೈರಾಗ್ಯ ಸಿದ್ಧಿಸುವುದಿಲ್ಲ.

ಆಕಿಂಚನ್ಯೇ ನಮೋಕ್ಷೋಽಸ್ತಿ ಕೈಂಚನ್ಯೇ ನಾಸ್ತಿಬಂಧನಂ
ಕೈಂಚನ್ಯೇ ಚೇತರೇ ಚೈವ ಜಂತುರ್ಜ್ಞಾನೇನ ಮುಚ್ಯತೇ

ಆದರೆ ಸಾಮಾನ್ಯವಾಗಿ ಐಶ್ವರ್ಯ ಬಂದರೆ ಮನುಷ್ಯನ ಬುದ್ಧಿ ಕೆಡುತ್ತದೆ. ಆದ್ದರಿಂದ ಪ್ರತಿಯೊಬ್ಬನೂ ಐಶ್ವರ್ಯವನ್ನು ಬಯಸದೆ ಇರಬೇಕು. ಹಣದಿಂದ ಸುಖ ಬರುತ್ತದೆ ಎನ್ನುವುದು ಭ್ರಾಂತಿ. ಅದನ್ನು ಬಯಸು

ವಾಗ ಕಷ್ಟ, ಅದು ಬಂದಾಗ ಚಿಂತೆ, ಕಳೆದು ಹೋಯಿತೋ ಸಾವಿನ ಸಂಕಟ. ದೊರೆತಷ್ಟೂ ಮತ್ತಷ್ಟರ ಬಯಕೆ.

ಈಹಾಧನಸ್ಯ ನಸುಖಾ ಲಬ್ಧಾ ಚಿಂತಾ ಚ ಭೂಯಸೀ
ಲಬ್ಧ ನಾಶೋ ಯಥಾ ಮೃತ್ಯುಃ ಲಬ್ಧಂ ಭವತಿವಾ ನವಾ
ಪರಿತ್ಯಾಗೇನ ಲಭತೇ ತತೋ ದುಃಖತರಂ ನು ಕಿಂ
ನ ಚ ತುಷ್ಯತಿ ಲಬ್ಧೇನ ಭೂಯ ಏವ ಚ ಮಾರ್ಗತಿ

ಧನದಾಸೆಯ ಈ ಪಾಡಿಗಿಂತ ದಾರಿದ್ರ್ಯವೇ ಮೇಲು. ದರಿದ್ರನಿಗೆ ಹಗೆಗಳಿಲ್ಲ. ಅವನಿಗೆ ಆಧಿ ಇಲ್ಲ. ದಾರಿದ್ರ್ಯ ದೊರೆತನಗಳನ್ನು ಹೋಲಿಸಿದರೆ ದಾರಿದ್ರ್ಯ ಒಳ್ಳೆಯದೆನಿಸಬೇಕು. ಧನವಂತನಿಗೆ ಅದನ್ನು ಕಳೆದುಕೊಂಡೇನೆಂಬ ಭಯ ಸಾವಿನ ದಾಡೆಯಲ್ಲಿ ಸಿಕ್ಕಿದ ಗತಿಯನ್ನು ತರುತ್ತದೆ.

ಆಕಿಂಚನ್ಯಂ ಸುಖಂ ಲೋಕೇ ಪಥ್ಯಂ ಶಿವಮನಾಮಯಂ
ಅನಮಿತ್ರ ಪಥೋಹ್ಯೇಷ ದುರ್ಲಭಃ ಸುಲಭಃ ಸತಾಂ
ಆಕಿಂಚನ್ಯಂಚ ರಾಜ್ಯಂಚ ತುಲಯಾ ಸಮತೋಲಯಂ
ಅತ್ಯರಿಚ್ಯತಿ ದಾರಿದ್ರ್ಯಂ ರಾಜ್ಯಾದಪಿ ಗುಣಾಧಿಕಂ
ಆಕಿಂಚನ್ಯೇಚ ರಾಜ್ಯೇಚ ವಿಶೇಷಸ್ಸುಮಹಾನಯಂ
ನಿತ್ಯೋದ್ವಿಗ್ನೋ ಹಿ ಧನವಾನ್ ಮೃತ್ಯೋರಾಸ್ಯಗತೋ ಯಥಾ
ನಾತ್ಯಕ್ತ್ವಾ ಸುಖಮಾಪ್ನೋತಿ ನಾತ್ಯಕ್ತ್ವಾ ವಿಂದತೇ ಪರಂ
ನಾತ್ಯಕ್ತ್ವಾ ಚಾಭಯಶ್ಶೇತೇ ತ್ಯಕ್ತ್ವಾ ಸರ್ವಂ ಸುಖೀಭವೇತ್

ತ್ಯಾಗದಿಂದ ಸಮಾಧಾನ ಪಡೆದವನು ಹೀಗೆ ಬಾಳುತ್ತಾನೆ.

ದಿವಿ ಸಂಚರಮಾಣಾನಿ ಹ್ರಸ್ವಾನಿಚ ಮಹನ್ತಿಚ
ಜ್ಯೋತೀಂಷ್ಯಪಿ ಯಥಾಕಾಲಂ ಪತನಾನಾನಿ ಲಕ್ಷಯೇ
ಇತಿ ಭೂತಾನಿ ಸಂಪಶ್ಯನ್ ಅನುಷಕ್ತಾನಿ ಮೃತ್ಯುನಾ
ಸರ್ವ ಸಾಮಾನ್ಯತೋ ವಿದ್ವಾನ್ ಕೃತಕೃತ್ಯಃ ಸುಖಂ ಸ್ವಪೇ
ಸಮಹಾಂತಮಪಿಗ್ರಾಸಂ ಗ್ರಸೇಲಬ್ಧಂ ಯದೃಚ್ಛಯಾ
ಶಯೇ ಪುನರಭುಂಜಾನೋ ದಿವಸಾನಿ ಬಹೂನ್ಯಪಿ
ಶಯೇ ಕದಾಚಿತ್ ಪರ್ಯಂಕೇ ಭೂಮಾವಪಿ ಪುನಃಶಯೇ
ಪ್ರಾಸಾದೇಪಿಚ ಮೇ ಶಯ್ಯಾ ಕದಾಚಿದುಪಪದ್ಯತೇ
ಧಾರಯಾಮಿ ಚ ಚೀರಾಣಿ ಶಾಣ ಕ್ಷೌಮಾಜಿನಾನಿಚ
ಮಹಾರ್ಹಾಣಿ ಚ ವಾಸಾಂಸಿ ಧಾರಯಾಮ್ಯಹಮೇಕದಾ
ನ ಸನ್ನಿಪತಿತಂ ಧರ್ಮ್ಯಂ ಉಪಭೋಗಂ ಯದೃಚ್ಛಯಾ

ಪ್ರತ್ಯಾಚಕ್ಷೇ ನ ಚಾಪ್ಯೇನಂ ಅನುರುಧ್ಯೇಸುದುರ್ಲಭಂ
ಸರ್ವಭೂತಾನ್ಯಹಂ ದೇಹೇ ಪಶ್ಯನ್ಮನಸಿ ಚಾತ್ಮನಃ
ಯೋಗೇ ಬುದ್ಧಿಂ ಶ್ರುತೇ ಸತ್ವಂ ಮನೋಬ್ರಹ್ಮಣಿ ಧಾರಯನ್
ವಿಹರಿಷ್ಯಾಮ್ಯನಾಸಕ್ತಃ ಸುಖೀ ಲೋಕಾನ್ನಿರಾಮಯಃ
ಕ್ಷಮಿಷ್ಯೇ ಕ್ಷಿಪಮಾಣಾನಾಂ ನ ಹಿಂಸಿಷ್ಯೇ ವಿಹಿಂಸಿತಃ
ದ್ವೇಷ್ಯಮುಕ್ತಃ ಪ್ರಿಯಂ ವಕ್ಷ್ಯಾಮ್ಯನಾದೃತ್ಯ ತದಪ್ರಿಯಂ
ನಿರ್ವೇದಂ ನಿರ್ವೃತಿಂ ತೃಪ್ತಿಂ ಶಾಂತಿಂ ಸತ್ಯಂ ದಮಂ ಕ್ಷಮಾಂ
ಸರ್ವಭೂತ ದಯಾಂ ಚೈವ ವಿದ್ಧಿಮಾಂ ಶರಣಾಗತಂ
ತಸ್ಮಾತ್ ಕಾಮಶ್ಚ ಲೋಭಶ್ಚ ತೃಷ್ಣಾ ಕಾರ್ಪಣ್ಯಮೇವಚ
ತ್ಯಜಂತುಮಾಂ ಪ್ರತಿಷ್ಠಂತಂ ಸತ್ವಸ್ಥೋಹ್ಯಸ್ಮಿ ಸಾಂಪ್ರತಂ

ಬೆಳಗುವ ಬೀಳುವ ಸೂರ್ಯತಾರೆಗಳನ್ನು ನೋಡುತ್ತ ಇವನಿಗೆ ಲೋಕದ ಗತಿ ಒಂದು ನಾಟಕದಂತೆ ಇರುತ್ತದೆ. ಅನ್ನ ಬಟ್ಟೆ ಹಾಸುಹೊದಿಕೆ ಎಂದು ಏನು ದೊರೆತರೆ ದೊರೆಯದಿದ್ದರೆ ಅಂದು ಅದರಿಂದ ತೃಪ್ತನಾಗಿ ಇವನು ಎಲ್ಲದರಲ್ಲೂ ಆತ್ಮವನ್ನೇ ಕಂಡು ನಿರಾಮಯ ಬ್ರಹ್ಮವಿಹಾರಿಯಾಗುತ್ತಾನೆ. ಬೈದವರನ್ನು ಮರಳಿ ಬಯ್ಯಬೇಕೆಂಬ ಪ್ರವೃತ್ತಿ ಇಲ್ಲದೆ ಹಿಂಸೆಗೆ ಪ್ರತಿಹಿಂಸೆ ಮಾಡದೆ ಅವನ ಜೀವ ದುಸ್ಸಾಧ್ಯವಾದ ಶಾಂತಿಸುಖವನ್ನು ಅನುಭವಿಸುತ್ತದೆ.

ಇರುವಷ್ಟರಲ್ಲಿ ತೃಪ್ತಿಪಟ್ಟು ಹೆಚ್ಚಿನ ವಿಷಯಕ್ಕೆ ವಿರಕ್ತಿಯನ್ನು ಅಭ್ಯಾಸಮಾಡಬೇಕು. ಎಲ್ಲ ಸುಖಕ್ಕಿಂತ ಹೆಚ್ಚಿನ ಸುಖ ಯಾವುದೆಂದು ಯಕ್ಷನು ಕೇಳಿದ್ದಕ್ಕೆ ಯುಧಿಷ್ಠಿರನು 'ಸುಖಾನಾಂ ತುಷ್ಟಿರುತ್ತಮಾ' ಎನ್ನುತ್ತಾನೆ. ಹಲವು ಕಡೆ ಈ ವಿಷಯದಲ್ಲಿ ಇನ್ನೊಂದು ಮಾತು ಬರುತ್ತದೆ. ಸಕಲ ಭೋಗ ಸೌಭಾಗ್ಯದ ಬಾಳುವೆಯಿಂದ ಬರುವ ಸುಖ ವೈರಾಗ್ಯದಿಂದ ಬರುವ ಸುಖದ ಹದಿನಾರರಲ್ಲಿ ಒಂದು ಪಾಲು ಅಲ್ಲ.

ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಂ
ತೃಷ್ಣಾಕ್ಷಯ ಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಂ
ನಾಸ್ತಿರಾಗ ಸಮಂದುಃಖಂ ನಾಸ್ತಿತ್ಯಾಗ ಸಮಂಸುಖಂ
ಯಾದುಸ್ತ್ಯಜಾ ದುರ್ಮತಿಭಿಃ ಯಾ ನ ಜೀರ್ಯತಿ ಜೀರ್ಯತಃ
ಯೋಸೌ ಪ್ರಾಣಾಂತಿಕೋರೋಗಃ ತಾಂ ತೃಷ್ಣಾಂ ತ್ಯಜತಃ ಸುಖಂ

ಈ ಕಾರಣದಿಂದ ಮನುಷ್ಯನಿಗೆ ಅಸ್ತೇಯ ಅಪರಿಗ್ರಹ ಕರ್ತವ್ಯವಾಗುತ್ತವೆ. ನಿಷ್ಕಾರಣವಾಗಿ ವಸ್ತುಗಳನ್ನು ಕೂಡಿಸಿಡಬಾರದು. ತನಗೆ

ಬೇಕಾದದ್ದಕ್ಕಿಂತ ಹೆಚ್ಚಾಗಿ ಯಾವುದನ್ನೂ ಬಳಸಬಾರದು. ಬ್ರಹ್ಮಪಥ ದಲ್ಲಿ ನಡೆಯುವವನಿಗೆ ಈ ಸೂತ್ರ ಬರಬರುತ್ತ ಹೆಚ್ಚು ಕಠಿನವಾಗುತ್ತದೆ. ಬ್ರಾಹ್ಮಣನೆನಿಸಿಕೊಳ್ಳುವವನು ಬಹಳ ಎಂದರೆ ಆರು ತಿಂಗಳ ಧಾನ್ಯ ವನ್ನು ಸೇರಿಸಿಟ್ಟುಕೊಳ್ಳಬಹುದು. ಇದಕ್ಕಿಂತ ಒಳ್ಳೆಯ ಸ್ಥಿತಿ ಮೂರು ದಿನದ ಗ್ರಾಸವನ್ನು ಮಾತ್ರ ಒದಗಿಸಿಕೊಂಡಿರುವುದು. ಎಲ್ಲಕ್ಕಿಂತ ಒಳ್ಳೆಯದು ಅಂದಿನ ಆಹಾರವನ್ನು ಅಂದೇ ಕಂಡು ಭುಜಿಸುವುದು.

**ತೇಷಾಂ ಪರಃ ಪರೋಽಜ್ಯಾಯಾತ್ ಧರ್ಮತೋ ಲೋಕಜಿತ್ತಮಃ**

ಈ ಬಹು ಉತ್ತಮ ಜೀವನ ನಿಜದಲ್ಲಿ ಅಹನ್ಯಹನಿ ಕಾಲಕ್ಷೇಪ. ಈಗ ಅಹನ್ಯಹನಿ ಕಾಲಕ್ಷೇಪ ಎನ್ನುವುದು ತೀರ ಗತಿಕೆಟ್ಟವನ ಸ್ಥಿತಿ ಎಂಬ ಅರ್ಥದಲ್ಲಿ ಬಳಕೆಯಲ್ಲಿದೆ. ವ್ಯಕ್ತಿ ಜೀವನ, ಸಮಾಜ ಜೀವನ, ಸುಷ್ಠು ವಾದ ಕಾಲದಲ್ಲಿ ಅಹನ್ಯಹನಿ ಕಾಲಕ್ಷೇಪ ವ್ಯಕ್ತಿಯ ಉನ್ನತಿ, ಸಮಾಜದ ಕ್ಷೇಮ, ಎರಡಕ್ಕೂ ಮುಖ್ಯ ಸಾಧನ ಆಗುತ್ತದೆ. ಇಂಥ ಜನ ಹೆಚ್ಚಿದಷ್ಟೂ ರಾಷ್ಟ್ರಕ್ಕೆ ಕ್ಷೇಮ ಹೆಚ್ಚು.

**ಯಸ್ಮಿಂಶ್ಚೈತೇ ವಸಂತ್ಯರ್ಹಾಃ ತದ್ರಾಷ್ಟ್ರಮಭಿವರ್ಧತೇ**

## (vii) ಬ್ರಹ್ಮಚರ್ಯ

ವ್ಯಕ್ತಿಯ ಉನ್ನತಿಗೆ ಬ್ರಹ್ಮಚರ್ಯವೂ ಒಂದು ಅವಶ್ಯ ಸಾಧನ. ಬ್ರಹ್ಮಚರ್ಯ ಶಬ್ದ ಸಾಮಾನ್ಯವಾಗಿ ದ್ವಿಜನಾಗಿ ಹುಟ್ಟಿದ ಮನುಷ್ಯನ ಜೀವನದ ಪೂರ್ವಭಾಗದ ಹೆಸರಾಗಿದೆ. ಉಪನೀತನಾದ ದ್ವಿಜ ಬಾಲಕನು ಒಬ್ಬ ಗುರುವನ್ನು ಸಾರಿ ಅವನ ಶುಶ್ರೂಷೆಮಾಡಿ ಭಿಕ್ಷಾಟನದಿಂದ ಅನ್ನ ವನ್ನು ತಂದು ಗುರುವಿಗೆ ಒಪ್ಪಿಸಿ ಅವನು ಕೊಟ್ಟಷ್ಟನ್ನು ತಿಂದು ವಿದ್ಯೆ ಯನ್ನು ಗಳಿಸಬೇಕು. ಆ ಕಾಲದಲ್ಲಿ ಅವನು ಇಂದ್ರಿಯಗಳನ್ನು ಅಂಕೆ ಯಲ್ಲಿಟ್ಟು ಮುಖ್ಯವಾಗಿ ವಿಷಯ ಸುಖದಿಂದ ವಿಮುಖನಾಗಿ ಜ್ಞಾನಾರ್ಜನೆ ಯಲ್ಲಿ ಏಕನಿಷ್ಠೆಯಿಂದ ತೊಡಗಿರಬೇಕು. ಬ್ರಹ್ಮಚರ್ಯ ಶಬ್ದಕ್ಕೆ ಇದು ವಾಡಿಕೆಯ ಅರ್ಥ ಆದರೂ ನಿಜದಲ್ಲಿ ಇದು ಒಂದು ಸಂಕುಚಿತ ಅರ್ಥ. ಬ್ರಹ್ಮವನ್ನು ಕುರಿತು ನಡೆಯುವುದೆಲ್ಲ ಬ್ರಹ್ಮಚರ್ಯೆ. ವಿದ್ಯಾರ್ಜನೆಯಲ್ಲಿ ತೊಡಗಿರುವ ಬ್ರಹ್ಮಚಾರಿ ಮಾತ್ರ ಅಲ್ಲದೆ, ಗೃಹಸ್ಥ ವಾನಪ್ರಸ್ಥರೂ ಬ್ರಹ್ಮ

ವನ್ನು ಕುರಿತು ಬಾಳಬೇಕು. ಆದ್ದರಿಂದ ಅವರೂ ಬ್ರಹ್ಮಚಾರಿಗಳಾಗಿರಬೇಕು. ಇಂದ್ರಿಯಗಳನ್ನು ಅಂಕೆಯಲ್ಲಿಟ್ಟುಕೊಳ್ಳುವುದು ವಿದ್ಯಾರ್ಥಿ ಬ್ರಹ್ಮಚಾರಿಗೆ ಹೇಗೋ ಹಾಗೆ ಗೃಹಸ್ಥ ಬ್ರಹ್ಮಚಾರಿಗೂ ಅವಶ್ಯ ಕರ್ತವ್ಯ. ತನ್ನ ಹೆಂಡಿರು ಹೊರತು ಬೇರೆ ಹೆಂಗಸನ್ನು ಕಾಮಿಸದ ಗೃಹಸ್ಥನು ಬ್ರಹ್ಮಚಾರಿ.

**ಅನನ್ಯ ಸ್ತ್ರೀಜನಃ ಪ್ರಾಜ್ಞೋ ಬ್ರಹ್ಮಚಾರೀ ತಥಾ ಭವೇತ್.**

ತನ್ನ ಹೆಂಡಿರನ್ನಾದರೂ ಉಚಿತಕಾಲದಲ್ಲಿ ಒಂದು ನಿಯಮವನ್ನನುಸರಿಸಿ ಮಾತ್ರ ಅನುಭವಿಸುವುದು ಆ ಆಶ್ರಮದ ಧರ್ಮ. ಬ್ರಹ್ಮಚಾರಿಯಾದ ಗೃಹಸ್ಥನು ಆ ಧರ್ಮವನ್ನು ಪಾಲಿಸಬೇಕು.

## (viii) ಮನಃಸ್ಥೈರ್ಯ

ಸಾಧಕನಾದ ಮನುಷ್ಯನು ಈ ಧ್ಯೇಯಗಳನ್ನಿಟ್ಟುಕೊಂಡು ಬಾಳಿದಲ್ಲಿ ಜೀವನ ಅವನಿಗೆ ಸುಖಸಂತೋಷಗಳೊಂದಿಗೆ ಕಷ್ಟನಿಷ್ಠುರಗಳನ್ನೂ ತರುತ್ತದೆ. ಉನ್ನತ ಜೀವನವನ್ನು ಬಯಸುವವನು ಸುಖ ಬಂದಲ್ಲಿ ಅತಿ ಸಂತೋಷಪಡದೆ, ದುಃಖ ಬಂದಾಗ ಅತಿ ಕ್ಲೇಶಪಡದೆ ಅನುಭವವನ್ನು ನಿಗ್ರಹಿಸಿಕೊಳ್ಳಬೇಕು. ಸುಖ ದುಃಖ, ಲಾಭ ಅಲಾಭ, ಜಯ ಅಪಜಯ, ಮಾನ ಅಪಮಾನಗಳಲ್ಲಿ ಸ್ಥಿರನಾಗಿರಬೇಕು.

ಸುಖಂ ವಾ ಯದಿ ವಾ ದುಃಖಂ ಪ್ರಿಯಂ ವಾ ಯದಿ ವಾಽಪ್ರಿಯಂ
ಪ್ರಾಪ್ತಂಪ್ರಾಪ್ತಮುಪಾಸೀತ ಹೃದಯೇ ನಾಪರಾಜಿತಃ
ಶೋಕಸ್ಥಾನ ಸಹಸ್ರಾಣಿ ಭಯಸ್ಥಾನ ಶತಾನಿ ಚ
ದಿವಸೇ ದಿವಸೇ ಮೂಢಂ ಆವಿಶಂತಿ ನ ಪಂಡಿತಂ
ಯದ್ಯತ್ತ್ಯಜತಿ ಕಾಮಾನಾಂ ತತ್ಸುಖಸ್ಯಾಭಿಪೂರ್ಯತೇ
ಕಾಮಾನುಸಾರೀ ಪುರುಷಃ ಕಾಮಾನನುವಿನಶ್ಯತಿ
ಸರ್ವತ್ರ ರಮತೇ ಪ್ರಾಜ್ಞಃ ಸರ್ವತ್ರ ಚ ವಿರೋಚತೇ
ನ ವಿಭೀಷಯತೇ ಕಿಂಚಿತ್ ಭೀಷಿತೋ ನ ಬಿಭೇತಿ ಚ
ಉತ್ಪನ್ನಮಿಹಲೋಕೇ ವೈ ಜನ್ಮ ಪ್ರಭೃತಿ ಮಾನವಂ
ವಿವಿಧಾನ್ಯುಪವರ್ತಂತೇ ದುಃಖಾನಿ ಚ ಸುಖಾನಿ ಚ
ತಯೋರೇಕತರೋ ಮಾರ್ಗೋ ಯದೇನಮುಪಸನ್ನಯೇತ್
ನ ಸುಖಂ ಪ್ರಾಪ್ಯ ಸಂಹೃಷ್ಯೇತ್ ನಾಸುಖಂಪ್ರಾಪ್ಯ ಸಂಜ್ವರೇತ್

ಈ ಉಪದೇಶ ಗೀತೆಯಲ್ಲಿ ವಿವರವಾಗಿ ರೂಪುಗೊಂಡು ಈಚೆಗೆ ನಮ್ಮ ಸೀಮೆಯಲ್ಲಿ ಸಾಮಾನ್ಯವಾಗಿ ಹರಡಿದೆ. ಹರಡಿರುವಷ್ಟು ಸಾಮಾನ್ಯವಾಗಿ ಅನುಷ್ಠಾನಕ್ಕೆ ಬಂದಿದೆಯೆಂದು ಹೇಳುವಂತಿಲ್ಲ. ಮೊದಲು ಈ ಸೂತ್ರವನ್ನು ಕಂಡ ಋಷಿಗಳು ಅದನ್ನು ಆಧ್ಯಾತ್ಮಿಕವಾಗಿ ಬಹು ಎತ್ತರಕ್ಕೆ ಏರಿದ ಜನಕ್ಕೆ ಮಾತ್ರ ವಿನಿಯೋಗಿಸಿದರು. ಉಳಿದೆಲ್ಲ ಪಾಠ ಮುಗಿದಮೇಲೆ ಬರುವ ಪಾಠ ನಿರ್ಲೇಪ, ನಿರ್ಮೋಹ. ಬ್ರಹ್ಮಸಾಕ್ಷಾತ್ಕಾರಕ್ಕೆ ಇದು ತುಟ್ಟ ತುದಿಯ ಹಂತ.

## ೨೫

## ಮನುಷ್ಯನ ಶತ್ರುಗಳು

### (i) ಮದ

ಮನುಷ್ಯನನ್ನು ಕೆಡಿಸುವ ಪ್ರವೃತ್ತಿಗಳು ಹಲವು. ಅವುಗಳಲ್ಲಿ ಒಂದು ಮದ. ನಾನು ಒಳ್ಳೆಯ ಕುಲದವನೆಂದು ನಾನು ಬಹಳ ಬಲ್ಲವನೆಂದು ನಾನು ದಣಿ ದೊರೆಯೆಂದು ಮನುಷ್ಯನಿಗೆ ಮತ್ತು ಬರುತ್ತದೆ. ಇದರ ಸ್ವರೂಪವನ್ನು ತಿಳಿದುಕೊಂಡು ಅವನು ಅದರಿಂದ ಬಿಡಿಸಿಕೊಳ್ಳಬೇಕು; ಇದು ಯಾವುದೂ ದೊಡ್ಡದಲ್ಲ, ಗುಣ ಮುಖ್ಯ ಎಂದು ತಿಳಿದು ನಡೆಯಬೇಕು.

> ಕುಲಾದ್ಜ್ಞಾನಾತ್ತಥೈಶ್ವರ್ಯಾತ್ ಮದೋ ಭವತಿದೇಹಿನಾಂ
> ಏಭಿರೇವತು ವಿಜ್ಞಾತೈಃ ಮದಃ ಸದ್ಯಃ ಪ್ರಣಶ್ಯತಿ
> ಕುಲಾನಿ ಸಮುಪೇತಾನಿ ಗೋಭಿಃ ಪುರುಷತೋಽರ್ಥತಃ
> ಕುಲಸಂಖ್ಯಾಂನಗಚ್ಛಂತಿ ಯಾನಿ ಹೀನಾನಿ ವೃತ್ತತಃ

ಕೀಳಾದ ನಡತೆಯಿಂದ ಕುಲ ಲೆಕ್ಕಕ್ಕೆ ಬಾರದೆ ಹೋಗುತ್ತದೆ.

> ವೃತ್ತತಸ್ತ್ವವಿಹೀನಾನಿ ಕುಲಾನ್ಯಲ್ಪಧನಾನ್ಯಪಿ
> ಕುಲಸಂಖ್ಯಾಂಚ ಗಚ್ಛಂತಿ ಕರ್ಷನ್ತಿಚ ಮಹದ್ಯಶಃ

ನಡತೆ ಕೀಳಾಗದಿದ್ದರೆ, ಕುಲ ಕಡಮೆ ಇರಬಹುದು ಧನ ಕಡಮೆ ಇರಬಹುದು, ಇದರಿಂದ ಕೊರೆ ಇಲ್ಲದೆ ಗೌರವ ದೊರೆಯುತ್ತದೆ, ಕೀರ್ತಿ ದೊರೆಯುತ್ತದೆ.

ವೃತ್ತಂಯತ್ನೇನ ಸಂರಕ್ಷೇತ್ ವಿತ್ತಮೇತಿಚ ಯಾತಿಚ
ಅಕ್ಷೀಣೋವಿತ್ತತಃ ಕ್ಷೀಣೋ ವೃತ್ತತಸ್ತು ಹತೋಹತಃ

ಆದ್ದರಿಂದ ಮನುಷ್ಯನು ಹಣಕ್ಕಿಂತ ನಡತೆಯನ್ನು ಹೆಚ್ಚು ಎಚ್ಚರದಿಂದ ಕಾಪಾಡಿಕೊಳ್ಳಬೇಕು. ಹಣ ಬರುತ್ತದೆ ಹೋಗುತ್ತದೆ. ಹೋದ ನಡತೆ ಬರುವುದಿಲ್ಲ.

## (ii) ಕೋಪ

ಮನುಷ್ಯನನ್ನು ಕೆಡಿಸುವ ಮತ್ತೊಂದು ಪ್ರವೃತ್ತಿ ಕೋಪ.

ಕ್ರುದ್ಧಃ ಪಾಪಂ ನರಃ ಕುರ್ಯಾತ್ ಕ್ರುದ್ಧೋ ಹನ್ಯಾತ್ ಗುರೂನಪಿ
ಕ್ರುದ್ಧಃ ಪರುಷಯಾವಾಚಾ ಶ್ರೇಯಸೋಽಪ್ಯವಮನ್ಯತೇ

ಕೋಪ ಅಡಸಿದ ಮನುಷ್ಯನು ಪಾಪಮಾಡುತ್ತಾನೆ. ಗುರುವನ್ನಾದರೂ ಕೊಲ್ಲುತ್ತಾನೆ. ಕಠಿನವಾದ ಮಾತಿನಿಂದ ಪೂಜ್ಯರನ್ನೂ ಅವಮಾನಪಡಿಸುತ್ತಾನೆ.

ವಾಚ್ಯಾವಾಚ್ಯೇಹಿ ಕುಪಿತಃ ನ ಪ್ರಜಾನಾತಿಕರ್ಹಿಚಿತ್
ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂವಿದ್ಯತೇ ತಥಾ
ಹಿಂಸ್ಯಾತ್ ಕ್ರೋಧಾದವಧ್ಯಾಂಸ್ತು ವಧ್ಯಾನ್ ಸಂಪೂಜಯೀತಚ
ಆತ್ಮಾನಮಪಿಚ ಕ್ರುದ್ಧಃ ಪ್ರೇಷಯೇತ್ ಯಮಸಾದನಂ
ಆತ್ಮಾನಂಚ್ಚಪರಾಂಶ್ಚೈವ ತ್ರಾಯತೇ ಮಹತೋಭಯಾತ್
ಕ್ರುಧ್ಯಂತಮಪ್ರತಿಕ್ರುಧ್ಯನ್ ದ್ವಯೋರೇಷ ಚಿಕಿತ್ಸಕಃ
ತಸ್ಮಾತ್ ಬಲವತಾಚೈವ ದುರ್ಬಲೇನಚ ಸತ್ಯದಾ
ಕ್ಷಂತವ್ಯಂ ಪುರುಷೇಣಾಹುಃ ಆಪತ್ಸ್ವಪಿ ವಿಜಾನತಾ
ಯಸ್ತು ಕ್ರೋಧಂ ಸಮುತ್ಪನ್ನಂ ಪ್ರಜ್ಞಯಾ ಪರಿಬಾಧತೇ
ತೇಜಸ್ವಿನಂ ತಂ ವಿದುಷಂ ಮನ್ಯಂತೇ ತತ್ತ್ವದರ್ಶಿನಃ

ಕೋಪ ಬಂದವನಿಗೆ ಈ ಮಾತನ್ನು ಹೇಳಬಹುದು ಇದನ್ನು ಹೇಳಬಾರದು ಎಂಬ ಪರಿಜ್ಞಾನವಿರುವುದಿಲ್ಲ. ಅವನಿಗೆ ಅಕಾರ್ಯವಿಲ್ಲ ಅವಾಚ್ಯವಿಲ್ಲ.

ಕೋಪದಲ್ಲಿ ಮನುಷ್ಯನು ಅವಧ್ಯರನ್ನು ಹಿಂಸಿಸುತ್ತಾನೆ ವಧ್ಯರನ್ನು ಬಹಳವಾಗಿ ಪೂಜಿಸುತ್ತಾನೆ. ಕೋಪಿಷ್ಠನು ತನ್ನನ್ನೇ ಯಮಸಾದನಕ್ಕೆ ಪ್ರೇಷಿಸಿಕೊಳ್ಳುತ್ತಾನೆ.

ಆದಕಾರಣ ತಾಳ್ಮೆಯೇ ಮನುಷ್ಯನಿಗೆ ಸರಿಯಾದದ್ದು.

ಕೋಪ ಬಂದವನಿಗೆ ಪ್ರತಿಯಾಗಿ ಕೋಪ ತೋರದವನು ತನ್ನನ್ನಷ್ಟೇ ಅಲ್ಲ ಆ ಕೋಪ ಬಂದವನನ್ನೂ ಮಹದ್ಭಯದಿಂದ ರಕ್ಷಿಸುತ್ತಾನೆ. ಅಂಥವನು ಎರಡು ಪಕ್ಷಕ್ಕೂ ಚಿಕಿತ್ಸಕನು.

ಆದಕಾರಣ ವಿಜ್ಞಾನಿಯಾದ ಸುಬಲನಿಗೆ ಆಗಲಿ ದುರ್ಬಲನಿಗೆ ಆಗಲಿ ತಾಳ್ಮೆ ಎಲ್ಲ ಹೊತ್ತೂ, ಆಪತ್ತಿನಲ್ಲಿ ಕೂಡ, ಕರ್ತವ್ಯ ಎಂದಿದೆ.

ಏರಿಬಂದ ಕೋಪವನ್ನು ಪ್ರಜ್ಞೆಯಿಂದ ಯಾವನು ತಡೆಯುತ್ತಾನೆ ಅವನನ್ನು ತತ್ತ್ವದರ್ಶಿಗಳು ತೇಜಸ್ವಿಯೆಂದು ಪಂಡಿತನೆಂದು ಎಣಿಸುತ್ತಾರೆ.

### (iii) ಲೋಭ

ಲೋಭ ಇಂಥದೇ ದುಷ್ಪ್ರವೃತ್ತಿ. ಇದು ಪಾಪದ ಅಧಿಷ್ಠಾನ. ಇದೇ ನಿಜವಾಗಿ ದೊಡ್ಡ ಮೊಸಳೆ. ಲೋಭವನ್ನು ತೃಪ್ತಿಪಡಿಸುವುದು ಸಾಧ್ಯವಲ್ಲ. ತುಂಬುನೀರಿನ ಹೊಳೆಗಳು ನಿತ್ಯವೂ ಬಂದು ಬೀಳುತ್ತಿದ್ದರೂ ತುಂಬದೆ ಇರುವ ಸಮುದ್ರಕ್ಕೆ ಸಮ ಅದು. "ಆಶೆಯನ್ನು ಕಾಡಿನಿಂದ ಕೂಡಿದ ಪರ್ವತಕ್ಕಿಂತ ಹಿರಿಯದು ಎಂದು ತಿಳಿಯುತ್ತೇನೆ; ಅಥವಾ ಆಕಾಶ ಅಳತೆಗೆ ಸಿಕ್ಕುವುದಿಲ್ಲವೆಂದರೆ ಆಶೆ ಅದಕ್ಕಿಂತ ಕೇಡು."

ಪಾಪಸ್ಯ ಯದಧಿಷ್ಠಾನಂ ತಚ್ಛೃಣುಷ್ವ ನರಾಧಿಪ
ಏಕೋ ಲೋಭೋ ಮಹಾಗ್ರಾಹೋ ಲೋಭಾತ್ಪಾಪಂ ಪ್ರವರ್ತತೇ
ಯೇನ ಪೂರಯಿತುಂ ಶಕ್ಯೋ ಲೋಭಃ ಪ್ರೀತ್ಯಾ ಕಥಂಚನ
ನಿತ್ಯಂ ಗಂಭೀರತೋಯಾಭಿಃ ಆಪಗಾಭಿರಿವೋದಧಿಃ
ಆಶಾಂ ಬೃಹತ್ತರೀಂ ಮನ್ಯೇ ಪರ್ವತಾದಪಿ ಸದ್ರುಮಾತ್
ಆಕಾಶಾದಪಿ ವಾ ರಾಜನ್ ಅಪ್ರಮೇಯಾಽಥವಾ ಪುನಃ

## ೨೬
## ಸಾಧುಜೀವನ
### (i) ದಮ

ಈ ಎಲ್ಲ ದುಷ್ಪ್ರವೃತ್ತಿಗಳಿಗೆ ನಿವಾರಣೆ ಅವನ್ನು ತಡದೇ ತಡೆಯುತ್ತೇನೆ ಎಂಬ ಸಂಕಲ್ಪ, ಮನೋದಾರ್ಢ್ಯ. ಇದೇ ದಮ. ಎಲ್ಲ ಧರ್ಮಬೋಧೆಯ ಗುರಿ ಇದೇ.

ಧರ್ಮಸ್ಯವಿಧಯೋನೈಕೇ ತೇತೇ ಪ್ರೋಕ್ತಾ ಮಹರ್ಷಿಭಿಃ
ಸ್ವಂಸ್ವಂ ವಿಜ್ಞಾನಮಾಶ್ರಿತ್ಯ ದಮಸ್ತೇಷಾಂ ಪರಾಯಣಂ
ಸುಖಂದಾನ್ತಃಪ್ರಸ್ವಪಿತಿ ಸುಖಂಚ ಪ್ರತಿಬುಧ್ಯತೇ
ಸುಖಂ ಪರ್ಯೇತಿಲೋಕಾಂಶ್ಚ ಮನಶ್ಚಾಸ್ಯ ಪ್ರಸೀದತಿ
ಏಕ ಏವದಮೇ ದೋಷಃ ದ್ವಿತೀಯಂನೋಪಪದ್ಯತೇ
ಯದೇನಂ ದಮಸಂಯುಕ್ತಂ ದುರ್ಬಲಂಮನ್ಯತೇ ಜನಃ
ಕ್ರೂರಃ ಕೌರವ್ಯಮೃದವೇ ಮೃದುಃ ಕ್ರೂರೇಚ ಕೌರವ
ಸಾಧುಶ್ಚಾಸಾಧವೇ ಸಾಧುಃ ಸಾಧವೇ ನಾಪ್ನುಯಾತ್ ಕಥಂ
ಜಯೇತ್ ಕದರ್ಯಂದಾನೇನ ಸತ್ಯೇನಾನೃತವಾದಿನಂ
ಕ್ಷಮಯಾ ಕ್ರೂರಕರ್ಮಾಣಂ ಅಸಾಧುಂ ಸಾಧುನಾ ಜಯೇತ್
ಅಕ್ರೋಧೇನ ಜಯೇತ್ ಕ್ರೋಧಂ ಅಸಾಧುಂಸಾಧುನಾ ಜಯೇತ್
ಜಯೇತ್ ಕದರ್ಯಂದಾನೇನ ಜಯೇತ್ ಸತ್ಯೇನಚಾನೃತಂ

ಧರ್ಮದ ವಿಧಿಗಳು ಅನೇಕ; ಅವನ್ನು ಮಹರ್ಷಿಗಳು ಹೇಳಿದಾರೆ. ಅವು ಆಯಾ ಮಹನೀಯರ ವಿಜ್ಞಾನಕ್ಕೆ ಅನುಸಾರವಾಗಿವೆ. ಆದರೆ ಅದೆಲ್ಲದರ ಕೊನೆಯ ಹಂತ ಒಂದೇ. ಅದು ದಮ.

ದಮವುಳ್ಳವನು ಸುಖವಾಗಿ ನಿದ್ರಿಸುತ್ತಾನೆ, ಸುಖವಾಗಿ ಏಳುತ್ತಾನೆ, ಸುಖವಾಗಿ ನಡೆಯುತ್ತಾನೆ; ಅವನ ಮನಸ್ಸು ತಿಳಿಯಾಗಿರುತ್ತದೆ.

ದಮದಲ್ಲಿ ಒಂದೇ ದೋಷ; ಎರಡನೆಯದು ದೊರೆಯುವುದಿಲ್ಲ. ದಮದಿಂದ ನಡೆಯುವವನನ್ನು ಜನ ದುರ್ಬಲನೆಂದು ತಿಳಿಯುತ್ತಾರೆ.

ಕ್ರೂರನಾದವನು ಮೃದುವಾದವನ ವಿಷಯದಲ್ಲೂ ಕ್ರೂರವಾಗಿರುತ್ತಾನೆ. ಮೃದುವಾದವನು ಕ್ರೂರನ ವಿಷಯದಲ್ಲೂ ಮೃದುವಾಗಿರುತ್ತಾನೆ. ಇದು ಅವರವರ ಸ್ವಭಾವ. ಸಾಧುವಾದವನು ಅಸಾಧುವನ್ನು ಕುರಿತೂ ಸಾಧುವಾಗಿಯೇ ಇರುತ್ತಾನೆ. ಸಾಧುತ್ವದಿಂದ ದೊರೆಯದ್ದು ಏನು ಇದೆ?

ಅಲ್ಪನನ್ನು ದಾನದಿಂದ ಸುಳ್ಳನನ್ನು ಸತ್ಯದಿಂದ ಕ್ರೂರಿಯನ್ನು ಕ್ಷಮೆಯಿಂದ ಅಸಾಧುವನ್ನು ಸಾಧುತ್ವದಿಂದ ಕೋಪಿಯನ್ನು ಸಮಾಧಾನದಿಂದ ಜಯಿಸತಕ್ಕದ್ದು.

## (ii) ಕರ್ಮ

ಮನುಷ್ಯನು ಒಳ್ಳೆಯ ದಾರಿಯನ್ನೇ ಹಿಡಿಯಬೇಕು ಎನ್ನುವುದಕ್ಕೆ ಕಾರಣ, ತಪ್ಪಿನ ಫಲ ಅವನನ್ನು ಬಿಡದೆ ಕಾಡುತ್ತದೆ ಎನ್ನುವುದು.

ಮನುಷ್ಯ ಜಂತು ತನ್ನ ಕರ್ಮದ ಫಲದಿಂದ ತಪ್ಪಿಸಿಕೊಂಡು ಓಡಿಹೋಗು ವಂತಿಲ್ಲ.

ಸುಶೀಘ್ರಮಪಿ ಧಾವಂತಂ ವಿಧಾನಮನುಧಾವತಿ
ಶೇತೇ ಸಹ ಶಯಾನೇನ ಯೇನಯೇನ ಯಥಾ ಕೃತಂ
ಅಚೋದ್ಯಮಾನಾನಿ ಯಥಾ ಪುಷ್ಪಾಣಿ ಚ ಫಲಾನಿ ಚ
ಸ್ವಂಕಾಲಂನಾತಿವರ್ತನ್ತೇ ಯಥಾ ಕರ್ಮ ಪುರಾಕೃತಂ
ಆತ್ಮನಾ ವಿಹಿತಂ ದುಃಖಂ ಆತ್ಮನಾ ವಿಹಿತಂ ಸುಖಂ
ಗರ್ಭಶಯ್ಯಾಮುಪಾದಾಯ ಭುಜ್ಯತೇ ಪೌರ್ವದೇಹಿಕಂ
ಯಥಾಧೇನುಸಹಸ್ರೇಷು ವತ್ಸೋವಿಂದತಿ ಮಾತರಂ
ತಥಾ ಪೂರ್ವಕೃತಂ ಕರ್ಮ ಕರ್ತಾರಮನುಗಚ್ಛತಿ

ಎಷ್ಟೇ ಬೇಗನೆ ಓಡು, ನಿನ್ನ ಕರ್ಮ ನಿನ್ನನ್ನು ಬಿಡದೆ ಅನುಸರಿಸುತ್ತದೆ. ಅವನವನ ಕರ್ಮ ಅವನೊಂದಿಗೆ ಹಾಸಿಗೆಯಲ್ಲಿ ಮಲಗುತ್ತದೆ. ಕಾಲಕ್ಕೆ ಸರಿಯಾಗಿ ಗಿಡದಲ್ಲಿ ಹೂವು ಹಣ್ಣು ಬರುವಂತೆ ಬಾಳಿನಲ್ಲಿ ಪುರಾಕೃತದ ಫಲ ತಲೆದೋರುತ್ತದೆ. ನಮ್ಮ ನೋವು ನಮ್ಮ ನಲಿವನ್ನು ನಾವೇ ನಿಯಮಿಸಿಕೊಳ್ಳುತ್ತೇವೆ. ತಾಯ ಬಸಿರಲ್ಲಿ ಸೇರಿದಾಗ ಹಿಂದಿನ ಜೀವನದ ಕರ್ಮದ ಫಲವನ್ನು ಉಣ್ಣುತ್ತೇವೆ. ಸಾವಿರ ಹಸುವಿನ ಮಂದೆಯಲ್ಲಿ ಕರು ತನ್ನ ತಾಯನ್ನು ಗುರುತಿಸಿ ಸೇರುವಂತೆ ನಮ್ಮ ಕರ್ಮ ನಮ್ಮನ್ನು ಬಿಡದೆ ಬಂದು ಸೇರುತ್ತದೆ.

## (iii) ಧೃತಿ

ಧನ ಬರುವುದು ಬಿಡುವುದು ಅದೃಷ್ಟದ ಫಲ. ಆದರೆ ಪ್ರಯತ್ನ ಮಾಡಬೇಕು. ಪ್ರಯತ್ನಮಾಡಿ ಅದೃಷ್ಟವಿದ್ದರೆ ಮನುಷ್ಯನಿಗೆ ಅಸಾಧ್ಯ ವಾದದ್ದು ಒಂದೂ ಇಲ್ಲ.

ನಾಭಾಗಧೇಯಃ ಪ್ರಾಪ್ನೋತಿ ಧನಂ ಸುಬಲವಾನ್ ಅಪಿ
ಭಾಗಧೇಯಾನ್ವಿತಸ್ತ್ವರ್ಥಾನ್ ಕೃಶೋ ಬಾಲಶ್ಚ ವಿನ್ದತಿ
ನಾಲಾಭಕಾಲೇ ಲಭತೇ ಪ್ರಯತ್ನೇತಿಕೃತೇ ಸತಿ
ಲಾಭ ಕಾಲೇಽಪ್ರಯತ್ನೇನ ಲಭತೇ ವಿಪುಲಂ ಧನಂ
ಕೃತಯತ್ನಾಫಲಾಶ್ಚೈವ ದೃಶ್ಯಂತೇ ಶತಶೋನರಾಃ
ಅಯತ್ನೇನೈಧಮಾನಾಶ್ಚ ದೃಶ್ಯಂತೇ ಬಹವೋ ಜನಾಃ

ಯದಿಯತ್ನೋ ಭವೇನ್ಮರ್ತ್ಯಃ ಸರ್ವಂ ಫಲಮವಾಪ್ನುಯಾತ್
ನಾಲಭ್ಯಂ ಚೋಪಲಭ್ಯೇತ ನೃಣಾಂ ಭರತ ಸತ್ತಮ

ಎಷ್ಟು ಶಕ್ತನಾದರೂ ಅಭಾಗಧೇಯನಾದವನು ಧನವನ್ನು ಪಡೆಯು ವುದಿಲ್ಲ. ಭಾಗಧೇಯನು ದುರ್ಬಲನಾಗಿರಲಿ ಬಾಲಕನಾಗಿರಲಿ ಅದನ್ನು ಪಡೆಯುತ್ತಾನೆ.

ಅಲಾಭಕಾಲವಾಗಿದ್ದರೆ ಯತ್ನಮಾಡಿದರೂ ಲಭಿಸುವುದಿಲ್ಲ; ಲಾಭ ಕಾಲವಾಗಿದ್ದರೆ ಪ್ರಯತ್ನವಿಲ್ಲದೆಯೇ ವಿಪುಲ ಧನ ಲಭಿಸುತ್ತದೆ. ಯತ್ನ ಮಾಡಿ ಫಲಪಡೆಯದ ಜನ ನೂರಾರು ಮಂದಿ ಕಾಣುತ್ತಾರೆ; ಯತ್ನ ಮಾಡದೆ ಫಲಪಡೆದವರು ಹಾಗೆಯೇ ಬಹುಮಂದಿ. ಮನುಷ್ಯನು ಯತ್ನ ಮಾಡಿದರೆ ಎಲ್ಲ ಫಲವನ್ನೂ ಪಡೆಯಬಹುದು; ಅಲಭ್ಯವಾದದ್ದೂ ಅವನಿಗೆ ಲಭಿಸಬಹುದು.

ಜೀವನದಲ್ಲಿ ತಪ್ಪು ನಡೆಯುತ್ತದೆ. ಯಾವನೂ ಸದಾ ಒಳ್ಳೆಯ ದನ್ನೇ ಮಾಡಲಾರನು. ಆದರೆ ತಪ್ಪು ಮಾಡಿದವನು ಅದನ್ನು ಮುಚ್ಚಿಡಲು ನೋಡಬಾರದು; ಅದು ಯಾರಿಗೂ ತಿಳಿಯದು ಎಂಬ ಕಾರಣದಿಂದಂತೂ ಅದನ್ನು ಮರೆಸುವೆನೆಂದರೆ ಆ ಯತ್ನ ವ್ಯರ್ಥ.

ತಸ್ಮಾತ್ ಪಾಪಂ ನಗೂಹೇತ ಗೂಹಮಾನಂ ವಿವರ್ಧತೇ
ಕೃತ್ವಾತು ಸಾಧುಷ್ವಾಖ್ಯಾಯ ಅಧರ್ಮಂ ಪ್ರಶಮಂತ್ಯುತ
ಜ್ಞಾನಪೂರ್ವಕೃತಂ ಪಾಪಂ ಚ್ಛಾದಯನ್ತೇ ಹ್ಯಸಾಧವಃ
ನಮಾಂ ಮನುಷ್ಯಾಃ ಪಶ್ಯನ್ತಿ ನಮಾಂ ಪಶ್ಯನ್ತಿ ದೇವತಾಃ

ಸಾವು ಯಾವುದೋ ನಿಯಮವನ್ನನುಸರಿಸಿ ಬರುತ್ತದೆ ಎಂದು ತಿಳಿಯು ವುದು, ಜೀವರಾಶಿಗೇ ಕಷ್ಟ ಅನಿವಾರ್ಯವೆನ್ನುವುದನ್ನು ಗ್ರಹಿಸುವುದು, ಮನಸ್ಸಿಗೆ ಸ್ಥೈರ್ಯವನ್ನು ಕೊಡುತ್ತದೆ.

ನಾಪ್ರಾಪ್ತಕಾಲೇಮ್ರಿಯತೇ ವಿದ್ಧಃ ಶರಶತೈರಪಿ
ತೃಣಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೇ ನಜೀವತಿ

ಸಾಯುವ ಹೊತ್ತು ಬಂದಿಲ್ಲ: ನೂರು ಬಾಣದಿಂದ ಸಾಯುವುದಿಲ್ಲ. ಸಾಯುವ ಕಾಲ ಬಂದಿತು: ಹುಲ್ಲ ಊಗಿನಿಂದ ಮೆಲ್ಲನೆ ಸೋಕಿದರೆ ಆಯಿತು, ಸಾವು ಅಡಸುತ್ತದೆ.

**ಯದಾ ಪ್ರಮಾಣಂ ಪ್ರಸವಃ ಸ್ವಭಾವಶ್ಚ ಸುಖಾಸುಖೇ**
**ದಂಶಕೀಟ ಪಿಪೀಲಾನಾಂ ಸ್ಥಿರೋಭವಯುಧಿಷ್ಠಿರ**

ಹುಟ್ಟಿದ್ದು ನಿಜವಾದ ಮೇಲೆ ಸುಖ ಅಸುಖ ಸ್ವಭಾವವಾದವು. ಇದು ಮನುಷ್ಯನಿಗೆ ಮಾತ್ರವಲ್ಲ ಹುಳುವಿಗೆ ಹುಟ್ಟಿಗೆ ಇರುವೆಗೆ ಕೂಡ ಹೀಗೆಯೆ. ಇದನ್ನು ನೆನೆ: ಸ್ಥಿರನಾಗು.

ಇದೇ ಕಾರಣದಿಂದ ಮನುಷ್ಯನಾದವನು ಯಾವ ಕಷ್ಟ ಬಂದರೂ ಸಹಿಸಿಕೊಂಡು ಬಾಳಬೇಕು; ನಿರಾಸೆಗೆ ಎಡೆ ಕೊಡಬಾರದು, ಜೀವ ಕಳೆದುಕೊಳ್ಳುವ ಯೋಚನೆ ಮಾಡಬಾರದು.

**ಸುದುರ್ಲಭಮವಾಪ್ಯೈತನ್ನದೋಷಾತ್ ಮರ್ತುಮರ್ಹಸಿ**

ಮಾನವ ಜನ್ಮ ದೊರೆಯುವುದು ತೀರಾ ಕಷ್ಟ. ಅದರಲ್ಲಿ ತೊಂದರೆ ಬಂದಿತೆಂದು ಪ್ರಾಣ ಬಿಡುವುದು ಸರಿಯಲ್ಲ.

**ಏತಂಬುದ್ಧಿಂ ಸಮಾಸಾದ್ಯ ಜೀವಿತವ್ಯಂ ಸದಾ ಭವೇತ್**
**ಜೀವನ್ಪುಣ್ಯಮವಾಪ್ನೋತಿ ಪುರುಷೋಭದ್ರಮಶ್ನುತೇ**

ಹೀಗೆ ಯೋಚಿಸಿ ಎಂಥ ಹೊತ್ತಿನಲ್ಲಿಯೂ ಧೃತಿಯಿಂದ ಬಾಳಬೇಕು. ಜೀವಂತನಾಗಿ ಉಳಿದವನು ಪುಣ್ಯವನ್ನು ಪಡೆಯುತ್ತಾನೆ, ಶುಭವನ್ನು ಉಣ್ಣುತ್ತಾನೆ.

**ನ ಮೃತೋ ಜಯತೇ ಶತ್ರೂನ್ ಜೀವನ್ ಭದ್ರಾಣಿ ಪಶ್ಯತಿ**
**ಮೃತಸ್ಯ ಭದ್ರಾಣಿ ಕುತಃ ಕೌರವೇಯ ಕುತೋ ಜಯಃ**

ಸತ್ತವನು ಶತ್ರುಗಳನ್ನು ಜಯಿಸನು. ಜೀವಂತನಾಗಿದ್ದರೆ ಶುಭವನ್ನು ಕಾಣುತ್ತಾನೆ. ಸತ್ತವನಿಗೆ ಶುಭವೆಲ್ಲಿಯದು ಜಯವೆಲ್ಲಿಯದು?

**ಅನಿತ್ಯಾಃ ಖಲುಮರ್ತ್ಯಾನಾಂ ಅರ್ಥಾಶ್ಚ ವ್ಯಸನಾನಿಚ**
**ಇತಿಮತ್ವಾ ಪ್ರತೀಕ್ಷಾಮಿ ಭರ್ತೄಣಾಮುದಯಂ ಪುನಃ**
**ಚಕ್ರವತ್ಪರಿವರ್ತನ್ತೇ ಹ್ಯರ್ಥಾಶ್ಚ ವ್ಯಸನಾನಿಚ**
**ಇತಿಮತ್ವಾ ಪ್ರತೀಕ್ಷಾಮಿ ಭರ್ತೄಣಾಮುದಯಂ ಪುನಃ**
**ದತ್ವಾಯಾಚಂತಿ ಪುರುಷಾಃ ಹತ್ವಾ ಹನ್ಯನ್ತ ಏವತೇ**
**ಪಾತಯಿತ್ವಾ ಚ ಪಾತ್ಯನ್ತೇ ಪರೈರಿತಿ ಚ ಮೇಶ್ರುತಂ**
**ನದೈವಸ್ಯಾತಿಭಾರೋಽಸ್ತಿ ನಚೈವಾಸ್ಯಾತಿವರ್ತನಮ್**
**ಇತಿ ಚಾಪ್ಯಾಗಮಂ ಭೂಯೋ ದೈವಸ್ಯ ಪ್ರತಿಪಾಲಯೇ**

**ಸ್ಥಿತಂ ಪೂರ್ವಂ ಜಲಂ ಯತ್ರ ನಪುನಃ ತತ್ರತಿಷ್ಠತಿ**
**ಇತಿ ಪರ್ಯಾಯಮಿಚ್ಛನ್ತೀ ಪ್ರತೀಕ್ಷಾಮ್ಯುದಯಂ ಪುನಃ**

ಮನುಷ್ಯನಿಗೆ ಒಳಿತು ಕೆಟ್ಟದು ಎರಡೂ ಅನಿತ್ಯ; ಇದನ್ನು ತಿಳಿದು ನನ್ನ ಗಂಡಂದಿರಿಗೆ ಮತ್ತೆ ಶುಭವಾಗುವುದನ್ನು ಕಾಯುತ್ತಿದೇನೆ.

ಒಮ್ಮೆ ನೀಡುತ್ತಿದ್ದವರು ಒಮ್ಮೆ ಯಾಚಕರಾಗುತ್ತಾರೆ; ಒಮ್ಮೆ ಬಡಿದವರು ಇನ್ನೊಮ್ಮೆ ಬಡಿಸಿಕೊಳ್ಳುತ್ತಾರೆ. ತಳ್ಳಿದವರು ತಳ್ಳಿಸಿಕೊಳ್ಳುತ್ತಾರೆ. ಇದನ್ನು ಕೇಳಿದ್ದೇನೆ.

ಅದೃಷ್ಟಕ್ಕೆ ಅತಿ ಭಾರವಿಲ್ಲ, ಅತಿ ಎತ್ತರವೂ ಇಲ್ಲ. ಆದ್ದರಿಂದ ಅದೃಷ್ಟ ಮತ್ತೆ ಒದಗುವುದನ್ನು ನಿರೀಕ್ಷಿಸುತ್ತಿದೇನೆ.

ಒಮ್ಮೆ ನಿಂತಕಡೆ ಮತ್ತೆ ನಿಲ್ಲುವುದಿಲ್ಲ ನೀರು; ಹೀಗೆ ಮಾರ್ಪಾಡನ್ನೆ ಬಯಸಿ ಶ್ರೇಯಸ್ಸಿಗೆ ಕಾದಿದೇನೆ.

## ೨೭
## ವ್ಯಕ್ತಿಸುಭಾಷಿತ

ಈ ರೀತಿ ವ್ಯವಹಾರಜ್ಞಾನವನ್ನು ಬೋಧಿಸುವ ಅನೇಕ ವಾಕ್ಯಗಳು ಭಾರತದಲ್ಲಿ ಬರುತ್ತಲೇ ಇರುತ್ತವೆ. ವ್ಯಕ್ತಿಜೀವನಕ್ಕೆ ಸಂಬಂಧಿಸಿದ ಕೆಲವನ್ನು ಇಲ್ಲಿ ಕೊಡಬಹುದು.

**ಅರ್ಥವಚ್ಚ ವಿಚಿತ್ರಂಚ ನಶಕ್ಯಂ ಬಹುಭಾಷಿತುಂ**

ಬಹು ಮಾತನ್ನೂ ಆಡಿ ಎಲ್ಲ ಮಾತೂ ಅರ್ಥಯುಕ್ತವಾಗಿಯೂ ಚಮತ್ಕಾರಕವಾಗಿಯೂ ಇರುವಂತೆ ಆಡುವುದು ಸಾಧ್ಯವಲ್ಲ.

**ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನವಿದ್ಯತೇ**
**ಜೀರ್ಯನ್ತ್ಯಪಿಹಿ ಕಾಷ್ಠಾನಿ ದರಿದ್ರಾಣಾಂ ಮಹೀಪತೇ**

ಪ್ರಾಯೇಣ ಲೋಕದಲ್ಲಿ ಪುಣ್ಯವಂತರಿಗೆ ಜೀರ್ಣಶಕ್ತಿ ಇರುವುದಿಲ್ಲ; ಬಡವರು ಕೊರಡನ್ನು ತಿಂದು ಜೀರ್ಣಿಸಿಕೊಳ್ಳುತ್ತಾರೆ.

**ಆತ್ಮನಾತ್ಮಾನಮನ್ವಿಚ್ಛೇತ್ ಮನೋಬುದ್ಧೀಂದ್ರಿಯೈಃ ಯತೈಃ**
**ಆತ್ಮಾಹ್ಯೇವಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ**

ಮನಸ್ಸು ಬುದ್ಧಿ ಇಂದ್ರಿಯಗಳನ್ನು ಎಚ್ಚರದಿಂದ ಇರಿಸಿಕೊಂಡು ತನ್ನನ್ನು ತಾನೇ ಪರಿಶೀಲಿಸಿಕೊಳ್ಳಬೇಕು. ತನಗೆ ತಾನೆ ಬಂಧು; ತನಗೆ ತಾನೆ ಶತ್ರು.

ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಂ
ಬುದ್ಧಿಂತಸ್ಯಾಪಕರ್ಷನ್ತಿ ಸೋಽವಾಚೀನಾನಿ ಪಶ್ಯತಿ

ದೇವತೆಗಳು ಯಾವನಿಗೆ ಪರಾಭವವನ್ನು ಬಯಸುವರೊ ಅವನ ಬುದ್ಧಿಯನ್ನು ಸೆಳೆದುಕೊಳ್ಳುವರು, ಅವನು ಎಲ್ಲವನ್ನೂ ತಲೆಕೆಳಗಾಗಿ ಕಾಣುವನು.

ನದೇವಾಯುಷ್ಟಿಮಾದಾಯ ರಕ್ಷಂತಿ ಪಶುಪಾಲವತ್
ಯಂತು ರಕ್ಷಿತುಮಿಚ್ಛನ್ತಿ ಬುದ್ಧ್ಯಾ ಸಂಯೋಜಯನ್ತಿತಂ

ದೇವತೆಗಳು ದನಕಾಯುವರಂತೆ ದೊಣ್ಣೆಯಿಂದ ಹೊಡೆದು ಕಾಪಾಡುವುದಿಲ್ಲ. ಯಾರನ್ನು ರಕ್ಷಿಸಬಯಸುವರೋ ಅವನಿಗೆ ಬುದ್ಧಿಯನ್ನು ಕೊಡುತ್ತಾರೆ.

ನಸ್ವಪ್ನೇನ ಜಯೇತ್ ನಿದ್ರಾಂ ನಕಾಮೇನ ಜಯೇತ್ ಸ್ತ್ರಿಯಃ
ನೇನ್ಧನೇನ ಜಯೇದಗ್ನಿಂ ನಪಾನೇನ ಸುರಾಂಜಯೇತ್

ಮಲಗಿರುವುದರಿಂದ ನಿದ್ರೆಯನ್ನು ಭೋಗದಿಂದ ಸ್ತ್ರೀಯರನ್ನು ಸೌದೆಯಿಕ್ಕಿ ಕಿಚ್ಚನ್ನು ಕುಡಿದು ಕುಡಿದು ಸುರೆಯನ್ನು ಜಯಿಸುವುದು ಆಗದ ಮಾತು.

ಪಿಬನ್ತ್ಯೇವೋದಕಂ ಗಾವೋ ಮಂಡೂಕೇಷು ರುವತ್ಸ್ವಪಿ

ಕಪ್ಪೆಗಳು ವಟಗುಟ್ಟುತ್ತಿದ್ದರೂ ದನ ನೀರನ್ನು ಕುಡಿದೇ ಹೋಗುತ್ತವೆ.

ಮೃತ್ಯುರಾಪದ್ಯತೇ ಮೋಹಾತ್ ಸತ್ಯೇನಾಪದ್ಯತೇಽಮೃತಂ

ಮೋಹದಿಂದ ಮೃತ್ಯು ಸತ್ಯದಿಂದ ಅಮೃತತ್ವ ಸಿದ್ಧಿಸುತ್ತವೆ.

ಯಃಕಶ್ಚಿದಪ್ಯ ಸಂಬದ್ಧೋ ಮಿತ್ರಭಾವೇನ ವರ್ತತೇ
ಸಏವಬಂಧು ಸ್ತನ್ಮಿತ್ರಂ ಸಾಗತಿಸ್ತತ್ಪರಾಯಣಂ

ಮಿತ್ರಭಾವದಿಂದ ವರ್ತಿಸುವ ಯಾವನೇ ಇರಲಿ, ಸಂಬಂಧಿಯಲ್ಲದಿದ್ದರೂ ಅವನು ಬಂಧು, ಮಿತ್ರನು; ಅವನು ಗತಿ, ಅವನು ದಿಕ್ಕು.

ಅಕಸ್ಮಾದೇವ ಕುಪ್ಯನ್ತಿ ಪ್ರಸೀದಂತ್ಯನಿಮಿತ್ತತಃ
ಶೀಲಮೇತದಸಾಧೂನಾಂ ಅಭ್ರಂಪಾರಿಪ್ಲವಂ ಯಥಾ

ಕಾರಣವಿಲ್ಲದೆ ಕೋಪಿಸುತ್ತಾರೆ; ನಿಮಿತ್ತವಿಲ್ಲದೆ ಪ್ರಸನ್ನರಾಗುತ್ತಾರೆ; ಅಸ್ಥಿರವಾದ ಮೋಡದಂತೆ ಅಸಾಧುಗಳ ಶೀಲ.

ಅತಿಮಾನೋಽತಿವಾದಶ್ಚ ತಥಾಽತ್ಯಾಗೋನರಾಧಿಪ
ಕ್ರೋಧಶ್ಚಾತ್ಮವಿಧಿತ್ಸಾಚ ಮಿತ್ರದ್ರೋಹಶ್ಚತಾನಿಷಟ್
ಏತ ಏವಾಸಯಸ್ತೀಕ್ಷ್ಣಾಃ ಕೃಂತಂತ್ಯಾಯೂಂಷಿದೇಹಿನಾಂ
ಏತಾನಿಮಾನವಾನ್ ಘ್ನಂತಿ ನಮೃತ್ಯುಃ ಭದ್ರಮಸ್ತುತೇ

ಒಬ್ಬ ಮನುಷ್ಯನ ಆಯುಸ್ಸನ್ನು ಅವನ ಅತಿಮಾನ ಅತಿವಾದ ಅತ್ಯಾಗ ಕ್ರೋಧ ಆತ್ಮವಿಧಿತ್ಸೆ ಮಿತ್ರದ್ರೋಹ ಈ ಆರು ತೀಕ್ಷ್ಣವಾದ ಚೂರಿಗಳು ಕತ್ತರಿಸುತ್ತವೆ: ಮನುಷ್ಯರನ್ನು ಕೊಲ್ಲುವವು ಇವೇ, ಮೃತ್ಯು ಅಲ್ಲ.

ಜ್ಞಾನತೃಪ್ತಃ ಸುಖಂಶೇತೇ ಹ್ಯಮೃತಾತ್ಮಾ ನಸಂಶಯಃ

ಜ್ಞಾನತೃಪ್ತನು ಅಮೃತಾತ್ಮನಾಗಿ ಸುಖವಾಗಿ ನಿದ್ರಿಸುತ್ತಾನೆ.

ಅನನ್ತಮಿವಮೇವಿತ್ತಂ ಯಸ್ಯಮೇನಾಸ್ತಿಕಿಂಚನ
ಮಿಥಿಲಾಯಾಂ ಪ್ರದೀಪ್ತಾಯಾಂ ನಮೇದಹ್ಯತಿ ಕಿಂಚನ

ನನ್ನದು ಎಂದು ಏನೊಂದೂ ಇಲ್ಲದ ನನ್ನ ವಿತ್ತ ಅನಂತನಂತೆ. ಮಿಥಿಲೆ ಸುಟ್ಟುಹೋಗಲಿ: ನನಗೆ ಕಳವಳವಿಲ್ಲ.

ಗುರುರಾತ್ಮವತಾಂ ಶಾಸ್ತಾ ಶಾಸ್ತಾರಾಜಾ ದುರಾತ್ಮನಾಂ
ಅನ್ತಃ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ

ಆತ್ಮವಂತರಿಗೆ ಗುರು ಶಿಕ್ಷಕ; ದುರಾತ್ಮರಿಗೆ ರಾಜ ಶಿಕ್ಷಕ; ಒಳಗೆ ಮರೆಸಿರುವ ಪಾಪದ ಜನರಿಗೆ ವೈವಸ್ವತ ಯಮನು ಶಿಕ್ಷಕ.

ಧನೇನಾಧರ್ಮಲಬ್ಧೇನ ಯಚ್ಛಿದ್ರಮಪಿಧೀಯತೇ
ಅಸಂವೃತಂ ತದ್ಭವತಿ ತತೋಽನ್ಯದವದೀರ್ಯತೇ

ಅಧರ್ಮದಿಂದ ಬಂದ ಧನದಿಂದ ಪಾಪವನ್ನು ಕಳೆಯನೋಡಿದರೆ ಅದು ಕಳೆಯುವುದಿಲ್ಲ; ಧರ್ಮದಿಂದ ಗಳಿಸಿದ ಧನದಿಂದಾದರೆ ಅದು ಕಳೆಯುತ್ತದೆ.

ತೃಣಾನಿಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ
ಸತಾಮೇತಾನಿಗೇಹೇಷು ನೋಚ್ಛಿದ್ಯನ್ತೇ ಕದಾಚನ

ಒಂದು ಚಾಪೆ, ಒಂದಿಷ್ಟು ಸ್ಥಳ, ಇಷ್ಟು ನೀರು, ಎರಡು ಒಳ್ಳೆಯ ಮಾತು, ಇವು ಒಳ್ಳೆಯವರ ಮನೆಯಲ್ಲಿ ಎಂದಾಗಲಿ ದೊರೆಯದೆ ಇರುವುದಿಲ್ಲ.

ಶ್ರದ್ಧಯಾ ಪರಯಾ ರಾಜನ್ ಉಪನೀತಾನಿಸತ್ಕೃತಿಂ
ಪ್ರವೃತ್ತಾನಿ ಮಹಾಪ್ರಾಜ್ಞ ಧರ್ಮಿಣಾಂ ಪುಣ್ಯಕರ್ಮಿಣಾಂ

ಪುಣ್ಯ ಕರ್ಮಿಗಳಾದ ಧರ್ಮಿಷ್ಠರ ಸ್ವತ್ತು ಅವರ ಅತ್ಯಂತ ಶ್ರದ್ಧಾಪೂರ್ವಕ ವಾದ ಅತಿಥಿ ಸತ್ಕಾರದಿಂದ ಸಾರ್ಥಕವಾಗುತ್ತದೆ.

ಜೀರ್ಣಮನ್ನಂ ಪ್ರಶಂಸಸ್ತಿ ಭಾರ್ಯಾಂಚ ಗತಯೌವನಾಂ
ಶೂರಂ ವಿಜಿತಸಂಗ್ರಾಮಂ ಗತಪಾರಂತಪಸ್ವಿನಂ

ಅನ್ನವನ್ನು ಜೀರ್ಣವಾದ ಮೇಲೆ ಭಾರ್ಯೆಯನ್ನು ಅವಳ ಯೌವನ ಮುಗಿದ ಮೇಲೆ ಶೂರನನ್ನು ಯುದ್ಧದಲ್ಲಿ ಗೆದ್ದಮೇಲೆ ತಪಸ್ವಿಯನ್ನು ಅವನು ದಡ ಮುಟ್ಟಿದಮೇಲೆ ಹೊಗಳಬೇಕು. ಆಗ ಅದು ನಿಜದ ಹೊಗಳಿಕೆ.

ಯಾದೃಶಃ ಪುರುಷಸ್ಯಾತ್ಮಾ ತಾದೃಶಂ ಸಂಪ್ರಭಾಷತೇ
ಯಥಾ ರೂಪೋಽಂತರಾತ್ಮಾತೇ ತಥಾ ರೂಪಂ ಪ್ರಭಾಷಸೇ

ಮನುಷ್ಯನ ಚೇತನ ಎಂಥದು ಅಂಥದಾಗಿ ಅವನು ನುಡಿಯುತ್ತಾನೆ. ನಿನ್ನ ಅಂತರಾತ್ಮದ ರೂಪ ಹೇಗಿದೆ ನಿನ್ನ ಮಾತಿನ ರೂಪ ಹಾಗಿದೆ.

ತಪೋಬಲಂ ತಾಪಸಾನಾಂ ಬ್ರಹ್ಮಬ್ರಹ್ಮವಿದಾಂ ಬಲಂ
ಹಿಂಸಾಬಲಮಸಾಧೂನಾಂ ಕ್ಷಮಾಗುಣವತಾಂ ಬಲಂ

ತಪಸ್ವಿಗಳಿಗೆ ಬಲವಿರುವುದು ತಪಸ್ಸಿನಲ್ಲಿ; ಬ್ರಹ್ಮಜ್ಞಾನಿಗಳಿಗೆ ಬ್ರಹ್ಮದಲ್ಲಿ; ಅಸಾಧುಗಳಿಗೆ ಬಲವಿರುವುದು ಹಿಂಸೆಯಲ್ಲಿ; ಗುಣವಂತರಿಗೆ ಕ್ಷಮೆಯಲ್ಲಿ.

ಸುಖಾರ್ಥಿನಃ ಕುತೋ ವಿದ್ಯಾ ನಾಸ್ತಿ ವಿದ್ಯಾರ್ಥಿನಃ ಸುಖಂ
ಸುಖಾರ್ಥೀವಾತ್ಯಜೇತ್ ವಿದ್ಯಾಂ ವಿದ್ಯಾರ್ಥೀವಾತ್ಯಜೇತ್ ಸುಖಂ

ಸುಖ ಬಯಸಿದವನಿಗೆ ವಿದ್ಯೆ ಎಲ್ಲಿಯದು? ವಿದ್ಯೆ ಬಯಸಿದವನಿಗೆ ಸುಖ ವೆನ್ನುವುದು ಇಲ್ಲ. ಇಲ್ಲವೆ ಸುಖ ಬಯಸಿ ವಿದ್ಯೆಯ ಆಸೆಯನ್ನು ಬಿಡಬೇಕು; ಇಲ್ಲ ವಿದ್ಯೆಯನ್ನು ಬಯಸಿ ಸುಖದ ಲಾಲಸೆಯನ್ನು ಬಿಡಬೇಕು.

ಉಪಕಾರಾದ್ಭವೇನ್ ಮಿತ್ರಂ ಅಪಕಾರಾದ್ಭವೇದರಿಃ

ಉಪಕಾರಮಾಡುವುದರಿಂದ ಮಿತ್ರ ಆಗುತ್ತಾನೆ; ಅಪಕಾರಮಾಡುವುದ ರಿಂದ ಶತ್ರು ಆಗುತ್ತಾನೆ.

**ಯಃ ಸಮುತ್ಪತಿತಂ ಹರ್ಷಂ ದೈನ್ಯಂ ವಾ ನನಿಯಚ್ಛತಿ**
**ಸನಶ್ಯತಿ ಶ್ರಿಯಂ ಪ್ರಾಪ್ಯ ಪಾತ್ರಮಾಮಮಿವಾಮ್ಭಸಿ**

ತಟ್ಟನೆ ಒದಗಿದ ಹರ್ಷವನ್ನಾಗಲಿ ದೈನ್ಯವನ್ನಾಗಲಿ ಯಾವನು ತಡೆದು ಕೊಳ್ಳುವುದಿಲ್ಲ ಅವನು ಹಸಿಯ ಮಣ್ಣಿನ ಪಾತ್ರೆ ನೀರಿನಲ್ಲಿ ಹೇಗೆ ಹಾಗೆ ನಾಶವಾಗುತ್ತಾನೆ.

ಮನೋದೋಷ ವಿಹೀನಾನಾಂ ನದೋಷಸ್ಸ್ಯಾತ್ತಥಾ ತವ
ಅನ್ಯಥಾಲಿಂಗ್ಯತೇಕಾನ್ತಾ ಸ್ನೇಹೇನದುಹಿತಾಽನ್ಯಥಾ

ಮನಸ್ಸಿನ ದೋಷ ಇಲ್ಲದವರಿಗೆ ದೋಷ ಅಡಸುವುದಿಲ್ಲ. ನಿನಗೂ ಅಷ್ಟೆ. ಕಾಂತೆಯನ್ನು ಆಲಿಂಗಿಸುವ ರೀತಿ ಬೇರೆ; ಮಗಳನ್ನು ಆಲಿಂಗಿಸುವ ಸ್ನೇಹ ಬೇರೆ.

**ಶ್ರದ್ಧಧಾನಃ ಶುಭಾಂ ವಿದ್ಯಾಂ ಹೀನಾದಪಿ ಸಮಾಪ್ನುಯಾತ್**
**ಸುವರ್ಣಮಪಿ ಚಾಮೇಧ್ಯಾತ್ ಆದದೀತಾವಿಚಾರಯನ್**

ಒಳ್ಳೆಯದೆಂಬ ವಿದ್ಯೆಯನ್ನು ಹೇಳಿಕೊಡುವವರು ಹೀನರೆಂಬ ಕಾರಣದಿಂದ ಅಸಡ್ಡೆ ಮಾಡದೆ ಕಲಿತುಕೊಳ್ಳತಕ್ಕದ್ದು. ಕಸದ ಮಧ್ಯೆ ಬಿದ್ದಿರುವ ಕಾರಣದಿಂದ ಚಿನ್ನವನ್ನು ಎತ್ತಿಕೊಳ್ಳುವುದೆ ಬಿಡುವುದೆ ಎಂದು ಯೋಚನೆ ಮಾಡಬೇಡ.

**ದ್ವಾವಿಮೌ ಪುರುಷವ್ಯಾಘ್ರ ಪರಪ್ರತ್ಯಯ ಕಾರಿಣೌ**
**ಸ್ತ್ರಿಯಃ ಕಾಮಿತಕಾಮಿನ್ಯಃ ಮೂರ್ಖಾಃ ಪೂಜಿತ ಪೂಜಕಾಃ**

ಈ ಎರಡು ರೀತಿಯ ಜನ ಇತರರ ತಿಳಿವಳಿಕೆಯಿಂದ ತಮ್ಮ ಕಾರ್ಯವನ್ನು ನಿರ್ಧರಿಸುವವರು; ಇತರರು ಬಯಸಿದರೆಂದು ಒಬ್ಬನನ್ನು ಬಯಸುವರು ಸ್ತ್ರೀಯರು; ಇತರರು ಪೂಜಿಸಿದರೆಂದು ಒಬ್ಬನನ್ನು ಪೂಜಿಸುವರು ಮೂರ್ಖರು.

**ಗಂಧೇನಗಾವಃ ಪಶ್ಯಂತಿ ವೇದೈಃ ಪಶ್ಯಂತಿ ಬ್ರಾಹ್ಮಣಾಃ**
**ಚಾರೈಃ ಪಶ್ಯಂತಿ ರಾಜಾನಃ ಚಕ್ಷುರ್ಭ್ಯಾಂ ಇತರೇ ಜನಾಃ**

ಹಸುಗಳು ಗಂಧದಿಂದ ಬ್ರಾಹ್ಮಣರು ವೇದದಿಂದ ರಾಜರು ಚಾರರಿಂದ ಜನ ಕಣ್ಣುಗಳಿಂದ ಕಾಣುತ್ತಾರೆ.

ನಕುಲಂ ವೃತ್ತಹೀನಸ್ಯ ಪ್ರಮಾಣಮಿತಿಮೇಮತಿಃ
ಅನ್ತ್ಯೇಷ್ವಪಿಹಿಜಾತಾನಾಂ ವೃತ್ತಮೇವ ವಿಶಿಷ್ಯತೇ

ನಡತೆಯಿಲ್ಲದವನಿಗೆ ಕುಲ ಪ್ರಮಾಣವಲ್ಲ; ಅಂತ್ಯಕುಲದಲ್ಲಿ ಹುಟ್ಟಿದವರಲ್ಲಾದರೂ ಕೂಡ ನಡತೆಗೆ ಹೆಚ್ಚು ಬೆಲೆ.

ಭೂಯಾಂಸಂ ಲಭತೇ ಕ್ಲೇಶಂ ಯಾಗೌಃ ಭವತಿ ದುರ್ದುಹಾ
ಅಥ ಯಾ ಸುದುಘಾ ರಾಜನ್ ನೈವತಾಂ ವಿತುದನ್ತ್ಯಪಿ

ಸುಲಭವಾಗಿ ಕರೆಯದ ಹಸು ಮತ್ತಷ್ಟು ಕಷ್ಟಕ್ಕೆ ಗುರಿಯಾಗುತ್ತದೆ. ಯಾವ ಹಸು ಸುಲಭವಾಗಿ ಕರೆಯುತ್ತದೆ ಅದನ್ನು ಚುಚ್ಚುವುದಿಲ್ಲ.

ಸುಖಾದೇವ ಪರಂ ದುಃಖಂ ದುಃಖಾದನ್ಯತ್ಪರಂ ಸುಖಂ
ದೃಶ್ಯತೇಹಿ ಮಹಾಪ್ರಾಜ್ಞ ನಿಯತಂವೈ ಸ್ವಭಾವತಃ

ಸುಖವಾದ ನಂತರ ದುಃಖ, ದುಃಖವಾದ ನಂತರ ಸುಖ, ಹೀಗೆ ಇವು ಒಂದಾದ ಮೇಲೊಂದು ಬರುವುದು ಸ್ವಭಾವತಃ ಗೊತ್ತಾಗಿರುವುದು ಕಾಣುತ್ತದೆ.

ಸರ್ವಃ ಸ್ವೇಸ್ವೇ ಗೃಹೇ ರಾಜಾ ಸರ್ವಃ ಸ್ವೇಸ್ವೇ ಗೃಹೇ ಗೃಹೀ
ನಿಗ್ರಹಾನುಗ್ರಹಃ ಕುರ್ವನ್ ತುಲ್ಯೋ ಜನಕರಾಜಭಿಃ

ಅವನವನ ಮನೆಯಲ್ಲಿ ಅವನವನು ರಾಜ; ಅಲ್ಲಿ ನಿಗ್ರಹ ಅನುಗ್ರಹ ಮಾಡಲು ಅವನು ಜನಕ ತನ್ನ ರಾಷ್ಟ್ರದಲ್ಲಿ ಎಷ್ಟು ಅಷ್ಟು ಅಧಿಕಾರಿ.

ಗತಂ ಗಚ್ಛಂತಿ ಚಾಧ್ವಾನಂ ಸರ್ವಭೂತಾನಿ ಸರ್ವದಾ

ಎಲ್ಲ ಪ್ರಾಣಿಗಳೂ ಎಲ್ಲ ವೇಳೆಯೂ ನಡೆದ ದಾರಿಯನ್ನೇ ನಡೆಯುತ್ತವೆ.

ಅನಾಗತ ವಿಧಾತಾಚ ಪ್ರತ್ಯುತ್ಪನ್ನಮತಿಶ್ಚ ಯಃ
ದ್ವಾವೇತೌ ಸುಖಮೇಧೇತೇ ದೀರ್ಘಸೂತ್ರೀ ವಿನಶ್ಯತಿ

ಮೊದಲೇ ಯೋಚನೆ ಮಾಡಿಕೊಂಡಿರುವವನು, ತೊಡಕು ಕಂಡ ಕ್ಷಣದಲ್ಲಿ ಬುದ್ಧಿಯನ್ನು ಬಳಸಬಲ್ಲವನು, ಈ ಇಬ್ಬರು ಸುಖವನ್ನು ಪಡೆಯುವರು; ತೊಡಕು ಕಂಡಾಗ ಸಾವಧಾನವಾಗಿ ಯೋಚಿಸತೊಡಗುವವನು ನಾಶವಾಗುವನು.

ತಿಷ್ಠನ್ತ್ಯೇತೇ ಯಥಾಸ್ಥಾನಂ ನಗಾಹ್ಯೇಕ ನಿಕೇತನಾಃ
ತತಸ್ತ್ಯಜನ್ತಿತತ್ಸ್ಥಾನಂ ಪ್ರಾತಿಲೋಮ್ಯಾನ್ನವೇತಸಃ

ವೇತಸೋ ವೇಗವಾಯಾನ್ತಂ ದೃಷ್ಟ್ವಾ ನಮತಿ ನಾಪರೇ
ಸ ಚ ವೇಗೇ ಹ್ಯತಿಕ್ರಾನ್ತೇ ಸ್ಥಾನಮಾಪದ್ಯತೇ ಪುನಃ
ಮಾರುತೋದಕವೇಗೇನ ಯೇ ನಮನ್ತ್ಯುನ್ನಮನ್ತಿ ಚ
ಓಷಧ್ಯಃ ಪಾದಪಾಗುಲ್ಮಾ ನ ತೇಯಾನ್ತಿ ಪರಾಭವಂ

ಪ್ರವಾಹಕ್ಕೆ ಎದುರುಬಿದ್ದ ಕಲ್ಲುಗುಂಡು ಸ್ಥಾನಚ್ಯುತವಾಗುತ್ತವೆ. ಅದರ ಎದುರಲ್ಲಿ ಬಗ್ಗುವ ಜಂಬು ಇದ್ದಲ್ಲಿ ಇರುತ್ತದೆ, ಪ್ರವಾಹ ಇಳಿದಮೇಲೆ ತಲೆ ಎತ್ತುತ್ತದೆ.

ನಾಸ್ತ್ಯಸಾಧ್ಯಂ ಬಲವತಾಂ ಸರ್ವಂ ಬಲವತಾಜಿತಂ

ಬಲವುಳ್ಳವನಿಗೆ ಅಸಾಧ್ಯವಾದದ್ದಿಲ್ಲ. ಬಲವುಳ್ಳವನು ಎಲ್ಲವನ್ನೂ ಗೆದ್ದಿದ್ದಾನೆ.

ಲುಬ್ಧಾನಾಂ ಶುಚಯೋದ್ವೇಷ್ಯಾಃ ಕಾತರಾಣಾಂ ತರಸ್ವಿನಃ
ಮೂರ್ಖಾಣಾಂ ಪಂಡಿತಾ ದ್ವೇಷ್ಯಾಃ ದರಿದ್ರಾಣಾಂ ಮಹಾಧನಾಃ
ಅಧಾರ್ಮಿಕಾಣಾಂ ಧರ್ಮಿಷ್ಠಾಃ ವಿರೂಪಾಣಾಂ ಸುರೂಪಿಣಃ

ಗುಣವಿಲ್ಲದವರಿಗೆ ಗುಣವುಳ್ಳವರನ್ನು ಕಂಡರೆ ಆಗುವುದಿಲ್ಲ.

ಪೂರ್ವೇ ವಯಸಿತತ್ಕುರ್ಯಾತ್ ಯೇನ ವೃದ್ಧಃ ಸುಖಂ ವಸೇತ್
ಅಷ್ಟಮಾಸೇನ ತತ್ಕುರ್ಯಾತ್ ಯೇನ ವರ್ಷಂ ಸುಖಂ ವಸೇತ್

ಮುಪ್ಪಿನಲ್ಲಿ ಸುಖವಾಗಿರಲು ಯಾವುದು ಬೇಕು ಅದನ್ನು ಪೂರ್ವವಯಸ್ಸಿನಲ್ಲಿ ಮಾಡಬೇಕು; ವರ್ಷವೆಲ್ಲ ಸುಖವಾಗಿರಲು ಬೇಕಾದದ್ದನ್ನು ಎಂಟು ತಿಂಗಳಲ್ಲಿ ಮಾಡಿ ಇರಿಸಿಕೊಳ್ಳಬೇಕು.

ವಿಚಾರ್ಯ ಖಲುಪಶ್ಯಾಮಿ ತತ್ಸುಖಂ ಯತ್ರ ನಿರ್ವೃತಿಃ

ಯೋಚನೆಮಾಡಿದರೆ ಹೀಗೆ ಕಾಣುತ್ತದೆ: ನಿರ್ವೃತಿ ಎಲ್ಲಿ ಆ ಸ್ಥಿತಿ ಸೌಖ್ಯ.

## ೨೮
## ಸಮಾಜ ಧರ್ಮ
### (i) ಸಮಾಧಾನ

ವ್ಯಕ್ತಿಗೆ ಧರ್ಮವನ್ನು ನಿಯಮಿಸುವಂತೆ ಭಾರತದ ಋಷಿ ಸಮಾಜಕ್ಕೂ ಧರ್ಮಗಳನ್ನು ನಿಯಮಿಸಿದ್ದಾನೆ. ನಿಜದಲ್ಲಿ ವ್ಯಕ್ತಿಗೆ

ಒಂದು ವರ್ತನವನ್ನು ನಿಯಮಿಸುವುದರಲ್ಲಿ ಉಪದೇಶಕನು ಅದು ವ್ಯಕ್ತಿಗೆ ಕ್ಷೇಮಕರ ಮಾತ್ರ ಎಂದು ಅಲ್ಲದೆ ಸಮಾಜಕ್ಕೂ ಹಿತವೆಂದು ನಿಶ್ಚಯಿಸಿದ್ದಾನೆ. ವ್ಯಕ್ತಿ ಆಶೆ ಅತಿಯಾಗದಂತೆ ನೋಡಿಕೊಂಡರೆ ಸಮಾಜದಲ್ಲಿ ಆಸ್ತಿಗಾಗಿ ಹೊಡೆದಾಟವಿಲ್ಲ. ಅರ್ಧ ರಾಜ್ಯ ನ್ಯಾಯವಾಗಿ ತನಗೆ ಬರಬೇಕಾಗಿದ್ದರೂ, ನಮ್ಮ ಜ್ಞಾತಿಗಳು ಒಪ್ಪಿ ಐದು ಗ್ರಾಮಗಳನ್ನು ಕೊಟ್ಟರೆ ಸಾಕು, ಎಂದ ಯುಧಿಷ್ಠಿರನು ಸಮಾಜದ ವ್ಯಕ್ತಿಗಳಿಗೆ ಒಂದು ಆದರ್ಶ. ಈ ಮನೋನಿಗ್ರಹ ಇಲ್ಲದ ಮನುಷ್ಯರು ಸಮಾಜದ ಜೀವನವನ್ನು ಮಾನವ ಜೀವನದ ಮಟ್ಟದಿಂದ ಶ್ವಾನ ಜೀವನದ ಮಟ್ಟಕ್ಕೆ ಇಳಿಸುತ್ತಾರೆ. ಯುಧಿಷ್ಠಿರನು ಹೇಳುವಂತೆ, ಎರಡು ನಾಯಿ ಒಂದನ್ನೊಂದು ಕಂಡಾಗ ಗೊರ್ ಎನ್ನುವುದು ಸಿರ್ ಎನ್ನುವುದು ಹಲ್ಲು ತೋರಿಸುವುದು ಮೇಲೆ ಬೀಳುವುದು ಸಹಜವಾದ ವರ್ತನೆಯಾಗಬಹುದು; ಇದಕ್ಕಿಂತ ಒಳ್ಳೆಯ ರೀತಿಯಲ್ಲಿ ನಡೆಯದೆ ಇದ್ದರೆ ಮನುಷ್ಯರು ತಮ್ಮ ಮನುಷ್ಯತ್ವವನ್ನು ಉಳಿಸಿಕೊಳ್ಳುವುದಿಲ್ಲ.

ಆಶೆಗೆ ಮಿತಿಯನ್ನು ಇಟ್ಟುಕೊಳ್ಳುವುದರಿಂದ ಕದನ ತಪ್ಪುವಂತೆ ಸಮಾಜದಲ್ಲಿ ಪರಸ್ಪರ ಈರ್ಷೆ ಕಡಮೆಯಾಗುತ್ತದೆ. ರಾಜನಾದವನು ಕೂಡ ಆ ತನ್ನ ಸ್ಥಾನದ ಲಾಂಛನಗಳಿಂದ ತೃಪ್ತನಾಗಿರಬೇಕು, ಭಾಗ್ಯವನ್ನು ಬಯಸಬಾರದು.

> ನಾಮ ಮಾತ್ರೇಣ ತುಷ್ಯೇತ ಛತ್ರೇಣ ಚ ಮಹೀಪತಿಃ
> ಭೃತ್ಯೇಭ್ಯೋ ವಿಸೃಜೇತರ್ಥಾನ್ ನೈಕಸ್ಸರ್ವಹರೋ ಭವೇತ್

## (ii) ದಾನ

ಜೊತೆಗೆ ಸಮಾಜದ ವ್ಯಕ್ತಿಗಳು ದಾನಮಾಡುವುದನ್ನು ಒಂದು ಧರ್ಮವಾಗಿ ಆಚರಿಸಬೇಕು.

> ಯಥಾವೇದಾಃ ಸ್ವಧೀತಾಶ್ಚ ಯಥಾಚೇಂದ್ರಿಯ ಸಂಯಮಃ
> ಸರ್ವತ್ಯಾಗೋ ಯಥಾಚೇಹ ತಥಾ ದಾನಮನುತ್ತಮಂ

ತಮ್ಮ ಕುಟುಂಬ ಭರಣಕ್ಕೆ, ಆಶ್ರಿತ ರಕ್ಷಣಕ್ಕೆ, ಆವಶ್ಯಕವಾದಷ್ಟನ್ನು ಉಳಿಸಿಕೊಂಡು, ಮಿಕ್ಕ ಸಂಪತ್ತನ್ನು ತಮಗಿಂತ ಬಡವರಾದವರ ಸಲು

ವಾಗಿ ಸೀಡಬೇಕು. ಈ ನೀಡುವುದರಲ್ಲಿ ಸಾಮಾನ್ಯನ ಸ್ಥಿತಿಯಿಂದ ಒಬ್ಬ ಬ್ರಹ್ಮಜ್ಞಾನಿಯ ಸ್ಥಿತಿಯವರೆಗೆ ಸಾವಿರ ಮೆಟ್ಟಲುಂಟು. ಆದರೆ, ಆ ಸಾವಿರ ಮೆಟ್ಟಲಿಗೂ ಸಾಮಾನ್ಯವಾದ ಲಕ್ಷಣ ಸ್ವಾರ್ಥದಮನ. ಭಾರತದ ಮಹಾಪುರುಷರಲ್ಲಿ ಒಬ್ಬನು ದಾನಶೂರನೆಂದು ಕೀರ್ತಿ ಪಡೆದ ಕರ್ಣ. ಕರ್ಣನಲ್ಲಿ ಕೆಲವು ದೋಷಗಳೇನೋ ಇದ್ದವು. ಅವನ ಈ ಒಂದು ಗುಣ ಆ ದೋಷಗಳನ್ನು ಮರೆಸಿತು. ತನ್ನ ಜೀವದ ರಕ್ಷೆಯಾಗಿದ್ದ ಕವಚಕುಂಡಲಗಳನ್ನು ಅವನು ಇಂದ್ರನಿಗೆ ದಾನಮಾಡಿಬಿಟ್ಟನು. ಅವನು ಇಂದ್ರನೆಂದು ತಿಳಿದು, ಆ ಕವಚಕುಂಡಲಗಳನ್ನು ಕೊಡುವುದರಿಂದ ತನಗೆ ಮರಣ ಆಗುವುದೆಂದು ತಿಳಿದು, ಅವನು ಬೇಡಿ ಬಂದ ಬ್ರಾಹ್ಮಣನಿಗೆ ಬೇಡಿದ್ದನ್ನು ಕೊಟ್ಟನು. ಈ ದಾನವನ್ನು ಮಾಡಬೇಡ ಎಂದು ಹೇಳಬಂದ ಸೂರ್ಯನು, "ಕೀರ್ತಿಗಾಗಿ ದಾನ ಮಾಡುತ್ತೇನೆನ್ನುತ್ತೀಯೆ ಬದುಕಿದ್ದರಲ್ಲವೆ ಕೀರ್ತಿಯಿಂದ ಬಂದ ಸಂತೋಷ? ಸತ್ತವನಿಗೆ ಕೀರ್ತಿಯಿಂದ ಆಗತಕ್ಕದ್ದೇನು? ಹೆಣಕ್ಕೆ ಹಾಕಿದ ಮಾಲೆಯಂತೆ ಅದು ನಿರರ್ಥಕವಾಗುತ್ತದೆ.

ಮೃತಸ್ಯ ಕೀರ್ತ್ಯಾ ಕಿಂಕಾರ್ಯಂ ಭಸ್ಮೀ ಭೂತಸ್ಯ ದೇಹಿನಃ
ಮೃತಃ ಕೀರ್ತಿಂ ನಜಾನೀತೇ ಜೀವನ್ ಕೀರ್ತಿಂ ಸಮಶ್ನುತೇ
ಮೃತಸ್ಯ ಕೀರ್ತಿರ್ಮರ್ತ್ಯಸ್ಯ ಯಥಾ ಮಾಲಾ ಗತಾಯುಷಃ"

ಎಂದನು. ಕರ್ಣನು ಮೊದಲೆ ಹೇಳಿದ್ದನು.

ಕೀರ್ತಿರ್ಹಿ ಪುರುಷಂ ಲೋಕೇ ಸಂಜೀವಯತಿ ಮಾತೃವತ್
ಅಕೀರ್ತಿರ್ಜೀವಿತಂ ಹಸ್ತಿ ಜೀವತೋಽಪಿ ಶರೀರಿಣಃ

"ಕೀರ್ತಿಯಿದ್ದರೆ ಸತ್ತು ಮನುಷ್ಯ ಜೀವಂತನಾಗಿರುತ್ತಾನೆ; ಅಕೀರ್ತಿವಂತನು ಇದ್ದೂ ಸತ್ತಂತೆಯೆ". ಕಾಡಿನಲ್ಲಿ ತಿರಿದು ಸಂಸಾರ ನಡೆಸುತ್ತಿದ್ದ ಋಷಿಯೊಬ್ಬನು ಒಬ್ಬ ಬ್ರಾಹ್ಮಣ ಅತಿಥಿ ಒಂದು ದಿನ, ಮರು ದಿನ, ಮೂರನೆಯ ದಿನ ಕ್ರಮವಾಗಿ ಊಟದ ಹೊತ್ತಿಗೆ ಸರಿಯಾಗಿ ಬಂದು ಅನ್ನವನ್ನು ಬೇಡಿದಾಗ, ತನಗೆ ಹೆಂಡತ್ತಿಗೆ ಮಕ್ಕಳಿಗೆ ಎಂದು ಮಾಡಿದ್ದ ಅನ್ನವನ್ನೆಲ್ಲಾ ತಿನ್ನುವಷ್ಟು ಅವನಿಗೆ ಬಡಿಸಿ ಕೈ ಒರಸಿಕೊಂಡು ಹರ್ಷಚಿತ್ತನಾಗಿ ನಿಂತನಂತೆ. ಮೂರು ದಿನ ಈ ಪರೀಕ್ಷೆಯನ್ನು ಅವನು ತಡೆದುಕೊಂಡಾಗ ದೇವತೆಗಳು ಬಂದು ಅವನಿಗೆ, "ನಿನಗೆ ಬ್ರಹ್ಮಸಿದ್ಧಿ ಆಗಿದೆ,"

ಎಂದು ಹೇಳಿದರು. ಶಿಬಿ ತನ್ನ ಮೈಯ ಮಾಂಸವನ್ನು ಕುಯಿದುಕೊಟ್ಟು ಒಂದು ಕಪೋತವನ್ನು ಉಳಿಸಿದನು. ದಧೀಚಿ ತನ್ನ ದೇಹವನ್ನು ತ್ಯಜಿಸಿ ತನ್ನ ಬೆನ್ನುಮೂಳೆಯಿಂದ ಇಂದ್ರನಿಗೆ ವಜ್ರವನ್ನು ಒದಗಿಸಿದನು. ಸ್ವಾರ್ಥವನ್ನು ಹೀಗೆ ತೀರಾ ತ್ಯಾಗಮಾಡಿ ಹೆರವರ ಆಸೆಯನ್ನು ಸಲ್ಲಿಸುವುದು ಕೋಟಿಯಲ್ಲಿ ಒಬ್ಬೊರಿಬ್ಬರಿಗೆ ಮಾತ್ರ ಸಾಧ್ಯ. ಭಾರತದ ಋಷಿ ಇದನ್ನು ಒಂದು ಧ್ಯೇಯವಾಗಿ ನಿಯಮಿಸಿದನು. ಸ್ವಾರ್ಥವನ್ನು ಆವಷ್ಟು ನಿಗ್ರಹಿಸಿ ಪರರಿಗೆ ಎಷ್ಟೋ ಅಷ್ಟು ನೆರವಾಗಿ ನಿಲ್ಲುವುದು ಬಹುಜನಕ್ಕೆ ಸಾಧ್ಯ. ಇಷ್ಟನ್ನು ಮಾಡುವುದು ಸಮಾಜದಲ್ಲಿ ಸಾಮಾನ್ಯ ಧರ್ಮ ಆಗಬೇಕು.

ಸ್ವದೇಶೇ ಪರದೇಶೇವಾ ಅತಿಥಿಂ ನೋಪವಾಸಯೇತ್
ಅರಾವಪ್ಯುಚಿತಂ ಕಾರ್ಯಂ ಆತಿಥ್ಯಂ ಗೃಹಮಾಗತೇ
ಛೇತ್ತುಮಪ್ಯಾಗತೇ ಛಾಯಾಂ ನೋಪಸಂಹರತೇದ್ರುಮಃ
ದಾನಾನ್ನದುಷ್ಕರಂ ತಾತ ಪೃಥಿವ್ಯಾಮಸ್ತಿ ಕಿಂಚನ
ಅರ್ಥೇಚ ಮಹತೀತೃಷ್ಣಾ ಸ ಚ ದುಃಖೇನ ಲಭ್ಯತೇ

ಬಹು ರೀತಿಯ ದಾನಗಳನ್ನು ಹೊಗಳುತ್ತ ಭಾರತ ಅನ್ನ ದಾನವನ್ನು ಪ್ರಾಣ ದಾನವನ್ನು ಬಹು ದೊಡ್ಡವೆಂದು ಹೊಗಳಿದೆ. ಮನುಷ್ಯನನ್ನು ಕಂಗೆಡಿಸುವ ಉಳಿದೆಲ್ಲ ಕಷ್ಟಕ್ಕಿಂತ ಹಸಿವು ದುಸ್ಸಹವಾದದ್ದು. ಆದ್ದರಿಂದ ಹಸಿದವನಿಗೆ ಅನ್ನ ಹಾಕುವುದು ಉಳಿದೆಲ್ಲ ದಾನಕ್ಕಿಂತ ಶ್ರೇಷ್ಠವಾದ ದಾನ. ಹಗೆ ಬಂದರೂ ಆತಿಥ್ಯ ನೀಡಬೇಕು: ಕಡಿಯಬಂದವನಿಗಾದರೂ ಮರ ನೆರಳಿಲ್ಲ ಎನ್ನುವುದಿಲ್ಲ. ಹಾಗೆಯೆ ಜೀವ ಮಾತ್ರವಾದದ್ದು ಬೇರೆ ಏನನ್ನಾದರೂ ಸಹಿಸೀತು, ಸಾವು ಬೇಡ ಎನ್ನುತ್ತದೆ. ಆದಕಾರಣ ಒಂದು ಜೀವವನ್ನು ಸಾವಿನಿಂದ ಬಿಡಿಸುವುದು ಬಹು ಪುಣ್ಯ ಕರ್ಮ. ಸರಿಯಾಗಿ ನೋಡಿದರೆ ಈ ಎರಡು ದಾನಗಳೂ ಅಹಿಂಸಾ ತತ್ತ್ವದಿಂದ ಸಿದ್ಧಿಸುವ ಕರ್ತವ್ಯಗಳು. ಆದರೆ ಅಪಾತ್ರದಲ್ಲಿ ದಾನ ಮಾಡೋಣ ತಪ್ಪು.

ಅನ್ನಂ ಹ್ಯವಿದ್ವಾನ್ ಹಂತ್ಯೇವಂ ಅವಿದ್ವಾಂಸಂಚ ಹಂತಿ ತತ್
ತಚ್ಚಾನ್ನಂ ಹಂತಿಯಚ್ಚಾನ್ಯತ್ ಸಭುಕ್ತ್ವಾ ಹನ್ಯತೇಽಬುಧಃ
ವ್ಯರ್ಥಂ ತು ಪತಿತೇ ದಾನಂ ಬ್ರಾಹ್ಮಣೇ ತಸ್ಕರೇ ತಥಾ
ನ ಚ ತೇಭ್ಯೋ ಧನಂದದ್ಯಾತ್ ಶಕ್ಯೇ ಸತಿ ಕಥಂಚನ
ಪಾಪೇಭ್ಯೋಹಿ ಧನಂ ದತ್ತಂ ದಾತಾರಮಪಿ ಪೀಡಯೇತ್

## (iii) ನಿಯಮ ಪರಿಪಾಲನ

ಸಮಾಜ ಜೀವನದಲ್ಲಿ ಸತ್ಯ ಹಲವು ರೂಪಗಳನ್ನು ತಾಳುತ್ತದೆ. ಒಬ್ಬೊಬ್ಬ ವ್ಯಕ್ತಿಯೂ ತನ್ನ ಸ್ಥಳದಿಂದ ಅದನ್ನು ಸಾಧಿಸಬೇಕು. ಮಗನ ಶವದ ಸಂಸ್ಕಾರಕ್ಕಾದರೂ ಹೆಂಡತಿಯಾದವಳು ಸುಂಕ ಕೊಡಲೇ ಬೇಕೆಂದ ಹರಿಶ್ಚಂದ್ರನು ಸತ್ಯಪರಿಪಾಲನೆಗೆ ಅತ್ಯುತ್ತಮ ನಿದರ್ಶನ. ಹರಿಶ್ಚಂದ್ರನು ಸ್ಮಶಾನದ ರಕ್ಷಕನ ಒಬ್ಬ ಸೇವಕ ಮಾತ್ರ. ಸಮಾಜದ ಹಂತಗಳಲ್ಲಿ ತೀರ ಕೆಳಗಿನ ಹಂತದಲ್ಲಿದ್ದನು. ತೀರ ಮೇಲಿನ ಹಂತ ಎಂಬ ರಾಜ ಪದವಿಯಲ್ಲಿದ್ದ ಜನಕನ ಸತ್ಯವನ್ನು ಧರ್ಮವ್ಯಾಧನು ಹೊಗಳಿದ್ದಾನೆ. ವರ್ಣಾಶ್ರಮ ಧರ್ಮಗಳನ್ನು ಪಾಲಿಸುವುದರಲ್ಲಿ ಮಿಥಿಲಾಪತಿ ದಂಡ್ಯರಿಗೆ ದಂಡನೆಮಾಡದೆ ಬಿಟ್ಟಿದ್ದಿಲ್ಲ. ಅದಂಡ್ಯರನ್ನು ದಂಡಿಸಿದ್ದಿಲ್ಲ. ದಂಡ್ಯನು ಮಗನಾಗಿರಬಹುದು. ಅದಂಡ್ಯನು ಯಾರೆಂದು ಗುರುತಿಲ್ಲದಿರಬಹುದು. ರಾಜನ ದಂಡನೀತಿ ಪ್ರಕೃತಿಯ ಒಂದು ನಿಯಮದಂತೆ ನಡೆದುಬಿಡುತ್ತಿದ್ದಿತು. ಸಮಾಜ ಕ್ಷೇಮ ಕಾಣಬೇಕಾದರೆ. ಅದರ ಎಲ್ಲ ಅಂಗಗಳೂ ಈ ಸ್ಮಶಾನ ಪಾಲಕನಂತೆ, ಈ ದೇಶಾಧಿಪತಿಯಂತೆ, ತನ್ನ ತನ್ನ ಕರ್ಮವನ್ನು ಪ್ರಕೃತಿ ನಿಯಮದಂತೆ ನಡೆಸಬೇಕು.

**ಸತ್ಯೇನ ಸೂರ್ಯಸ್ತಪತಿ ಸತ್ಯೇನಾಗ್ನಿಃ ಪ್ರದೀಪ್ಯತೇ**
**ಸತ್ಯೇನ ಮರುತೋ ವಾಂತಿ ಸತ್ಯೇ ಸರ್ವಂ ಪ್ರತಿಷ್ಠಿತಂ**

ದಿನವೂ ಕಾಯುವ ಸೂರ್ಯನು, ಜನ ಚಂದ್ರನನ್ನು ಹೊಗಳುತ್ತಾರೆಂದು ಮನಸೋತು ಒಂದು ದಿನ ತಂಪಾದನೆಂದರೆ ಗತಿಯೇನು? ಮುಟ್ಟಿದ್ದಕ್ಕೆಲ್ಲಾ ಅಂಟುವವನು ಎಂಬ ಜನರ ದೂರಿಗೆ ಹೆದರಿ ಅಗ್ನಿ ಅಂಟುವುದನ್ನು ಬಿಟ್ಟರೆ ಲೋಕದಲ್ಲಿ ದೀಪ ಇಲ್ಲ. ತೀರ ಹಗುರವಾದೆನೆಂದು ಬೇಸರದಿಂದ ಗಾಳಿ ಒಂದು ದಿನ ಧ್ರುವವಾಗಿ ನಿಂತರೆ ಜೀವಕೋಟಿ ಆಕ್ಷಣವೇ ನಾಶವಾಗಬೇಕು. ಆಯಾ ಪದಾರ್ಥ ಅದರದರ ಧರ್ಮವನ್ನು ಪಾಲಿಸಿ ಲೋಕದ ವರ್ತನೆಯನ್ನು ಸಾಧ್ಯಮಾಡಿದೆ. ಆದ್ದರಿಂದಲೇ

**ಸತ್ಯಮಾಹುಃ ಪರೋಧರ್ಮಃ ತಸ್ಮಾತ್ ಸತ್ಯಂ ನ ಲೋಪಯೇತ್.**

## (iv) ಸಾಕ್ಷಿ ಪ್ರಾಮಾಣ್ಯ

ನ್ಯಾಯಾಸ್ಥಾನದಲ್ಲಿ ಸತ್ಯವಾಡುವುದು ಸಮಾಜ ಜೀವನದಲ್ಲಿ ಬಹು ಮುಖ್ಯ ಕರ್ತವ್ಯವಾಗುತ್ತದೆ. ರಾಜಪುರುಷನು ದಂಡ್ಯನಾದವನನ್ನು ತನ್ನ ಮಗನಾದರೂ ದಂಡಿಸದೆ ಬಿಡಬಾರದು. ಹಾಗೆಯೇ ಸಾಕ್ಷಿ ಹೇಳುವವನು ತನ್ನ ಮಗನ ಸಲುವಾಗಿಯಾದರೂ ಇಲ್ಲದ್ದನ್ನು ಉಂಟು ಎಂದು ಸಾಕ್ಷಿ ನುಡಿಯಬಾರದು. ತನಗೆ ಬೇಕಾದವರಿಗೆ ನಷ್ಟವಾಗುವುದಾದರೂ ಸತ್ಯವಾದುದನ್ನು ಹೇಳಬೇಕು. ಸಾಕ್ಷಿ ಹೇಳಬೇಕಾಗಿ ಬಂದ ಸಂದರ್ಭದಲ್ಲಿ ಬೇಕಾದವರಿಗೆ ವಿರೋಧವಾಗಿ ನಡಿಯುವುದಕ್ಕೆ ಇಷ್ಟವಿಲ್ಲದೆ ಮೌನವನ್ನೂ ಅನುಷ್ಠಿಸಬಾರದು. ಪ್ರಹ್ಲಾದನ ಮಗ ವಿರೋಚನನಿಗೆ ಒಬ್ಬ ಬ್ರಾಹ್ಮಣ ತರುಣ ಸುಧನ್ವ ಎಂಬಾತನಿಗೆ ವಿವಾದ ಬಂದು ಸುಧನ್ವನು ಪ್ರಹ್ಲಾದನ ಬಳಿಗೆ ಹೋದಾಗ ಅವನು ನ್ಯಾಯ ಸುಧನ್ವನ ಪಕ್ಷವಾಗಿದೆ ಎನ್ನುವುದನ್ನು ಒಪ್ಪಿಕೊಂಡರೂ ತಾನು ನ್ಯಾಯವನ್ನು ಹರಿಸುವುದಕ್ಕೆ ಒಪ್ಪಲಿಲ್ಲ. ಸುಧನ್ವನು, "ಅಯ್ಯಾ, ತಿಳಿದ ವಿಷಯವನ್ನು ನೀನು ಹೇಳದೆ ಮರೆಮಾಚಬಾರದು. ಸುಳ್ಳಾಡುವುದು, ಮರೆಮಾಚುವುದು ಎರಡೂ ಒಂದೆ," ಎಂದನು. ಪ್ರಹ್ಲಾದನು ಸಂಕಟದಲ್ಲಿ ಸಿಕ್ಕಿಕೊಂಡನು; ಆ ಸಮಯಕ್ಕೆ ಅಲ್ಲಿಗೆ ಬಂದ ಒಂದು ಹಂಸವನ್ನು ಈ ವಿಷಯದಲ್ಲಿ ತಾನು ಹೇಗೆ ನಡೆದು ಕೊಳ್ಳಬೇಕು ಎಂದು ಕೇಳಿದನು. ಆ ಹಂಸ, "ಮಗನಮೇಲೆ ಪ್ರೀತಿಗಾಗಿ ಅವನಿಗೆ ಗೋವುಗಳನ್ನೂ ಧನವನ್ನೂ ಕೊಡಬಹುದು. ವಿವಾದದಲ್ಲಿ ಸತ್ಯವನ್ನು ಹೇಳದೆ ಬಿಡಬಾರದು," ಎಂದಿತು. ಹಾಗೆ ಮಾಡದಿದ್ದರೆ ಸಂಭವಿಸುವ ಪಾಪವನ್ನು ಹೀಗೆಂದು ವರ್ಣಿಸಿತು: "ಪ್ರಶ್ನೆ ಕೇಳಿದಾಗ ಸರಿಯಾದ ಉತ್ತರವನ್ನು ಹೇಳದೆ ದನದ ಕಿವಿಯಂತೆ ಅತ್ತ ಇತ್ತ ತೂಗಿದರೆ ಮನುಷ್ಯನು ಧರ್ಮದಿಂದ ಭ್ರಷ್ಟನಾಗುತ್ತಾನೆ. ಅವನಿಗೆ ಪುಣ್ಯಲೋಕಗಳಿಲ್ಲ. ಧರ್ಮ ಇದು ಎಂದು ತಿಳಿದು ಅದನ್ನು ಹೇಳದ ಮನುಷ್ಯನನ್ನು ಧರ್ಮವೇ ಕೆಳಕ್ಕೆ ತಳ್ಳುತ್ತದೆ. ಯಾವುದೇ ಸಭೆಯಲ್ಲಿ ನಿಂದ್ಯನಾದವನು ನಿಂದೆಯನ್ನು ಪಡೆಯಬೇಕು. ಅಂಥವನನ್ನು ನಿಂದಿಸದೆ ಬಿಟ್ಟ ಸಭೆ ಸಭೆಯಲ್ಲ. ತನ್ನ ಧರ್ಮದಲ್ಲಿ ಭ್ರಷ್ಟವಾದ ಆ ಸಭೆಗೆ ಆ ನಿಂದ್ಯವ್ಯಕ್ತಿಯ ಪಾತಕ ಮುಟ್ಟುತ್ತದೆ. ಸಭೆಯ ಪ್ರಮುಖನಿಗೆ ಅರ್ಧ ಭಾಗ, ಸಭೆಯ

ವ್ಯಕ್ತಿಗಳಿಗೆ ಕಾಲುಭಾಗ. ಒಂದು ಆಡಿಗಾಗಿ ಸುಳ್ಳಾಡಿದವನು ಐದು ತಲೆಯ ಪಿತೃಗಳನ್ನು ದುರ್ಗತಿಗೆ ತಳ್ಳುವನು. ಒಂದು ಹಸುವಿಗಾಗಿ ಸುಳ್ಳಾಡಿದವನು ಹತ್ತು ತಲೆಯ ಪಿತೃಗಳನ್ನು, ಒಂದು ಕುದುರೆಗಾಗಿ ಸುಳ್ಳಾಡಿದವನು ನೂರು ತಲೆಯ ಪಿತೃಗಳನ್ನು, ಒಬ್ಬ ಮನುಷ್ಯನಿಗೆ ಸುಳ್ಳಾಡಿದವನು ಸಾವಿರ ತಲೆಯ ಪಿತೃಗಳನ್ನು, ಅಧೋಗತಿಗೆ ತಳ್ಳುವನು.''

### (v) ದಾಕ್ಷಿಣ್ಯ

ಸಮಾಜದಲ್ಲಿ ಅಹಿಂಸೆ ಜನರಲ್ಲಿ ಪರಸ್ಪರ ದಾಕ್ಷಿಣ್ಯವಾಗಿ ಪ್ರಕಟವಾಗುತ್ತದೆ. ಯಾವನೂ ತನ್ನ ಕೆಲಸವನ್ನು ಮಾಡುವುದರಲ್ಲಿ, ತನ್ನ ಇಷ್ಟವನ್ನು ಸಾಧಿಸುವುದರಲ್ಲಿ, ಇತರರಿಗೆ ತೊಂದರೆ ಆಗುವಂತೆ ನಡೆಯಬಾರದು. ಇದು ದಾನ ಬೇಡುವವರ ಸಲುವಾಗಿ ಹೇಳಿರುವ ನಿಯಮದಿಂದ ಸ್ಪಷ್ಟವಾಗುತ್ತದೆ. ಲೋಕ ವ್ಯವಹಾರದಲ್ಲಿ ಯಾಚಕನು ಯಾರಿಗೆ ತಾನೆ ಹಿಂಸೆ ಮಾಡಬಹುದು? ಉಳಿದೆಲ್ಲಾ ವೃತ್ತಿಗಿಂತಲೂ ಹೆಚ್ಚಾಗಿ ಇದು ಅಹಿಂಸಕ ವೃತ್ತಿ ಎನ್ನಬಹುದು. ಆದರೆ ಈ ವೃತ್ತಿಯಲ್ಲಿ ಕೂಡ ತನ್ನ ಪರಿಗ್ರಹದ ಪರಿಣಾಮ ಏನಾಗಬಹುದು ಎಂಬ ಎಚ್ಚರಿಕೆ ಇರಬೇಕು. ಯಾಚನೆ ಮಾಡುವವನು ದುಷ್ಟನ ಬಳಿಗೆ ಹೋಗಬಾರದು; ಅವನು ಅನ್ಯಾಯದಿಂದ ಗಳಿಸಿರುವ ಧನವನ್ನು ಸ್ವೀಕರಿಸಬಾರದು. ಹಾಗೆ ಮಾಡಿದರೆ ತಾನು ಮತ್ತಷ್ಟು ಅನ್ಯಾಯ ನಡೆಯುವುದಕ್ಕೆ ಕಾರಣನಾಗುವನು. ನ್ಯಾಯವಂತನ ಬಳಿಗೆ ಬೇಡ ಹೋದಾಗಲೂ ಅವನು ಬೇರೆಯವರಿಗೆ ಹಿಂಸೆಮಾಡದೆ ತನಗೆ ದಾನವನ್ನು ನೀಡಬಲ್ಲನೆ ಎಂಬುದನ್ನು ನೋಡಬೇಕು. ಅಗಸ್ತ್ಯನು ಒಮ್ಮೆ ಧನ ಬೇಡಬೇಕಾಗಿ ಬಂದಾಗ

ವಿತ್ತಾರ್ಥಿನಮನುಪ್ರಾಪ್ತಂ ವಿದ್ಧಿ ಮಾಂ ಪೃಥಿವೀಪತೇ
ಯಥಾಶಕ್ತ್ಯವಿಹಿಂಸ್ಯಾನ್ಯಾನ್ ಸಂವಿಭಾಗಂ ಪ್ರಯಚ್ಛಮೇ

ಎಂದನು. ಇಬ್ಬರು ರಾಜರ ಆಯವ್ಯಯ ಸಮನಾಗಿರುವುದನ್ನು ಕಂಡು ಅವರಲ್ಲಿ ಪ್ರಾರ್ಥನೆಮಾಡದೆ ಸಹಜವಾಗಿ ವ್ಯಯಕ್ಕಿಂತ ಆಯ ಹೆಚ್ಚಾಗಿದ್ದ ಇನ್ನೊಬ್ಬ ರಾಜನ ಬಳಿಗೆ ಹೋದನು. ಮತ್ತೊಬ್ಬ ಋಷಿ ಶಿಷ್ಟನಲ್ಲದ ಒಬ್ಬ ರಾಜನು ನೀಡಬಂದ ದಾನವನ್ನು ಅವನು ಶಿಷ್ಟನಲ್ಲ ಎಂಬ ಕಾರಣದಿಂದ ನಿರಾಕರಿಸಿದನು.

## (vi) ವಿನಯ

ದಾಕ್ಷಿಣ್ಯ ಸಮಾಜ ಜೀವನದಲ್ಲಿ ನಯವನ್ನು ಬೆಳಸುತ್ತದೆ. ಪರಸ್ಪರ ಆದರ, ಸಂಬೋಧನೆಯಲ್ಲಿ ಗೌರವ, ಬಾಳ್ವೆಯಲ್ಲಿ ಭೂಷಣಗಳಾಗುತ್ತವೆ.

ದರ್ಶನೇದರ್ಶನೇ ನಿತ್ಯಂ ಸುಖಪ್ರಶ್ನಮುದಾಹರೇತ್
ತ್ವಂಕಾರಂ ನಾಮಧೇಯಂಚ ಜ್ಯೇಷ್ಠಾನಾಂ ಪರಿವರ್ಜಯೇತ್

ನೋಡಿ ನೋಡಿದಾಗಲೆಲ್ಲ ಸುಖಪ್ರಶ್ನೆಯನ್ನು ಕೇಳತಕ್ಕದ್ದು.

ಹಿರಿಯರಾದವರನ್ನು ನೀನು ಎಂದು ಅಥವಾ ಹೆಸರು ಹಿಡಿದು ಕರೆಯುವುದನ್ನು ವರ್ಜಿಸಬೇಕು.

## (vii) ಉದಾತ್ತ ವರ್ತನ

ಸಮಾಜಜೀವನದಲ್ಲಿ ಕ್ಷಮಾಗುಣ ಇದೇ ರೀತಿಯ ಉದಾತ್ತ ವರ್ತನದಲ್ಲಿ ಪ್ರಕಟವಾಗುತ್ತದೆ. ಅಕ್ರೋಧೇನ ಜಯೇತ್ ಕ್ರೋಧಂ ಅಸಾಧುಂ ಸಾಧುನಾ ಜಯೇತ್. ಕೆಟ್ಟದನ್ನು ಮಾಡಿದವರಿಗೆ ಪ್ರತಿಯಾಗಿ ಕೆಟ್ಟದನ್ನು ಮಾಡಬಾರದು. ಹೀಗೆ ಮಾಡುತ್ತ ಹೋದರೆ ಕೆಟ್ಟದಕ್ಕೆ ಕೊನೆಯಿಲ್ಲದೆ ಹೋಗುತ್ತದೆ. ಕೆಟ್ಟದನ್ನು ಒಳ್ಳೆಯತನದಿಂದ ಜಯಿಸಬೇಕು. ಜಯೇತ್ ಕದರ್ಯಂ ದಾನೇನ ಸತ್ಯೇನಾನೃತವಾದಿನಂ. ಎದುರಾಳಿ, ಎದುರ ಗುಂಪು, ಅಯೋಗ್ಯ ರೀತಿಯಲ್ಲಿ ವರ್ತಿಸಿದವೆಂದು ಬಲ್ಲವನು ಅವರಂತೆ ವರ್ತಿಸಲಾಗದು. ದಾನಕೊಟ್ಟು ಜಿಪುಣನಿಗೆ ಔದಾರ್ಯವನ್ನು ಕಲಿಸಬೇಕು. ತಾಳ್ಮೆಯಿಂದ ಕೋಪಿಯಾದವನಿಗೆ ಸಹನೆಯನ್ನು ಕಲಿಸಬೇಕು. ನಿಜವನ್ನಾಡಿ ಸುಳ್ಳನ್ನಾಡಿದವನನ್ನು ನಿಜದ ಕಡೆಗೆ ಒಲಿಸಿಕೊಳ್ಳಬೇಕು. ಸಾಧು ವರ್ತನೆಯ ಮೂಲಕ ಅಸಾಧು ಜೀವರನ್ನು ತಿದ್ದಬೇಕು.

## (viii) ಅವರಪೂಜನ

ಸಮಾಜದಲ್ಲಿ ಹಿರಿಯರು ಕಿರಿಯರು, ಪುಣ್ಯಾವಂತರು ಬಡವರು, ದಣಿಗಳು ಭೃತ್ಯರು, ಹೀಗೆ ಪರಸ್ಪರ ಸಂಬಂಧ ಅನಿವಾರ್ಯವಾಗಿ ಏರ್ಪಡುತ್ತದೆ. ಇಂಥ ಎಲ್ಲ ಸಂದರ್ಭದಲ್ಲಿಯೂ ಮೇಲ್ಪಟ್ಟ ಮನುಷ್ಯನು

ಕೀಳ್ಪಟ್ಟವನ ವಿಷಯವಲ್ಲಿ ದಾಕ್ಷಿಣ್ಯದಿಂದ ನಡೆದುಕೊಳ್ಳಬೇಕು. ನಾನು ಎಷ್ಟು ದೊಡ್ಡವನು ಎಂಬ ಭಾವ ಬರುವುದು ಬಹು ಸುಲಭ. ಅದು ಬಂದೊಡನೆ ಹಾಗೆಂದುಕೊಂಡವನ ದೊಡ್ಡತನಕ್ಕೆ ಸಂಚಕಾರ ಕೊಟ್ಟಂತೆಯೆ. ಯಯಾತಿಯ ಚರಿತ್ರೆ ಈ ತತ್ತ್ವವನ್ನು ಸ್ಪಷ್ಟಪಡಿಸಿದೆ. ಸ್ವರ್ಗದಿಂದ ಬಿದ್ದು ಮತ್ತೆ ದೌಹಿತ್ರರ ಯತ್ನದಿಂದ ಸ್ವರ್ಗವನ್ನೇರಿದ ಈ ಮಹಾರಾಜನಿಗೆ 'ನಾವಮಾನ್ಯಾಃ ತ್ವಯಾರಾಜನ್ ಅವರೋತ್ಕೃಷ್ಟ ಮಧ್ಯಮಾಃ' ಎಂಬ ಸಂದೇಶ ದೊರೆಯಿತು. ಜೊತೆಯ ಜನ ಮೇಲ್ಪಟ್ಟ ಜನವನ್ನು ಅವಮಾನಿಸಬಾರದು; ಅಷ್ಟೇ ಅಲ್ಲ, ಅವರರಾದವರನ್ನು, ಎಂದರೆ ತನಗಿಂತ ಕಡಮೆಯಾದವರನ್ನು, ಕಡಮೆ ಎಂದು ಎಣಿಸಬಾರದು.

ಗೃಹಸ್ಥಧರ್ಮವನ್ನು ಹೇಳುತ್ತ ಭಾರತಗ್ರಂಥ ಗೃಹಸ್ಥನು ಭೃತ್ಯರಿಗೆ ತಾನು ಮಾಡುವ ಊಟವನ್ನೇ ಹಾಕಬೇಕು ಎಂದು ಹೇಳಿದೆ; ಜೊತೆಗೆ, ಭೃತ್ಯರಿಗೆ ಮೊದಲು ಭೋಜನಮಾಡಿಸಿ ಆಮೇಲೆ ಗೃಹಸ್ಥನು ಭುಜಿಸಬೇಕು, ಎಂದಿದೆ.

ಅತಿಥೀನಾಂಚ ಸರ್ವೇಷಾಂ ಪ್ರೇಷ್ಯಾಣಾಂ ಸ್ವಜನಸ್ಯ ಚ
ಸಾಮಾನ್ಯಂಭೋಜನಂ ಕುರ್ಯಾತ್ ಸ್ವಯಂ ನಾಗ್ರ್ಯಾಶನಂ ವ್ರಜೇತ್
ಭೃತ್ಯಾತಿಥಿಷುಯೋಭುಂಕ್ತೇ ಭುಕ್ತವತ್ಸು ಸದಾನರಃ
ಅಮೃತಂ ಕೇವಲಂಭುಂಕ್ತೇ ಇತಿವಿದ್ಧಿ ಯುಧಿಷ್ಠಿರ
ದೇವತಾಭ್ಯಃ ಪಿತೃಭ್ಯಶ್ಚ ಭೃತ್ಯೇಭ್ಯೋಽತಿಥಿಭಿಸ್ಸಹ
ಅವಶಿಷ್ಟಂತುಯೋಽಶ್ನಾತಿ ತಮಾಹುಃ ವಿಘಸಾಶಿನಂ
ಅತಿಥೀನಾಂಚ ಸರ್ವೇಷಾಂ ಪ್ರೇಷ್ಯಾಣಾಂ ಸ್ವಜನಸ್ಯಚ
ಸಾಮಾನ್ಯಂ ಭೋಜನಂ ಭೃತ್ಯೇ ಪುರುಷಸ್ಯ ಪ್ರಶಸ್ಯತೇ

## ೨೯
## ಸ್ತ್ರೀ ವಿಚಾರ

ಎಲ್ಲ ಸಮಾಜದಲ್ಲಿಯೂ ಹೆಣ್ಣು ಒಂದು ಅಸಹಾಯ ಸ್ಥಿತಿಯಲ್ಲಿರುತ್ತದೆ. ಕುಂತಿ ದ್ರೌಪದಿಯರಂಥ ರಾಜಮಾತೆ ರಾಜಪತ್ನಿಯರಿಗೆ ಎಂಥ ದುರವಸ್ಥೆ ಬಂದಿತೆಂದು ವರ್ಣಿಸಿ ಭಾರತದ ಋಷಿ ಸ್ತ್ರೀಯ ವಿಷಯದಲ್ಲಿ ವಿಶಿಷ್ಟ ರೀತಿಯ ಕನಿಕರವನ್ನು ಪ್ರಕಟಿಸಿದ್ದಾನೆ. ಸುಖವಾಗಿದ್ದಳೆಂಬ

ಗಾಂಧಾರಿ ಕೂಡ ಎಂಥ ಅಸಹಾಯ ಸ್ಥಿತಿಯಲ್ಲಿ ಇದ್ದಳೆನ್ನುವುದೂ ಕಥೆಯಲ್ಲಿ ಮನಮುಟ್ಟುವಂತೆ ಚಿತ್ರಿತವಾಗಿದೆ. ಗಂಡು ಕಷ್ಟಕ್ಕೆ ಸಿಕ್ಕ ಬಹುದು: ಅದಕ್ಕೆ ಆ ಕಷ್ಟದಿಂದ ತಪ್ಪಿಸಿಕೊಳ್ಳುವ ಪ್ರಯತ್ನಮಾಡಲು ಅವಕಾಶವಿದೆ, ಅಧಿಕಾರವಿದೆ. ಕಷ್ಟಕ್ಕೆ ಸಿಕ್ಕಿದ ಹೆಣ್ಣು ಅದನ್ನು ಮೌನ ದಿಂದ ಅಥವಾ ಕೂಗಾಡುತ್ತ ಸಹಿಸಿಕೊಳ್ಳಬೇಕೇ ಹೊರತು ಬೇರೆ ಯಾವುದಕ್ಕೂ ಅಧಿಕಾರ ಪಡೆದಿಲ್ಲ. ಜೀವನವನ್ನು ನಡಸುವುದು ಗಂಡಿನ ಕೆಲಸ. ಹೆಣ್ಣು ಗಂಡನ್ನು ಹೆರುತ್ತದೆ, ಸಾಕುತ್ತದೆ, ತಾಯಿ ಎನಿಸುತ್ತದೆ; ಉಪಜೀವಿಸುತ್ತದೆ, ಸುಖಪಡಿಸುತ್ತದೆ, ಹೆಂಡಿರೆನಿಸುತ್ತದೆ; ಆಶ್ರಯಿಸಿ ಕನಿಕರಕ್ಕೆ ಪಾತ್ರವಾಗಿ ಬೆಳೆಯುತ್ತದೆ, ನೋಯುತ್ತದೆ, ಮಗಳೆನ್ನಿಸಿ ಕೊಳ್ಳುತ್ತದೆ. ಈ ಎಲ್ಲ ಸ್ಥಿತಿಯಲ್ಲಿಯೂ ಅದು ಒಂದು ಉಪಕಾರಕ ಅಥವಾ ಉಪಕೃತ ಜೀವನವನ್ನು ನಡಸುತ್ತದೆ ಹೊರತಾಗಿ ತನ್ನದೇ ಆದ ಜೀವನವನ್ನು ನಡಸುವುದಿಲ್ಲ. ಯಾವುದೋ ಒಂದು ಗಂಡಿಗೆ ಸಂಬಂಧಪಟ್ಟಂತೆ ಹೊರತಾಗಿ ಹೆಣ್ಣಿಗೆ ಒಂದು ಬೇರೆಯ ಜೀವನವಿಲ್ಲ.

ಸದ್ಯಃ ಸ್ಥಿತಿಯಲ್ಲಿ ಈ ಅವಸ್ಥೆ ತಪ್ಪಿದ್ದಲ್ಲವೆಂದು ನಾವು ಒಪ್ಪಿಕೊಳ್ಳ ಬೇಕು. ತಾಯಿ, ಹೆಂಡಿರು, ಮಗಳು ಜೀವನದಲ್ಲಿ ಬಹು ದೊಡ್ಡ ವಸ್ತು ಗಳು. ಆದರೆ, ಈ ಮೂರೂ ಸ್ಥಿತಿಯಲ್ಲೂ ಸ್ತ್ರೀ ಅಸಹಾಯಳಾಗಿದ್ದಾಳೆ. ಅವಳ ಜೀವನವನ್ನು ಚೆನ್ನುಮಾಡುವುದು ಹೇಗೆ?

ತಸ್ಮಾತ್ ಬ್ರವೀಮಿ ಪಾರ್ಥತ್ವಾಂ ಸ್ತ್ರಿಯೋರಕ್ಷ್ಯಾಃ ಸದೈವಚ
ಉಭಯಂ ದೃಶ್ಯತೇ ತಾಸು ಸತತಂ ಸಾಧ್ವಸಾಧುಚ
ಸ್ತ್ರಿಯಃ ಸಾಧ್ವ್ಯೋ ಮಹಾಭಾಗಾ ಸಂಮತಾ ಲೋಕಮಾತರಃ
ಧಾರಯಂತಿ ಮಹೀಂರಾಜನ್ ಇಮಾಂ ಸವನಕಾನನಾಂ

ಪಿತೃಭಿಃ ಭ್ರಾತೃಭಿಶ್ಚಾಪಿ ಶ್ವಶುರೈಃ ಅಥದೇವರೈಃ
ಪೂಜ್ಯಾಲಾಲಯಿತವ್ಯಾಶ್ಚ ಸ್ತ್ರಿಯೋ ನಿತ್ಯಂ ಜನಾಧಿಪ
ಸ್ತ್ರಿಯೋ ಯತ್ರಚ ಪೂಜ್ಯಂತೇ ರಮಂತೇ ತತ್ರದೇವತಾಃ
ಅಪೂಜಿತಾಶ್ಚ ಯತ್ರೈತಾಃ ಸರ್ವಾಸ್ತತ್ರಾಫಲಾಕ್ರಿಯಾಃ
ತದಾ ಚೈತತ್ ಕುಲಂನಾಸ್ತಿ ಯದಾಶೋಚಂತಿ ಜಾಮಯಃ
ಜಾಮೀ ಶಪ್ತಾನಿ ಗೇಹಾನಿ ನಿಕೃತ್ತಾನೀವ ಕೃತ್ತ್ಯಯಾ
ನೈವಭಾಂತಿ ನವರ್ಧಂತೇ ಶ್ರಿಯಾ ಹೀನಾನಿ ಪಾರ್ಥಿವ

ಪಿತಾರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ
ಪುತ್ರಾಶ್ಚ ಸ್ಥಾವಿರೇ ಭಾವೇ ನ ಸ್ತ್ರೀಸ್ವಾತಂತ್ರ್ಯಮರ್ಹತಿ
ಶ್ರಿಯ ಏತಾಃ ಸ್ತ್ರಿಯೋನಾಮ ಸತ್ಕಾರ್ಯಾ ಭೂತಿಮಿಚ್ಛತಾ
ಲಾಲಿತಾನುಗೃಹೀತಾಚ ಶ್ರೀ ಸ್ತ್ರೀ ಭವತಿ ಭಾರತ

ಸ್ತ್ರೀಯರು ಸದಾ ರಕ್ಷ್ಯರೇ. ಅವರಲ್ಲಿ ಒಳ್ಳೆಯವರು ಇರುವಂತೆ ಒಳ್ಳೆಯವರಲ್ಲದವರೂ ಇದಾರೆ. ಒಳ್ಳೆಯವರು ಮಹನೀಯ ಜೀವಗಳು, ಲೋಕಮಾತೆಯರು; ವನಕಾನನ ಸಮೇತವಾದ ಈ ಮಹಿಯನ್ನೇ ಅವರು ಪಾಲಿಸುತ್ತಾರೆ. ಸ್ತ್ರೀಯರನ್ನು ತಂದೆಯೊ ಸೋದರರೊ ಮಾವದಿರೊ ಭಾವದಿರೊ ಮರ್ಯಾದೆಯಿಂದ ನೋಡಿಕೊಳ್ಳಬೇಕು, ಕಾಪಾಡಿಕೊಳ್ಳಬೇಕು. ಸ್ತ್ರೀಯರನ್ನು ಎಲ್ಲಿ ಗೌರವದಿಂದ ಕಾಣುತ್ತಾರೆ, ಅಲ್ಲಿ ದೇವತೆಗಳು ಸಂತುಷ್ಟರಾಗುತ್ತಾರೆ. ಸ್ತ್ರೀಯರಿಗೆ ಎಲ್ಲಿ ಮರ್ಯಾದೆ ಇಲ್ಲ, ಅಲ್ಲಿ ನಡೆಯುವ ಎಲ್ಲ ಕರ್ಮಗಳೂ ನಿಷ್ಫಲವಾಗುತ್ತವೆ. ಯಾರ ಮನೆಯ ಹೆಣ್ಮಕ್ಕಳು ಸೊಸೆಯರು ದುಃಖಕ್ಕೆ ಈಡಾಗುತ್ತಾರೆ, ಆ ಮನೆಯ ಯೋಗ್ಯತೆ ಕೆಟ್ಟಿತು. ಹೆಣ್ಣುಮಕ್ಕಳೂ ಸೊಸೆಯರೂ ದುಃಖದಿಂದ ಬೈದುಕೊಳ್ಳುವ ಮನೆ ಕೊಡಲಿಯಿಂದ ಕಡಿದ ಮರದಂತೆ ಕಂಗೆಡುತ್ತದೆ, ಬೆಳೆಯದೆ ನಿಲ್ಲುತ್ತದೆ. ಹೆಣ್ಣನ್ನು ಎಳೆತನದಲ್ಲಿ ತಂದೆ ಕಾಪಾಡಬೇಕು; ಯೌವನದಲ್ಲಿ ಭರ್ತಾ ಕಾಪಾಡಬೇಕು; ಮುಪ್ಪಿನಲ್ಲಿ ಮಕ್ಕಳು ನೋಡಿಕೊಳ್ಳಬೇಕು; ಹೆಣ್ಣು ಜೀವ ತನ್ನ ಪಾಡನ್ನು ತಾನು ನೋಡಿಕೊಳ್ಳುವ ಸ್ಥಿತಿಗೆ ಬರಬಾರದು. ಸ್ತ್ರೀ ಎನ್ನುವುದು ಶ್ರೀಯೇ ಸರಿ, ಸಂದೇಹವಿಲ್ಲ. ಶುಭವನ್ನು ಬಯಸುವವರು ಸ್ತ್ರೀ ಮಾತ್ರಕ್ಕೆ ಸತ್ಕಾರಮಾಡಲಿ; ಕನಿಕರದಿಂದ ನೋಡಿಕೊಂಡು ಕಾಪಾಡಿಕೊಂಡರೆ ಸ್ತ್ರೀ ಮನೆಯ ಶ್ರೀ ಆಗುತ್ತಾಳೆ.

ಸ್ತ್ರೀಯ ಸ್ಥಿತಿ ಲೋಕದಲ್ಲಿ ಇನ್ನು ಮುಂದೆ ಉತ್ತಮಗೊಳ್ಳಬಹುದು. ಈಗಲೂ ಬೇರೆಯ ಕಡೆ ಉತ್ತಮವಾಗಿರಬಹುದು. ಭರತವರ್ಷದಲ್ಲಿ ಈಗಿನ ಪರಿಸ್ಥಿತಿಯಲ್ಲಿ ಸ್ತ್ರೀಯನ್ನು ಕುರಿತು ಇದಕ್ಕಿಂತ ಹೆಚ್ಚು ಕನಿಕರದ ಮಾತು ಸಾಧ್ಯವಲ್ಲ ಎಂದು ಕಾಣುತ್ತದೆ. ಸಂಸಾರದ ಗಂಡಸರು ತಮ್ಮ ತಮ್ಮ ಸಂಸಾರದ ಹೆಣ್ಣು ಮಕ್ಕಳನ್ನು ದಾಕ್ಷಿಣ್ಯದಿಂದ ನೋಡಿಕೊಂಡು, ಒಳ್ಳೆಯ ಮಾತಿನಿಂದ ನಡಸಿಕೊಂಡು, ಆದಷ್ಟುಮಟ್ಟಿಗೆ ಅನ್ನ ಬಟ್ಟೆ

ಒಡವೆ ವಸ್ತುವನ್ನು ಒದಗಿಸಿ ಅವರು ಬಯ್ದುಕೊಳ್ಳದಂತೆ, ಕಣ್ಣೀರು ಹಾಕದಂತೆ, ನೋಡಿಕೊಳ್ಳುವುದು ತಮ್ಮ ಧರ್ಮವೆಂದು ತಿಳಿಯಬೇಕು. ಹೀಗೆ ನೋಡಿಕೊಂಡ ಸಂಸಾರಿಗಳು ಶುಭವನ್ನು ಕಾಣುತ್ತಾರೆ. ಅವರ ಕುಲ ಉಳಿಯುತ್ತದೆ. ಅವರ ಮನೆ ಬೆಳಿಯುತ್ತದೆ. ಅವರ ಮನೆಗಳ ಹೆಣ್ಣುಮಕ್ಕಳು ಅವರ ಭಾಗದ ಲಕ್ಷ್ಮಿಯರಾಗುತ್ತಾರೆ.

ನ ಸ್ತ್ರೀಸ್ವಾತಂತ್ರ್ಯಮರ್ಹತಿ ಎಂಬ ವಾಕ್ಯವನ್ನು ತೆಗೆದುಕೊಂಡು ಕೆಲವು ಜನ ಕೆಲವುವೇಳೆ, " ಭಾರತ ಸಂಸ್ಕೃತಿಯಲ್ಲಿ ಹೆಂಗಸು ಯಾವಾಗಲೂ ಗಂಡಸಿಗೆ ಅಧೀನಳಾಗಿರಬೇಕು ಎಂಬ ಭಾವವಿದೆ; ಭರತವರ್ಷ ಸ್ತ್ರೀ ವ್ಯಕ್ತಿಗೆ ತಕ್ಕಷ್ಟು ಮರ್ಯಾದೆಯನ್ನು ಕೊಡುವುದಿಲ್ಲ," ಎಂಬ ಅರ್ಥದಲ್ಲಿ ಟೀಕಿಸುವುದುಂಟು. ಹೀಗೆ ಹೇಳುವವರು ಆ ನಾಲ್ಕು ಶಬ್ದ ಅಷ್ಟನ್ನು ತೆಗೆದುಕೊಂಡು, ಅದರ ಹಿಂದುಮುಂದಣ ಶಬ್ದ ಏನು ಎಂದು ನೋಡದೆ ಸ್ವಾತಂತ್ರ್ಯ ಎಂಬ ಶಬ್ದಕ್ಕೆ, ಅರ್ಹತಿ ಎಂಬ ಶಬ್ದಕ್ಕೆ, ತಪ್ಪು ಅರ್ಥಗಳನ್ನು ಆರೋಪಿಸಿ ವಾದವನ್ನು ಬೆಳಸುತ್ತಾರೆ. ಈ ವಾಕ್ಯ ಬಂದಿರುವ ಮೇಲಣ ವಾಕ್ಯವೃಂದ ಅದರ ಸರಿಯಾದ ಅರ್ಥವನ್ನು ಸೂಚಿಸುತ್ತದೆ. ಇಲ್ಲಿ ಸ್ವಾತಂತ್ರ್ಯ ಎಂಬಲ್ಲಿ ಅಧೀನ ಅನಧೀನತೆಯ ಭಾವ ಉಕ್ತವಾಗಿಲ್ಲ. ಇಲ್ಲಿ 'ಸ್ವಾತಂತ್ರ್ಯ' ಶಬ್ದದ ಅರ್ಥ ತನ್ನ ಪಾಡನ್ನು ತಾನು ನೋಡಿಕೊಳ್ಳುವುದು ಎನ್ನುವುದು. 'ಅರ್ಹತಿ' ಎಂಬ ಶಬ್ದ ಯೋಗ್ಯತೆ ಎಂಬ ಅರ್ಥದಲ್ಲಿ ಅಲ್ಲ, ತರವಾದದ್ದು ಎಂಬ ಅರ್ಥದಲ್ಲಿ ಇಲ್ಲಿ ಬಂದಿದೆ. ನ ಸ್ತ್ರೀಸ್ವಾತಂತ್ರ್ಯಮರ್ಹತಿ ಎಂದರೆ ಸ್ತ್ರೀಯಾದವಳು ತನ್ನ ಪಾಡನ್ನು ತಾನು ನೋಡಿಕೊಳ್ಳುವಂತೆ ಬಿಡುವುದು ಯೋಗ್ಯವಲ್ಲ ಎಂದು. ಸ್ತ್ರೀ ಯಾರಿಗಾದರೂ ಅಧೀನಳಾಗಿ ಇರಬೇಕೆ ಬಿಡಬೇಕೆ ಎಂದು ಹೇಳುವುದು ಈ ವಾಕ್ಯದ ಉದ್ದೇಶವಲ್ಲ.

ತಾಯಿಯನ್ನು ದೈವದಂತೆ ಪೂಜಿಸುವುದು ಮಕ್ಕಳ ಧರ್ಮ. ಧರ್ಮವ್ಯಾಧನು ಕೌಶಿಕನಿಗೆ "ತಂದೆತಾಯಿಗಳೇ ನನ್ನ ದೈವತ" ಎಂದು ಹೇಳಿದನು. ಪಿತಾಮಾತಾಚ ಭಗವನ್ ಏತೌಮೇ ದೈವತಂ ಪರಂ; ಯೇ ದೈವತೇಭ್ಯಃ ಕರ್ತವ್ಯಂ ತದೇತಾಭ್ಯಾಂ ಕರೋಮ್ಯಹಂ. ಈ ಭಾವನೆಗೆ ಕಾರಣ ಇದು.

ಕುಕ್ಷಿಣಾದಶಮಾಸಾಂಶ್ಚ ಗರ್ಭಂ ಸಂಧಾರಯಂತಿಯಾಃ
ನಾರ್ಯಃ ಕಾಲೇನ ಸಂಭೂಯ ಕಿಮದ್ಭುತತರಂ ತತಃ
ಸಂಶಯಂ ಪರಮಂ ಪ್ರಾಪ್ಯ ವೇದನಾಮತುಲಾಮಪಿ
ಪ್ರಜಾಯನ್ತೇಸುತಾನ್ನಾರ್ಯೋ ದುಃಖೇನ ಮಹತಾವಿಭೋ
ಮಾತರಂ ಶ್ರೇಯಸೀಂತಾತ ಪಿತೄನನ್ಯೇತು ಮೇನಿರೇ
ದುಷ್ಕರಂ ಕುರುತೇ ಮಾತಾ ವಿವರ್ಧಯತಿಯಾ ಪ್ರಜಾಃ
ತಪಸಾ ದೇವತೇಜ್ಯಾಭಿಃ ವನ್ದನೇನ ತಿತಿಕ್ಷಯಾ
ಸುಪ್ರಶಸ್ತೈರುಪಾಯೈಶ್ಚಾಪೀಹನ್ತೇ ಪಿತರಃ ಸುತಾನ್
ಏವಂಕೃಚ್ಛ್ರೇಣ ಮಹತಾ ಪುತ್ರಂ ಪ್ರಾಪ್ಯ ಸುದುರ್ಲಭಂ
ಚಿಂತಯಂತಿ ಸದಾವೀರ ಕೀದೃಶೋಯಂ ಭವಿಷ್ಯತಿ
ಪಿತಾಮಾತಾಚ ರಾಜೇಂದ್ರ ತುಷ್ಯತೋಯಸ್ಯ ಸಿತ್ಯಶಃ
ಇಹಪ್ರೇತ್ಯತು ತಸ್ಯಾಥ ಕೀರ್ತಿರ್ಧರ್ಮಶ್ಚ ಶಾಶ್ವತಃ

## ೩೦

## ಮದುವೆ

### (i) ಸಂಬಂಧದ ಸ್ವರೂಪ

ಹೆಣ್ಣಿನ ಮರ್ಯಾದೆಯನ್ನು ಕಾಪಾಡುವುದಕ್ಕೆ ಸಮಾಜ ಏರ್ಪಡಿಸಿರುವ ಮುಖ್ಯ ವ್ಯವಸ್ಥೆ ವಿವಾಹ. ಭಾರತದ ಇತಿಹಾಸದಲ್ಲಿ ಮದುವೆಯ ಬಹು ಪೂರ್ವದ ಒಂದು ಅನವಸ್ಥೆ ಮೊದಲುಗೊಂಡು ಪ್ರೌಢೆಯಾದ ಕನ್ಯೆ ತನ್ನ ಇಚ್ಛೆಯಿಂದ ತಾನು ಒಲಿದ ಪುರುಷನನ್ನು ತಾನಾಗಿ ಮದುವೆಯಾಗುವವರೆಗಿನ ಎಲ್ಲ ಅವಸ್ಥೆಗಳ ಸೂಚನೆಯೂ ಇದೆ. ಹೆಣ್ಣನ್ನು ಕದ್ದುಕೊಂಡು ಹೋಗಿ ಕೂಡಿದ್ದು, ಅವಳು ಮೈಮೇಲೆ ಪ್ರಜ್ಞೆಯಿಲ್ಲದೆ ಬಿದ್ದಿರುವಾಗ ಕೂಡಿದ್ದು, ಇಂಥ ಸ್ತ್ರೀ ಪುರುಷ ಸಂಬಂಧಕ್ಕೂ ಗ್ರಂಥ ಪೈಶಾಚ ರಾಕ್ಷಸ ಎಂಬ ಹೆಸರುಗಳಿಂದ ವಿವಾಹದ ಪ್ರತಿಷ್ಠೆಯನ್ನು ಕೊಟ್ಟಿದೆ. ಬಹುರೀತಿಯ ಜನ ಇರುವ ಸಮಾಜ ಆ ಎಲ್ಲ ರೀತಿಯವರಿಗೂ ಅನುಕೂಲಿಸುವಂತೆ ಸಂಸ್ಥೆಗಳನ್ನು ಏರ್ಪಡಿಸಬೇಕಾಗುತ್ತದೆ. ಧೂರ್ತನು ಕದ್ದುಕೊಂಡು ಹೋಗಿ ಕೂಡಿದ ಹುಡುಗಿಯನ್ನು ಕೆಟ್ಟುಹೋದಳೆಂದೂ ಭ್ರಷ್ಟಳೆಂದೂ ಹೇಳುವುದಕ್ಕಿಂತ ಅವಳೂ ಒಂದು ರೀತಿಯ ಹೆಂಡಿರೆಂದು ಹೇಳುವುದು ವ್ಯವಹಾರದಲ್ಲಿ ಕೌಶಲವೂ ಹೌದು, ಸಮಾಜಕ್ಕೆ ಕ್ಷೇಮವೂ

ಹೌದು. ಕದ್ದುಕೊಂಡು ಹೋದವನು ತಾನು ಕದ್ದ ಹೆಣ್ಣನ್ನು ಹೆಂಡಿರೆಂದು ಕಾಣಬೇಕು, ಸಾಕಬೇಕು. ಇಷ್ಟು ತುಚ್ಛವರ್ತನೆಯ ಸಂಬಂಧವನ್ನು ಮದುವೆಯೆಂದು ಗಣಿಸಿದರೂ ಭಾರತದ ಋಷಿ ಗಂಡುಹೆಣ್ಣಿನ ಸಂಬಂಧ ದಲ್ಲಿ ಒಲಿದುಮಾಡಿದ ಸಂಬಂಧವೇ ಅತ್ಯುತ್ತಮವಾದದ್ದೆಂದು ಸ್ಪಷ್ಟಪಡಿಸಿ ದ್ದಾನೆ.

> ಇಚ್ಛತೋಃರತ್ರಯೋಃಲಾಭಃ ಸ್ತ್ರೀಪುಂಸೋಃರನ್ಯತೋಃಪಮಃ
> ಅಲಾಭಶ್ಚಾಪಿ ರಕ್ತಸ್ಯ ಸೋಽಪಿ ದೋಷೋಃ ವಿಷೋಃಪಮಃ

ತಾನು ದುಷ್ಯಂತನೊಂದಿಗೆ ತಂದೆಯ ಅನುಮತಿಯನ್ನು ಪಡೆಯದೆ ಸೇರಿದ್ದು ತಪ್ಪಾಯಿತೇನೋ ಎಂದು ಶಕುಂತಲೆ ಸಂಕೋಚಪಟ್ಟ ಹೊತ್ತಿನಲ್ಲಿ ಕಣ್ವಋಷಿ ಅವಳಿಗೆ ಹೀಗೆಂದು ಹೇಳುತ್ತಾನೆ. ಹೀಗಿದ್ದೂ ಸಮಾಜ ಒಟ್ಟಿನಲ್ಲಿ ಹೆತ್ತವರು ಸಾಕುವವರು ಸಮ್ಮತಿಸಿ ನಡೆಯುವ ಮದುವೆಯನ್ನೇ ಬಹುತೇಕ ಒಪ್ಪಬಹುದು. ದುಷ್ಯಂತನಂಥ ಸಂಪನ್ನವ್ಯಕ್ತಿಯೇ ಶಕುಂತಲೆಯೊಡನೆ ಬೆಳಸಿದ ಸಂಬಂಧವನ್ನು ಇಲ್ಲಗಳೆದು ಅವಳನ್ನು ನಿರಾ ಕರಿಸಿದನೆಂದಮೇಲೆ ಕೇವಲ ಪ್ರೇಮಿಯಾದ ಗಂಡು ಪ್ರೇಮಿಯಾದ ಹೆಣ್ಣು ಪರಸ್ಪರ ಸಂಕೇತದಿಂದ ಮಾಡಿಕೊಳ್ಳುವ ಮದುವೆ ಸ್ವಲ್ಪ ಅತಂತ್ರ ಎಂದೇ ಹೇಳಬೇಕು. ಹೇಗೇ ಆದರೂ ಗಂಡು ಹೆಣ್ಣಿನ ಸಂಬಂಧ ಒಂದು ಸಲ ನಡೆಯಿತೆಂದರೆ ಅದನ್ನು ಇಬ್ಬರೂ ಜೀವಾವಧಿಯ ಸಂಬಂಧವಾಗಿ ನಡಸಿಕೊಳ್ಳುವುದೇ ಧರ್ಮ.

### (ii) ಪಾತಿವ್ರತ್ಯ

ಪತ್ನಿ ಜೀವನದ ಸಹಧರ್ಮಿಣಿ. ಅವಳನ್ನು ಗಂಡನ ಅಧೀನಳಾಗಿ ದ್ದಾಳೆ ಎಂದು ವರ್ಣಿಸುವುದಕ್ಕಿಂತ ಗಂಡನ ಜೊತೆಗಿದ್ದಾಳೆ ಎಂದು ವರ್ಣಿಸುವುದು ಹೆಚ್ಚು ಯುಕ್ತ. ತೀರಿಕೊಂಡ ಗಂಡನನ್ನು ಕಾಪಾಡಿ ತಂದ ಸಾವಿತ್ರಿ, ನಷ್ಟನಾಗಿದ್ದ ಗಂಡನನ್ನು ಉಪಾಯದಿಂದ ಹಿಂದಕ್ಕೆ ಕರಸಿಕೊಂಡ ದಮಯಂತಿ, ಐದು ಜನರ ಹೆಂಡಿರಾಗಿ ಅವರೊಡನೆ ಆರನೆಯ ಜೀವವಾಗಿ ವನವಾಸಕ್ಕೆ ಅಜ್ಞಾತವಾಸಕ್ಕೆ ಮಹಾಪ್ರಸ್ಥಾನಕ್ಕೆ ಜೊತೆಗೂಡಿ ನಡೆದ ದ್ರೌಪದಿ, ಗಂಡನಿಗೆ ಕಣ್ಣಿಲ್ಲವೆಂಬ ಕಾರಣದಿಂದ ತನ್ನ ಕಣ್ಣನ್ನು ಬಟ್ಟೆ

ಯಿಂದ ಕಟ್ಟಿಕೊಂಡು ಉದ್ದೇಶಪೂರ್ವಕ ಕುರುಡಳಾದ ಗಾಂಧಾರಿ, ಇವರು ಭಾರತದ ಆದರ್ಶಪತ್ನಿಯರು. ಪತಿವ್ರತೆಯ ದಿನಚರಿಯನ್ನು ಕುರಿತು ದ್ರೌಪದಿ ಸತ್ಯಭಾಮೆಯರ ಸಂವಾದದಲ್ಲಿ ದ್ರೌಪದಿ ಹೇಳಿದ ಮಾತಿಗಿಂತ ಹೆಚ್ಚಿನಮಾತು ಬೇರೆ ಎಲ್ಲಿಯೂ ಇರಲಾರದು. ಇದೇ ಅರ್ಥದ ಮಾತನ್ನು ಗ್ರಂಥ ಸುಮನಶಾಂಡಿಲಿಸಂವಾದ ಎಂಬ ಉಪಾಖ್ಯಾನ ದಲ್ಲಿ ಮತ್ತೊಮ್ಮೆ ತಂದಿದೆ.

## (iii) ಪುರುಷನ ಶೀಲ

ಮದುವೆ ಸಮಾಜಕ್ಷೇಮದ ಬಹು ಮುಖ್ಯ ಸಾಧನ. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಇದನ್ನು ಅನುಪಾಲಿಸಬೇಕು. ತನ್ನ ಪತ್ನಿಯನ್ನು ಮಾತ್ರ ಸೇರುವವನು ಬ್ರಹ್ಮಚಾರಿ; ಪರಪತ್ನಿಯನ್ನು ಸೇರುವವನು ಬ್ರಹ್ಮಘಾತಕ.

ಪರಸ್ತ್ರೀಯ ವಿಷಯಕ್ಕೆ ಪುರುಷನು ಎಷ್ಟು ಸಂಯಮದಿಂದ ನಡೆದು ಕೊಂಡರೆ ಅಷ್ಟು ಅವನ ಜೀವನವೂ ಸೊಗಸುಗೂಡುತ್ತದೆ. ಊರ್ವಶಿ ತಾನಾಗಿ ಒಲಿದು ಬಂದರೂ ಅವಳ ಕ್ಷಮೆಯನ್ನು ಬೇಡಿ ತನ್ನ ಶೀಲವನ್ನು ಕಾಪಾಡಿಕೊಂಡ ಅರ್ಜುನ ಶೀಲಕ್ಕೆ ಮೇಲ್ಪಂಕ್ತಿ. ಇದು ಬರಿಯ ಕಥೆ ಯೆಂದರೂ ವಿರಾಟನ ಅಂತಃಪುರದಲ್ಲಿ ಎಂಥೆಂಥ ರೂಪವತಿ ಯುವತಿಯರ ಮಧ್ಯೆ ಕ್ಲೀಬನಿಗೆ ಮಾತ್ರ ಸಾಧ್ಯವಾದ ನಿಸ್ಸಂಗದಿಂದ ನಡೆದನೆನ್ನುವುದು ಅರ್ಜುನನ ಶೀಲ ಎಷ್ಟು ಭದ್ರವಾದದ್ದು ಎಂಬುದನ್ನು ತೋರಿಸುತ್ತದೆ. ಇಷ್ಟೇ ಸೊಗಸಿನ ಒಂದು ನಯವಂತಿಕೆ ನಳನು ದಮಯಂತಿಯ ಸೇವಕಿ ಕೇಶಿನಿಗೆ ಹೇಳಿದ ಮಾತಿನಲ್ಲಿ ಕಾಣುತ್ತದೆ. ಬಹುಶಸ್ಸಂಪತಂತೀಂ ತ್ವಾಂ ಜನಃ ಶಂಕೇತ ದೋಷತಃ; ವಯಂಚ ದೇಶಾತಿಥಯೋ ಗಚ್ಛ ಭದ್ರೇ ಯಥಾ ಸುಖಂ. ತರುಣಿಯಾದ ಇಂಥ ಹೆಣ್ಣು ತನ್ನ ಬಳಿಗೆ ಅಷ್ಟೊಂದು ಸಲ ಬಂದು ಹೋಗುವುದು ಸರಿಯಲ್ಲ: ತನಗೆ ಕೆಡಕೆಂದಲ್ಲ; ಅವಳ ಮರ್ಯಾದೆಗೆ ಕುಂದು ಬಂದೀತು.

ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಯಾವುದೇ ಹೆಣ್ಣಿನ ವಿಷಯಕ್ಕೆ ಈ ಎಚ್ಚರಿಕೆಯಿಂದ ನಡೆದುಕೊಳ್ಳುವುದು ನಯ, ಹಾಗೆಯೇ ಸೊಗಸು.

## (iv) ಸಂಸಾರ

ಸಂಸಾರ ಸಮಾಜಜೀವನದ ತಳಹದಿ. ಗಂಡ ಹೆಂಡತಿ, ತಾಯಿ ತಂದೆ ಮಕ್ಕಳು, ಸೋದರ ಸೋದರಿಯರು, ಅತ್ತೆ ಮಾವಂದಿರು ನೆಂಟರು ಇಷ್ಟರು, ಎಲ್ಲರೂ ಒಬ್ಬರನ್ನೊಬ್ಬರು ನಮ್ಮವರು ಎಂಬ ಭಾವದಿಂದ, ಪ್ರೀತಿಯಿಂದ, ದಾಕ್ಷಿಣ್ಯದಿಂದ, ಗೌರವದಿಂದ, ಭಕ್ತಿಯಿಂದ ಕಾಣಬೇಕು. ಮನುಷ್ಯನ ಗುಣಗಳು ಬೆಳೆಯುವುದಕ್ಕೆ ಸಂಸಾರ ಸಾಧನ ಕ್ಷೇತ್ರ. ಭಾರತ ದಲ್ಲಿ ಈ ಎಲ್ಲ ಸಂಬಂಧಗಳ ಅತ್ಯುತ್ತಮ ನಿದರ್ಶನಗಳು ಕಾಣುತ್ತವೆ. ತಾಯಿ ಕುಂತಿಯಂತೆ, ಗಾಂಧಾರಿಯಂತೆ, ಸತ್ಯವತಿಯಂತೆ ಇರಬೇಕು. ಅಣ್ಣಂದಿರು ಯುಧಿಷ್ಠಿರನಂತೆ, ದುರ್ಯೋಧನನಂತೆ, ಬಲರಾಮನಂತೆ ಇರಬೇಕು. ತಮ್ಮಂದಿರು ಭೀಮಾರ್ಜುನ ನಕುಲ ಸಹದೇವರಂತೆ, ದುಶ್ಶಾಸನನಂತೆ, ಕೃಷ್ಣನಂತೆ ಇರಬೇಕು. ತಂಗಿಯರ ವಿಷಯಕ್ಕೆ ಅಣ್ಣಂದಿರು ಸುಭದ್ರಾ ದ್ರೌಪದಿಯರ ವಿಷಯಕ್ಕೆ ಕೃಷ್ಣನಿದ್ದಂತೆ ಇರಬೇಕು. ಗೆಳೆಯರು ಕೃಷ್ಣ ಅರ್ಜುನರಂತೆ, ಕರ್ಣ ದುರ್ಯೋಧನರಂತೆ ಇರಬೇಕು. ಸಂಬಂಧಿಗಳು ಕೃಷ್ಣ ಯುಧಿಷ್ಠಿರರಂತೆ, ಧೃತರಾಷ್ಟ್ರ ಕೃಷ್ಣರಂತೆ ಇರಬೇಕು. ಈ ಎದುರಿಗೆ ಇರುವ ಜೀವ ನನ್ನ ಸಂಬಂಧದ್ದು ಎಂಬ ಕಾರಣದಿಂದ ಪ್ರತಿಯೊಬ್ಬನೂ ನಾನು ಎನ್ನುವುದನ್ನು ಸ್ವಲ್ಪ ತಗ್ಗಿಸಿಕೊಂಡು ಆ ಎದುರ ಜೀವದ ಇಷ್ಟವನ್ನು ತಿಳಿದು ನಡೆಯಲು ನೋಡಬೇಕು. ಅಹಂಕಾರವನ್ನು ಅಡಗಿಸಿಕೊಂಡು ಜೊತೆಯ ಜೀವಕ್ಕೆ ಸಂತೋಷವನ್ನು ಕೊಡುವುದು ಸಂಸಾರದ ಒಬ್ಬೊಬ್ಬ ವ್ಯಕ್ತಿಯಲ್ಲೂ ಪ್ರಯತ್ನ ಆಗಬೇಕು.

## (v) ತ್ಯಜೇದೇಕಂ

ತನ್ನವನೆಂದು ದಾಕ್ಷಿಣ್ಯದಿಂದ ವರ್ತಿಸುವುದರಲ್ಲಿ ಯಾವನೂ ಆ ತನ್ನವನಿಗೆ ಅನ್ಯಾಯದಲ್ಲಿ ನೆರವಾಗಲಾಗದು. ಸಂಸಾರದ ಜೀವನ ಚೆನ್ನಾಗಬೇಕಾದರೆ ಸ್ವಾರ್ಥವನ್ನು ಅಡಗಿಸಿ ಬಂಧುವಿನ ಸಂತೋಷವನ್ನು ಅರಸುವಂತೆ ಸಮಾಜಜೀವನ ಚೆನ್ನಾಗಬೇಕಾದರೆ ತನ್ನವರೆಂಬ ಸ್ವಾರ್ಥ ವನ್ನು ಅಡಗಿಸಿ ಹತ್ತು ಜನದ ಹಿತವನ್ನು ಅರಸಬೇಕು. ತ್ಯಜೇದೇಕಂ ಕುಲಸ್ಯಾರ್ಥೇ: ಸಂಸಾರಕ್ಕಾಗಿ ಒಬ್ಬನನ್ನು ಬಿಟ್ಟುಕೊಡಲು ಸಿದ್ಧನಾಗಿರ

ಬೇಕು. ಆ ಒಬ್ಬನು ಯಾರು? ತಾನೇ. ಯಾವ ನಷ್ಟವನ್ನಾದರೂ ಪಟ್ಟು ಸಂಸಾರಕ್ಕೆ ಶುಭವನ್ನು ಗಳಿಸಬೇಕು. ಅಷ್ಟೇ ನಿಜವಾಗಿ ಗ್ರಾಮುಸ್ಯಾರ್ಥೇ ತ್ಯಜೇತ್ ಕುಲಂ: ಹತ್ತು ಜನಕ್ಕಾಗಿ ಸಂಸಾರವನ್ನು ಬಿಟ್ಟುಕೊಡ ಬೇಕು. ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್. ಹೆಚ್ಚಿನದಕ್ಕಾಗಿ ಕಡಮೆಯನ್ನು ಬಿಡುವ ಈ ಸೂತ್ರದ ಸಾಧಕ ತತ್ತ್ವ ಸ್ವಾರ್ಥತ್ಯಾಗ. ನಾನು ನನ್ನವರು ಎಂದು ಧರ್ಮವನ್ನು ಮರೆತರೆ ಅದು ಮುಪಕಾರವಾಗುತ್ತದೆ, ಸ್ವಾರ್ಥದಲ್ಲಿ ಮುಗಿಯುತ್ತದೆ. ಪಾತಕಕ್ಕೆ ಕಾರಣ ವಾಗುತ್ತದೆ.

## ೩೧

## ರಾಜ್ಯ

### (i) ರಾಷ್ಟ್ರ

ವ್ಯಕ್ತಿ, ಕುಲ, ಗ್ರಾಮಗಳಿಗೆ ಮಿಗಿಲಾದದ್ದೆಂದು ಇಲ್ಲಿ ಪೂಜಿತವಾಗಿ ರುವ "ಜನಪದ" ಸಮಾಜಜೀವನದ ನಿಯಂತ್ರಣಕ್ಕಾಗಿ ಏರ್ಪಟ್ಟಿರುವ ಮಹಾಸಂಸ್ಥೆ. ವ್ಯಕ್ತಿ, ಸಂಸಾರ, ಸಮಾಜದ ನೂರಾರು ಜನ ಸಮುದಾಯ, ಎಲ್ಲವೂ ರಾಷ್ಟ್ರದ ಜೀವನಕ್ಕೆ ಅಧೀನವಾಗಿ ನಡೆಯಬೇಕು. ರಾಷ್ಟ್ರದ ಶುಭಕ್ಕಾಗಿ ಅದಕ್ಕಿಂತ ಕಡಮೆಯ ಎಲ್ಲ ಸಂಸ್ಥೆಯೂ ತನ್ನ ಸ್ವಾರ್ಥವನ್ನು ತ್ಯಾಗಮಾಡಲು ಸಿದ್ಧವಾಗಿರಬೇಕು. ಜನಪದಸ್ಯಾರ್ಥೇ ತ್ಯಜೇತ್.

ರಾಷ್ಟ್ರ ಹೇಗೆ ಏರ್ಪಟ್ಟಿತೆಂದು ಭಾರತ ವರ್ಣಿಸಿದೆ. ಮನುಜ ಕುಲದ ಆರಂಭ ದೆಶೆಯಲ್ಲಿ ರಾಜ್ಯ ಎಂಬ ಏರ್ಪಾಡಿರಲಿಲ್ಲ. ಜನರು ಒಬ್ಬರ ವಿಷಯದಲ್ಲಿ ಒಬ್ಬರು ದಾಕ್ಷಿಣ್ಯ ವಿಶ್ವಾಸಗಳಿಂದ ನಡೆದುಕೊಳ್ಳುತ್ತಿದ್ದರು. ಕೆಲವು ಕಾಲದಮೇಲೆ ಈ ಸೌಜನ್ಯ ಮರೆಯಿತು; ದುಷ್ಟರು ತಲೆದೋರಿ ದರು; ಸಮಾಜ ಜೀವನ ಕೆಟ್ಟಿತು.

**ನೈವರಾಜ್ಯಂ ನ ರಾಜಾಸೀತ್ ನ ಚ ದಂಡೋ ನದಾಂಡಿಕಃ**
**ಧರ್ಮೇಣೈವ ಪ್ರಜಾಃ ಸರ್ವಾಃ ರಕ್ಷಂತಿಸ್ಮ ಪರಸ್ಪರಂ**
**ಪಾಲ್ಯಮಾನಾ ಸ್ತಥಾನ್ಯೋನ್ಯಂ ನರಾಧರ್ಮೇಣ ಭಾರತ**
**ದೈನ್ಯಂ ಪರಮುಪಾಜಗ್ಮುಃ ತತಸ್ತಾನ್ ಮೋಹ ಆವಿಶತ್**
**ತೇ ಮೋಹವಶಮಾಪನ್ನಾ ಮನುಜಾ ಮನುಜರ್ಷಭ**

ಪ್ರತಿಪತ್ತಿರ್ವಿಮೋಹಾಚ್ಚ ಧರ್ಮಸ್ತೇಷಾಮನೀನಶತ್
ನಷ್ಟಾಯಾಂ ಪ್ರತಿಪತ್ತೌ ಚ ಮೋಹವಶ್ಯಾನರಾಸ್ತದಾ
ಲೋಭಸ್ಯವಶಮಾಪನ್ನಾಃ ಸರ್ವೇ ಭರತಸತ್ತಮ
ಅಗಮ್ಯಾಗಮನಂ ಚೈವ ವಾಚ್ಯಾವಾಚ್ಯಂ ತಥೈವ ಚ
ಭಕ್ಷ್ಯಾಭಕ್ಷ್ಯಂ ಚ ರಾಜೇಂದ್ರ ದೋಷಾದೋಷಂ ಚ ನಾತ್ಯಜನ್

ಆಗ ದೇವರು ಜೀವನವನ್ನು ಪರಿಷ್ಕರಿಸಲು ಶಾಸ್ತ್ರವನ್ನು ನಿರ್ಮಿಸಿದನು. ಅದನ್ನು ನಡೆಸುವುದಕ್ಕಾಗಿ ಪ್ರಜೆಗಳ ಅಧಿಪತಿಯಾಗಿರಲು ರಾಜನನ್ನು ಮಾಡಿದನು. ಈ ರಾಜನು ರಾಜ್ಯವನ್ನು ಧರ್ಮದಲ್ಲಿ ನಡಸಿದನು. ಕೆಲವು ತಲೆ ನಡೆದನಂತರ ರಾಜನೂ ದುಷ್ಟನಾದನು. ಆಗ ಪ್ರಜೆಗಳು ಮೊರೆಯಿಟ್ಟರು. ಅವರ ಪ್ರಮುಖರು ರಾಜನನ್ನು ಪ್ರತಿಭಟಿಸಿ ಅವನನ್ನು ಕೊಂದರು; ಅವರಲ್ಲಿ ಪ್ರಾಜ್ಞರಾದವರು ಆ ರಾಜನ ತೊಡೆಯಿಂದ ಒಬ್ಬ ಮಗನನ್ನು ಪಡೆದರು. ಅವನು ರಾಕ್ಷಸನಾದನು. ಇವರು ಅವನನ್ನೂ ನಿಗ್ರಹಿಸಿ ರಾಜನ ತೊಡೆಯಿಂದ ಮತ್ತೊಬ್ಬ ಮಗನನ್ನು ನಿರ್ಮಿಸಿದರು. ಅವನು ಶಿಷ್ಟನಾಗಿ, ಗುಣವಂತನಾಗಿ ಧರ್ಮವನ್ನು ನಡಸಿದನು; ರಾಷ್ಟ್ರವನ್ನು ಪಾಲಿಸಿದನು; ಲೋಕವ್ಯವಹಾರವನ್ನು ಪರಿಷ್ಕರಿಸಿ, ವರ್ಣಗಳ ಆಶ್ರಮಗಳ ಧರ್ಮವನ್ನು ನಡಸಿದನು.

ಈ ರಾಜನ ಹೆಸರು ಪ್ರಿಯವ್ರತ. ಇವನು ರಾಜರಿಗೆ ಮೇಲ್ಪಂಕ್ತಿ. ಪ್ರಿಯವ್ರತ ರಾಜನಿಗೆ ಧರ್ಮಪಾಲನ ಹೊರತು ಬೇರೆ ಕೆಲಸವೇ ಇಲ್ಲ.

ತೇನ ಧರ್ಮೋತ್ತರಶ್ಚಾಯಂ ಕೃತೋ ಲೋಕೋ ಮಹಾತ್ಮನಾ
ರಂಜಿತಾಶ್ಚ ಪ್ರಜಾಃ ಸರ್ವಾಃ ತೇನ ರಾಜೇತಿ ಶಬ್ದ್ಯತೇ

ರಾಜಪದವಿ ಅವನಿಗೆ ಸುಖಕ್ಕಾಗಿ ಭೋಗಕ್ಕಾಗಿ ದೊರೆತ ಸ್ಥಾನವಲ್ಲ. ಪ್ರಿಯವ್ರತ ರಾಜನು ಧರ್ಮದ ಪ್ರಮುಖಸೇವಕನು.

ಪುತ್ರಾ ಇವ ಪಿತುರ್ಗೇಹೇ ವಿಷಯೇ ಯಸ್ಯಮಾನವಾಃ
ನಿರ್ಭಯಾ ವಿಚರಿಷ್ಯಂತಿ ಸ ರಾಜಾ ರಾಜಸತ್ತಮಃ

ಮಕ್ಕಳು ತಂದೆಯ ಮನೆಯಲ್ಲಿ ಎಂಬಂತೆ ಪ್ರಜೆಗಳು ನಿರ್ಭೀತರಾಗಿ ಬಾಳಬೇಕು: ಆಗ ರಾಜ ಯೋಗ್ಯ ರಾಜ. ರಾಜನನ್ನು ಕುರಿತು ಭಾರತದ ಕಲ್ಪನೆ ಇದೇ. ರಾಷ್ಟ್ರವನ್ನು ಪಾಲಿಸಬೇಕು, ಸಮಾಜ ಸರಿಯಾದ ರೀತಿ

ಯಲ್ಲಿ ನಡೆಯುವಂತೆ ನೋಡಿಕೊಳ್ಳಬೇಕು, ರಾಷ್ಟ್ರದ ಪ್ರಜೆಗಳಿಂದ ಒಂದು ಮಿತಿಯಲ್ಲಿ ಕರವನ್ನು ತೆಗೆದುಕೊಂಡು ಆಡಳಿತದ ವ್ಯವಸ್ಥೆಗೆ, ದಾನಕ್ಕೆ, ಯಾಗಕ್ಕೆ ಬಳಸಬೇಕು. ಅಧರ್ಮದಲ್ಲಿ ಹೆಜ್ಜೆಯಿಡದೆ ತನ್ನ ಕರ್ತವ್ಯವನ್ನು ಪಾಲಿಸಿ ಆಯುಷ್ಯವನ್ನು ಕಳೆದು ಮುಂದೆ ಸದ್ಗತಿಯನ್ನು ಪಡೆಯಬೇಕು.

ತದ್ರಾಜ್ಯೇ ರಾಜ್ಯಕಾಮಾನಾಂ ನಾನ್ಯೋಧರ್ಮಃ ಸನಾತನಃ
ಋತೇ ರಕ್ಷಾತು ವಿಸ್ಪಷ್ಟಾಂ ರಕ್ಷಾಲೋಕಸ್ಯ ಧಾರಿಣೀ

## (ii) ರಾಜ

ರಾಜನು ತನ್ನ ಈ ಕರ್ತವ್ಯವನ್ನು ದಕ್ಷತೆಯಿಂದ ನಡೆಸಬೇಕಾದರೆ, ಏನೇನನ್ನು ಮಾಡಬೇಕೆಂದು ಗ್ರಂಥ ವಿಸ್ತಾರವಾಗಿ ವರ್ಣಿಸಿದೆ. ಅದೆಲ್ಲದರ ಸಾರ ರಾಜನು ಶೀಲವಂತನಾಗಿರಬೇಕೆನ್ನುವುದು.

ಯದೀಚ್ಛಸಿ ಶ್ರಿಯಂತಾತ ಯಾದೃಶೀಸಾಯುಧಿಷ್ಠಿರೇ
ವಿಶಿಷ್ಟಾಂ ವಾ ನರಶ್ರೇಷ್ಠ ಶೀಲವಾನ್ ಭವಪುತ್ರಕ
ಧರ್ಮಾತ್ಮಾನಂ ಜಿತಕ್ರೋಧಂ ನಿಯತಂ ಸಂಯುತೇಂದ್ರಿಯಂ
ಸಮಾಸಿಂಚಂತಿ ಶಾಸ್ತ್ರಜ್ಞಾಃ ಕ್ಷೌದ್ರಂಮಧ್ವಿವಮಕ್ಷಿಕಾಃ

ದಾನವರು ಮೊದಲಲ್ಲಿ ಶೀಲವಂತರಾಗಿದ್ದರು. ಹಿರಿದಾಗಿ ಬಾಳಿದರು. ಅವರು ಒಮ್ಮೆ ಶೀಲವನ್ನು ಬಿಟ್ಟರು. ಅದರೊಂದಿಗೆ ಧರ್ಮ, ಸತ್ಯ, ವೃತ್ತ, ಬಲ ನಷ್ಟವಾದವು. ಅವುಗಳೊಂದಿಗೆ ಅವರ ಸಂಪತ್ತು ಅಳಿಯಿತು.

ಧರ್ಮಃ ಸತ್ಯಂ ತಥಾವೃತ್ತಂ ಬಲಂ ಚೈವತಥಾಪ್ಯಹಂ
ಶೀಲಮೂಲಾ ಮಹಾಪ್ರಾಜ್ಞ ಸದಾನಾಸ್ತ್ಯತ್ರ ಸಂಶಯಃ
ಯದನ್ಯೇಷಾಂ ಹಿತಂ ನಸ್ಯಾತ್ ಅತ್ಮನಃ ಕರ್ಮ ಪೌರುಷಂ
ಅಪತ್ರಪೇತವಾಯೇನ ನತತ್ಕುರ್ಯಾತ್ಕಥಂಚನ
ತತ್ತುಕರ್ಮತಥಾ ಕುರ್ಯಾತ್ ಯೇನ ಶ್ಲಾಘ್ಯೇತಸಂಸದಿ
ಶೀಲಂ ಸಮಾಸೇನೈತತ್ತೇ ಕಥಿತಂ ಕುರುಸತ್ತಮ
ಯದ್ಯಪ್ಯಶೀಲಾನ್ನೃಪತೇ ಪ್ರಾಪ್ನುವಂತಿ ಶ್ರಿಯಂಕ್ವಚಿತ್
ನ ಭುಂಜಂತೇ ಚಿರಂ ತಾತ ಸಮೂಲಾಶ್ಚಪತಂತಿತೇ

ಶಾಂತಿ ಪರ್ವದ ಒಂದು ಭಾಗವೆಲ್ಲಾ ರಾಜಧರ್ಮಕ್ಕೆ ಮೀಸಲಾಗಿದೆ. ಅದನ್ನೆಲ್ಲ ಎಷ್ಟೇ ಸಂಕ್ಷೇಪವಾಗಿಯಾಗಲಿ ಹೇಳಿ ಮುಗಿಸುವುದು ಸಾಧ್ಯವಲ್ಲ.

ವಿಸ್ತರೇಣೈವ ಧರ್ಮಾಣಾಂ ನಜಾತ್ವಂತಮವಾಪ್ನುಯಾತ್

## (iii) ಮಂತ್ರಿ, ಅಮಾತ್ಯ

ಈ ಉಪದೇಶದಲ್ಲಿ ಒಂದು ಮುಖ್ಯಭಾಗ ಅಮಾತ್ಯರನ್ನು ಕುರಿತದ್ದು. ಒಂದು ರಾಜ್ಯ ಚೆನ್ನಾಗಿ ನಡೆಯಬೇಕಾದರೆ, ಅದರ ಆಡಳಿತವನ್ನು ನಡೆಸುವ ಅಧಿಕಾರಿಗಳು ಹೇಗಿರಬೇಕು?

ವಿದ್ಯಾವಿದೋ ಲೋಕವಿದಃ ಪರಲೋಕಾನ್ ಅವೇಕ್ಷಕಾನ್
ಧರ್ಮೇಚ ನಿರತಾನ್ ಸಾಧೂನ್ ಅಚಲಾನಚಲಾನಿವ
ಸಹಾಯಾನ್ ಸತತಂ ಕುರ್ಯಾತ್ ರಾಜಾಭೂತಿಪರಿಷ್ಕೃತಾನ್
ಮಾಸ್ಮಲುಬ್ಧಾಂಶ್ಚ ಮೂರ್ಖಾಂಶ್ಚ ಕಾಮಾರ್ಥೇ ಚ ಪ್ರಯೂಯುಜಃ
ಅಲುಬ್ಧಾನ್ ಬುದ್ಧಿಸಂಪನ್ನಾನ್ ಸರ್ವಕರ್ಮಸುಯೋಜಯೇತ್
ಕುಲೀನಾದೇಶಜಾಃ ಪ್ರಾಜ್ಞಾಃ ರೂಪವಂತೋ ಬಹುಶ್ರುತಾಃ
ಪ್ರಗಲ್ಭಾಶ್ಚ ಅನುರಕ್ತಾಶ್ಚ ತೇ ತವ ಸ್ಯುಃ ಪರಿಚ್ಛದಾಃ
ಕುಲೀನಾನ್ ಶೀಲಸಂಪನ್ನಾನ್ ಇಂಗಿತಜ್ಞಾನ್ ಅನಿಷ್ಠುರಾನ್
ದೇಶಕಾಲ ವಿಧಾನಜ್ಞಾನ್ ಭರ್ತೃಕಾರ್ಯ ಹಿತೈಷಿಣಃ
ನಿತ್ಯಮರ್ಥೇಷು ಸರ್ವೇಷು ರಾಜಾಕುರ್ವೀತ ಮಂತ್ರಿಣಃ
ಪರೀಕ್ಷ್ಯ ಚ ಗುಣಾನ್ ನಿತ್ಯಂ ಪ್ರೌಢಭಾವಾನ್ ಧುರಂಧರಾನ್
ಪಂಚೋಪಧಾವತೀತಾಂಶ್ಚ ಕುರ್ಯಾದ್ರಾಜಾಽರ್ಥಕಾರಿಣಃ
ಮಂತ್ರಿಣ್ಯನನುರಕ್ತೇತು ವಿಶ್ವಾಸೋ ನೋಪಪದ್ಯತೇ
ತಸ್ಮಾತ್ ಅನನುರಕ್ತಾಯ ನೈವಮಂತ್ರಂ ಪ್ರಕಾಶಯೇತ್
ವ್ಯಥಯೇದ್ಧಿ ಸ ರಾಜಾನಂ ಮಂತ್ರಿಭಿಸ್ಸಹಿತೋಽನ್ಯಜಃ
ಮಾರುತೋಪಹಿತಚ್ಛಿದ್ರೈಃ ಪ್ರವಿಶ್ಯಾಗ್ನಿರಿವದ್ರುಮಂ

ಆಡಳಿತದ ಕೆಲಸಕ್ಕೆ ರಾಜನು ವಿದ್ಯಾವಂತನನ್ನು, ಲೋಕವನ್ನು ಬಲ್ಲವನನ್ನು, ಮುಂದಕ್ಕೆ ಒಳ್ಳೆಯದಾಗಲೆಂದು ಬಯಸುವವನನ್ನು, ಸಾಧುಗಳಾಗಿ ಧರ್ಮಪಥದಲ್ಲಿ ಪರ್ವತಗಳಂತೆ ನಿಶ್ಚಲರಾಗಿರುವವರನ್ನು, ಅಲುಬ್ಧರಾದವರನ್ನು, ಬುದ್ಧಿಸಂಪನ್ನರಾದವರನ್ನು ನೇಮಿಸಬೇಕು. ರಾಜನ ಸುತ್ತ ಇರುವ ಜನ ಒಳ್ಳೆಯ ಕುಲದವರಾಗಿ, ಆ ದೇಶದಲ್ಲಿ ಹುಟ್ಟಿದವರಾಗಿ, ಪ್ರಾಜ್ಞರಾಗಿ, ರೂಪವಂತರಾಗಿ, ಓದಿದವರಾಗಿ, ಗಂಭೀರ ಸ್ವಭಾವದವರಾಗಿ, ರಾಜನ ವಿಷಯದಲ್ಲಿ ಭಕ್ತಿಯುಳ್ಳವರಾಗಿ ಇರಬೇಕು. ಕುಲೀನರು, ಶೀಲಸಂಪನ್ನರು, ಇಂಗಿತ ಬಲ್ಲವರು, ಕಟುವಚನ ನುಡಿಯದವರು, ದೇಶಕಾಲ ವಿಧಾನವನ್ನು ಬಲ್ಲವರು, ರಾಜನ ಕಾರ್ಯದಲ್ಲಿ ಹಿತವನ್ನು ಬಯಸುವವರು, ರಾಜನ ಎಲ್ಲಾ ಕಾರ್ಯದಲ್ಲಿಯೂ ಮಂತ್ರಿಗಳಾಗಬೇಕು.

ಮನುಷ್ಯನ ಗುಣವನ್ನು ತಿಳುವಳಿಕೆಯನ್ನು ಪರೀಕ್ಷೆಮಾಡಿ ನಿಶ್ಚಯಿಸಿ ಕೊಂಡು ಐದು ದೋಷಗಳಿಂದ ರಹಿತರಾಗಿರುವವರನ್ನು ರಾಜಕಾರ್ಯದ ಹೊರೆಗೆ ಆರಿಸಬೇಕು. ತನ್ನ ರಾಜನೆಂಬ ಅನುರಾಗವಿಲ್ಲದವನನ್ನು ನಂಬಿ ರಾಜಕಾರ್ಯವನ್ನು ಕುರಿತು ಆಲೋಚನೆ ಮಾಡಬಾರದು. ವಿಶ್ವಾಸಕ್ಕೆ ಯೋಗ್ಯನಲ್ಲದವನ ಮುಂದೆ ಮಂತ್ರಾಲೋಚನೆ ಮಾಡಿದರೆ ಮರದಪೊಟ್ಟರೆ ಯಲ್ಲಿ ಸೇರಿದ ಬೆಂಕಿ ಅದನ್ನು ಸುಡುವಂತೆ, ಅವಿಶ್ವಾಸಿಯಾದ ಆ ಮಂತ್ರಿ ಯಿಂದ ರಾಷ್ಟ್ರ ಸುಡುತ್ತದೆ. ಮಂತ್ರಿಯಾದವನು ಮತ್ತೂ ಇಂಥವ ನಾಗಿರಬೇಕು.

ಕುಲೀನಂ ಶಿಕ್ಷಿತಂ ಪ್ರಾಜ್ಞಂ ಜ್ಞಾನವಿಜ್ಞಾನಕೋವಿದಂ
ಸರ್ವಶಾಸ್ತ್ರಾರ್ಥ ತತ್ತ್ವಜ್ಞಂ ಸಹಿಷ್ಣುಂ ದೇಶಜಂತಥಾ
ಕೃತಜ್ಞಂ ಬಲವಂತಂ ಚ ಕ್ಷಾಂತಂ ದಾಂತಂ ಜಿತೇಂದ್ರಿಯಂ
ಅಲುಬ್ಧಂ ಲಬ್ಧಸಂತುಷ್ಟಂ ಸ್ವಾಮಿಮಿತ್ರಬುಭೂಷಕಂ
ಸಚಿವಂ ದೇಶಕಾಲಜ್ಞಂ ಸರ್ವಸಂಗ್ರಹಣೇರತಂ
ಸಂಸ್ಕೃತಂ ಯುಕ್ತವಚನಂ ಹಿತೈಷಿಣಮತಂದ್ರಿತಂ
ಯುಕ್ತಾಚಾರಂ ಸ್ವವಿಷಯೇ ಸಂಧಿವಿಗ್ರಹಕೋವಿದಂ
ಶಸ್ತಂ ತ್ರಿವರ್ಗವೇತ್ತಾರಂ ಪೌರಜಾನಪದಪ್ರಿಯಂ
ಅಸ್ತಬ್ಧಂ ಪ್ರಶ್ರಿತಂಶ್ಲಕ್ಷ್ಣಂ ಮೃದುವಾದಿನಮೇವಚ
ಧೀರಂ ಶೂರಂ ಮಹರ್ದ್ಧಿಂ ಚ ದೇಶಕಾಲೋಪಪಾದಕಂ
ಸಚಿವಂ ಯಃ ಪ್ರಕುರುತೇ ನಚೈನಮವಮನ್ಯತೇ
ತಸ್ಯ ವಿಸ್ತೀರ್ಯತೇ ರಾಜ್ಯಂ ಜ್ಯೋತ್ಸ್ನಾಗ್ರಹಪತೇರಿವ
ಅಮಾನೀಸತ್ಯವಾಕ್ಯಕ್ತೋ ಜಿತಾತ್ಮಾಮಾನಸಂಯುತಃ
ಸತೇಮಂತ್ರ ಸಹಾಯಸ್ಸ್ಯಾತ್ ಸರ್ವಾವಸ್ಥ ಪರೀಕ್ಷಿತಃ
ಅತ ಊರ್ಧ್ವಮಮಾತ್ಯಾನಾಂ ಪರೀಕ್ಷೇತಗುಣಾಗುಣಂ
ಸಂಯತಾತ್ಮಾ ಕೃತಪ್ರಜ್ಞೋ ಭೂತಿಕಾಮಶ್ಚ ಭೂಮಿಪಃ
ಅಪ್ರಕೀರ್ಣೇಂದ್ರಿಯಗ್ರಾಮಂ ಅತ್ಯಂತಾನುಗತಂ ಶುಚಿಂ
ಶಕ್ತಂ ಚೈವಾನುರಕ್ತಂಚ ಯುಂಜಾನ್ಮಹತಿಕರ್ಮಣಿ
ಕೀರ್ತಿಪ್ರಧಾನೋಯಶ್ಚಸ್ಯಾತ್ ಸಮಯೇ ಯಶ್ಚತಿಷ್ಠತಿ
ಸಮರ್ಥಾನ್ ಪೂಜಯೇತ್ ಯಶ್ಚ ನ ಚ ಸ್ಪರ್ಧೇತ ಯಶ್ಚತೈಃ
ಏವಮೇತೈರ್ಗುಣೈರ್ಯುಕ್ತೋ ಯೋನುರಜ್ಯತಿ ಭೂಮಿಪಂ
ಭರ್ತುರರ್ಥೇಷ್ವಪ್ರಮತ್ತಂ ನಿಯುಂಜಾದರ್ಥಕರ್ಮಣಿ
ಕೃತಪ್ರಜ್ಞಶ್ಚಮೇಧಾವೀ ಬುಧೋ ಜಾನಪದಃ ಶುಚಿಃ

ಸರ್ವಕರ್ಮಸುಯಃ ಶುದ್ಧಃ ಸಮಂತ್ರಂ ಶ್ರೋತುಮರ್ಹತಿ
ಜ್ಞಾನವಿಜ್ಞಾನ ಸಂಪನ್ನಃ ಪ್ರಕೃತಿಜ್ಞಃ ಪರಾತ್ಮನೋಃ
ಸುಹೃದಾತ್ಮಸಮೋರಾಜ್ಞಃ ಸಮಂತ್ರಂ ಶ್ರೋತುಮರ್ಹತಿ

ಆ ದೇಶದಲ್ಲಿ ಹುಟ್ಟಿದವನಾಗಿರಬೇಕು ಎನ್ನುವುದು ಇಲ್ಲಿಯೂ ಉಕ್ತವಾಗಿರುವ ಗುಣ. ಲೋಭಿಯಾಗಿರಕೂಡದು. ದೊರೆತಷ್ಟರಿಂದ ತೃಪ್ತನಾಗುವನಾಗಿರಬೇಕು ಎನ್ನುವುದು ಒಂದು ಮುಖ್ಯ ವಾಕ್ಯ. ಎಚ್ಚರಿಕೆಯ ಮನುಷ್ಯನಾಗಿರಬೇಕು ಅಹಂಕಾರಿಯಲ್ಲದಿರಬೇಕು ಎಂಬ ಮಾತೂ ಇಲ್ಲಿವೆ. ಉಳಿದ ಗುಣಗಳೂ ಸ್ಪಷ್ಟವೇ ಆಗಿವೆ.

ಮಂತ್ರಿಗಳಲ್ಲಿ ಒಬ್ಬೊಬ್ಬರನ್ನೂ ಅವರ ಯೋಗ್ಯತೆಗೆ ತಕ್ಕ ಕೆಲಸಕ್ಕೆ ನಿಯೋಜಿಸಬೇಕು. ಹಿರಿಯವನಿಗೆ ಸಣ್ಣ ಕೆಲಸ, ಕಿರಿಯವನಿಗೆ ದೊಡ್ಡದು, ಹೀಗಾದರೆ ಒಳಿತಾಗುವುದಿಲ್ಲ.

ಕರ್ಮಸ್ವಿಹಾನುರೂಪೇಷು ನ್ಯಸ್ಯಾಭೃತ್ಯಾ ಯಥಾವಿಧಿ
ಪ್ರತಿಲೋಮಂ ನ ಭೃತ್ಯಾಸ್ತೇ ಸ್ಥಾಪ್ಯಾಃ ಕರ್ಮಫಲೈಷಿಣಾ
ಯಃ ಪ್ರಮಾಣಮತಿಕ್ರಮ್ಯ ಪ್ರತಿಲೋಮಂ ನರಾಧಿಪಃ
ಭೃತ್ಯಾನ್ ಸ್ಥಾಪಯತೇಽಬುದ್ಧಿಃ ನಸರಂಜಯತೇ ಪ್ರಜಾಃ

## (iv) ಅನರ್ಹ ಸೇವಕರು

ಈ ಮುಂದೆ ಹೇಳುವ ರೀತಿಯ ಜನರು ಮಂತ್ರಕ್ಕೆ ಅಯೋಗ್ಯರು. ಎಷ್ಟು ಓದಿದವನಾದರೂ, ಎಷ್ಟೇ ವಿಶ್ವಾಸಿಯಾದರೂ ದೇಶದ ಪ್ರಜೆ ಅಲ್ಲದೆ, ಪೂರ್ವದಿಂದ ನಡೆದುಬಂದವನಲ್ಲದೆ ಆಗಂತುವಾದವನು, ಯಾರ ತಂದೆ ಬೇರೊಂದು ಧರ್ಮದಿಂದ ಬಂದು ಸೇರಿದವನು ಅಂಥ ಮನುಷ್ಯನು, ಸ್ವಲ್ಪ ಕಾರ್ಯಕ್ಕಾಗಿ ಕೋಪಗೊಳ್ಳುವವನು, ಇವರು ಇಲ್ಲಿ ಸೇರಿದಾರೆ.

ಮೂಢಮಸ್ಯೇಂದ್ರಿಯಕಂ ಲುಬ್ಧಂ ಅನಾರ್ಯಚರಿತಂ ಶಠಂ
ಅನತೀತೋಪಧಂ ಹಿಂಸ್ರಂ ದುರ್ಬುದ್ಧಿಮಬಹುಶ್ರುತಂ
ತ್ಯಕ್ತೋಪಾತ್ತಂ ಮದ್ಯರತಂ ದ್ಯೂತಸ್ತ್ರೀ ಮೃಗಯಾಪರಂ
ಕಾರ್ಯೇ ಮಹತಿಯುಂಜಾನೋ ಹೀಯತೇ ನೃಪತಿಃ ಶ್ರಿಯಾ
ಅವಿದ್ವಾನಶುಚಿಃ ಸ್ತಬ್ಧಃ ಶತ್ರುಸೇವೀ ವಿಕತ್ಥನಃ
ಅಸುಹೃತ್ಕ್ರೋಧನೋ ಲುಬ್ಧೋ ನಮಂತ್ರಂ ಶ್ರೋತುಮರ್ಹತಿ
ಆಗಂತುಶ್ಚಾನುರಕ್ತೋಪಿ ಕಾಮಮಸ್ತು ಬಹುಶ್ರುತಃ

ಸತ್ಕೃತಃ ಸಂವಿಭಕ್ತೋ ವಾ ನಮಂತ್ರಂ ಶ್ರೋತುಮರ್ಹತಿ
ವಿಧರ್ಮತೋ ವಿಪ್ರಕೃತಃ ಪಿತಾಯಸ್ಯಾ ಭವತ್ಪುರಾ
ಸತ್ಕೃತಃ ಸ್ಥಾಪಿತಃ ಸೋಪಿ ನಮಂತ್ರಂ ಶ್ರೋತುಮರ್ಹತಿ
ಏವಮಲ್ಪಶ್ರುತೋ ಮಂತ್ರೀ ಕಲ್ಯಾಣಾಭಿಜನೋಪ್ಯುತ
ಧರ್ಮಾರ್ಥಕಾಮಸಂಯುಕ್ತೋ ನಾಲಂಮಂತ್ರಂ ಪರೀಕ್ಷಿತುಂ
ಯಃ ಸ್ವಲ್ಪೇನಾಪಿಕಾರ್ಯೇಣ ಸುಹೃದಾಕ್ಷಾರಿತೋ ಭವೇತ್
ಪುನರನ್ಯೈರ್ಗುಣೈರ್ಯುಕ್ತೋ ನಮಂತ್ರಂ ಶ್ರೋತುಮರ್ಹತಿ

## (v) ಪ್ರಾತಿನಿಧ್ಯ

ಮಂತ್ರಿಮಂಡಲಕ್ಕೆ ಇಂಥ ಗುಣವಂತರೇ ದೊರೆಯುವುದಿಲ್ಲವಲ್ಲ, ಏನು ಮಾಡುವುದು? ಇದು ನಿಜವೇ.

ದುರ್ಲಭಃ ಪುರುಷಃ ಕಶ್ಚಿತ್ ಏಭಿರ್ಯುಕ್ತೋ ಗುಣೈಃ ಶುಭೈಃ

ಆದರೂ ಸರಿಯಾದವರನ್ನು ಹುಡುಕಬೇಕು: ಮಂತ್ರಿಮಂಡಲದಲ್ಲಿ ಸೇರಿಸಬೇಕು. ಅದರಲ್ಲಿ ಎಲ್ಲ ವರ್ಣಗಳ ಬುದ್ಧಿವಂತ ಪ್ರತಿನಿಧಿಗಳು ಇರುವಂತೆ ನೋಡಿಕೊಳ್ಳಬೇಕು.

ಚತುರೋ ಬ್ರಾಹ್ಮಣಾನ್ ವೈದ್ಯಾನ್ ಪ್ರಗಲ್ಭಾನ್ ಸ್ನಾತಕಾನ್ ಶುಚೀನ್
ಕ್ಷತ್ರಿಯಾನ್ ದಶಚಾಷ್ಟೌಚಬಲಿನಃ ಶಸ್ತ್ರಪಾಣಿನಃ
ವೈಶ್ಯಾನ್ ವಿತ್ತೇನ ಸಂಪನ್ನಾನ್ ಏಕವಿಂಶತಿ ಸಂಖ್ಯಯಾ
ತ್ರೀಂಶ್ಚ ಶೂದ್ರಾನ್ ವಿನೀತಾಂಶ್ಚ ಶುಚೀನ್ ಕರ್ಮಣಿ ಪೂರ್ವಕೇ

ಒಟ್ಟಿನಲ್ಲಿ ರಾಷ್ಟ್ರವನ್ನು ನೋಡಿಕೊಳ್ಳುವುದು ಬ್ರಾಹ್ಮಣ ಮತ್ತು ಕ್ಷತ್ರಿಯ ಕುಲಗಳ ಕೆಲಸ.

ಬ್ರಹ್ಮಕ್ಷತ್ರಮಿದಂ ಸೃಷ್ಟಂ ಏಕಯೋನಿಃ ಸ್ವಯಂಭುವಾ
ಪೃಥಗ್ಬಲವಿಧಾನಂ ಚ ತಲ್ಲೋಕಂ ಪರಿಪಾಲಯೇತ್
ತಪೋ ಮಂತ್ರಬಲಂ ನಿತ್ಯಂ ಬ್ರಾಹ್ಮಣೇಷು ಪ್ರತಿಷ್ಠಿತಂ
ಅಸ್ತ್ರಬಾಹುಬಲಂ ನಿತ್ಯಂ ಕ್ಷತ್ರಿಯೇಷು ಪ್ರತಿಷ್ಠಿತಂ

## ೩೨

## ಒಳ್ಳೆಯ ಆಡಳಿತ

### (i) ಸಾಮರಸ್ಯ

ಈ ಎಲ್ಲ ಏರ್ಪಾಡಿನ ಗುರಿ ಪ್ರಜೆಗಳ ಪರಸ್ಪರ ಸಮರಸ: ಪ್ರತಿಯೊಬ್ಬರೂ ಉಳಿದೆಲ್ಲರ ಕಷ್ಟಸುಖವನ್ನರಿತು ರಾಷ್ಟ್ರದ ಜನ ಒಂದುಗೂಡಿ ಬಾಳುವಂತೆ ನೋಡಿಕೊಳ್ಳತಕ್ಕದ್ದು. ಸಂಘವನ್ನು ಹಾಳುಮಾಡುವುದು ಸಂಘದ ಜನರಲ್ಲಿ ಮೂಡಬಹುದಾದ ಭಿನ್ನಭಾವ. ವಿದುರನು ಧೃತರಾಷ್ಟ್ರನಿಗೆ ಹೇಳಿದಂತೆ, "ಹತ್ತು ನೂಲ ಎಳೆ ಒಂದೊಂದೇ ನಿರ್ಬಲವಾಗಿರುತ್ತದೆ. ಎಲ್ಲ ಸೇರಿದರೆ ಒಂದು ಹಗ್ಗವಾಗುತ್ತದೆ; ಒಂದು ಮರ ಝಂಝಾವಾತವನ್ನು ತಡೆಯಲಾರದು, ಬೀಳುತ್ತದೆ. ಅದೇ ಮರ ಒಂದು ತೋಪಿನಲ್ಲಿದ್ದರೆ ಭದ್ರವಾಗಿ ನಿಂತಿರುತ್ತದೆ."

ಭೇದಾತ್ ವಿನಾಶಃ ಸಂಘಾನಾಂ

ಆದ್ದರಿಂದ ರಾಷ್ಟ್ರದ ಒಳಗೆ ಭೇದ ಮೂಡದಂತೆ ನೋಡಿಕೊಳ್ಳಬೇಕು. ಐಕಮತ್ಯವನ್ನು ಬೆಳಸಬೇಕು.

### (ii) ಸಮಾಜದ ವ್ಯಾಧಿಗಳು

ಸರಿಯಾಗಿ ಬಾಳುವ ರಾಷ್ಟ್ರದಲ್ಲಿ ಮದ್ಯಪಾನೀಯಗಳ ಅಂಗಡಿಗಳನ್ನು ವೇಶ್ಯಾಗೃಹಗಳನ್ನು ಕುಶೀಲವರು ಇನ್ನಿಂಥ ಇತರ ಜನರನ್ನು ಅಂಕೆಯಲ್ಲಿರಿಸಬೇಕು. ಉಪಜೀವಿಗಳಾದ ಇಂಥ ಜನರು ರಾಷ್ಟ್ರಕ್ಕೆ ಕೇಡು ತರುತ್ತಾರೆ. ಅವರನ್ನು ಬೆಳೆಯುವುದಕ್ಕೆ ಬಿಟ್ಟರೆ ಅದರ ಪಾಪ ರಾಜನನ್ನು ಮುಟ್ಟುತ್ತದೆ.

ಪಾನಾಗಾರ ನಿವೇಶಾಶ್ಚ ವೇಶ್ಯಾಃ ಪ್ರಾಪಣಿಕಾಸ್ತಥಾ
ಕುಶೀಲವಾಃ ಸಕಿತವಾ ಯೇಚಾನ್ಯೇಕೇಚಿದೀದೃಶಾಃ
ನಿಯಮ್ಯಾಃ ಸರ್ವ ಏವೈತೇ ಯೇರಾಷ್ಟಸ್ಯೋಪಘಾತಕಾಃ
ಏತೇ ರಾಷ್ಟ್ರೇಭಿತಿಷ್ಠನ್ತೋ ಬಾಧಂತೇಭದ್ರಿಕಾಃ ಪ್ರಜಾಃ
ನಕೇನಚಿದ್ಯಾಚಿತವ್ಯಃ ಕಶ್ಚಿತ್ಕಿಂಚಿದನಾಪದಿ
ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾಕೃತಾ

ಸರ್ವೇ ತಥಾऽನುಜೀವೇಯುಃ ನಕುರ್ಯುಃ ಕರ್ಮಚೇದಿಹ
ಸರ್ವ ಏವ ಇಮೇಲೋಕಾಃ ನ ಭವೇಯುರಸಂಶಯಂ
ಪ್ರಭುರ್ನಿಯಮನೇ ರಾಜಾ ಯ ಏತಾನ್ನ ನಿಯಚ್ಛತಿ
ಭುಂಕ್ತೇ ಸತಸ್ಯ ಪಾಪಸ್ಯ ಚತುರ್ಭಾಗಮಿತಿಶ್ರುತಿಃ
ಭಿಕ್ಷುಕಾನ್ ಶ್ಚಾಕ್ರಿಕಾಂಶ್ಚೈವ ಕ್ಲೀಬೋನ್ಮತ್ತಾನ್ ಕುಶೀಲವಾನ್
ಬಾಹ್ಯಾನ್ ಕುರ್ಯಾತ್ ನರಶ್ರೇಷ್ಠ ದೋಷಾಯ ಸ್ಯುರ್ಹಿ ತೇ ಶಠಾಃ

ಸರಿಯಾಗಿ ನಡೆಯುತ್ತಿರುವ ರಾಷ್ಟ್ರದಲ್ಲಿ ಅನ್ನವನ್ನು ಬೇಡುವ ಮನುಷ್ಯ ನಿರಬಾರದು.

ಮಾ ತೇರಾಷ್ಟ್ರೇಯಾಚನಕಾಭವೇಯುಃ ಮಾಚದಸ್ಯವಃ
ಉಪಾದಾತಾರ ಏವೈತೇ ನೈತೇ ಭೂತಸ್ಯಭಾವಕಾಃ
ಯೇ ಭೂತಾನ್ಯನುಗೃಹ್ಣಂತಿ ವರ್ಧಯಂತಿಚ ಯೇಪ್ರಜಾಃ
ತೇತೇ ರಾಷ್ಟ್ರೇಷು ವರ್ತಂತಾಂ ಮಾಭೂತಾನಾಂ ಪ್ರಬಾಧಕಾಃ
ದಂಡ್ಯಾಸ್ತೇಚ ಮಹಾರಾಜ ಧನಾದಾನಪ್ರಯೋಜಕಾಃ
ಕೃಷಿಗೋರಕ್ಷವಾಣಿಜ್ಯಂ ಯಚ್ಚಾನ್ಯತ್ ಕಿಂಚಿದೀದೃಶಂ
ಪುರುಷಃ ಕಾರಯೇತ್ ಕರ್ಮ ಬಹುಭಿಃ ಕರ್ಮಭೇದತಃ

ಭಿಕ್ಷೆ ಬೇಡುವವರು ಕೂಡದು. ಕಳ್ಳಕಾಕರು ಕೂಡದು. ಇವರು ಹೆರವರಿಂದ ಕಸಿದು ತಿನ್ನುವವರು ಜೀವರಾಶಿಗೆ ಶುಭವನ್ನು ಮಾಡುವವರಲ್ಲ. ಸಮಾಜದಲ್ಲಿ ಮತ್ತೊಬ್ಬರನ್ನು ನೋಡಿಕೊಳ್ಳುವ ಜನ ಬೆಳೆಯಬೇಕು. ಪರಹಿಂಸಕರು ಹೆಚ್ಚಬಾರದು. ಇಂಥವರು ಶಿಕ್ಷೆಗೆ ಅರ್ಹರು. ಕೃಷಿ ಗೋರಕ್ಷಣೆ ವಾಣಿಜ್ಯ ಇಂಥ ಯಾವುದಾದರೊಂದು ಕೆಲಸದಲ್ಲಿ ಈ ಜನರನ್ನು ಹೂಡಿ ದುಡಿಯಿಸಬೇಕು; ಅದರಿಂದ ಅವರು ಜೀವಿಸುವಂತೆ ಏರ್ಪಡಿಸಬೇಕು.

## (iii) ಬದುಕುವ ರಾಜ್ಯ

ಬಾಳಬಯಸುವ ರಾಷ್ಟ್ರ ಈ ಸೂತ್ರವನ್ನನುಸರಿಸಬೇಕು.

ಸತಾಂ ಸಂಗ್ರಹಣಂ ಶೌರ್ಯಂ ದಾಕ್ಷ್ಯಂ ಸತ್ಯಂ ಪ್ರಜಾಹಿತಂ
ಅನಾರ್ಜವೈರಾರ್ಜವೈಶ್ಚ ಶತ್ರುಪಕ್ಷಾವಿವರ್ಧನಂ
ಕೇತನಾನಾಂಚ ಜೀರ್ಣಾನಾಂ ಅವೇಕ್ಷಾ ಚೈವ ಸೀದತಾಂ
ದ್ವಿವಿಧಸ್ಯಚ ದಂಡಸ್ಯ ಪ್ರಯೋಗಃ ಕಾಲಚೋದಿತಃ

**ಸಾಧೂನಾಮುಪರಿತ್ಯಾಗಃ ಕುಲೀನಾನಾಂ ಚ ಧಾರಣಂ**
**ನಿಚಯಶ್ಚ ನಿಚೇಯಾನಾಂ ಸೇವಾ ಬುದ್ಧಿಮತಾಮಪಿ**
**ಬಲಾನಾಂ ಹರ್ಷಣಂ ನಿತ್ಯಂ ಪ್ರಜಾನಾಮನ್ವವೇಕ್ಷಣಂ**
**ಕಾರ್ಯೇಷ್ವಖೇದಃ ಕೋಶಸ್ಯ ತಥೈವ ಚ ವಿವರ್ಧನಂ**
**ಪುರಗುಪ್ತಿರವಿಶ್ವಾಸಃ ಪೌರಸಂಘಾತಭೇದನಂ**
**ಅರಿಮಧ್ಯಸ್ಥಮಿತ್ರಾಣಾಂ ಯಥಾವಚ್ಚಾನ್ವವೇಕ್ಷಣಂ**
**ಉಪಜಾಪಶ್ಚ ಭೃತ್ಯಾನಾಂ ಆತ್ಮನಃ ಪುರದರ್ಶನಂ**
**ಅವಿಶ್ವಾಸಃ ಸ್ವಯಂ ಚೈವ ಪರಸ್ಯಾಶ್ವಾಸನಂ ತಥಾ**
**ನೀತಿವರ್ತ್ಮಾನುಸಾರೇಣ ನಿತ್ಯಮುತ್ಥಾನಮೇವಚ**
**ರಿಪೂಣಾಮನವಜ್ಞಾನಂ ನಿತ್ಯಂ ಚಾನಾರ್ಯವರ್ಜನಮ್**

ಸಾಧು ಜನರ ರಕ್ಷಣೆ, ಪ್ರಜೆಗಳ ಹಿತ, ಆರ್ಜವದಿಂದಲೋ ಅನಾರ್ಜವದಿಂದಲೋ ಹೇಗಾದರೂ ಮಾಡಿ ಶತ್ರುಪಕ್ಷ ಬೆಳೆಯದಂತೆ ನೋಡಿಕೊಳ್ಳುವುದು, ಸೈನ್ಯಗಳನ್ನು ಸಂತೋಷದಲ್ಲಿರಿಸಿಕೊಳ್ಳುವುದು, ನಗರವನ್ನು ನೋಡಿಕೊಳ್ಳುವುದು, ಅವಿಶ್ವಾಸಿಗಳು ಕಲೆತು ಸಂಚು ನಡೆಸದಂತೆ ನೋಡಿಕೊಳ್ಳುವುದು, ಶತ್ರುಗಳ ಮಧ್ಯೆ ಇರುವ ಮಿತ್ರರನ್ನು ಆದಷ್ಟೂ ಕಾಪಾಡುವುದು, ಅತಿ ಧೈರ್ಯಮಾಡದೆ ಇರುವುದು, ದುಷ್ಟರನ್ನು ಹತ್ತಿರ ಬಿಡದೆ ಇರುವುದು, ಹಗೆಯನ್ನು ಉಪೇಕ್ಷಿಸದೆ ಇರುವುದು: ಇವು ರಾಷ್ಟ್ರದ ಕರ್ತವ್ಯ. ಒಳ್ಳೆಯ ರಾಜ್ಯದಲ್ಲಿ ಅಧಿಕಾರಿಗಳ ಸಂಖ್ಯೆ ಬಹಳವಾಗಬಾರದು.

ರಾಜ್ಞೋಯದಾ ಜನಪದೇ ಬಹವೋ ರಾಜಪೂರುಷಾಃ
ಅನಯೇನೋಪವರ್ತನ್ತೇ ತದ್ರಾಜ್ಞಃ ಕಿಲ್ಬಿಷಂ ಮಹತ್

## (iv) ಪ್ರಜಾರಕ್ಷಣೆ

ರಾಜ್ಯದ ಮುಖ್ಯ ಕಾರ್ಯ ಪ್ರಜೆಗಳ ರಕ್ಷಣೆ. ರಾಷ್ಟ್ರದಲ್ಲಿ ಧರ್ಮಮೂಲವಾದ ಶಾಸನ ಇರಬೇಕು. ಅದನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ಆಗಬೇಕು. ಇದರಲ್ಲಿ ಪಕ್ಷಪಾತ ಇರಬಾರದು. ರಾಷ್ಟ್ರ ಸುರಕ್ಷಿತವಾಗಿರುವುದಕ್ಕೆ ಇದು ಪ್ರಮಾಣ.

**ಸ್ತ್ರಿಯಶ್ಚಾಪುರುಷಾ ಮಾರ್ಗಂ ಸರ್ವಾಲಂಕಾರ ಭೂಷಿತಾಃ**
**ನಿರ್ಭಯಾ ಪ್ರತಿಪದ್ಯಂತೇ ಯದಿ ರಕ್ಷತಿ ಭೂಮಿಪಃ**

ಸರ್ವಾಲಂಕಾರ ಭೂಷಿತರಾದ ಸ್ತ್ರೀಯರು ಜೊತೆಗೆ ಗಂಡಸರಿರಬೇಕೆನ್ನದೆ ಧೈರ್ಯದಿಂದ ದಾರಿ ನಡೆಯುವ ರಾಜ್ಯ ನಿಜವಾಗಿ ಸುರಕ್ಷಿತ. ಹಾಗೆಯೆ:

ಸುಪ್ರಣೀತೇನ ದಂಡೇನ ಪ್ರಿಯಾಪ್ರಿಯ ಸಮಾತ್ಮನಾ
ಪ್ರಜಾರಕ್ಷತಿಯಃ ಸಮ್ಯಕ್ ಧರ್ಮ ಏವ ಸ ಕೇವಲಃ
ದಂಡೇನ ರಕ್ಷ್ಯಮಾಣಾಹಿ ರಾಜನ್ನಹರಹಃ ಪ್ರಜಾಃ
ರಾಜಾನಂ ವರ್ಧಯಂತೀಹ ತಸ್ಮಾದ್ದಂಡಂ ಪರಾಯಣಂ
ರಾಜಾಪೂಜ್ಯತಮೋನಾನ್ಯೋ ಯಥಾ ಧರ್ಮಃ ಪ್ರದರ್ಶಿತಃ
ಬ್ರಹ್ಮಣಾ ಲೋಕರಕ್ಷಾರ್ಥಂ ಸ್ವಧರ್ಮಸ್ಥಾಪನಾಯಚ
ಯಶ್ಚ ವೇದಃ ಸವೈ ಧರ್ಮೋ ಯಶ್ಚ ಧರ್ಮಃ ಸಸತ್ಪಥಃ
ಮಾತಾಪಿತಾಚ ಭ್ರಾತಾಚ ಭಾರ್ಯಾ ಚೈವ ಪುರೋಹಿತಃ
ನಾದಣ್ಡ್ಯೋ ವಿದ್ಯತೇ ರಾಜ್ಞೋ ಯಃ ಸ್ವಧರ್ಮೇಣ ತಿಷ್ಠತಿ.

ಪ್ರಜೆಗಳ ರಕ್ಷಣೆಗಾಗಿ ಮಾಡುವ ಹಿಂಸಾಕಾರ್ಯ ಧರ್ಮ, ಅಧರ್ಮ ವಾಗುವುದಿಲ್ಲ.

ನಕಶ್ಚಿದಸ್ತಿಪಾಪಾನಾಂ ಧರ್ಮ ಇತ್ಯೇಷ ಸಿಶ್ಚಯಃ
ತಥಾವಿಧಂ ಚಯೋಹನ್ಯಾತ್ ನಸಪಾಪೇನಲಿಪ್ಯತೇ
ಯದಿ ಘಾತಯತೇಕಶ್ಚಿತ್ ಪಾಪಸತ್ವಂ ಪ್ರಜಾಹಿತಃ
ಸರ್ವಸತ್ವಹಿತಾರ್ಥಾಯ ನತೇನಾಸೌವಿಹಿಂಸಕಃ
ದ್ವೀಪಿನಂ ಶರಭಂ ಸಿಂಹಂ ವ್ಯಾಘ್ರಂ ಕುಂಜರಮೇವಚ
ಮಹಿಷಂ ಚ ವರಾಹಂ ಚ ಸೂಕರಂ ಶ್ವಾನಪನ್ನಗಾನ್
ಗೋಬ್ರಾಹ್ಮಣಹಿತಾರ್ಥಾಯ ಬಾಲಸ್ತ್ರೀರಕ್ಷಣಾಯ ಚ
ವೃದ್ಧಾತುರಪರಿತ್ರಾಣೇ ಯೋಹಿನಸ್ತಿ ಸಧರ್ಮವಿತ್

ಇದು ಹಿಂಸೆ ಅಲ್ಲ ಎನ್ನುವುದಷ್ಟೇ ಅಲ್ಲ; ಇದರಿಂದ ಸದ್ಗತಿ ಬರುತ್ತದೆ.

ಗೋಕೃತೇ ಸ್ತ್ರೀಕೃತೇ ಚೈವ ಗುರುವಿಪ್ರಕೃತೇಪಿವಾ
ಹನ್ಯಂತೇಯೇತು ರಾಜೇಂದ್ರ ಶಕ್ರಲೋಕಂ ವ್ರಜಂತಿತೇ

ದುಷ್ಟ ಶಿಕ್ಷಣ ಇಲ್ಲದಿದ್ದರೆ ರಾಷ್ಟ್ರ ವಿಹ್ವಲವಾಗುತ್ತದೆ.

ದುರಾಚಾರಾನ್ ಯದಾರಾಜಾ ಪ್ರದುಷ್ಟಾನ್‌ನನಿಯಚ್ಛತಿ
ತಸ್ಮಾದುದ್ವಿಜತೇಲೋಕಃ ಸರ್ಪಾದ್ವೇಶ್ಮಗತಾದಿವ
ವಧ್ಯಾನಾಮಿವಸತ್ವಾನಾಂ ಮನೋಭವತಿ ವಿಹ್ವಲಂ
ಮನುಷ್ಯಾಣಾಂ ಮಹಾರಾಜ ಯದಾಪಾಪೋನವಾರ್ಯತೇ
ಯಸ್ಮಿನ್‌ಧರ್ಮೋವಿರಾಜೇತ ತಂ ರಾಜಾನಂ ಪ್ರಚಕ್ಷತೇ

ಯಸ್ಮಿನ್ವಿಲೀಯತೇ ಧರ್ಮಃ ತಂದೇವಾ ವೃಷಲಂವಿದುಃ
ಪ್ರಭವಾರ್ಥಂ ಹಿ ಭೂತಾನಾಂ ಧರ್ಮಃ ಸೃಷ್ಟಃ ಸ್ವಯಂಭುವಾ
ತಸ್ಮಾತ್‌ಪ್ರವರ್ಧಯೇದ್ಧರ್ಮಂ ಪ್ರಜಾನುಗ್ರಹಕಾರಣಾತ್

ರಾಜನು ಧರ್ಮವನ್ನು ನೋಡಿಕೊಳ್ಳದೆ ಇದ್ದರೆ ರಾಷ್ಟ್ರ ಕೆಡುತ್ತದೆ.

ತಸ್ಮಿನ್ನಂತರ್ಹಿತೇಚಾಪಿ ಪ್ರಜಾನಾಂ ಸಂಕರೋಽಭವತ್
ನೈವಕಾರ್ಯಂ ನವಾಕಾರ್ಯಂ ಭೋಜ್ಯಾಭೋಜ್ಯಂ ನ ವಿದ್ಯತೇ
ಪೇಯಾಪೇಯೇಕುತಃ ಸಿದ್ಧಿಃ ಹಿಂಸನ್ತಿಚ ಪರಸ್ಪರಂ
ಗಮ್ಯಾಗಮ್ಯಂ ಸದಾನಾಸೀತ್ ಸ್ವಂ ಪರಸ್ವಂಚ ವೈಸಮಂ
ಪರಸ್ಪರಂ ವಿಲುಂಪನ್ತಿ ಸಾರಮೇಯಾ ಯಥಾಽಽಮಿಷಂ
ಅಬಲಾನ್ ಬಲಿನೋಜಘ್ನುಃ ನಿರ್ಮರ್ಯಾದಂ ಪ್ರವರ್ತತೇ

ಅಧರ್ಮಿಗಳು ಸುಖವಾಗಿರುತ್ತ ಧರ್ಮಿಷ್ಠರು ಕಷ್ಟಕ್ಕೆ ಸಿಕ್ಕಿ ತೊಳಲುತ್ತ ಇರುವುದನ್ನು ನೋಡಿ ಜನ ಜನವೇ ದಾರಿ ತಪ್ಪುತ್ತದೆ.

ಅಧರ್ಮೇವರ್ತಮಾನಾನಾಂ ಅರ್ಥಸಿದ್ಧಿಃ ಪ್ರದೃಶ್ಯತೇ
ತದೇವಂ ಮಂಗಲಂ ಲೋಕಃ ಸರ್ವಃ ಸಮನುವರ್ತತೇ
ಉಚ್ಛಿದ್ಯತೇ ಧರ್ಮವೃತ್ತಂ ಅಧರ್ಮೋವರ್ತತೇಮಹಾನ್
ಭಯಮಾಹುರ್ದಿವಾರಾತ್ರಂ ಯದಾಪಾಪೋನವಾರ್ಯತೇ
ಇದಂ ಮಮ ಇದಂನೇತಿ ಸಾಧೂನಾಂ ತಾತಧರ್ಮತಃ
ನವೈವ್ಯವಸ್ಥಾ ಭವತಿ ಯದಾಪಾಪೋನವಾರ್ಯತೇ
ನೈವಭಾರ್ಯಾನಪಶವೋ ನಕ್ಷೇತ್ರಂ ನನಿವೇಶನಂ
ಸಂದೃಶ್ಯೇತಮನುಷ್ಯಾಣಾಂ ಯದಾಪಾಪಬಲಂ ಭವೇತ್

## (v) ಯುಕ್ತ ದಂಡ

ರಾಜ್ಯವನ್ನು ನಡಸುವವನು ತೀರ ಆರ್ಜವ ತೀರ ಮಾರ್ದವದಿಂದ ವ್ಯವಹರಿಸಲಾಗದು. ಎಲ್ಲ ಹೊತ್ತೂ ಮೃದುವಾಗಿ ಕನಿಕರ ಸಂಕೋಚ ಗಳಿಂದ ನಡೆಯುವ ರಾಜನನ್ನು ಜನ ಗೌರವಿಸುವುದಿಲ್ಲ. ಯಾರು ಯಾರನ್ನು ಹೇಗೆ ಹೇಗೆ ಕೈಯಲ್ಲಿರಿಸಿಕೊಳ್ಳಬೇಕೋ ಹಾಗೆ ಹಾಗೆ ಇರಿಸಿ ಕೊಳ್ಳಬೇಕು. ಬಲ ಸದಾ ಸಿದ್ಧವಾಗಿರಬೇಕು, ಹಗೆಗೆ ಸಾವೆನಿಸಬೇಕು. ದಸ್ಯುಗಳ ವಿಷಯದಲ್ಲಿ ಸಹನೆಬೇಡ; ಅವರು ಎಲ್ಲಿದ್ದರೂ ಅವರನ್ನು ಘಾತಿಸಬೇಕು. ಬ್ರಾಹ್ಮಕ್ಷಾತ್ರ ಎರಡೂ ಗಾಳಿಕಿಚ್ಚು ಬೆರೆತಂತೆ ಬೆರೆತು ಶತ್ರುಗಳನ್ನು ಸುಟ್ಟುಹಾಕಬೇಕು.

ರಾಜ್ಯಂ ಹಿ ಸುಮಹತ್ತತ್ರ ದುರ್ಧಾರ್ಯಮಕೃತಾತ್ಮಭಿಃ
ನ ಶಕ್ಯಂ ಮೃದುನಾವೋಢುಂ ಅಘಾತಸ್ಥಾನಮುಲ್ಬಣಂ
ರಾಜ್ಯಂ ಸರ್ವಾಮಿಷಂ ನಿತ್ಯಂ ಆರ್ಜವೇ ನೈವ ಧಾರ್ಯತೇ
ತಸ್ಮಾತ್ ಮಿಶ್ರೇಣ ಸತತಂ ವರ್ತಿತವ್ಯಂ ಯುಧಿಷ್ಠಿರ
ನ ಚ ನಿತ್ಯಾನೃಶಂಸೇನ ಶಕ್ಯಂ ರಾಜ್ಯಮುಪಾಸಿತುಂ
ಸದೈವತ್ವಾಂ ಮೃದುಪ್ರಜ್ಞಂ ಅತ್ಯಾರ್ಯಮತಿಧಾರ್ಮಿಕಂ
ಕ್ಲೀಬಂ ಧರ್ಮಘೃಣಾಯುಕ್ತಂ ನ ಲೋಕೋಬಹುಮನ್ಯತೇ
ದಾನೇನಾನ್ಯಂ ಬಲೇನಾನ್ಯಂ ಅನ್ಯಂ ಸೂನೃತಯಾಗಿರಾ
ಸರ್ವತಃ ಪ್ರತಿಗೃಹ್ಣೀಯಾತ್ ರಾಜ್ಯಂ ಪ್ರಾಪ್ಯೇಹ ಧಾರ್ಮಿಕಃ
ನಿತ್ಯಮುದ್ಯತದಂಡಶ್ಚ ಭವೇನ್ಮೃತ್ಯುರಿವಾರಿಷು
ನಿಹನ್ಯಾತ್ ಸರ್ವತೋದಸ್ಯೂನ್ ನ ರಾಜ್ಞೋದಸ್ಯುಷುಕ್ಷಮಾ
ಬ್ರಹ್ಮ ಕ್ಷತ್ರೇಣ ಸಹಿತಂ ಕ್ಷತ್ರಂ ಚ ಬ್ರಹ್ಮಣಾ ಸಹ
ಸಂಯುಕ್ತೌ ದಹತಃ ಶತ್ರೂನ್ ವನಾನೀವಾಗ್ನಿಮಾರುತೌ

## (vi) ಯೋಗ್ಯತೆಗೆ ಮಾನ

ಸಮಾಜಜೀವನದಲ್ಲಿ ಹೇಗೆ ಹಾಗೆ ರಾಷ್ಟ್ರದ ಕಾರ್ಯದಲ್ಲಿಯೂ ಹುಟ್ಟಿಗಿಂತ ಗುಣವೇ ಮುಖ್ಯ. ಪಾಪಕರ್ಮಿಯಾದ ಬ್ರಾಹ್ಮಣನಿಗಿಂತ ಧಾರ್ಮಿಕನಾದ ಮ್ಲೇಚ್ಛನು ಉತ್ತಮನು.

ಬ್ರಾಹ್ಮಣಃ ಪಾಪಕರ್ಮಾ ಚ ಮ್ಲೇಚ್ಛೋವಾಧಾರ್ಮಿಕಃ ಶುಚಿಃ
ಶ್ರೇಯಾಂಸ್ತತ್ರ ಭವೇನ್ ಮ್ಲೇಚ್ಛೋ ಬ್ರಾಹ್ಮಣಃ ಪಾಪಕೃತ್ತಮಃ
ದುಷ್ಕುಲೀನಃ ಕುಲೀನೋವಾ ಯಃ ಕಶ್ಚಿತ್ ಶೀಲವಾನ್ನರಃ
ಪ್ರಕೃತಿಂ ತಸ್ಯ ವಿಜ್ಞಾಯ ಸ್ಥಿರಾಂ ವಾಯದಿವಾಸ್ಥಿರಾಂ
ಶೀಲಂ ವಾನುತ್ತಮಂ ಕರ್ಮ ಕುರ್ಯಾದ್ರಾಜಾ ಸಮಾಹಿತಃ
ಅಸಿತಂಸಿತಕರ್ಮಾಣಂ ಯಥಾ ದಾಂತಂ ತಪಸ್ವಿನಂ
ವೃತ್ತಸ್ಥಮಪಿಚಂಡಾಲಂ ತಂದೇವಾ ಬ್ರಾಹ್ಮಣಂ ವಿದುಃ

ಆದರೂ ಸತ್ಕುಲದಲ್ಲಿ ಹುಟ್ಟಿದವನೆಂಬುದರಲ್ಲಿಯೂ ಒಂದು ಗುಣ ಇದೆ.

ಕುಲಜಃ ಪ್ರಾಕೃತೋ ರಾಜನ್ ತತ್ಕುಲೀನತಯಾ ಸದಾ
ನ ಪಾಪೇ ಕುರುತೇ ಬುದ್ಧಿಂ ನಿಂದ್ಯಮಾನೋಽಪ್ಯನಾಗಸಿ
ನಾಪರೀಕ್ಷ್ಯ ಮಹೀಪಾಲಃ ಪ್ರಕರ್ತುಂ ಭೃತ್ಯಮರ್ಹತಿ
ಅಕುಲೀನನರಾಕೀರ್ಣೋ ನರಾಜಾ ಸುಖಮೇಧತೇ

### (vii) ಕೋಶ ನೀತಿ

ಇದು ಕೋಶ ನೀತಿ. ಕೊಡುವವನಿಗೆ ಕಷ್ಟವಾಗದೆ ಕೋಶಕ್ಕೆ ಧನ ಬರುವುದಿಲ್ಲ. ಆದಕಾರಣ ರಾಜ್ಯ ಈ ವಿಷಯದಲ್ಲಿ ಬಳಸುವ ಶಕ್ತಿ ತಪ್ಪಲ್ಲ. ಆದರೆ ಹಣ ತೆಗೆಯುವ ಕ್ರಮ ಗೂಡಿನಿಂದ ಜೇನು ತೆಗೆಯುವಂತೆ ಹಸುವಿಂದ ಹಾಲು ಕರೆಯುವಂತೆ ಜಿಗುಳೆ ನೀರು ಕುಡಿಯುವಂತೆ ತಾಯಿ ಹುಲಿ ಮಗುವನ್ನು ಬಾಯಿಂದ ಹಿಡಿಯುವಂತೆ ಮೃದುವಾಗಿ ನಡೆಯಬೇಕು, ಕೊಡುವವರನ್ನು ಉಳಿಸಿರಬೇಕು.

ನಾನ್ಯಾನಪೀಡಯಿತ್ವೇಹ ಕೋಶಃ ಶಕ್ಯಃ ಕುತೋಬಲಂ
ತದರ್ಥಂ ಪೀಡಯಿತ್ವಾ ಚ ನ ದೋಷಂ ಪ್ರಾಪ್ತುಮರ್ಹತಿ
ಮಧುದೋಹಂ ದುಹೇದ್ರಾಷ್ಟ್ರಂ ಭ್ರಮರಾನ್ನ ಪ್ರಪಾತಯೇತ್
ವತ್ಸಾಪೇಕ್ಷೀ ದುಹೇಚ್ಚೈವ ಸ್ತನಾಂಶ್ಚನವಿಕುಟ್ಟಯೇತ್
ಜಲೌಕಾವತ್ಪಿಬೇದ್ರಾಷ್ಟ್ರಂ ಮೃದುನೈವ ನರಾಧಿಪಃ
ವ್ಯಾಘ್ರೀವ ಚಹರೇತ್ಪುತ್ರಾನ್ ಸಂದಶೇನ್ನ ಚ ಪೀಡಯೇತ್

## ೩೩

## ಯುದ್ಧವಿಚಾರ

### (i) ಯುದ್ಧವಿಲ್ಲದ ವಿಜಯ

ಒಂದು ರಾಷ್ಟ್ರವೆಂದಮೇಲೆ ಬೇರೊಂದು ರಾಷ್ಟ್ರದೊಂದಿಗೆ ವೈಮನಸ್ಯ ಹುಟ್ಟುವ ಸಂಭವ ಇದ್ದೇ ಇದೆ. ಸಾಧ್ಯವಾದರೆ ಯುದ್ಧ ಮಾಡದೆ ಸಮಾಧಾನವನ್ನು ಗಳಿಸಬೇಕು. ವಿಧಿಯಿಲ್ಲದಿದ್ದರೆ ಯುದ್ಧ ಮಾಡಬೇಕು. ಆಗ್ಗೆ ರಾಷ್ಟ್ರ ಹೇಗೆ ವರ್ತಿಸಬೇಕು ಎಂಬುದನ್ನು ಭಾರತ ವಿವರವಾಗಿ ವರ್ಣಿಸಿದೆ. ಕೊನೆಗೆ ಹೀಗೆಂದು ಹೇಳಿದೆ:

ಅಯುದ್ಧೇನೈವ ವಿಜಯಂ ವರ್ಧಯೇತ್ ವಸುಧಾಧಿಪಃ
ಜಘನ್ಯಮಾಹುಃ ವಿಜಯಂ ಯುದ್ಧೇನಚ ನರಾಧಿಪ

ಹಾಗೆಯೇ

ನಾಧರ್ಮೇಣ ಮಹೀಂ ಜೇತುಂ ಲಿಪ್ಸೇತ ಜಗತೀಪತಿಃ
ಅಧರ್ಮ ವಿಜಯಂ ಲಬ್ಧ್ವಾ ಕೋನುಮನ್ಯೇತಭೂಮಿಪಃ

ಯಸ್ತು ಧರ್ಮ ವಿಲೋಪೇನ ಮರ್ಯಾದಾ ಭೇದನೇನಚ
ತಾಂ ವೃತ್ತಿಂ ನಾನುವರ್ತೇತ ವಿಜಿಗೀಷುಃ ಮಹೀಪತಿಃ
ಧರ್ಮ ಲಬ್ಧಾತ್‌ಹಿ ವಿಜಯಾತ್ ಲಾಭಃ ಕೋಭ್ಯಧಿಕೋ ಭವೇತ್

ಮತ್ತು

ಸರ್ವವಿದ್ಯಾತಿರೇಕೇಣ ಜಯಂ ಇಚ್ಛೇತ್ ಮಹೀಪತಿಃ
ನಮಾಯಯಾ ನದಂಭೇನ ಯಇಚ್ಛೇತ್ ಭೂತಿಂ ಆತ್ಮನಃ

ರಾಜನು ಯುದ್ಧಮಾಡದೆ ಜಯವನ್ನು ಪಡೆಯಬೇಕು. ಯುದ್ಧಮಾಡಿ ಪಡೆಯುವ ಜಯ ಕೀಳುಜಾತಿಯದು. ಅರಸಾದವನು ಧರ್ಮವನ್ನು ಬಿಟ್ಟು ಭೂಮಿಯನ್ನು ಪಡೆಯಲು ಬಯಸಬಾರದು. ದಾರಿತಪ್ಪಿ ನೆಲವನ್ನು ಗಳಿಸುವವನನ್ನು ದೊರೆಯೆಂದು ಕರೆಯಲಾಗದು. ಧರ್ಮವನ್ನು ಲೋಪ ಮಾಡಿ ಮರ್ಯಾದೆಯನ್ನು ಮುರಿಯುವ ದಾರಿಯನ್ನು ಜಯೈಷಿಯಾದ ರಾಜನು ಅನುಸರಿಸಲಾಗದು. ಧರ್ಮದಿಂದ ಪಡೆದ ಲಾಭಕ್ಕಿಂತ ಹೆಚ್ಚು ಬೆಲೆಯ ಲಾಭ ಒಂದಿಲ್ಲ. ರಾಜನಾದವನು ಉಳಿದ ಎಲ್ಲಕ್ಕಿಂತಲೂ ಹೆಚ್ಚಾಗಿ ಜಯವನ್ನು ಗಳಿಸಬೇಕು, ಆದರೆ ತನ್ನ ಆತ್ಮದ ಹಿತವನ್ನು ಕಾದುಕೊಂಡು ಈ ಕಾರ್ಯದಲ್ಲಿ ಮೋಸಮಾಡದೆ, ದಂಭಮಾಡದೆ ಪ್ರವರ್ತಿಸಬೇಕು.

## (ii) ಒಬ್ಬ ನಾಯಕ, ಒಂದು ಮಂತ್ರ

ರಾಷ್ಟ್ರಜೀವನ ಕ್ಷೇಮದಿಂದ ನಡೆಯಬೇಕಾದರೆ ಒಬ್ಬ ನಾಯಕನಿರಬೇಕು, ಒಂದು ಮಂತ್ರ ಇರಬೇಕು.

ಒಂದು ಕಾಲದಲ್ಲಿ ಬ್ರಾಹ್ಮಣರು ವೈಶ್ಯರು ಶೂದ್ರರು ಕ್ಷತ್ರಿಯರನ್ನು ಎದುರಿಸಬೇಕಾಯಿತಂತೆ. ಇವರ ಸಂಖ್ಯೆ ಹೆಚ್ಚು: ಕ್ಷತ್ರಿಯರ ಸಂಖ್ಯೆ ಕಡಮೆ. ಆದರೂ ಒಂದೊಂದು ಸಲವೂ ಇವರು ಆ ಅಲ್ಪ ಸಂಖ್ಯೆಯ ವಿರೋಧಿಗಳಿಗೇ ಸೋತರು. ಕೊನೆಗೆ ಮೂರು ವರ್ಣಗಳ ಬ್ರಾಹ್ಮಣ ನಾಯಕರು ಪ್ರತಿಪಕ್ಷದ ಬಳಿಗೆ ಹೋಗಿ "ಅಲ್ಪಸಂಖ್ಯಾತರಾದರೂ ನೀವು ಒಂದೊಂದು ಸಲವೂ ಗೆಲ್ಲುತ್ತಿರುವಿರಲ್ಲ, ಇದು ಹೇಗೆ?" ಎಂದು ಕೇಳಿದರು. ಕ್ಷತ್ರಿಯರು,

ವಯಂ ಏಕಸ್ಯ ಶ್ರುಣುಮೋ ಮಹಾಬುದ್ಧಿಂ ಅತೋರಣೇ
ಭವಂತಸ್ತು ಪೃಥಕ್‌ಸರ್ವೇ ಸ್ವಬುದ್ಧಿವಶವರ್ತಿನಃ

"ನಾವು ನಮ್ಮೆಲ್ಲರಿಗಿಂತ ಬುದ್ಧಿವಂತನಾದ ಒಬ್ಬನನ್ನು ನಾಯಕನನ್ನಾಗಿ ಮಾಡಿಕೊಂಡು ಅವನು ಹೇಳಿದಂತೆ ಕೇಳುತ್ತೇವೆ. ತಾವುಗಳಾದರೊ ಪ್ರತಿಯೊಬ್ಬರೂ ಬುದ್ಧಿವಂತರು. ಒಬ್ಬೊಬ್ಬರೂ ಅವರವರಿಗೆ ತೋರಿದಂತೆ ನಡೆಯುತ್ತೀರಿ," ಎಂದರು.

ವ್ಯಾಧನೊಬ್ಬನು ಕಾಡಿನಲ್ಲಿ ಒಂದು ಬಲೆಯನ್ನೊಡ್ಡಿದನು. ಎರಡು ಹಕ್ಕಿ ಅದರೊಳಗೆ ಸಿಕ್ಕಿಕೊಂಡವು. ಒದಗಿದ ಕಷ್ಟವನ್ನು ತಿಳಿದುಕೊಂಡು ಪರಸ್ಪರ ಚರ್ಚಿಸಿ, ಎರಡೂ ಜೊತೆಯಾಗಿ ಹಾರಿ ಬಲೆಯೊಡನೆ ಹೊರಟು ಹೋಗಬೇಕೆಂದು ನಿಶ್ಚಯಿಸಿದುವು; ರೆಕ್ಕೆ ಬಡಿದು ಹಾರಿ ಹಾಗೆ ಮಾಡಿ ಹೊರಟುಬಿಟ್ಟವು. ಅವು ಆಕಾಶದಲ್ಲಿ ಓಡುತ್ತಿವೆ: ವ್ಯಾಧನು ಅವುಗಳ ಹಿಂದೆಯೇ ನೆಲದಮೇಲೆ ಓಡುತ್ತಿದ್ದನು. ಇದನ್ನು ನೋಡಿದ ಒಬ್ಬ, "ಅಯ್ಯಾ ಇದೇನು? ಬಲೆಯನ್ನು ಹೊತ್ತು ಓಡುತ್ತಿರುವ ಹಕ್ಕಿ ನಿನ್ನ ಕೈಗೆ ಸಿಕ್ಕಿಯಾವೆ?" ಎಂದು ಕೇಳಿದನು. ಅವನು

ಪಾಶಮೇಕಂ ಉಭೌ ಏತೌ ಸಹಿತೌ ಹರತೋ ಮಮ
ಯತ್ರ ವೈ ವಿವದಿಷ್ಯೇತೇ ತತ್ರಮೇವತಂ ಏಷ್ಯತಃ

"ಎರಡೂ ಸೇರಿ ನನ್ನ ಬಲೆಯನ್ನು ಈಗ ಏನೊ ಹೊತ್ತು ಹಾರುತ್ತಿವೆ, ನಿಜ. ಎಲ್ಲಿ ಇವುಗಳಲ್ಲಿ ವಿವಾದ ಹುಟ್ಟುತ್ತದೆ ಆಗ ಇವುಗಳ ಜೊತೆ ತಪ್ಪುತ್ತದೆ, ಈ ಹಾರಾಟ ನಿಲ್ಲುತ್ತದೆ. ಹಕ್ಕಿ ಬಲೆಯೊಡನೆ ನೆಲಕ್ಕೆ ಬರುತ್ತವೆ, ನನ್ನ ಕೈಗೆ ಸಿಕ್ಕುತ್ತವೆ," ಎಂದನು.

## ೩೪
## ರಾಷ್ಟ್ರಕ್ಷೇಮದ ಮೂಲ

ಒಟ್ಟಿನಲ್ಲಿ ವ್ಯಕ್ತಿಗೆ ಹೇಗೊ ಹಾಗೆ ಸಮಾಜಕ್ಕೆ ಹೇಗೊ ಹಾಗೆ ರಾಷ್ಟ್ರದ ಕ್ಷೇಮಕ್ಕೂ ಧರ್ಮವೇ ಮೂಲ. ರಾಜಪದವಿಗೆ ಶೀಲ ಅವಶ್ಯ ಲಕ್ಷಣ ಎಂಬಲ್ಲಿ ಇದು ಸೂಚಿತವಾಗಿದೆ. ಶ್ರೀ ಕೆಲವುಕಾಲ ರಾಕ್ಷಸ ರಲ್ಲಿದ್ದು ಅನಂತರ ಇಂದ್ರನಲ್ಲಿ ಇರುವುದಕ್ಕೆ ಬಂದಳಂತೆ. ಅವನು "ಇದೇನು? ನೀನು ಆ ಪಕ್ಷವನ್ನು ಬಿಟ್ಟು ನನ್ನಲ್ಲಿಗೆ ಬರುತ್ತಿದೀಯಲ್ಲ"

ಎಂದು ಕೇಳಿದನು. ಲಕ್ಷ್ಮೀದೇವಿ "ಅಯ್ಯ, ಅವರು ಈವರೆಗೆ ಧರ್ಮದಲ್ಲಿ ವರ್ತಿಸುತ್ತ ವೀರರಾಗಿ ಗುರುದೈವ ಪೂಜಾತತ್ಪರರಾಗಿ, ಅತಿಥಿ ಸತ್ಕಾರಮಾಡುತ್ತ, ಇಂದ್ರಿಯನಿಗ್ರಹ ಮಾಡಿ ಶಮದಮಗಳಿಂದ ವರ್ತಿಸಿ, ಸತ್ಯಸಂಧರೂ ಜಿತಕ್ರೋಧರೂ ಅಸೂಯಾರಹಿತರೂ ಆಗಿ, ನಿಸ್ಪೃಹರಾಗಿ ಪರದ್ರವ್ಯಾಪಹಾರ ಮಾಡದೆ, ಪರರ ಶ್ರೇಯಸ್ಸಿಗೆ ಅಸೂಯೆಪಡದೆ, ನ್ಯಾಯದಿಂದ ಧನವನ್ನು ಸಂಗ್ರಹಿಸಿ, ನೊಂದವರಿಗೆ ಸಹಾಯಮಾಡುತ್ತ, ಸಕಲ ಜನಕ್ಕೆ ಹಿತವಾಗಿ ಪ್ರಿಯವನ್ನು ನುಡಿಯುತ್ತ, ಅಕಾಲದಲ್ಲಿ ನಿದ್ರೆ ಆಹಾರ ವಿಹಾರಗಳನ್ನು ಆಚರಿಸದೆ, ಸ್ವಸ್ತ್ರೀಯರನ್ನು ಮಾತ್ರ ಕೂಡುತ್ತ, ಅನಾಥರನ್ನು, ವೃದ್ಧರನ್ನು, ದುರ್ಬಲರನ್ನು, ಆರ್ತರನ್ನು ಕನಿಕರದಿಂದ ನೋಡಿಕೊಳ್ಳುತ್ತ, ನಿಸರ್ಗ ವಿರೋಧವಾದ ವ್ಯಾಪಾರಗಳನ್ನು ನಡಸದೆ ನಿರಹಂಕೃತರಾಗಿ ಶುಚಿಗಳಾಗಿ, ದುರ್ವಿನಯ ಪರಧನಾಭಿಲಾಷೆ ಗಳನ್ನು ಬಿಟ್ಟಿದ್ದರು. ನಾನು ಅವರಲ್ಲಿ ಇದ್ದೆನು. ಈಗ ಅವರು ಕಾಮ ಕ್ರೋಧಗಳನ್ನು ಆಶ್ರಯಿಸಿ ಧರ್ಮವನ್ನು ಮರೆತಿದಾರೆ; ಹಿರಿಯರಿಗೆ ಮರ್ಯಾದೆ ಮಾಡುವುದಿಲ್ಲ; ಭೃತ್ಯರು ಅನ್ಯರನ್ನಾಶ್ರಯಿಸಿ ಸ್ವಾಮಿ ದ್ರೋಹ ಮಾಡುತ್ತಾರೆ. ಅಧರ್ಮದಿಂದ ಧನವನ್ನು ಸಂಪಾದಿಸುವುದು, ಹಿರಿಯರನ್ನು ಕಂಡು ನಮಸ್ಕರಿಸದಿರುವುದು, ಕಿರಿಯರು ನಮಸ್ಕಾರ ಮಾಡಿದರೆ ಆಶೀರ್ವಾದ ಮಾಡದಿರುವುದು, ಯತಿ ಬ್ರಹ್ಮಚಾರಿಗಳಿಗೆ ಭಿಕ್ಷವನ್ನು ನೀಡದೆ, ಅತಿಥಿಗಳನ್ನು ಪೂಜಿಸದೆ, ಮಕ್ಕಳಿಗೆ ಮುದುಕರಿಗೆ ಅನ್ನ ಹಾಕದೆ ಮೊದಲೇ ಊಟಮಾಡುವುದು, ಗೋವುಗಳನ್ನು ಕಟ್ಟಿ ಹುಲ್ಲು ನೀರನ್ನು ಕೊಡದಿರುವುದು, ಮಕ್ಕಳು ಮುದುಕರು ನೋಡುತ್ತಿರು ವಾಗ ಫಲಭಕ್ಷ್ಯಗಳನ್ನು ತಾವು ಒಬ್ಬೊಬ್ಬರೇ ಭಕ್ಷಿಸುವುದು, ನಿಷಿದ್ಧ ಆಹಾರವನ್ನು ಭಕ್ಷಿಸುವುದು, ಸರಿಯಾದ ಆಹಾರವನ್ನು ಅನುಚಿತ ಕಾಲ ಗಳಲ್ಲಿ ತೆಗೆದುಕೊಳ್ಳುವುದು, ಗಂಡಸರು ಹೆಂಗಸರ ವೇಷದಿಂದ, ಹೆಂಗಸರು ಗಂಡಸರ ವೇಷದಿಂದ ವಿಹರಿಸುವುದು, ಧನವಿದ್ದರೂ ಅನ್ಯಾಯದಿಂದ ಮತ್ತಷ್ಟು ಧನವನ್ನು ಶೇಖರ ಮಾಡುವುದು, ಮಿತ್ರನು ಯಾವುದನ್ನು ಬಯಸಿದರೆ ತಾವೂ ಅದನ್ನು ಬಯಸುವುದು, ತಮ್ಮ ಸ್ವಲ್ಪ ಪ್ರಯೋಜನ ಕ್ಕಾಗಿ ಇತರರ ಕೆಲಸಕ್ಕೆ ಅಡ್ಡಿಮಾಡುವುದು, ಈ ರೀತಿಯ ದುರಾಚಾರ

ಗಳಿಂದ ಕೆಟ್ಟುಹೋಗಿದ್ದಾರೆ. ಈಗ ನಾನು ಅವರಲ್ಲಿರುವುದು ಸಾಧ್ಯವಲ್ಲ," ಎಂದಳು.

ಅಹಂ ಲಕ್ಷ್ಮೀರಹಂ ಭೂತಿಃ ಶ್ರೀಶ್ಚಾಹಂ ಬಲಸೂದನ
ಅಹಂ ಶ್ರದ್ಧಾ ಚ ಮೇಧಾ ಚ ಸನ್ನತಿಃ ವಿಜಿತಿಃ ಸ್ಥಿತಿಃ
ಅಸುರೇಷ್ವಾವಸಂ ಪೂರ್ವಂ ಸತ್ಯಧರ್ಮ ನಿಬಂಧನಾತ್
ವಿಪರೀತಾಂಸ್ತುತಾನ್ ಬುದ್ಧ್ವಾ ತ್ವಯಿವಾಸಮರೋಚಯಂ
ತತಃ ಕಾಲವಿಪರ್ಯಾಸೇ ತೇಷಾಂ ಗುಣವಿಪರ್ಯಯಾತ್
ಅಪಶ್ಯಂ ನಿರ್ಗತಂ ಧರ್ಮಂ ಕಾಮಕ್ರೋಧವಶಾತ್ಮನಾಂ

ಒಂದು ರಾಷ್ಟ್ರ ಧರ್ಮವನ್ನು ಮರೆತು ಪರರಾಷ್ಟ್ರಗಳ ವಿಷಯದಲ್ಲಿ ತಪ್ಪಿ ನಡೆದರೆ, ಇಂಥ ದುರಾಚಾರ ಅದರೊಳಗೆ ತಾನೇ ಬೆಳೆಯುತ್ತದೆ. ರಾಷ್ಟ್ರದ ಒಳಗಿನ ಜನರ ಶೀಲ ಸರಿಯಾಗಿರಬೇಕೆಂದರೆ, ರಾಷ್ಟ್ರವಾದದ್ದು ಪ್ರತಿಯೊಬ್ಬ ವ್ಯಕ್ತಿಯನ್ನೂ ಅವನವನ ಸ್ಥಾನದಲ್ಲಿ ಒಳ್ಳೆಯವನನ್ನಾಗಿ ಮಾಡಬೇಕು. ತಾನು ಸತ್ಪ್ರವೃತ್ತಿಯಿಂದ ಬಾಳಬೇಕು. ಶತ್ರುಗಳು ಅನ್ಯಾಯದಿಂದ ವರ್ತಿಸಿದರೆ ಅವರ ಕೈಗೆ ಬೀಳದಂತೆ ಸುರಕ್ಷಿತರಾಗಿರುವುದಕ್ಕಾಗಿ ಅನ್ಯಾಯದ ಸ್ವರೂಪ ಏನು ಎಂದು ತಿಳಿದುಕೊಳ್ಳಬೇಕು. ಆದರೆ ಆ ತಿಳಿವಳಿಕೆಯನ್ನು ಶತ್ರುವಿನ ಕ್ರಿಯೆಗೆ ಪ್ರತಿಕ್ರಿಯೆ ಮಾಡುವ ಸಲುವಾಗಿ ಮಾತ್ರ ಬಳಸಬೇಕು.

ಉಭೇಪ್ರಜ್ಞೇ ವೇದಿತವ್ಯೇ ಋಜ್ವೀವಕ್ರಾಚಭಾರತ
ಜಾನನ್ವಕ್ರಾಂ ನ ಸೇವೇತ ಪ್ರತಿಬಾಧೇತ ಚಾಗತಾಂ

ರಾಷ್ಟ್ರಕ್ಕೆ ಕೂಡ

ಧರ್ಮಲಾಭಾತ್ ಪರಂ ನಸ್ಯಾತ್ ತಸ್ಮಾತ್ ಧರ್ಮಂ ಚರ ಉತ್ತಮಂ

ಎಂಬ ವಾಕ್ಯ ಅನ್ವಯಿಸುತ್ತದೆ.

ಧರ್ಮಲಬ್ಧಾದ್ಧಿ ವಿಜಯಾತ್ ಲಾಭಃ ಕೋಽಭ್ಯಧಿಕಃ ಭವೇತ್
ಯೋವೈಜಯತ್ಯಧರ್ಮೇಣ ಕ್ಷತ್ರಿಯೋಽಧರ್ಮಸಂಗರಃ
ಆತ್ಮಾನಮಾತ್ಮನಾಹಂತಿ ಪಾಪೋನಿಕೃತಿಜೀವನಃ
ಕರ್ಮಚೈತದಸಾಧೂನಾಂ ಸಾಧೂನ್ಯೋಽಸಾಧುನಾ ಜಯೇತ್
ಧರ್ಮೇಣ ನಿಧನಂ ಶ್ರೇಯೋ ನ ಜಯಃ ಪಾಪಕರ್ಮಣಾ
ಅಧರ್ಮಯುಕ್ತೋ ವಿಜಯೋ ಹ್ಯಧ್ರುವೋಽಸ್ವರ್ಗ್ಯ ಏವ ಚ
ಪಾತಯತ್ಯೇವ ರಾಜಾನಂ ಮಹೀಂ ಚ ಭರತರ್ಷಭ

೩೫

## ರಾಷ್ಟ್ರಸುಭಾಷಿತ

ರಾಷ್ಟ್ರಜೀವನವನ್ನು ಕುರಿತ ಕೆಲವು ನೀತಿಬೋಧಕ ಶ್ಲೋಕಗಳನ್ನು ಇಲ್ಲಿ ಸಂಗ್ರಹಿಸಬಹುದು.

ದಾತಾರಂ ಸಂವಿಭಕ್ತಾರಂ ಮಾರ್ದವೋಪಗತಂಶುಚಿಂ
ಅಸಂತ್ಯಕ್ತಮನುಷ್ಯಂಚ ತಂಜನಾಃ ಕುರ್ವತೇನೃಪಂ

ಕೊಡುವ ಮನಸ್ಸುಳ್ಳವನೂ ಸರಿಯಾಗಿ ಹಂಚುವವನೂ ಕನಿಕರವುಳ್ಳವನೂ ಶುಚಿಯೂ ಜನರನ್ನು ಕೈಬಿಡದವನೂ ಯಾರು ಅವನನ್ನು ಜನತೆ ರಾಜನನ್ನಾಗಿ ಮಾಡುತ್ತದೆ.

ವಿಕ್ರಮೇಣಮಹೀಂಲಬ್ಧ್ವಾ ಪ್ರಜಾಧರ್ಮೇಣ ಪಾಲಯೇತ್
ಆಹವೇನಿಧನಂ ಕುರ್ಯಾತ್ ರಾಜಾಧರ್ಮಪರಾಯಣಃ

ವಿಕ್ರಮದಿಂದ ಭೂಮಿಯನ್ನು ಪಡೆದು ರಾಜನಾದವನು ಧರ್ಮಪರಾಯಣನಾಗಿ ಪ್ರಜೆಗಳನ್ನು ನ್ಯಾಯರೀತಿಯಿಂದ ರಕ್ಷಿಸತಕ್ಕದ್ದು, ಯುದ್ಧದಲ್ಲಿ ಹಗೆಯನ್ನು ಕೊಲ್ಲತಕ್ಕದ್ದು.

ಸ್ವಿಷ್ಟೈಃ ಸ್ವಧೀತಿಃ ಸುತಪಾಃ ಲೋಕಾನ್‌ಜಯತಿಯಾವತಃ
ಕ್ಷಣೇನತಾನವಾಪ್ನೋತಿ ಪ್ರಜಾಧರ್ಮೇಣ ಪಾಲಯನ್

ಯಜ್ಞ ಅಧ್ಯಯನ ತಪಸ್ಸು ಶ್ರೇಷ್ಠತರವಾದಾಗ ಯಾವ ಉತ್ತಮ ಲೋಕಗಳನ್ನು ಸಾಧಿಸುತ್ತವೆ ಅವನ್ನು ಪ್ರಜೆಗಳನ್ನು ಧರ್ಮರೀತಿಯಲ್ಲಿ ರಕ್ಷಿಸುವುದರಿಂದ ಒಂದು ಕ್ಷಣದಲ್ಲಿ ಪಡೆಯಬಹುದು.

ಅಪಾರೇಯೋಭವೇತ್ ಪಾರಂ ಅಪ್ಲವೇಯಃ ಪ್ಲವೋಭವೇತ್
ಶೂದ್ರೋವಾ ಯದಿವಾಪ್ಯನ್ಯಃ ಸರ್ವಥಾಮಾನಮರ್ಹತಿ

ಕಷ್ಟದಲ್ಲಿ ದಿಕ್ಕಾದವನು ಶೂದ್ರನಾಗಲಿ ಬೇರೆಯಾರೇ ಆಗಲಿ ತೀರಾ ಗೌರವಾರ್ಹನೇ ಸರಿ.

ಮಹದ್ಧ್ಯಭೀಷ್ಟಂ ಕೌರವ್ಯ ಕರ್ತಾಸನ್ಮಾನಮರ್ಹತಿ

ನಮಗೆ ಬಹು ಇಷ್ಟವಾದ್ದನ್ನು ಮಾಡುವಂತವನನ್ನು ಗೌರವಿಸುವುದು ತಕ್ಕದ್ದು.

ಕಿಮನಡುಹಾಯೋನವಹೇತ್ ಕಿಂಧೇನ್ವಾವಾಪ್ಯದುಗ್ಧಯಾ
ವಂಧ್ಯಯಾಭಾರ್ಯಯಾ ಕೋಽರ್ಥಃ ಕೋಽರ್ಥೋರಾಜ್ಞಾಪ್ಯರಕ್ಷಿತಾ
ಯಥಾದಾರುಮಯೋಹಸ್ತೀ ಯಥಾ ಚರ್ಮಮಯೋಮೃಗಃ
ಯಥಾಹ್ಯದಕ್ಷಃ ಪುರುಷಃ ಪಥಿಕ್ಷೇತ್ರಂಯಥೋಷರಂ
ಯಥಾವಿಪ್ರೋಽನಧೀಯಾನೋ ರಾಜಾಯಶ್ಚ ನರಕ್ಷಿತಾ
ಮೇಘೋನವರ್ಷತೀಯಶ್ಚ ಸರ್ವಏವ ನಿರರ್ಥಕಾಃ

ಹೊರೆಯನ್ನು ಹೊರದ ಹೇರುದನದಿಂದ ಕರೆಯದ ಹಸುವಿಂದ ಬಂಜೆಯಾದ ಹೆಂಡಿರಿಂದ ರಕ್ಷಿಸದ ರಾಜನಿಂದ ಬಂದ ಫಲವೇನು? ಮರದ ಆನೆಯಂತೆ ಹುಲ್ಲು ತುಂಬಿಟ್ಟ ಚರ್ಮ ಮೃಗದಂತೆ ಕೆಲಸ ತಿಳಿಯದ ಸೇವಕನಂತೆ ಮರಳ ಭೂಮಿಯಂತೆ ಓದಿಲ್ಲದ ವಿಪ್ರನಂತೆ ರಕ್ಷಕನಲ್ಲದ ದೊರೆ ನಿರರ್ಥಕನು. ಇವರೆಲ್ಲ ಮಳೆ ಕೊಡದ ಮೋಡಕ್ಕೆ ಸಮ.

ವಿಶಾಲಾನ್ ರಾಜಮಾರ್ಗಾನ್ಶ್ಚ ಕಾರಯೇತನರಾಧಿಪಃ
ಪ್ರಪಾಶ್ಚವಿಪಣೀಶ್ಚೈವ ಯಥೋದ್ದೇಶಂಸಮಾದಿಶೇತ್

ರಾಜನು ವಿಶಾಲವಾದ ರಾಜಮಾರ್ಗಗಳನ್ನು ಮಾಡಿಸಬೇಕು. ಅರವಟಿಗೆ ಅಂಗಡಿಕಟ್ಟಗಳನ್ನು ಅಲ್ಲಲ್ಲಿ ಏರ್ಪಡಿಸಬೇಕು.

ದೇವತೇವಹಿಸರ್ವಾರ್ಥಾನ್ ಕುರ್ಯಾದ್ರಾಜಾಪ್ರಸಾದಿತಃ
ವೈಶ್ವಾನರ ಇವಕ್ರುದ್ಧಃ ಸಮೂಲಮಪಿನಿರ್ದಹೇತ್

ಯಾರೊಬ್ಬರು ತನ್ನ ಮನಸ್ಸನ್ನು ಒಪ್ಪಿಸಿದರಾದರೆ ರಾಜನಾದವನು ದೇವತೆಯಂತೆ ಅವರ ಸರ್ವಾರ್ಥಗಳನ್ನೂ ಅನುಗ್ರಹಿಸತಕ್ಕದ್ದು; ಕೋಪಗೊಂಡನಾದರೆ ಬುಡಮಟ್ಟ ಸುಟ್ಟುಬಿಡತಕ್ಕದ್ದು.

ನೈತಾನ್ಯೇಕೇನ ಶಕ್ಯಾನಿ ಸಾತತ್ಯೇನಾನುವೀಕ್ಷಿತುಂ
ಏತೇಷ್ವಾಪ್ತಾನ್ಪ್ರತಿಷ್ಠಾಪ್ಯ ರಾಜಾಭುಂಕ್ತೇಚಿರಂಮಹೀಂ
ರಕ್ಷಾಧಿಕರಣಂ ಯುದ್ಧಂ ತಥಾ ಧರ್ಮಾನುಶಾಸನಂ
ಮನ್ತ್ರಚಿನ್ತಾಸುಖಂ ಕಾಲೇ ಪಂಚಭಿರ್ವರ್ಧತೇಮಹೀ

ರಕ್ಷಣ ಯುದ್ಧ, ಧರ್ಮಯುಕ್ತವಾದ ಶಾಸನ, ಮನ್ತ್ರಾಲೋಚನೆ, ಸಕಾಲದಲ್ಲಿ ಸುಖವಾಗಿರೋಣ, ಇದರಿಂದ ರಾಷ್ಟ್ರವೃದ್ಧಿಯಾಗುತ್ತದೆ. ಇದಿಷ್ಟನ್ನೂ ಸತತವಾಗಿ ನೋಡಿಕೊಳ್ಳುವುದು ಒಬ್ಬನಿಗೆ ಅಸಾಧ್ಯ. ಒಂದೊಂದಕ್ಕೆ ಬೇರೆ ಬೇರೆ ಆಪ್ತರನ್ನು ನಿಯಮಿಸಿದ ರಾಜನು ಚಿರಕಾಲ ರಾಜ ಪದವಿಯನ್ನು ಅನುಭವಿಸುತ್ತಾನೆ.

ಮುಖ್ಯಾನ್ ಅಮಾತ್ಯಾನ್ ಯೋಹಿತ್ವಾ ನಿಹೀನಾನ್ ಕುರುತೇಪ್ರಿಯಾನ್
ಸವೈವ್ಯಸನಮಾಸಾದ್ಯ ಸಾಧುಮಾರ್ಗಂನವಿಂದತಿ

ಮುಖ್ಯರಾದ ಮಂತ್ರಿಗಳನ್ನು ಅಲಕ್ಷಿಸಿ ಅತಿಹೀನರಾದವರನ್ನು ಪ್ರಿಯರಾಗಿ ಮಾಡಿಕೊಂಡ ದೊರೆ ವ್ಯಸನವನ್ನು ಮುಟ್ಟುತ್ತಾನೆ; ಸಾಧುಮಾರ್ಗವನ್ನು ಕಾಣುವುದಿಲ್ಲ.

ಯಸ್ಯನಾಸ್ತಿ ಗುರುರ್ಧರ್ಮೇ ನ ಚಾನ್ಯಾನಪಿ ಪೃಚ್ಛತಿ
ಸುಖತನ್ತ್ರೋಽರ್ಥಲಾಭೇಷು ನ ಚಿರಂ ಸುಖಮಶ್ನುತೇ

ಯಾರಿಗೆ ಧರ್ಮ ಹೇಳಲು ಹಿರಿಯನಿಲ್ಲ, ಯಾರು ಬೇರೆಯವರನ್ನು ಕೇಳುವುದೂ ಇಲ್ಲ, ಇಂಥವನು ಅರ್ಥ ದೊರೆತ ವೇಳೆ ಇಷ್ಟಬಂದಂತೆ ನಡೆಯುತ್ತಾನೆ, ಅದನ್ನು ಬಹುಕಾಲ ಅನುಭವಿಸುವುದಿಲ್ಲ.

ಯಸ್ಯಸ್ಫೀತೋ ಜನಪದಃ ಸಂಪನ್ನ ಪ್ರಿಯರಾಜಕಃ
ಸಂತುಷ್ಟಃ ಪುಷ್ಟಸಚಿವೋ ದೃಢಮೂಲಃ ಸಪಾರ್ಥಿವಃ
ಯಸ್ಯಯೋಧಾಃ ಸುಸಂತುಷ್ಟಾಃ ಸ್ವನುರಕ್ತಾಃ ಸುಪೂಜಿತಾಃ
ಅಲ್ಪೇನಾಪಿ ಸ ದಂಡೇನ ಮಹೀಂ ಜಯತಿ ಪಾರ್ಥಿವಃ
ಅನುರಕ್ತೇನ ಪುಷ್ಟೇನ ಹೃಷ್ಟೇನ ಜಗತೀಪತಿಃ
ಅಲ್ಪೇನಾಪಿ ಸ್ವಸೈನ್ಯೇನ ಭೂಮಿಂ ಜಯತಿ ಭೂಮಿಪಃ

ಯಾರ ಜನಪದ ಸಂಪದ್ಯುಕ್ತವಾಗಿ ಅರಸನನ್ನು ಪ್ರೀತಿಸುತ್ತಾ ತುಂಬಿಬಾಳಿದೆ ಅಂಥ ರಾಜನು ಸಂತುಷ್ಟವಾಗಿ ಪುಷ್ಟಸಚಿವನಾಗಿ ಭದ್ರವಾಗಿ ಬಾಳುತ್ತಾನೆ. ಯಾರ ಸೈನಿಕರು ಪೂರ್ಣ ತೃಪ್ತರಾಗಿದಾರೆ ಸಂಪೂರ್ಣವಾಗಿ ರಾಜನಲ್ಲಿ ಭಕ್ತಿಯುಳ್ಳವರಾಗಿದ್ದಾರೆ ಅವನಿಂದ ಆದರ ಪಡೆಯುತ್ತಾರೆ, ಅಂಥ ರಾಜನು ಸ್ವಲ್ಪವೇ ಸೇನೆಯಿಂದ ರಾಜ್ಯವನ್ನು ಗೆಲ್ಲುತ್ತಾನೆ; ತನ್ನನ್ನು ಕುರಿತು ಭಕ್ತಿಯುಳ್ಳದೂ ಹೃಷ್ಟವೂ ಪುಷ್ಟವೂ ಆದ ಸೈನ್ಯದಿಂದ ಅದು ಸ್ವಲ್ಪವೇ ಆದರೂ ಭೂಮಿಯನ್ನು ಗೆಲ್ಲುತ್ತಾನೆ.

ಯಸ್ಯಮಂತ್ರಂ ನಜಾನನ್ತಿ ಬಾಹ್ಯಾಶ್ಚಾಭ್ಯನ್ತರಾಶ್ಚಯೇ
ಸರಾಜಾ ಸರ್ವತಶ್ಚಕ್ಷುಃ ಚಿರಮೈಶ್ವರ್ಯಮಶ್ನುತೇ
ಕರಿಷ್ಯನ್ನ ಪ್ರಭಾಷೇತ ಕೃತಾನ್ಯೇವತು ದರ್ಶಯೇತ್
ಧರ್ಮಕಾಮಾರ್ಥ ಕಾರ್ಯಾಣಿ ತಥಾ ಮಂತ್ರೋನ ಭಿದ್ಯತೇ
ಕರ್ಮಣಾಂತು ಪ್ರಶಸ್ತಾನಾಂ ಅನುಷ್ಠಾನಂ ಸುಖಾವಹಂ
ತೇಷಾಮೇವಾನನುಷ್ಠಾನಂ ಪಶ್ಚಾತ್ತಾಪಕರಂಮತಂ

ಒಳಗಿನ ಜನವಾಗಲಿ ಹೊರಗಿನ ಜನರಾಗಲಿ ತನ್ನ ಮಂತ್ರಾಲೋಚನೆಯನ್ನು ಕಂಡುಹಿಡಿಯದಂತೆ ಎಚ್ಚರವಾಗಿರುವ ರಾಜನು ಬಹುಕಾಲ ರಾಜನಾಗಿರುತ್ತಾನೆ. ಮಾಡುವ ಕೆಲಸವನ್ನು ಹೇಳುವುದು ಬೇಡ; ಮಾಡಿದ ಮೇಲೆ ಕಾಣಲಿ. ಹೀಗಿದ್ದರೆ ಮಂತ್ರಾಲೋಚನೆಯು ಗುಟ್ಟು ಉಳಿಯುತ್ತದೆ. ಒಳ್ಳೆಯದನ್ನು ಮಾಡುವುದು ಸುಖಕ್ಕೆ ಕಾರಣ; ಮಾಡದಿರುವುದು ಪಶ್ಚಾತ್ತಾಪಕ್ಕೆ ಕಾರಣವಾಗುತ್ತದೆ.

ಉತ್ಥಾನಹೀನೋ ರಾಜಾಹಿ ಬುದ್ಧಿಮಾನಪಿ ನಿತ್ಯಶಃ
ಪ್ರಧರ್ಷಣೀಯಃ ಶತ್ರೂಣಾಂ ಭುಜಂಗ ಇವನಿರ್ವಿಷಃ

ಎಷ್ಟೇ ಬುದ್ಧಿವಂತನಾದರೂ ಉದ್ಯಮವಿಲ್ಲದ ರಾಜನು ಕೋರೆ ಹಲ್ಲಿಲ್ಲದ ಹಾವಿನಂತೆ ಶತ್ರುಗಳಿಗೆ ಪ್ರಧರ್ಷಣೀಯನಾಗುತ್ತಾನೆ.

ವಿಶ್ವಾಸಂಚಾತ್ರಗಚ್ಛಂತಿ ಸರ್ವಭೂತಾನಿ ಭಾರತ
ವಿಶ್ವಸ್ತಂ ಶಕ್ಯತೇ ಭೋಕ್ತುಂ ಯಥಾಕಾಲಂ ಸಮುತ್ಥಿತಃ
ತಸ್ಮಾದ್ವಿಶ್ವಾಸಯೇದ್ರಾಜಾ ಸರ್ವಭೂತಾನ್ಯಮಾಯಯಾ
ಸರ್ವತಃ ಪರಿರಕ್ಷೇಚ್ಚ ಯೋ ಮಹೀಂ ಭೋಕ್ತುಮಿಚ್ಛತಿ

ಉದ್ಯಮವುಳ್ಳ ರಾಜನನ್ನು ಎಲ್ಲರೂ ನಂಬುತ್ತಾರೆ. ಅವರನ್ನು ಆಳುವುದು ಅವನಿಗೆ ಸುಲಭವಾಗುತ್ತದೆ. ಆದಕಾರಣ ರಾಜನಾದವನು ನಿರ್ವಂಚನೆಯಿಂದ ಎಲ್ಲರಿಗೆ ಧೈರ್ಯ ಹುಟ್ಟುವಂತೆ ನಡೆಯಬೇಕು. ರಾಷ್ಟ್ರ ಉಳಿಯಬೇಕೆಂದವನು ಎಲ್ಲ ಕಡೆಯೂ ರಕ್ಷಣೆಯನ್ನು ಒದಗಿಸಬೇಕು.

ತಕ್ಷೇದಾತ್ಮಾನಮೇವಂ ಸಃ ವನಂ ಪರಶುನಾಯಥಾ
ಯಃ ಸಮ್ಯಗ್ವರ್ತಮಾನೇಷು ಸ್ವೇಷು ಮಿಥ್ಯಾ ಪ್ರವರ್ತತೇ

ಸರಿಯಾಗಿ ನಡೆಯುತ್ತಿರುವ ತನ್ನದೆ ಬಳಗದಲ್ಲಿ ಅನ್ಯಾಯವಾಗಿ ನಡೆದುಕೊಳ್ಳುವವನು ಕೊಡಲಿಯಿಂದ ಕಾಡನ್ನು ಕಡಿಯುವಂತೆ ತನ್ನನ್ನು ತಾನೆ ಕಡಿದುಕೊಳ್ಳುತ್ತಿದಾನೆ.

ಭೇದಂಚ ಪ್ರಥಮಂ ವಿದ್ಯಾತ್ ತೂಷ್ಣೀಂ ದಂಡಂ ತಥೈವಚ
ಕಾಲೇ ಪ್ರಯೋಜಯೇದ್ರಾಜಾ ತಸ್ಮಾಂಸ್ತಸ್ಮಿನ್ನದಾತದಾ
ಪ್ರಣಿಪಾತಂಚ ಗಚ್ಛೇತ ಕಾಲೇ ಶತ್ರೋಃ ಬಲೀಯಸಃ
ಯುಕ್ತೋಸ್ಯ ವಧಮನ್ವಿಚ್ಛೇತ್ ಅಪ್ರಮತ್ತಃ ಪ್ರಮಾದ್ಯತಃ

ಭೇದವನ್ನು ಮೊದಲು ತಿಳಿಯಬೇಕು. ಬಾಯಿ ತೆರೆಯದೆ ಹಗೆಯನ್ನು ಬಡಿಯಬೇಕು. ಆಯಾ ವೇಳೆ ಅಲ್ಲಲ್ಲಿ ತಕ್ಕ ರೀತಿಯಲ್ಲಿ ನಡೆಯಬೇಕು. ಬಲಿಷ್ಠನಾದ ಹಗೆಗೆ ಅವಶ್ಯಕವಾದ ವೇಳೆ ಅಡ್ಡಬಿದ್ದರೂ ತಪ್ಪಲ್ಲ; ಆಮೇಲೆ ಅವನು ಅಜಾಗ್ರತೆಯಾಗಿರುವಾಗ ತಾನು ಜಾಗ್ರತೆ ತಪ್ಪದಂತೆ ಅವನ ನಾಶವನ್ನು ಸಾಧಿಸಬೇಕು.

ಸ್ಥಾನಾನಿಶಂಕಿತಾನಾಂಚ ನಿತ್ಯಮೇವವಿವರ್ಜಯೇತ್

ಸಂದೇಹ ಸ್ಥಳದಲ್ಲಿ ಎಂದೂ ಸುಳಿಯುವುದು ಬೇಡ.

ನಚಾಪ್ಯಲಭ್ಯಂ ಲಿಪ್ಸೇತ ಮೂಲೇನಾತಿದೃಢೇ ಸತಿ
ನಹಿ ದುರ್ಬಲ ಮೂಲಸ್ಯ ರಾಜ್ಞೋ ಲಾಭೋ ವಿವರ್ಧತೇ

ತನ್ನ ಬುಡ ಭದ್ರವಿಲ್ಲದಿರುವಾಗ ಅತಿಯಾಗಿ ಆಸೆಪಡುವುದು ಬೇಡ. ದುರ್ಬಲ ಮೂಲನಾದ ರಾಜನಿಗೆ ಸಂಪತ್ತು ಸೇರಿಬರುವುದಿಲ್ಲ.

ಕುಲೇಷು ಕಲಹಾಜಾತಾಃ ಕುಲವೃದ್ಧೈರುಪೇಕ್ಷಿತಾಃ
ಗೋತ್ರಸ್ಯನಾಶಂ ಕುರ್ವಂತಿ ಗಣಭೇದಸ್ಯಕಾರಕಂ
ಆಭ್ಯಂತರಂಭಯಂ ರಕ್ಷ್ಯಂ ಅಸಾರಂ ಬಾಹ್ಯತೋ ಭಯಂ
ಆಭ್ಯಂತರಂಭಯಂ ರಾಜನ್ ಸದ್ಯೋಮೂಲಾನಿಕೃಂತತಿ

ಅಂತಃಕಲಹಗಳು ಹುಟ್ಟಿ ಹಿರಿಯರು ಅವನ್ನು ಸಮಾಧಾನಪಡಿಸದೆ ಬಿಟ್ಟರೆ ಅವು ಜನತೆಯನ್ನು ಒಡೆಯುತ್ತವೆ, ಅದರ ನಾಶವನ್ನುಂಟುಮಾಡುತ್ತವೆ. ಹೊರಗಿನಿಂದ ಬರುವ ಭಯ ಕಡಮೆಯದು; ಒಳಗಿನ ಭಯವೇ ಕೆಟ್ಟದು. ಒಳಗಿನ ಹಗೆ ಒಡನೆಯೇ ಬೇರನ್ನು ಕುಯ್ಯುತ್ತದೆ.

ಕೇವಾಽನುರಕ್ತಾ ರಾಜಾನಃ ಕೇಭಯಾತ್ಸಮುಪಾಶ್ರಿತಾಃ
ಮಧ್ಯಸ್ಥದೋಷಾ ಕೇ ಚೈಷಾಂ ಇತಿನಿತ್ಯಂ ವಿಚಿಂತಯೇತ್
ನಜಾತು ಬಲವಾನ್ ಭೂತ್ವಾ ದುರ್ಬಲೇ ವಿಶ್ವಸೇತ್ಕ್ವಚಿತ್
ಭಾರುಣ್ಡ ಸದೃಶಾಹ್ಯೇತೇ ನಿಪತಂತಿ ಪ್ರಮಾದ್ಯತಃ

ಜೊತೆಯ ಅರಸರಲ್ಲಿ ಯಾರು ಅನುರಾಗಿಗಳು, ಯಾರು ಭಯದಿಂದ ನಮ್ಮನ್ನು ಆಶ್ರಯಿಸಿದಾರೆ, ಯಾರು ಹೀಗೂ ಅಲ್ಲ ಹಾಗೂ ಅಲ್ಲ, ಇದನ್ನು ರಾಜನು ಸದಾ ಯೋಚಿಸುತ್ತಿರಬೇಕು. ಬಲಿಷ್ಠನಾದೆನೆಂದು ದುರ್ಬಲನ ವಿಷಯದಲ್ಲಿ ಅಲಕ್ಷ್ಯದಿಂದಿರಬಾರದು. ನೀನು ಅಜಾಗ್ರತೆಯಾಗಿರುವ ವೇಳೆ ಅವರು ಗಿಡಗನಂತೆ ಎರಗುವರು.

ಕೃತವೈರೇ ನ ವಿಶ್ವಾಸಃ ಕಾರ್ಯಸ್ತ್ವಿಹ ಸುಹೃದ್ಯಪಿ
ಪ್ರಚ್ಛನ್ನಂ ತಿಷ್ಠತೇ ವೈರಂ ಗೂಢೋಽಗ್ನಿರಿವದಾರುಷು
ನ ವಿತ್ತೇನ ನ ಪಾರುಷ್ಯೈಃ ನ ಚ ಸಾಂತ್ವೇ ನ ಚ ಶ್ರುತೈಃ
ವೈರಾಗ್ನಿಃ ಶಾಮ್ಯತೇ ರಾಜನ್ ಸಮುಗ್ನೋಗ್ನಿರಿವಾರ್ಣವೇ

ಎಂತಹ ಸ್ನೇಹಿತನಾಗಿದ್ದವರಲ್ಲಿ ಕೂಡ ಒಮ್ಮೆ ವೈರ ಮಾಡಿದಮೇಲೆ ಮತ್ತೆ ನಂಬಿಕೆ ಒಳಿತಲ್ಲ. ಸುಟ್ಟ ಕಟ್ಟಿಗೆಯಲ್ಲಿ ಕೆಂಡವಿರುವಂತೆ ಇಂಥಲ್ಲಿ ವೈರ ಮರೆಯಾದರೂ ಇದ್ದೇ ಇರುತ್ತದೆ. ಹಣ ಕೊಟ್ಟರಲ್ಲ, ಕಾಠಿನ್ಯದಿಂದಲ್ಲ, ಮೆಲುನುಡಿಯಿಂದಲ್ಲ, ನೀತಿ ಹೇಳಿದರಲ್ಲ, ಎಂತೂ ವೈರಾಗ್ನಿ ತಣ್ಣಗಾಗುವುದಿಲ್ಲ. ಸಾಗರದಲ್ಲಿ ಮುಳುಗಿಯೂ ಜೀವಂತವಾಗಿರುವ ಬಡಬಾಗ್ನಿಯಂತೆ ಅದು.

ಅಪಕೃತ್ಯ ಬಲಸ್ಥಸ್ಯ ದೂರಸ್ಥೋಽಸ್ಮೀತಿನಾಶ್ವಸೇತ್
ಶ್ಯೇನಾಭಿಪತನೈರೇತೇ ನಿಪತಂತಿ ಪ್ರಮಾದ್ಯತಃ

ಬಲಿಷ್ಠನಿಗೆ ಕೆಡಕುಮಾಡಿದವನು ಅವನಿಂದ ದೂರ ಹೋಗಿ ಇನ್ನು ಭಯವಿಲ್ಲ ಎನ್ನಬಾರದು. ಇವನು ಅಜಾಗ್ರತೆಯಾಗಿರುವಾಗ ಅವನು ಗಿಡಗನಂತೆ ಮೇಲೆ ಎರಗುತ್ತಾನೆ.

ಅಪಕೃತ್ಯ ಬುದ್ಧಿಮತಃ ದೂರಸ್ಥೋಽಸ್ಮೀತಿನಾಶ್ವಸೇತ್
ದೀರ್ಘೌ ಬುದ್ಧಿಮತೋಬಾಹೂ ಯಾಭ್ಯಾಂ ಹಿಂಸತಿ ಹಿಂಸಿತಃ

ಬುದ್ಧಿವಂತರ ತೋಳು ಉದ್ದ ಹೆಚ್ಚು. ನೀನು ಕೆಡಕುಮಾಡಿದರೆ ಅವರು ಅದರಿಂದ ನಿನಗೆ ಪ್ರತೀಕಾರ ಮಾಡಬಲ್ಲರು.

ನ ವಿಶ್ವಸೇತ್ ಅವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್
ವಿಶ್ವಾಸಾತ್ ಭಯಮುತ್ಪನ್ನಂ ಮೂಲಾನ್ಯಪಿನಿಕೃಂತತಿ

ನಂಬಬಾರದವರನ್ನು ನಂಬಲೇ ಬೇಡ. ನಂಬಬಹುದಾದವರನ್ನು ಅತಿಯಾಗಿ ನಂಬಬೇಡ. ನಂಬಿದಕಡೆ ಕೇಡು ಮಾಡಿದರೆ ಬೇರನ್ನೂ ಕುಯ್ದು ಹಾಕುತ್ತದೆ.

ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ
ಅಲ್ಪೋಽಪಿ ಹಿ ದಹತ್ಯಗ್ನಿಃ ವಿಷಮಲ್ಪಂ ಹಿನಸ್ತಿ ಚ

ತಾನು ಬಲಿಷ್ಠನಾದರೂ ಹಗೆ ದುರ್ಬಲನಾದರೂ ಅವನನ್ನು ದುರ್ಲಕ್ಷಿಸಬಾರದು. ಕೊಂಚವೇ ಆದರೂ ಅಗ್ನಿ ಅಗ್ನಿಯೆ; ಅದು ಸುಡುತ್ತದೆ. ವಿಷ ವಿಷವೆ; ಕೊಲ್ಲುತ್ತದೆ.

**ದುರ್ಬಲೋಽಪಿ ಮಹೀಪಾಲಃ ಶತ್ರೂಣಾಂ ಶತ್ರುಮುದ್ಧರೇತ್**
**ಪಾದಲಗ್ನಂ ಕರಸ್ಥೇನ ಕಂಟಕೇನೈವಕಂಟಕಂ**

ನಿನಗೆ ಅನುಕೂಲವಿಲ್ಲದಿದ್ದರೂ ನಿನ್ನ ಹಗೆಗಳ ಹಗೆಗೆ ಸಹಾಯಮಾಡು; ಕಾಲಿಗೆ ಚುಚ್ಚಿದ ಮುಳ್ಳನ್ನು ಕೈ ತೆಗೆಯಬೇಕು.

ಅಶ್ಮನಾ ನಾಶಯೇಲ್ಲೋಹಂ ಲೋಹೇನಾಶ್ಮಾನಮೇವತು
ಬಿಲ್ವಾನಿವಾಪರೈರ್ಬಿಲ್ವೈಃ ಮ್ಲೇಚ್ಛೈರ್ಮ್ಲೇಚ್ಛಾನ್ಪ್ರಸಾದಯೇತ್

ಕಲ್ಲಿಂದ ಲೋಹವನ್ನು ಬಡಿಯಬೇಕು. ಲೋಹದಿಂದ ಕಲ್ಲನ್ನು ಸೀಳ ಬೇಕು. ಗಟ್ಟಿಯಾದ ಒಂದು ಹಣ್ಣನ್ನು ಗಟ್ಟಿಯಾದ ಇನ್ನೊಂದರಿಂದ ಹೊಡೆದು ಎರಡನ್ನೂ ಹೋಳುಮಾಡಬೇಕು. ಮ್ಲೇಚ್ಛನನ್ನು ಬಿಟ್ಟು ಮ್ಲೇಚ್ಛನನ್ನು ಒಳ್ಳೆಯವನನ್ನು ಮಾಡಿಕೊಳ್ಳಬೇಕು.

ಅಧರ್ಮಃ ಕ್ಷತ್ರಿಯಸ್ಯೈಷ ಯತ್ಸಯ್ಯಾಮರಣಂ ಭವೇತ್
ವಿಸೃಜನ್ಶ್ಲೇಷ್ಮಪಿತ್ತಾನಿ ಕೃಪಣಂ ಪರಿದೇವಯನ್
ಅವಿಕ್ಷತೇನ ದೇಹೇನ ಪ್ರಲಯಂ ಯೋಽಧಿಗಚ್ಛತಿ
ಕ್ಷತ್ರಿಯೋನಾಸ್ಯತತ್ಕರ್ಮ ಪ್ರಶಂಸಂತಿ ಪುರಾವಿದಃ
ನಗೃಹೇಮರಣಂ ತಾತ ಕ್ಷತ್ರಿಯಾಣಾಂ ಪ್ರಶಸ್ಯತೇ

ಕ್ಷತ್ರಿಯನಾದವನು ಹಾಸಿಗೆಯಲ್ಲಿರುತ್ತ ಸಾಯುವುದೆನ್ನುವುದು ಅವನ ಧರ್ಮಕ್ಕೆ ಅನುಗುಣ ಅಲ್ಲ. ಕೆಮ್ಮುತ್ತ ವಾಂತಿಮಾಡುತ್ತ ಅಯ್ಯೋ ಎಂದು ಅಳುತ್ತ ಗಾಯವಿಲ್ಲದ ಮೈಯನ್ನು ಸಾವಿಗೆ ಕೊಂಡೊಯ್ಯುವ ಕ್ಷತ್ರಿಯನು ಯಾರು ಅವನ ಆ ನಡತೆಯನ್ನು ಹಿರಿಯರು ಮೆಚ್ಚುವುದಿಲ್ಲ. ಮನೆಯಲ್ಲಿದ್ದುಕೊಂಡು ಸಾಯುವುದು ಕ್ಷತ್ರಿಯನಲ್ಲಿ ಯೋಗ್ಯವಲ್ಲ.

**ತ್ಯಾಗಮೂಲಂ ಹಿ ಶೂರಾಣಾಂ ಸ್ವರ್ಗದ್ವಾರಮನುತ್ತಮಂ**
**ತಸ್ಮಾತ್ತ್ಯಕ್ತಾತ್ಮನಾ ನಿತ್ಯಂ ಸ್ಥಾತವ್ಯಂ ರಣಮೂರ್ಧನಿ**

ಶೂರರಾದವರಿಗೆ ಅತ್ಯುನ್ನತವಾದ ಸ್ವರ್ಗದ ಬಾಗಿಲು ಲಭಿಸುವುದು ತ್ಯಾಗ ದಿಂದ. ಆದ್ದರಿಂದ ಶೂರನು ಸದಾ ತನ್ನ ಆಸೆಯನ್ನು ಬಿಟ್ಟು ಕದನದ ಮುಂಭಾಗದಲ್ಲಿ ಇರಬೇಕು.

**ಹತೋವಾ ದಿವಮಾರೋಹೇತ್ ಹತ್ವಾವಾ ಸುಖಮಾವಹೇತ್**
**ಯುದ್ಧೇ ಹಿ ಸಂತ್ಯಜನ್ ಪ್ರಾಣಾನ್ ಶಕ್ರಸ್ಯೈತಿ ಸಲೋಕತಾಂ**

ಸತ್ತು ಸ್ವರ್ಗವನ್ನು ಸೇರಬೇಕು. ಇಲ್ಲ ಕೊಂದು ಸುಖಿಯಾಗಬೇಕು. ಯುದ್ಧದಲ್ಲಿ ಪ್ರಾಣಬಿಟ್ಟಾತನು ಇಂದ್ರಲೋಕವನ್ನಲ್ಲವೆ ಸಾರುತ್ತಾನೆ.

ಯುದಸ್ಯ ರುಧಿರಂ ಗಾತ್ರಾತ್ ಆಹವೇ ಸಂಪ್ರವರ್ತತೇ
ಸಹ ತೇನೈವ ಸ್ರಾವೇಣ ಸರ್ವಪಾಪೈಃ ಪ್ರಮುಚ್ಯತೇ

ಯುದ್ಧದಲ್ಲಿ ಅವನ ಗಾಯದಿಂದ ರಕ್ತ ಸರಿಯಿತೆನ್ನುವುದಿದೆಯಲ್ಲ ಇದರಿಂದ ಅವನ ಎಲ್ಲ ಪಾಪವೂ ಹರಿದುಹೋಗುತ್ತದೆ.

ತ್ಯಾಗೇನ ಯಃ ಸಹಾಯಾನಾಂ ಸ್ವಾನ್ ಪ್ರಾಣಾನ್ ತ್ರಾತುಮಿಚ್ಛತಿ
ತಂ ಹನ್ಯುಃ ಕಾಷ್ಟಲೋಹೈರ್ವಾ ದಹೇಯುರ್ವಾ ಕಟಾಗ್ನಿನಾ
ಪಶುವನ್ಮಾರಯೇಯುರ್ವಾ ಕ್ಷತ್ರಿಯಾ ಯೇಸ್ಯುರೀದೃಶಾಃ

ಯಾವ ಕ್ಷತ್ರಿಯನು ಜೊತೆಯವರನ್ನು ತೊರೆದು ತನ್ನ ಪ್ರಾಣವನ್ನುಳಿಸಿಕೊಳ್ಳಲು ನೋಡುತ್ತಾನೆ ಅಂಥವನನ್ನು ದೊಣ್ಣೆಯಿಂದಲೋ ಸಲಾಕಿಯಿಂದಲೋ ಬಡಿದು ಕೊಲ್ಲಬೇಕು; ಇಲ್ಲ ಕಟಾಗ್ನಿಯಲ್ಲಿ ಹಾಕಿ ಸುಡಬೇಕು; ಇಲ್ಲ ಪಶುವಂತೆ ಸದೆಬಡಿಯಬೇಕು.

ವಿಶೀರ್ಣಕವಚಂ ಚೈವ ತವಾಸ್ಮೀತಿ ಚ ವಾದಿನಂ
ಕೃತಾಂಜಲಿಂ ನ್ಯಸ್ತಶಸ್ತ್ರಂ ಗೃಹೀತ್ವಾ ನ ವಿಹಿಂಸಯೇತ್

ಕವಚ ನುಚ್ಚುನುರಿಯಾಗಿ ನಾನು ನಿನ್ನವನೆಂದು ಶರಣುಬಂದು ಆಯುಧವನ್ನು ಬಿಟ್ಟು ಕೈಮುಗಿದ ಹಗೆಯನ್ನು ಸೆರೆಹಿಡಿಯತಕ್ಕದ್ದು, ಹಿಂಸೆಮಾಡಬಾರದು.

ದ್ವಿಷಸ್ತಂ ಕೃತಕಲ್ಯಾಣಂ ಗೃಹೀತ್ವಾ ನೃಪತಿಂರಣೇ
ಯೋನಮಾನಯತೇ ದೋಷಾತ್ ಕ್ಷತ್ರಧರ್ಮಾದಪೈತಿಸಃ

ಚೆನ್ನಾಗಿ ಕಾದಿದ ಹಗೆ ಸೆರೆ ಸಿಕ್ಕಿದರೆ ಅವನನ್ನು ಮರ್ಯಾದೆಯಿಂದ ಕಾಣಬೇಕು. ದುರ್ಬುದ್ಧಿಯಿಂದ ಹಾಗೆ ಮಾಡದೆ ಹೋದವನು ಕ್ಷತ್ರಿಯ ಧರ್ಮದಿಂದ ಚ್ಯುತನಾಗುತ್ತಾನೆ.

ಅಚಿರೇಣಪ್ರಿಯಃ ಸಸ್ಯಾತ್ ಯೋಽಪ್ರಿಯೇ ಪ್ರಿಯಮಾಚರೇತ್

ಹಗೆಯಾದವನಿಗೆ ಪ್ರಿಯವನ್ನು ಮಾಡಿದವನು ಶೀಘ್ರದಲ್ಲಿ ಆ ಹಗೆಯ ಮಿತ್ರನಾಗುತ್ತಾನೆ.

ಕಾಲೇನಕ್ರಿಯತೇ ಕಾರ್ಯಂ ತಥೈವ ವಿವಿಧಾಃ ಕ್ರಿಯಾಃ
ಕಾಲೇನೈವ ಪ್ರವರ್ತನ್ತೇ ಕಃ ಕಸ್ಯೇತ್ಯಪರಾಧ್ಯತಿ
ನೈವತ್ವಯಾಕೃತಂ ಕರ್ಮ ನಾಪಿದುರ್ಯೋಧನೇನ ವೈ
ಕಾಲೇನೈತತ್ ಕೃತಂ ವಿದ್ಧಿ ನಿಹತಾಯೇನ ಪಾರ್ಥಿವಾಃ

ಕಾಲದಿಂದ ಕೆಲಸ ಆಗಿಹೋಗುತ್ತದೆ; ಎಂಥೆಂಥ ವ್ಯಾಪಾರವೂ ಮುಗಿಯು ತ್ತದೆ. ನಡವಳಿಯನ್ನು ಕಾಲ ನಡಸುತ್ತಿರುವಲ್ಲಿ ಯಾರು ಯಾರನ್ನೊ ಕುರಿತು ಎಂದು ಅಪರಾಧ ಮಾಡಬಹುದು? ಈ ಎಲ್ಲ ಸಂಗತಿ ನೀನು ಮಾಡಿದ್ದೂ ಅಲ್ಲ, ದುರ್ಯೋಧನ ಮಾಡಿದ್ದೂ ಅಲ್ಲ. ನಿನ್ನಿಂದ ರಾಜರ ಕೊಲೆಯಾಯಿತೆಂಬ ಚಿಂತೆ ಬೇಡ. ಅವರು ಕಾಲದಿಂದ ತೀರಿದರು. ಇದು ಕಾಲದ ಕೆಲಸ ಎಂದು ತಿಳಿ.

ವಹೇದಮಿತ್ರಂ ಸ್ಕನ್ಧೇನ ಯಾವದರ್ಥಸ್ಯ ಲಂಭನಂ
ಅಥೈನಮಾಗತೇ ಕಾಲೇ ಭಿನ್ದ್ಯಾದ್ಘಟಮಿವಾಶ್ಮನಿ

ಸಾಧಿಸುವ ಉದ್ದೇಶವೊಂದಿದ್ದರೆ ಹಗೆಯನ್ನು ಹೆಗಲ ಮೇಲೇರಿಸಿಕೊ. ಕಾಲ ಬಂದಾಗ ಅವನನ್ನು ಕಲ್ಲಿಂದ ಮಡಕೆಯನ್ನು ಒಡೆಯುವಂತೆ ಒಡೆದುಹಾಕು.

ಅಶಂಕ್ಯಮತಿಶಂಕೇತ ನಿತ್ಯಂ ಶಂಕೇತ ಶಂಕಿತಾನ್
ಭಯಂ ಹ್ಯಶಂಕಿತಾಜ್ಜಾತಂ ಸಮೂಲಮಪಿಕೃಂತತಿ
ಪುತ್ರೋವಾ ಯದಿವಾಭ್ರಾತಾ ಪಿತಾವಾ ಯದಿವಾ ಸುಹೃತ್
ಅರ್ಥಸ್ಯವಿಘ್ನಂ ಕುರ್ವಾಣಾ ಹಂತವ್ಯಾ ಭೂತಿಮಿಚ್ಛತಾ

ಯಾವನೆ ಆಗಲಿ ಅರ್ಥಕ್ಕೆ ಅಡ್ಡಿ ಬಂದರೆ ಅಪ್ಪ ಅಣ್ಣ ಎಂದು ನೋಡದೆ ಅವನನ್ನು ಬಡಿಯಬೇಕು.

ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ
ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಂ

ಕಾರ್ಯಾಕಾರ್ಯವನ್ನು ಕಾಣದೆ ತಪ್ಪು ದಾರಿ ಹಿಡಿದವನನ್ನು ಅವನು ಹಿರಿಯನೇ ಆದರೂ ದಂಡಿಸಬೇಕು.

ನಾಚ್ಛಿತ್ವಾ ಪರಮರ್ಮಾಣಿ ನಾಕೃತ್ವಾ ಕರ್ಮದಾರುಣಂ
ನಾಹತ್ವಾಮತ್ಸ್ಯಘಾತೀವ ಪ್ರಾಪ್ನೋತಿ ಪರಮಾಂ ಶ್ರಿಯಂ

ಇತರರಿಗೆ ನೋವು ಕೊಡದೆ ಕಠಿನ ಕೃತ್ಯಗಳನ್ನು ಮಾಡದೆ ಜನರನ್ನು ಬಲಿ ಕೊಡದೆ ಬಹು ಧನ ಗಳಿಸುವುದು ಸಾಧ್ಯವಲ್ಲ.

ನಸ್ಪ್ರಮುಂಚೇತ ದಾಯಾದಂ ರುದನ್ತಂ ಕರುಣಂ ಬಹು

ಮನ ಕರಗುವಂತೆ ಅಂಗಲಾಚಿದನೆಂದು ಹಗೆಯನ್ನು ಬಿಟ್ಟುಕೊಡಬೇಡ.

ಯಯೋಶ್ಚಿತ್ತೇನ ವಾಚಿತ್ತಂ ನಿಭೃತಂ ನಿಭೃತೇನವಾ
ಸಮೇತಿಪ್ರಜ್ಞಯಾ ಪ್ರಜ್ಞಾ ತಯೋಃ ಮೈತ್ರೀ ನಜೀರ್ಯತೇ

ಒಂದೇ ರೀತಿಯ ಮನಸ್ಸಿನವರ ಸ್ನೇಹ ಕಡಿಮೆಯಾಗುವುದಿಲ್ಲ.

ನಾತಃ ಶ್ರೀಮತ್ತರಂ ಕಿಂಚಿತ್ ಅನ್ಯತ್ಪಥ್ಯತಮಂ ಮತಂ
ಪ್ರಭವಿಷ್ಣೋಃ ಯಥಾತಾತ ಕ್ಷಮಾ ಸರ್ವತ್ರ ಸರ್ವದಾ

ಶಕ್ತನಾದವನಿಗೆ ಎಲ್ಲೂ ಎಲ್ಲಹೊತ್ತೂ ಕ್ಷಮೆಗಿಂತ ಹೆಚ್ಚಿನ ಸಂಪತ್ತಿಲ್ಲ, ಕ್ಷಮೆಗಿಂತ ಹಿತವಾದ ತತ್ವವಿಲ್ಲ.

ದುಃಖಾರ್ತೇಷು ಪ್ರಮತ್ತೇಷು ನಾಸ್ತಿಕೇಷು ಅಲಸೇಷುಚ
ನ ಶ್ರೀವಸತ್ಯದಾನ್ತೇಷು ಯೇಚೋತ್ಸಾಹವಿವರ್ಜಿತಾಃ

ದುಃಖಾರ್ತ ಅಜಾಗ್ರತೆಯಾತ ನಾಸ್ತಿಕ ಅಲಸ ಅದಾನ್ತ ಉತ್ಸಾಹವಿಲ್ಲದಾತ ಇವರ ಬಳಿ ಶ್ರೀ ವಾಸಿಸುವುದಿಲ್ಲ.

ಅತ್ಯಾರ್ಯಮತಿದಾತಾರಂ ಅತಿ ಶೂರಮತಿವ್ರತಂ
ಪ್ರಜ್ಞಾಭಿಮಾನಿನಂ ಚೈವ ಶ್ರೀಃ ಭಯಾನ್ನೋಪಸರ್ಪತಿ
ನಚಾತಿಗುಣವತ್ಸ್ವೇಷಾ ನಾತ್ಯನ್ತಂ ನಿರ್ಗುಣೇಷುಚ

ಅತಿ ದೊಡ್ಡಸ್ತಿಕೆಯವನನ್ನು ಮಿತಿಮೀರಿ ಕೊಡುವವನನ್ನು ಅತಿ ಶೂರ ಅತಿ ವ್ರತನನ್ನು ತಾನು ಬಹು ಬಲ್ಲೆನೆಂಬವನನ್ನು ಕಂಡರೆ ಶ್ರೀ ಅಂಜುತ್ತಾಳೆ, ಅವರ ಬಳಿ ಸೇರುವುದಿಲ್ಲ.

೩೬

## ಆದರ್ಶಮಾನವ

ವ್ಯಕ್ತಿ ಜೀವನ, ಸಮಾಜ ಜೀವನ, ರಾಷ್ಟ್ರ ಜೀವನ ಇವೆಲ್ಲವನ್ನೂ ಪರಿಷ್ಕರಿಸುವುದರ ಉದ್ದೇಶ ಮಾನವರನ್ನು ಉತ್ತಮ ವ್ಯಕ್ತಿಗಳನ್ನಾಗಿ ಮಾಡುವುದು. ಮಾನವನು ಎಲ್ಲ ಸಂದರ್ಭದಲ್ಲಿಯೂ ಧರ್ಮವನ್ನು ಆಚರಿಸಿದಾಗ ತನ್ನ ವ್ಯಕ್ತಿತ್ವದ ಅತ್ಯುತ್ತಮ ಸ್ಥಿತಿಯನ್ನು ಮುಟ್ಟುತ್ತಾನೆ.

ಎಷ್ಟು ಮುಖದಿಂದ ನೋಡಿದರೂ ವ್ಯಕ್ತಿಯಭಾಗಕ್ಕೆ ಧರ್ಮಎನ್ನುವುದು ತ್ಯಾಗದಲ್ಲಿ ಅಡಗಿರುವುದು ಕಾಣುತ್ತದೆ. ಭೀಷ್ಮನು ತಾರುಣ್ಯದಲ್ಲಿ ಮುಪ್ಪಿನ ತಂದೆಗಾಗಿ ಮದುವೆಯ ಆಸೆಯನ್ನು ಬಿಟ್ಟನು. ಯುಧಿಷ್ಠಿರನು ಬಂಧು ವಿನಾಶವನ್ನು ತಪ್ಪಿಸುವುದಕ್ಕಾಗಿ ಕ್ಷತ್ರಿಯ ಧರ್ಮವನ್ನೇ ತೊರೆಯುವವರೆಗೆ ಕ್ಷಮಿಯಾದನು. ಶಿಬಿ ಒಂದು ಪಾರಿವಾಳವನ್ನು ರಕ್ಷಿಸುವುದಕ್ಕಾಗಿ ಅದ ನ್ನಟ್ಟಿಕೊಂಡು ಬಂದಿದ್ದ ಗಿಡಗಕ್ಕೆ ತನ್ನ ಮೈಯ ಮಾಂಸವನ್ನು ಕೊಯ್ದು ಕೊಟ್ಟನು. ದಧೀಚಿ ಲೋಕರಕ್ಷಣೆಗಾಗಿ ಇಂದ್ರನಿಗೆ ತಾನು ಸತ್ತು ತನ್ನ ಬೆನ್ನಮೂಳೆಯನ್ನು ವಜ್ರಾಯುಧ ಮಾಡಿಕೊಟ್ಟನು. ಇಂಥ ತ್ಯಾಗವನ್ನು ನೋಡಿದ್ದರಿಂದಲೆ ಇವರ ಸಮಾಜದ ಜನ ಹತ್ತು ಜನರ ಸುಖಕ್ಕಾಗಿ, ಪರ ಜೀವನದ ಸುಖಕ್ಕಾಗಿ ತಮ್ಮ ಇಷ್ಟವನ್ನು ತ್ಯಾಗಮಾಡುವ ಹಿರಿಮೆ ಎಷ್ಟು ಹಿರಿಯದೆಂದು ತಿಳಿದರು.

ತ್ಯಾಗ ಮೂಲವಾಗಿ ಮನುಷ್ಯನ ಒಳ್ಳೆಯ ನಡತೆ ಸತ್ಯದಲ್ಲಿ, ಕ್ಷಮೆ ಯಲ್ಲಿ, ಅಹಿಂಸೆಯಲ್ಲಿ, ಅಸ್ತೇಯ ಅಪರಿಗ್ರಹದಲ್ಲಿ, ಬ್ರಹ್ಮಚರ್ಯದಲ್ಲಿ, ಶೀಲದಲ್ಲಿ, ಇಂಥ ಇನ್ನಿತರ ಸದ್ಗುಣದಲ್ಲಿ ಕವಲೊಡೆದು ದಿನದಿನದ ಚರ್ಯೆಯಲ್ಲಿ ರೂಪುಗೊಳ್ಳುತ್ತದೆ.

**ಪುಣ್ಯಸ್ಯ ವಾತಿ ಗಂಧಸ್ತೇ ಮನ್ಯೇ ಕರ್ಮವಿಧಾನತಾಂ**
**ಅಥಕರ್ಮಾರ್ಜಿತಸ್ತಾತ ಯಥಾಚೈವಾನುಲೇಪನಾತ್**

ಪುಣ್ಯವಂತನ ನಡತೆಯಿಂದ ಅವನ ಸುತ್ತು ಸುಗಂಧವನ್ನು ಬೀರುತ್ತದೆ ಯಂತೆ.

**ದಿವಂ ಸ್ಪೃಶತಿ ಭೂಮಿಂಚ ಶಬ್ದಃ ಪುಣ್ಯೇನ ಕರ್ಮಣಾ**
**ಯಾವತ್ ಸ ಶಬ್ದೋ ಭವತಿ ತಾವತ್ ಪುರುಷ ಉಚ್ಯತೇ**

ಮನುಷ್ಯನು ನಿಜವಾಗಿ ಮನುಷ್ಯನಾಗುವುದು ಅವನ ಪುಣ್ಯಕರ್ಮ ಭೂಮಿ ಆಕಾಶಗಳನ್ನು ಸೋಕಿದಾಗ; ಆ ಸ್ಥಿತಿ ಬರುವವರೆಗೆ ಅವನು ಬೆಳೆಯುತ್ತ ಇದಾನೆ ಅಷ್ಟೆ. ಪುಣ್ಯ ಕರ್ಮ ಸ್ವರ್ಗ ಭೂಮಿಯನ್ನು ಮುಟ್ಟುವ ದಿನ ಬರುವವರೆಗೆ ಅವನು ಬೆಳೆಯದೆ ನಿಲ್ಲುವಂತಿಲ್ಲ. ನಿಜದಲ್ಲಿ ಈ ಸ್ಥಿತಿಯನ್ನು ಮುಟ್ಟಿದ ಮನುಷ್ಯನು ಇರುವಲ್ಲಿಯೇ ದೇವ ಸಮಾನ ನಾಗುತ್ತಾನೆ, ಸ್ವರ್ಗದಲ್ಲಿ ಹಿರಿಯನೆನ್ನಿಸಿಕೊಳ್ಳುತ್ತಾನೆ. ಭೀಷ್ಮ ವಿದುರ

ರಂತೆ, ಯುಧಿಷ್ಠಿರ ಕೃಷ್ಣರಂತೆ, ವ್ಯಕ್ತಿ ಜೀವನದಲ್ಲಿ ಮೇಲ್ಮಟ್ಟವನ್ನು ಮುಟ್ಟುವುದೇ ಸಮ್ಯಗ್ ಜೀವನದ ಸಂತತ ಧ್ಯೇಯ.

ಈ ಆದರ್ಶದ ಸ್ವರೂಪವನ್ನು ವಿವರಿಸುವ ಹಲವು ಶ್ಲೋಕಗಳನ್ನು ಇಲ್ಲಿ ಕೊಡಬಹುದು.

ಯೇ ಪಾಪಂ ನಕುರ್ವನ್ತಿ ಕರ್ಮಣಾ ಮನಸಾಗಿರಾ
ನಿಕ್ಷಿಪ್ತದಂಡಾ ಭೂತೇಷು ದುರ್ಗಾಣ್ಯತಿತರಂತಿತೇ
ಯೇ ವದನ್ತೀಹ ಸತ್ಯಾನಿ ಪ್ರಾಣಾನ್ತ್ಯಾಗೇಪ್ಯುಪಸ್ಥಿತೇ
ಪ್ರಮಾಣಭೂತಾಭೂತಾನಾಂ ದುರ್ಗಾಣ್ಯತಿತರಂತಿತೇ
ಯೇಷಾಂ ನಕಶ್ಚಿತ್ ತ್ರಸತಿ ನತ್ರಸಂತಿ ಹಿ ಕಸ್ಯಚಿತ್
ಯೇಷಾಮಾತ್ಮಸಮೋ ಲೋಕೋ ದುರ್ಗಾಣ್ಯತಿತರಂತಿತೇ
ಪರಶ್ರಿಯಾ ನತಪ್ಯನ್ತಿ ಯೇ ಸನ್ತಃ ಪುರುಷರ್ಷಭಾಃ
ಗ್ರಾಮ್ಯಾದನ್ನಾನ್ನಿವೃತ್ತಾಶ್ಚ ದುರ್ಗಾಣ್ಯತಿತರಂತಿತೇ
ಯೇ ನ ಮಾನಿತ್ವಮಿಚ್ಛನ್ತಿ ಮಾನಯನ್ತಿಚ ಯೇ ಪರಾನ್
ಮಾನ್ಯಮಾನಾನ್ನಮಸ್ಯನ್ತಿ ದುರ್ಗಾಣ್ಯತಿತರಂತಿತೇ

ಯಾರಾದರೆ ಕೆಟ್ಟುದನ್ನು ಮಾಡದೆ ಕೆಟ್ಟುದನ್ನು ನುಡಿಯದೆ ಕೆಟ್ಟುದನ್ನು ಎಣಿಸದೆ ಎಲ್ಲ ಜೀವಗಳ ವಿಷಯದಲ್ಲಿಯೂ ಆಯುಧವನ್ನು ಒತ್ತಟ್ಟಿಗಿಟ್ಟು ಸಮಾಧಾನಿಯಾಗಿರುತ್ತಾರೆ, ಅವರು ಕಷ್ಟವೆನ್ನುವುದನ್ನೆಲ್ಲ ದಾಟುತ್ತಾರೆ. ಪ್ರಾಣ ಬಿಡಬೇಕಾದ ಇಕ್ಕಟ್ಟು ಬಂದರೂ ಸತ್ಯವನ್ನು ಬಿಡದೆ ಯಾರು ನುಡಿಯುತ್ತಾರೆ, ಅವರು ಪ್ರಾಣಿಗಳಿಗೆಲ್ಲ ಪ್ರಮಾಣಭೂತರಾಗಿ ಕಷ್ಟವನ್ನೆಲ್ಲ ದಾಟುತ್ತಾರೆ. ಯಾರಿಂದ ಯಾವ ಒಬ್ಬನಿಗೂ ಭಯವಾಗುವುದಿಲ್ಲ, ಯಾರು ಬೇರೆಯಾವನಿಗೂ ಭಯಪಡುವುದಿಲ್ಲ, ಯಾರಿಗೆ ಎಲ್ಲ ಲೋಕ ಆತ್ಮಕ್ಕೆ ಸಮ, ಅವರು ಎಲ್ಲ ಕಷ್ಟವನ್ನೂ ದಾಟುತ್ತಾರೆ. ಯಾವ ಸಜ್ಜನರು ಇತರರ ಅಭಿವೃದ್ಧಿಯನ್ನು ನೋಡಿದಾಗ ಈರ್ಷೆಪಡುವುದಿಲ್ಲ ಮತ್ತು ಗ್ರಾಮ್ಯವಾದ ಆಹಾರವನ್ನು ಬಯಸುವುದಿಲ್ಲ ಅವರು ಎಲ್ಲ ಕಷ್ಟವನ್ನೂ ದಾಟುತ್ತಾರೆ. ಯಾರು ತಮಗೆ ಗೌರವಸ್ಥಾನ ಬೇಕೆನ್ನುವುದಿಲ್ಲ, ಇತರರಿಗೆ ಗೌರವ ತೋರುತ್ತಾರೆ, ಗೌರವಾರ್ಹರಾದವರಿಗೆ ನಮಿಸುತ್ತಾರೆ, ಇವರು ಎಲ್ಲ ಕಷ್ಟವನ್ನೂ ದಾಟುತ್ತಾರೆ.

ತ್ರಿದಂಡಂ ಸರ್ವಭೂತೇಷು ನಿಧಾಯ ಪುರುಷಶ್ಶುಚಿಃ
ಕಾಮಕ್ರೋಧೌಚ ಸಂಯಮ್ಯ ತತಃ ಸಿದ್ಧಿಮವಾಪ್ನುತೇ

**ಆತ್ಮೋಪಮಸ್ತು ಭೂತೇಷು ಯೋ ವೈ ಭವತಿ ಪೂರುಷಃ**
**ತ್ಯಕ್ತದಣ್ಡೋ ಜಿತಕ್ರೋಧಃ ಸ ಪ್ರೇತ್ಯ ಸುಖಮೇಧತೇ**

ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ದಂಡಶಕ್ತಿಯನ್ನು ಬಳಸದೆ ಒತ್ತಟ್ಟಿ ಗಿಟ್ಟು ಶುದ್ಧಭಾವನಾದ ಮನುಷ್ಯನು ಕಾಮ ಕ್ರೋಧಗಳನ್ನು ಸಂಯಮಿಸಿ ಸಿದ್ಧಿಯನ್ನು ಹೊಂದುತ್ತಾನೆ. ಯಾವನೀಗ ಎಲ್ಲ ಪ್ರಾಣಿಗಳೂ ತನ್ನಂತೆ ಎಂದು ಭಾವಿಸಿ ಕೋಪವನ್ನು ಗೆದ್ದು ದಂಡನೆ ಕೊಡುವುದನ್ನು ಬಿಟ್ಟು ಶಾಂತನಾಗಿದ್ದಾನೆ ಅವನು ಪರಲೋಕದಲ್ಲಿ ಸುಖವನ್ನು ಕಾಣುತ್ತಾನೆ.

**ಅಹಿಂಸ್ರಃ ಸರ್ವಭೂತಾನಾಂ ಮೈತ್ರಾಯಣಗತಿಃ ಚರೇತ್**
**ಪರಿಗ್ರಹಾನ್ಪರಿತ್ಯಜ್ಯ ಭವೇದ್ಬುದ್ಧ್ಯಾ ಜಿತೇಂದ್ರಿಯಃ**
**ದಾನೇನ ಭೋಗೀಭವತಿ ಮೇಧಾವೀ ವೃದ್ಧಸೇವಯಾ**
**ಅಹಿಂಸಯಾಚ ದೀರ್ಘಾಯುಃ ಇತಿ ಪ್ರಾಹುರ್ಮನೀಷಿಣಃ**
**ತಸ್ಮಾತ್ ದದ್ಯಾತ್ ನಯಾಚೇತ ಪೂಜಯೇತ್ ಧಾರ್ಮಿಕಾನಪಿ**
**ಸುಭಾಷೀಪ್ರಿಯ ಕೃತ್ಶಾನ್ತಃ ಸರ್ವಸತ್ವಾವಿಹಿಂಸಕಃ**

ಎಲ್ಲ ಪ್ರಾಣಿಗಳ ವಿಷಯದಲ್ಲೂ ಅಹಿಂಸ್ರನಾಗಿ ಎಲ್ಲ ಜೀವವನ್ನು ಕುರಿತು ಮಿತ್ರಭಾವದಿಂದ ನಡೆಯತಕ್ಕದ್ದು. ಏನನ್ನೂ ತೆಗೆದುಕೊಳ್ಳದೆ ಇರುತ್ತ ಬುದ್ಧಿಯನ್ನು ಬಳಸಿ ಜಿತೇಂದ್ರಿಯನಾಗತಕ್ಕದ್ದು. ಮನುಷ್ಯನು ದಾನ ಮಾಡಿ ನಿಜವಾಗಿ ಭೋಗಿಯಾಗುತ್ತಾನೆ, ವೃದ್ಧಸೇವೆಯಿಂದ ಮೇಧಾವಿ ಯಾಗುತ್ತಾನೆ, ಅಹಿಂಸೆಯಿಂದ ದೀರ್ಘಾಯುವಾಗುತ್ತಾನೆ ಎಂದು ಬಲ್ಲವರ ವಚನ. ಆದಕಾರಣ ದಾನಮಾಡಬೇಕು, ಬೇಡಬಾರದು; ಧಾರ್ಮಿಕರನ್ನು ಪೂಜಿಸಬೇಕು ಕೂಡ; ಸುಭಾಷಿಯಾಗಬೇಕು, ಪ್ರಿಯ ವನ್ನು ಮಾಡಬೇಕು, ಶಾಂತನಾಗಿರಬೇಕು; ಯಾವ ಪ್ರಾಣಿಗೂ ಹಿಂಸೆ ಮಾಡದೆ ಇರಬೇಕು.

**ನ ಹಿಂಸಯತಿ ಯೋಜಂತೂನ್ ಮನೋವಾಕ್ಕಾಯ ಹೇತುಭಿಃ**
**ಜೀವಿತಾರ್ಥಾಪನಯನೈಃ ಪ್ರಾಣಿಭಿರ್ನಸಹಿಂಸ್ಯತೇ**
**ನ ಮೃತ್ಯುಸೇನಾಮಾಯಾನ್ತೀಂ ಜಾತುಕಶ್ಚಿತ್ ಪ್ರಬಾಧತೇ**
**ಋತೇ ಸತ್ಯಮಸತ್ಯಾಜ್ಯಂ ಸತ್ಯೇಹ್ಯಮೃತಮಾಶ್ರಿತಂ**
**ತಸ್ಮಾತ್ಸತ್ಯ ವ್ರತಾಚಾರಃ ಸತ್ಯಯೋಗ ಪರಾಯಣಃ**
**ಸತ್ಯಾಗಮಃ ಸದಾದಾನ್ತಃ ಸತ್ಯೇನೈವಾಂತಕಂ ಜಯೇತ್**

ಮನಸ್ಸಿಂದಾಗಲಿ ಮಾತಿಂದಾಗಲಿ ಕೃತಿಯಿಂದಾಗಲಿ ಯಾವನು ಪ್ರಾಣಿಗಳ ಜೀವಿತ ಅರ್ಥಗಳನ್ನು ಕಸಿದು ಹಿಂಸಿಸುವುದಿಲ್ಲ ಅವನು ಪ್ರಾಣಿಗಳಿಂದ ಹಿಂಸೆಗೆ ಗುರಿಯಾಗುವುದಿಲ್ಲ. ನಿಷ್ಕಲ್ಮಷವಾದ ಸತ್ಯ ಒಂದು ಹೊರತು ಬೇರೆ ಯಾವುದೂ ಮೇಲೆ ಹಾಯ್ದು ಬರುವ ಮೃತ್ಯು ಸೇನೆಯನ್ನು ತಡೆಯು ಲಾರದು. ಅಮರತ್ವ ಸತ್ಯ ಒಂದರಲ್ಲಿದೆ. ಆದಕಾರಣ ಮನುಷ್ಯನು ಸತ್ಯ ವನ್ನು ಒಂದು ವ್ರತದಂತೆ ಆಚರಿಸಬೇಕು. ಸತ್ಯಯೋಗದಲ್ಲಿ ಪರಾಯಣ ನಾಗಬೇಕು. ಸತ್ಯಾಗಮನಾಗಿ ಸದಾದಾಂತನಾಗಿ ಸತ್ಯದಿಂದಲೆ ಅಂತಕನನ್ನು ಜಯಿಸಬೇಕು.

ನ ತತ್ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ
ಏಷಸಾಂಗ್ರಾಹಿಕೋ ಧರ್ಮಃ *ಕಾಮಾದನ್ಯಃ ಪ್ರವರ್ತತೇ
ಪ್ರಖ್ಯಾಪನೇಚ ದಾನೇಚ ಸುಖದುಃಖೇ ಪ್ರಿಯಾಪ್ರಿಯೇ
ಆತ್ಮೌಪಮ್ಯೇನ ಪುರುಷಃ ಪ್ರಮಾಣಮಧಿಗಚ್ಛತಿ
ಶಕುನೀನಾಮಿವಾಕಾಶೇ ಮತ್ಸ್ಯಾನಾಮಿವಚೋದಕೇ
ಪದಂ ಯಥಾನದೃಶ್ಯೇತ ತಥಾ ಧರ್ಮವಿದಾಂಗತಿಃ
ಅಲಮನ್ಯೈರುಪಾಲಂಭ್ಯೈಃ ಕೀರ್ತಿತ್ಯೈಶ್ಚ ವ್ಯತಿಕ್ರಮ್ಯೈಃ
ಪೇಶಲಂ ಚಾನುರೂಪಂಚಕರ್ತವ್ಯಂ ಹಿತಮಾತ್ಮನಃ

ತನಗೆ ಪ್ರತಿಕೂಲವೆಂದದ್ದನ್ನು ಬೇರೆಯವರ ವಿಷಯದಲ್ಲಿ ಮಾಡಬೇಡ: ಸಂಗ್ರಹವಾಗಿ ಹೇಳುವುದಾದರೆ ಇದೇ ಧರ್ಮ. ಇದನ್ನು ಮಾಡದವನು ಯಾವುದೋ ದುರಾಸೆಯಿಂದ ನಡೆಯುತ್ತಿದ್ದಾನೆ. ನುಡಿಯುವುದರಲ್ಲಿ ಕೊಡುವುದರಲ್ಲಿ ಸುಖ ದುಃಖ ಪ್ರಿಯ ಅಪ್ರಿಯದಲ್ಲಿ ತನ್ನಂತೆ ಇತರರು ಎಂದು ಗ್ರಹಿಸಿದರೆ ಏನನ್ನು ಮಾಡಬಹುದು ಮಾಡಬಾರದು ಎನ್ನುವುದನ್ನು ಮನುಷ್ಯನು ಕಾಣುತ್ತಾನೆ. ಆಕಾಶದಲ್ಲಿ ಹಕ್ಕಿಯ, ನೀರಿನಲ್ಲಿ ಮೀನಿನ ಹೆಜ್ಜೆ ಹೇಗೆ ಹಾಗೆ ಧರ್ಮಬಲ್ಲವರ ಹೆಜ್ಜೆ ಕಣ್ಣಿಗೆ ಕಾಣುವುದಿಲ್ಲ. ಇತರ ಮಾತು, ಮಾಡು ಎನ್ನುವುದು ಬಿಡು ಎನ್ನುವುದು ಸಾಕು, ಹಾಗಿರಲಿ. ಚೆನ್ನವಾದದ್ದು ನ್ಯಾಯವಾದದ್ದು ಎನ್ನುವುದು ತನಗೆ ಯಾವುದು ಹಿತ ಅದನ್ನು ಇತರರಿಗೆ ಮಾಡುವುದು.

ನ ಚಕ್ಷುಷಾ ನ ಮನಸಾ ನವಾಚಾ ದೂಷಯೇತ್ಪರಂ
ನ ಪ್ರತ್ಯಕ್ಷಂ ಪರೋಕ್ಷಂವಾ ದೂಷಣಂ ವ್ಯಾಹರೇತ್ಕ್ವಚಿತ್

ನ ಹಿಂಸ್ಯಾತ್ಸರ್ವಭೂತಾನಿ ಮೈತ್ರಾಯಣಗತಿಶ್ಚರೇತ್
ನೇದಂ ಜೀವಿತಮಾಸಾದ್ಯ ವೈರಂ ಕುರ್ವೀತ ಕೇನಚಿತ್
ಅತಿವಾದಾಂಸ್ತಿತಿಕ್ಷೇತ ನಾಭಿಮನ್ಯೇತ ಕಿಂಚನ
ಕ್ರೋಧ್ಯಮಾನಃ ಪ್ರಿಯಂಬ್ರೂಯಾತ್ ಆಕ್ರುಷ್ಟಃ ಕುಶಲಂವದೇತ್

ಕಣ್ಣಿಂದಾಗಲಿ ಮನಸ್ಸಿಂದಾಗಲಿ ಮಾತಿನಿಂದಾಗಲಿ ಬೇರೆಯವನನ್ನು ಹಳಿಯುವುದು ಬೇಡ. ಹಿಂದಾಗಲಿ ಎದುರಲ್ಲಾಗಲಿ ಹಳಿಯುವುದೆನ್ನುವುದು ಬೇಡ. ಯಾವ ಪ್ರಾಣಿಯನ್ನೂ ಹಿಂಸಿಸಬೇಡ; ಎಲ್ಲ ಪ್ರಾಣಕ್ಕೆ ಮಿತ್ರನಾಗಿ ನಡೆಯತಕ್ಕದ್ದು. ಈ ಬಾಳನ್ನು ಪಡೆದ ಯಾರೂ ಹಗೆ ಮಾಡುವುದು ಬೇಡ. ಅತಿ ವಾದವನ್ನು ಸಹಿಸಬೇಕು; ಅಭಿಮಾನದಿಂದ ಯಾರನ್ನೂ ಕಡೆಗಣಿಸುವುದು ಬೇಡ; ಕೋಪದಿಂದ ಕಂಡವನಿಗೆ ಪ್ರಿಯವನ್ನು ನುಡಿಯಬೇಕು; ಕೂಗಿ ರೇಗಿದವನಿಗೆ ಇಷ್ಟವಾಗುವಂತೆ ಪ್ರತಿವಚನ ನುಡಿಯಬೇಕು.

ಸದಾಸಚೇತಾಸ್ಸಹತೇ ನರಸ್ಯೇಹಾಲ್ಪಚೇತಸ
ಯದ್ಯದ್ಬ್ರೂಯಾತ್ ಅಲ್ಪಮತಿಃ ತತ್ತದಸ್ಯ ಸಹೇತ್ತದಾ
ಪರಿವಾದಂಬ್ರುವಾಣೋಹಿ ದುರಾತ್ಮಾವೈ ಮಹಾಜನೇ
ಪ್ರಕಾಶಯತಿ ದೋಷಾನ್ಸ್ವಾನ್ ಸರ್ಪಃಫಣಮಿವೋನ್ನತಂ

ಎಲ್ಲ ವೇಳೆಯಲ್ಲಿಯೂ ಶಕ್ತರು ತಪ್ಪುಚೇತಸರ ದೌಷ್ಟ್ಯವನ್ನು ಸಹಿಸಿಕೊಳ್ಳುತ್ತಾರೆ. ಅಲ್ಪಮತಿಯಾದವನು ಏನೇನು ಹೇಳುತ್ತಾನೆ ಅವನ ಆ ಮಾತನ್ನೆಲ್ಲ ಸಹಿಸಿಕೊಳ್ಳಬೇಕು. ಹಾವು ಹೆಡೆಯನ್ನೆತ್ತಿ ತನ್ನ ಕೆಟ್ಟತನವನ್ನು ತೋರುವಂತೆ ಮಹಾಜನರಲ್ಲಿ ದೂರನ್ನಾಡುವ ದುರಾತ್ಮನು ತನ್ನ ಯೋಗ್ಯತೆಯನ್ನೇ ಪ್ರಕಟಮಾಡುತ್ತಾನೆ.

ಅನಾದಿನಿಧನಂ ನಿತ್ಯಂ ತಂಬುದ್ಧ್ವಾ ವಿಚರೇನ್ನರಃ
ಅಕ್ರುಧ್ಯನ್ನಪ್ರಹೃಷ್ಯಂಶ್ಚ ನಿತ್ಯಂ ವಿಗತಮತ್ಸರಃ
ಇತ್ಯೇವಂ ಹೃದಯಗ್ರಂಥಿಂ ಬುದ್ಧಿಚಿನ್ತಾಮಯಂದೃಢಂ
ಅತೀತ್ಯಸುಖಮಾಸೀತ ಅಶೋಚಂಶ್ಛಿನ್ನ ಸಂಶಯಃ
ಸತ್ಯಕಾಮಃ ಸನೋದಾನ್ತಃ ಸತ್ಯೇನೈವಾನ್ತಕಂ ಜಯೇತ್
ಅಮೃತಂ ಚೈವ ಮೃತ್ಯುಶ್ಚ ದ್ವಯಂದೇಹೇ ಪ್ರತಿಷ್ಠಿತಂ
ಯಜ್ಞದಾನತಪಶ್ಶೀಲಾಃ ನರಾವೈ ಪುಣ್ಯಕರ್ಮಿಣಃ
ಯೇಽಭಿದ್ರುಹ್ಯನ್ತಿ ಭೂತಾನಿ ತೇವೈ ಪಾಪಕೃತೋ ಜನಾಃ

**ರಮುಸ್ಸೈಧಸ್ಸಮೋದಸ್ಸ ದೇಹಿ ದಾನೇ ರಮುಸ್ಸಚ**
**ನತ್ವಾಮತಿಭವಿಷ್ಯನ್ತಿ ವೈದ್ಯಾನಚ ತಪಸ್ವಿನಃ**

ಮನುಷ್ಯನು ಅನಾದಿ ನಿಧನನೂ ನಿತ್ಯನೂ ಆದ ದೈವವನ್ನು ತಿಳಿದು ಯಾವ ಹೊತ್ತಿನಲ್ಲೂ ಕೋಪಗೊಳ್ಳದೆ ಅತಿ ಸಂತೋಷಪಡಪೆ ಮತ್ಸರಬಿಟ್ಟು ನಡೆಯು ಬೇಕು. ಈ ರೀತಿಯಲ್ಲಿ ಬುದ್ಧಿ ಚಿಂತಾಮಯವಾದ ಗಟ್ಟಿಯಾದ ಹೃದಯ ಗ್ರಂಥಿಯಿಂದ ತಪ್ಪಿಸಿಕೊಂಡು ಮನುಷ್ಯನು ಶೋಕ ಹರಿದು ಸಂಶಯ ಮುರಿದು ಸುಖವಾಗಿ ಇರತಕ್ಕದ್ದು. ಒಳಿತಾದ ಆಸೆಗಳುಳ್ಳವನಾಗಿ ಸಮಾಧಾನಿಯಾಗಿ ದಾಂತನಾಗಿ ಒಳ್ಳೆಯತನದಿಂದ ಅಂತಕನನ್ನು ಜಯಿಸು ವುದಾಗಲಿ. ಮೃತ್ಯು ಅಮರತ್ವ ಎರಡೂ ದೇಹದಲ್ಲಿ ನೆಲಸಿದೆ. ಭೂತಹಿತ ವನ್ನು ಮಾಡುವವರೆ ಯಜ್ಞ ದಾನ ತಪಸ್ಸು ಮಾಡಿದ ಜನರು; ಪ್ರಾಣಿ ಗಳಿಗೆ ಯಾರು ಕೇಡುಮಾಡುತ್ತಾರೆ ಅವರು ಪಾಪಿಷ್ಠರು. ಆಡು, ಗಳಿಸು, ನಲಿ; ದಾನಮಾಡು, ದಾನಮಾಡಿ ಸುಖಪಡು; ಆಗ ಎಂಥ ಜ್ಞಾನಿಗಳೂ ಎಂಥ ತಪಸ್ವಿಗಳೂ ನಿನಗಿಂತ ಹಿರಿಯರಾಗುವುದಿಲ್ಲ.

ಇಂಥ ಒಳ್ಳೆಯ ಜೀವನ ನಡೆಸಿದವರನ್ನು ದೇವತೆಗಳು ಪೂಜಿಸು ತ್ತಾರೆ. ಮಾತಲಿ ಒಂದು ಸಲ ಇಂದ್ರನಿಗೆ ಕೈ ಮುಗಿದು ನಮಸ್ಕಾರಾರ್ಹರು ಯಾರು ಎಂದು ಕೇಳಿದನಂತೆ.

ನಮಸ್ಕೃತಾನಾಂ ಸರ್ವೇಷಾಂ ಭಗವಂಸ್ತ್ವಂ ಪುರಸ್ಕೃತಃ
ಯೇಷಾಂ ಲೋಕೇ ನಮಸ್ಕುರ್ಯಾತ್ ತಾನ್ಬ್ರವೀತು ಭವಾನ್ ಮಮ

ಇಂದ್ರನು ಉತ್ತರ ಹೇಳಿದನು :

ಧರ್ಮಂಚಾರ್ಥಂಚ ಕಾಮಂಚ ಯೇಷಾಂ ಚಿಂತಯತಾಂ ಮತಿಃ
ನಾಧರ್ಮೇ ವರ್ತತೇ ನಿತ್ಯಂ ತಾನ್ನಮಸ್ಯಾಮಿ ಮಾತಲೇ
ಯೇ ರೂಪಗುಣಸಂಪನ್ನಾಃ ಪ್ರಮದಾಹೃದಯಂಗಮಾಃ
ನಿವೃತ್ತಾಃ ಕಾಮಭೋಗೇಷು ತಾನ್ನಮಸ್ಯಾಮಿ ಮಾತಲೇ
ಸ್ವೇಷು ಭೋಗೇಷು ಸಂತುಷ್ಟಾಃ ಸುವಾಚೋ ವಚನಕ್ಷಮಾಃ
ಅಮಾನಕಾಮಾಶ್ಚಾರ್ಘಾರ್ಹಾಃ ತಾನ್ನಮಸ್ಯಾಮಿ ಮಾತಲೇ
ಧನಂ ವಿದ್ಯಾಸ್ತಥೈಶ್ವರ್ಯಂ ಯೇಷಾಂ ನ ಚಲಯೇನ್ಮತಿಂ
ಚಲಿತಾಂ ಯೇ ನಿಗೃಹ್ಣಂತಿ ತಾನ್ನಿತ್ಯಂ ಪೂಜಯಾಮ್ಯಹಂ
ಇಷ್ಟೈರ್ದಾರೈರುಪೇತಾನಾಂ ಶುಚೀನಾಂ ಅಗ್ನಿಹೋತ್ರಿಣಾಂ
ಚತುಷ್ಪಾದಕುಟುಂಬಾನಾಂ ಮಾತಲೇ ಪ್ರಣಮಾಮ್ಯಹಂ

ಯೇಷಾಮರ್ಥಃ ತಥಾ ಕಾಮೋ ಧರ್ಮಮೂಲ ವಿವರ್ಧಿತಃ
ಧರ್ಮಾರ್ಥೌ ತಸ್ಯ ನಿಯತೌ ತಾನ್ನಮಸ್ಯಾಮಿ ಮಾತಲೇ
ಧರ್ಮಮೂಲಾರ್ಥಕಾಮಾನಾಂ ಬ್ರಾಹ್ಮಣಾನಾಂ ಗವಾಮಪಿ
ಪತಿವ್ರತಾನಾಂ ನಾರೀಣಾಂ ಪ್ರಣಾಮಂ ಪ್ರಕರೋಮ್ಯಹಂ
ಯೋ ಭುಕ್ತ್ವಾ ಮಾನುಷಾನ್ ಭೋಗಾನ್ ಪೂರ್ವೇವಯಸಿ ಮಾತಲೇ
ತಪಸಾಸ್ವರ್ಗಮಾಯಾಂತಿ ಶಶ್ವತ್ತಾನ್ ಪೂಜಯಾಮ್ಯಹಂ
ಅಸಂಭೋಗಾನ್ನಚಾಸಕ್ತಾನ್ ಧರ್ಮನಿತ್ಯಾನ್ ಜಿತೇಂದ್ರಿಯಾನ್
ಸಂನ್ಯಸ್ತಾನಚಲಪ್ರಖ್ಯಾನ್ ಮನಸಾ ಪೂಜಯಾಮಿ ತಾನ್

ಧರ್ಮ ಅರ್ಥ ಕಾಮಗಳನ್ನು ಸದಾ ಚಿಂತಿಸುತ್ತಿದ್ದರೂ ಮತಿ ಅಧರ್ಮದ ಕಡೆ ಸುಳಿಯದಿರುವವರು, ವಯಸ್ಸು ರೂಪಗುಣದಿಂದ ಸ್ತ್ರೀಯರು ಬಯಸುವಂತಿದ್ದರೂ ವಿಷಯಸುಖದಿಂದ ವಿಮುಖರಾಗಿರುವವರು, ಇರುವ ಸುಖದಿಂದ ತೃಪ್ತರಾಗಿ ಯಾರು ಬಂದರೂ ಒಳ್ಳೆಯದನ್ನೇ ಆಡುತ್ತ ಪೂಜೆಗೆ ಅರ್ಹರಾಗಿದ್ದರೂ ಅದನ್ನು ಬಯಸದೆ ಇರುವವರು. ದಾನದಿಂದ ವಿದ್ಯೆಯಿಂದ ಅಧಿಕಾರದಿಂದ ಬುದ್ಧಿ ಬಲಿಸದವರು ಅಥವಾ ಬಲಿಸಿದರೂ ಅದನ್ನು ನಿಗ್ರಹಿಸುವವರು, ಇಷ್ಟವಾದ ಪತ್ನಿಯೊಡನೆ ಶುಚಿಯಾಗಿ ಅಗ್ನಿಹೋತ್ರ ಮಾಡುತ್ತ ಪಶುಗಳನ್ನು ಸಾಕುತ್ತಿರುವವರು, ಯಾರ ಅರ್ಥ ಕಾಮ ಧರ್ಮದ ಬೇರಿಂದ ಬೆಳೆದಿವೆ ಧರ್ಮಕ್ಕಾಗಿ ನಿಯತವಾಗಿವೆ ಅಂಥವರು, ಧರ್ಮಮೂಲವಾದ ಅರ್ಥ ಕಾಮಗಳ ಬ್ರಾಹ್ಮಣರ, ಗೋಗಳು, ಪತಿವ್ರತೆಯರಾದ ನಾರಿಯರು, ಪೂರ್ವ ವಯಸ್ಸಿನಲ್ಲಿ ಇಹಭೋಗಗಳನ್ನು ಅನುಭವಿಸಿ ತಪಸ್ಸುಮಾಡಿ ಸ್ವರ್ಗಕ್ಕೆ ಬರುವವರು, ಸುಖಕ್ಕೆ ಸೋಲದವರು, ಆಸಕ್ತರಲ್ಲದವರು, ಧರ್ಮನಿಷ್ಠರು, ಜಿತೇಂದ್ರಿಯರು, ಸಂನ್ಯಾಸ ಮಾಡಿರುವವರು, ಅಚಲಪ್ರಜ್ಞರು, ಇವರನ್ನು ನಾನು ಪೂಜಿಸುತ್ತೇನೆ, ಇವರಿಗೆ ನಮಸ್ಕಾರ ಮಾಡುತ್ತೇನೆ.

೩೭

## ಶಾಸ್ತ್ರ ಸಮನ್ವಯ

ಮನುಷ್ಯನಿಗೆ ಇಂಥ ಒಳ್ಳೆಯ ಜೀವನವನ್ನು ಸಾಧಿಸಿಕೊಡುವುದಕ್ಕೆ ಶಾಸ್ತ್ರ ಬಹುರೀತಿಯಲ್ಲಿ ಪ್ರಯತ್ನಮಾಡಿದೆ. ಭಾರತದ ಕಾಲಕ್ಕೆ ಯೋಗ

ಸಾಂಖ್ಯ ಎಂಬ ಎರಡು ಶಾಸ್ತ್ರಗಳು ಬಹು ಪ್ರಬಲವಾಗಿದ್ದುವೆಂದು ಕಾಣು ತ್ತದೆ. ಒಂದೊಂದರ ಪ್ರವರ್ತಕರೂ ತಮ್ಮ ಶಾಸ್ತ್ರವೆ ಬಹುಶ್ರೇಷ್ಠ, ಇನ್ನೊಂದು ಶಾಸ್ತ್ರ ಅದಕ್ಕೆ ಸಮನಲ್ಲ, ಎಂದು ಹೇಳುತ್ತ ಇದ್ದಿರಬೇಕು. ಇವೆರಡಲ್ಲದೆ ಅನೇಕ ಇತರ ಪಂಥಗಳೂ ಜನತೆಯಲ್ಲಿ ಪ್ರಚಾರದಲ್ಲಿ ಇದ್ದಿರಬೇಕು. ಅವುಗಳ ಪ್ರವರ್ತಕರೂ ಕೂಡ ಹಿರಿಯ ಎರಡು ಶಾಸ್ತ್ರಗಳ ಪ್ರವರ್ತಕರಂತೆ ತಮ್ಮತಮ್ಮ ಶಾಸ್ತ್ರ ಅತ್ಯುತ್ತಮ ಎಂದು ಸಾಧಿಸುತ್ತಿದ್ದ ರೆಂದು ತೋರುತ್ತದೆ. ಒಂದೊಂದು ಗುಂಪಿನ ಪ್ರಮುಖರೂ ಹೀಗೆ ಮಾತ ನಾಡಿ, ಜನದ ಮನಸ್ಸು ನಿಶ್ಚಯವನ್ನು ಕಾಣದೆ ಕವಲೊಡೆದು ಕಳವಳ ಗೊಂಡಿತ್ತು ಎಂದು ಕಾಣುತ್ತದೆ. ಗೀತೆಯಲ್ಲಿ ಅರ್ಜುನನು ಸಾಂಖ್ಯಯೋಗ ಗಳಲ್ಲಿ ಯಾವುದು ಹೆಚ್ಚು ಗ್ರಾಹ್ಯ ಎಂದು ಪ್ರಶ್ನಿಸಿ, ಜನದ ಮನಸ್ಸಿನ ಈ ಕವಲೊಡೆತವನ್ನು ತೋರಿಸಿದ್ದಾನೆ. ಗೀತಾಚಾರ್ಯನು ಅರ್ಜುನನಿಗೆ ಸಾಂಖ್ಯಯೋಗೌ ಪೃಥಕ್ ಬಾಲಾಃಪ್ರವದಂತಿ ನ ಪಂಡಿತಾಃ ಎಂದನು. ಭಾರತದ ಋಷಿಯ ಉಪದೇಶ ಇದೇ.

ಭೀಷ್ಮನು ಹೇಳಿದನು:

ಸಾಂಖ್ಯಾಃ ಸಾಂಖ್ಯಂ ಪ್ರಶಂಸಂತಿ ಯೋಗಾಃ ಯೋಗಂ ದ್ವಿಜಾತಯಃ
ವದಂತಿ ಕಾರಣಂ ಶ್ರೇಷ್ಠಂ ಸ್ವಪಕ್ಷೋದ್ಭಾವನಾಯ ವೈ
ಉಭೇ ಚೈತೇ ಮತೇ ತತ್ತ್ವೇ ಮಮ ತಾತ ಯುಧಿಷ್ಠಿರ
ಅನುಷ್ಠಿತೇ ಯಥಾಶಾಸ್ತ್ರಂ ನಯೇತಾಂ ಪರಮಾಂ ಗತಿಂ
ತುಲ್ಯಂ ಶೌಚಂ ತಯೋರೇಕಂ ದಯಾಭೂತೇಷು ಚಾನಘ
ವ್ರತಾನಾಂ ಧಾರಣಂ ತುಲ್ಯಂ ದರ್ಶನಂ ನ ಸಮಂ ತಯೋಃ

ಪರಿಮುಷ್ಣನ್ತಿ ಶಾಸ್ತ್ರಾಣಿ ಧರ್ಮಸ್ಯ ಪರಿಪಂಥಿನಃ
ವೈಷಮ್ಯಮರ್ಥವಿದ್ಯಾನಾಂ ನಿರರ್ಥಾಃ ಖ್ಯಾಪಯನ್ತಿ ತೇ
ಅಜಿತಿ ವಿಷವ್ರೋವಿದ್ಯಾಂ ಯಶಃಕಾಮೌ ಸಮನ್ತತಃ
ತೇ ಸರ್ವೇ ನೃಪ ಪಾಪಿಷ್ಠಾ ಧರ್ಮಸ್ಯ ಪರಿಪಂಥಿನಃ
ಅಪಕ್ವಮತಯೋ ಮಂದಾಃ ಸಜ್ಞಾನಸ್ತು ಯಥಾತಥಂ
ತಥಾಪ್ಯಶಾಸ್ತ್ರಕುಶಲಾಃ ಸರ್ವತ್ರಾಯುಕ್ತನಿಶ್ಚಿತಾಃ
ಪರಿಮುಷ್ಣನ್ತಿ ಶಾಸ್ತ್ರಾಣಿ ಶಾಸ್ತ್ರದೋಷಾನುದರ್ಶಿನಃ
ವಿಜ್ಞಾನಮಥವಿದ್ಯಾನಾಂ ನಸಮ್ಯಗಿತಿಮೇಮತಿಃ
ಏನ ಯಾಪರವಿದ್ಯಾನಾಂ ಸ್ವವಿದ್ಯಾಂ ಖ್ಯಾಪಯನ್ತಿ ಚ

**ವಾಗಾಸ್ತಿಕ್ಯಾನುನೀತಾಶ್ಚ ದುಗ್ಧವಿದ್ಯಾಫಲಾ ಇವ**
**ತಾನ್ವಿದ್ಯಾವಣಿಜೋವಿದ್ಧಿ ರಾಕ್ಷಸಾನಿವಭಾರತ**

ಒಂದೊಂದು ಶಾಸ್ತ್ರದ ಉದ್ದೇಶವೂ ಮನುಷ್ಯನನ್ನು ಸಮ್ಯಗ್ ಜೀವಿಯನ್ನಾಗಿ ಮಾಡುವುದು. ಅವು ವಿವರದಲ್ಲಿ ಒಂದರಿಂದ ಒಂದು ಬೇರೆಯಾಗಿರಬಹುದು. ಗುರಿಯಲ್ಲಿ ಎಲ್ಲವೂ ಒಂದೇ. ಒಂದೊಂದು ಶಾಸ್ತ್ರದ ಪ್ರವರ್ತಕರೂ ತಮ್ಮತಮ್ಮ ಶಾಸ್ತ್ರವನ್ನು 'ನಮ್ಮ ಶಾಸ್ತ್ರ' ಎಂದು ಕರೆದು, ಉಳಿದೆಲ್ಲ ಶಾಸ್ತ್ರವನ್ನೂ ವಿರೋಧ ಎಂದು ಎಣಿಸಿ ಲೋಕದಲ್ಲಿ ಗೊಂದಲ ಉಂಟುಮಾಡಿದ್ದಾರೆ. ಇಂಥವರು ತಮ್ಮ ಪ್ರತಿಷ್ಠೆಗಾಗಿ ಮಡಿಯುತ್ತಿದ್ದಾರೆ. ಶಾಸ್ತ್ರಕ್ಕಾಗಿ ಅಲ್ಲ, ಧರ್ಮಕ್ಕಾಗಿ ಅಲ್ಲ. ಶಾಸ್ತ್ರಗಳನ್ನು ನಿಜವಾಗಿ ಬಲ್ಲವನು ಅವುಗಳ ಐಕಮತ್ಯವನ್ನು ಸಾರಬೇಕು, ಸಾರುತ್ತಾನೆ. ಇಂಥ ಉಪದೇಶಕರು ಅಪೂರ್ವ; ಆದರೆ ಶಾಸ್ತ್ರಗಳಲ್ಲಿ ಐಕಮತ್ಯವನ್ನು ಕಾಣುವುದೇ ಸರಿಯಾದ ದೃಷ್ಟಿ. ಶಾಸ್ತ್ರಗಳನ್ನು ಕುರಿತ ಈ ಸೂತ್ರ ಹಿಂದೂ ಕ್ರೈಸ್ತ ಮುಸ್ಲಿಂ ಮುಂತಾದ ಮತಗಳಿಗೂ ಅನ್ವಯಿಸುತ್ತದೆ.

ಭವನ್ತೋ ಜ್ಞಾನಿನೋ ನಿತ್ಯಂ ಸರ್ವತಶ್ಚ ನಿರಾಮಯಾಃ
ಐಕಾತ್ಮ್ಯಂ ನಾನುಕಶ್ಚಿದ್ಧಿ ಕದಾಚಿದಭಿಪದ್ಯತೇ
ಶಾಸ್ತ್ರಸ್ಯ ಬಹುಧ್ಯಾತತ್ತ್ವೇನ ಕೇಚಿದ್ವಾದ ಬಲಾತ್ ಜನಾಃ
ಕಾಮದ್ವೇಷಾಭಿಭೂತತ್ವಾತ್ ಅಹಂಕಾರವಶಂಗತಾಃ
ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ
ಬ್ರಹ್ಮಸ್ತೇನಾ ನಿರಾರಂಭಾಃ ಅಪಕ್ವಮನಸೋ ಽಶಿವಾಃ
ನೈರ್ಗುಣ್ಯಮೇವ ಪಶ್ಯನ್ತಿ ನಗುಣಾನನುಯುಂಜತೇ
ತೇಷಾಂತಮಶ್ಶರೀರಾಣಾಂ ತಮ ಏವ ಪರಾಯಣಂ

ವಿಷ್ಣು ಮಾಹಾತ್ಮ್ಯ, ಶಿವಮಾಹಾತ್ಮ್ಯಗಳನ್ನು ಪ್ರತಿಪಾದಿಸುವ ಅನೇಕ ಅಧ್ಯಾಯಗಳನ್ನುಳ್ಳ ಮಹಾಭಾರತ ಗ್ರಂಥದ ಈ ವಾಕ್ಯವೂ ಗಮನಾರ್ಹವಾದದ್ದು. ಸನಾತನಧರ್ಮ ವೇದಕಾಲದಲ್ಲಿ ಕಂಡುಕೊಂಡು ಎಂದೂಬಿಡದೆ ಏಕದೇಶವಾಗಿಯಾದರೂ ಉಸುರಿಕೊಂಡು ಬಂದಿರುವ ಸೂತ್ರದ ಒಂದು ರೂಪ ಇದು.

**ರುದ್ರೋ ನಾರಾಯಣಶ್ಚೈವ ಸತ್ವಮೇಕಂ ದ್ವಿಧಾಕೃತಂ**

## ೩೮

## ಭಾವನೈರ್ಮಲ್ಯ

ಪ್ರತಿಯೊಂದು ಶಾಸ್ತ್ರ, ಪ್ರತಿಯೊಂದು ಮತದ ಉದ್ದೇಶವೂ ಮನುಷ್ಯನ ಮನಸ್ಸಿನಲ್ಲಿ ಸ್ವಾರ್ಥವನ್ನು ಜಯಿಸುವ, ಪರಹಿತವನ್ನು ಸಾಧಿಸುವ, ತ್ಯಾಗಬುದ್ಧಿ ಧರ್ಮಶೀಲತೆಯನ್ನು ಬೆಳಸುವುದಾಗಿರಬೇಕು. ದಿನ ದಿನದ ಜೀವನದಲ್ಲಿ ನಿಯಮಿತವಾಗಿರುವ ಕರ್ಮ ಆಚಾರ ಮನುಷ್ಯನ ದೇಹ ಮನಸ್ಸನ್ನು ಶುಚಿಮಾಡಬೇಕು. ಅವನ ಆಶೆ ಅಂತಃಕರಣವನ್ನು ನಿರ್ಮಲವಮಾಡಬೇಕು. ಮಾನವನ ಉದ್ದೇಶ ಪ್ರವೃತ್ತಿಗಳು ಪರಿಶುದ್ಧವಾಗಬೇಕು. ಆತನ ಕೆಲಸವೆಲ್ಲಾ ಭೂತಗಳಿಗೆ ಹಿತಕರವಾಗಿರಬೇಕು. ಸ್ನಾನ ದೇವಾರ್ಚನೆ ಅತಿಥಿಪೂಜೆ, ದಿನವೂ ಮಾಡುವ ವೃತ್ತಿ, ಇವೆಲ್ಲದರಲ್ಲಿಯೂ ಆತ್ಮೋದ್ಧಾರ ಆಗುತ್ತಿರಬೇಕು. ಯಜ್ಞ ದಾನ ತಪಸ್ಸು ಗುರುಪೂಜನ ತೀರ್ಥಯಾತ್ರೆ ಎಲ್ಲ ಸಾರ್ಥಕವಾಗುವುದು ನಿರ್ಮಲವಾದ ಭಾವದಿಂದ.

ಮಾಸಪಕ್ಷೋಪವಾಸೇನ ಮನ್ಯಂತೇ ಯತ್ತಪೋಜನಾಃ
ಆತ್ಮತಂತ್ರೋಪಘಾತಸ್ತು ನತಪಸ್ತತ್ಸತಾಂ ಮತಂ
ತ್ಯಾಗಶ್ಚಸನ್ನತಿಶ್ಚೈವ ಶಿಷ್ಯತೇ ತಪಉತ್ತಮಂ
ಸದೋಪವಾಸೀ ಸಭವೇತ್ ಬ್ರಹ್ಮಚಾರೀ ಸದಾ ಭವೇತ್
ತ್ರಿದಂಡಧಾರಣಂ ಮೌನಂ ಜಟಾಧಾರ ಅಥಮುಂಡನಂ
ವಲ್ಕಲಾಜಿನ ಸಂವೇಷ್ಟಂ ವ್ರತಚರ್ಯಾಭಿಷೇಚನಂ
ಅಗ್ನಿಹೋತ್ರಂ ವನೇವಾಸಃ ಶರೀರಪರಿಶೋಷಣಂ
ಸರ್ವಾಣಿ ಏತಾನಿ ಮಿಥ್ಯಾಸ್ಯುಃ ಯದಿಭಾವೋ ನ ನಿರ್ಮಲಃ

ಕಠಿನ ವೈರಾಗ್ಯದ ಆಚಾರ ವೇಷವೂ ನಿಷ್ಠುರ ವ್ರತವೂ ಸಫಲವಾಗಬೇಕಾದರೆ ಭಾವ ನಿರ್ಮಲವಾಗಬೇಕು. ಇದೊಂದಿಲ್ಲದಿದ್ದರೆ ಅದೆಲ್ಲ ವ್ಯರ್ಥ. ನಿಜವಾದ ತಪಸ್ವಿ ಯಾರು?

ಯೇ ಪಾಪಾನಿ ನ ಕುರ್ವಂತಿ ಮನೋವಾಕ್ಕರ್ಮ ಬುದ್ಧಿಭಿಃ
ತೇ ತಪಂತಿ ಮಹಾತ್ಮಾನಃ ನಶರೀರಸ್ಯ ಶೋಷಣಂ

ಶರೀರ ಶೋಷಣವನ್ನು ಮಾಡುವವರಲ್ಲ, ಮನೋವಾಕ್ ಕರ್ಮದಿಂದ ಕೆಟ್ಟುದನ್ನು ಮಾಡದವರು ನಿಜವಾಗಿ ತಪಸ್ವಿಗಳು. ಮತ್ತೆ: ಕೃತಿಯಲ್ಲಿ

ಬಾಹ್ಯ ಸಾರ್ಥಕವಾಗುವುದು ಆಂತರ್ಯದಿಂದ ಹೇಗೋಹಾಗೆ ಉದ್ಧಾರಕ ಶಕ್ತಿಯಲ್ಲಿಯೂ ಬಾಹ್ಯವಸ್ತುಗಳಿಗಿಂತ ಆಂತರಿಕ ಸತ್ವಗಳು ಪ್ರಬಲಿಸುತ್ತವೆ. ವನವಾಸದ ಕಾಲದಲ್ಲಿ ಯುಧಿಷ್ಠಿರನು ಮಾಡಿದ ಅನೇಕ ತೀರ್ಥಯಾತ್ರೆಗಳನ್ನು ಗ್ರಂಥ ಬಹಳವಾಗಿ ಪ್ರಶಂಸಿಸಿದೆ. ಜೊತೆಗೆ ಈ ಮಾತನ್ನೂ ಹೇಳಿದೆ:

ಅಗಾಧೇ ನಿರ್ಮಲೇ ಶುದ್ಧೇ ಸತ್ಯತೀರ್ಥೇ ಧೃತಿಹ್ರದೇ
ಸ್ನಾತವ್ಯಂ ಮಾನಸೇ ತೀರ್ಥೇ ಸತ್ವಮಾಲಂಬ್ಯ ಶಾಶ್ವತಂ

ನೋದಕಕ್ಲಿನ್ನಗಾತ್ರಸ್ತು ಸ್ನಾತ ಇತ್ಯಭಿಧೀಯತೇ
ಸಸ್ನಾತೋಯೋದಮಸ್ನಾತಃ ಸಬಾಹ್ಯಾಭ್ಯಂತರಶ್ಶುಚಿಃ

ಶೌಚಮೇವ ಪರಂ ತೇಷಾಂ ಯೇಷಾಂ ನೋತ್ಪದ್ಯತೇಸ್ಪೃಹಾ

ತೀರ್ಥಾನಾಂ ಹೃದಯಂ ತೀರ್ಥಂ ಶುಚೀನಾಂ ಹೃದಯಂ ಶುಚಿಃ

ವೃತ್ತಶೌಚಂ ಮಹಾಶೌಚಂ ತೀರ್ಥಶೌಚಮತಃ ಪರಂ
ಜ್ಞಾನೋತ್ಪನ್ನಂಚ ಯತ್ ಶೌಚಂ ತತ್ ಶೌಚಂ ಪರಮಂ ಸ್ಮೃತಂ

ಶಾಶ್ವತವಾದ ಸತ್ವವನ್ನು ಊರೆಮಾಡಿಕೊಂಡು, ಸತ್ಯವೆಂಬ ತೀರ್ಥ ಧೃತಿಯೆಂಬ ಮಡು ಇರುವ ಮನಸ್ತೀರ್ಥದಲ್ಲಿ ಸ್ನಾನಮಾಡಬೇಕು. ಈ ತೀರ್ಥ ಆಳವಾದದ್ದು, ನಿರ್ಮಲವಾದದ್ದು, ಕೊಳೆಯಿಲ್ಲದ್ದು. ಮತ್ತು

ತೀರ್ಥಶೌಚಂ ತಪೋಜ್ಞಾನಂ ಮಾರ್ದವಂ ಸತ್ಯಮಾರ್ಜವಂ
ಅಹಿಂಸಾ ಸರ್ವಭೂತಾನಾಂ ಆನೃಶಂಸ್ಯಂ ಶಮೋ ದಮಃ.

ಆಂತರಿಕಸತ್ವ ಮನುಷ್ಯನನ್ನು ಉದ್ಧಾರಮಾಡುವ ತೀರ್ಥ ಆದಕಾರಣ ಮೈಯನ್ನು ತೊಳೆಯುವ ನೀರಿನ ತೀರ್ಥಕ್ಕಿಂತ ಮನಸ್ಸನ್ನು ತೊಳೆಯುವ ಸತ್ಯಾತ್ಮರ ಸಾನ್ನಿಧ್ಯ ಹೆಚ್ಚಿನ ಪುಣ್ಯಕ್ಷೇತ್ರ.

ವ್ರಜೇವಾಪ್ಯಥವಾರಣ್ಯೇ ಯತ್ರ ಸಂತಿ ಬಹುಶ್ರುತಾಃ
ತತ್ ತನ್ನಗರಮಿತ್ಯಾಹುಃ ಪಾರ್ಥ ತೀರ್ಥಂಚ ತದ್ಭವೇತ್

ಬೀಡಿನಲ್ಲಾಗಲಿ ಕಾಡಿನಲ್ಲಾಗಲಿ ಎಲ್ಲಿ ಜ್ಞಾನಿಗಳು ನೆರೆದಿದ್ದಾರೆ ಅದೇ ಸುರಕ್ಷಿತವಾದ ಸ್ಥಾನ, ಅದೇ ಉದ್ಧಾರಕವಾದ ತೀರ್ಥ.

**ಅಕ್ರೋಧನಶ್ಚರಾಜೇಂದ್ರ ಸತ್ಯಶೀಲೋ ದೃಢವ್ರತಃ**
**ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ**

## ೩೯

## ವಿಚಿಕಿತ್ಸಾ ನಿವಾರಣ

ಈ ಹೇಳಿದ ಧರ್ಮ ಸರಿಯೆಂಬುದು ನಿಶ್ಚಯ ಹೇಗೆ? ಈ ಪ್ರಶ್ನೆಯನ್ನು ಕೇಳುವುದು ತಪ್ಪಲ್ಲ. ವಿಚಾರವೂ ತಪ್ಪಲ್ಲ. ಆದರೆ ಪ್ರತಿಯೊಬ್ಬನೂ ಎಲ್ಲ ಸಂದರ್ಭದಲ್ಲೂ ತಾನೇ ನಿರ್ಣಯಕ್ಕೆ ಬರುವುದು ಸಾಧ್ಯವಲ್ಲ. ಸಂದೇಹ ಬಹು ಸುಲಭ. ನಿರ್ಣಯ ಬಹು ಕಷ್ಟ. ನಾವೇ ನೋಡಿದ ಕೇಳಿದ ಸಂಗತಿ ಒಂದು ಮುಖವಾದ ನಿರ್ಣಯಕ್ಕೆ ಅವಕಾಶ ಬಿಡುವುದಿಲ್ಲ. ತಾನು ಕಂಡಷ್ಟರಿಂದ ನಿಶ್ಚಯಕ್ಕೆ ಬರುವೆನೆನ್ನುವುದು ತಾನು ಬಹು ಬಲ್ಲೆನೆಂಬ ಹೆಮ್ಮೆಗಾರನ ಹೇತುವಾದ ಆಗುತ್ತದೆ.

ಸಂಶಯಃ ಸುಗಮಸ್ತತ್ರ ದುರ್ಗಮಸ್ತಸ್ಯ ನಿರ್ಣಯಃ
ದೃಷ್ಟಂ ಶ್ರುತಮನನ್ತಂ ಹಿ ಯತ್ರ ಸಂಶಯ ದರ್ಶನಂ
ಪ್ರತ್ಯಕ್ಷಂ ಕಾರಣಂ ದೃಷ್ಟಂ ಹೈತುಕಂ ಪ್ರಾಜ್ಞಮಾನಿನಃ

ಆದ್ದರಿಂದ ಜ್ಞಾನಿಗಳಾದ ವೃದ್ಧರು ಪ್ರತ್ಯಯ ಮೋಕ್ಷಲಕ್ಷಣ ಎಂದಿರುವರು. ಶುಷ್ಕತರ್ಕ ಬೇಡ. ಶ್ರುತಿಸ್ಮೃತಿಗಳನ್ನು ಆಶ್ರಯಿಸು. ಸಾಧನ ಸರಿಯಾದದ್ದಲ್ಲ ಆದ್ದರಿಂದ ಇಲ್ಲಿ ಬುದ್ಧಿ ಸಿದ್ಧಿಸುವುದಿಲ್ಲ.

ಊಚುಃ ಜ್ಞಾನವಿದೋವೃದ್ಧಾಃ ಪ್ರತ್ಯಯಂ ಮೋಕ್ಷಲಕ್ಷಣಂ
ಶುಷ್ಕಂ ತರ್ಕಂ ಪರಿತ್ಯಜ್ಯ ಆಶ್ರಯಸ್ವ ಶ್ರುತಿಂ ಸ್ಮೃತಿಂ
ಬುದ್ಧಿರ್ನತಸ್ಯ ಸಿಧ್ಯೇತ ಸಾಧನಸ್ಯ ವಿಪರ್ಯಯಾತ್

ಬರಿಯ ಓದಿನಿಂದ ಸಿದ್ಧಿ ದೊರೆಯುವುದಿಲ್ಲ:

ಅಧೀತ್ಯ ನೀತಿಶಾಸ್ತ್ರಾಣಿ ನೀತಿಯುಕ್ತೋ ನ ದೃಶ್ಯತೇ

ತಿಳಿವು ಸಾಲದ ಜನದ ಮಾತು ತೊಂದರೆಗೆ ಒಯ್ಯುತ್ತದೆ:

ಪ್ರಮಾಣಮಪ್ರಮಾಣಂ ವೈ ಯಃ ಕುರ್ಯಾತ್ ಅಬುಧೋಜನಃ
ನ ಸ ಪ್ರಮಾಣತಾಮರ್ಹೋ ವಿಷಾದಜನನೋ ಹಿ ಸಃ

ಅಥವಾ ಧರ್ಮ ಪುರುಷರೂಪದಲ್ಲಿ ಬಂದು ನಮ್ಮನ್ನು ಕೈಹಿಡಿದು ನಡೆಸುವುದಿಲ್ಲ. ಧರ್ಮವನ್ನು ತಿಳಿಯಬೇಕು; ಅದರಂತೆ ನಡೆಯಬೇಕು; ಅಚ್ಯುತವಾದ ಪದವನ್ನು ಮುಟ್ಟಬೇಕು.

ನ ತು ಕಶ್ಚಿನ್ನಯೇತ್ ಪ್ರಾಜ್ಞಃ ಗೃಹೀತ್ವೈವ ಕರೇನರಂ
ಊಹ್ಯಮಾನಸ್ತು ಧರ್ಮೇಣ ಪ್ರಾಪ್ನುಯಾತ್ ಪದಮುಚ್ಯುತಂ

ಹೀಗೆಂದರೆ ಇಲ್ಲಿ ಬುದ್ಧಿಗೆ ಸ್ಥಳವೇ ಇಲ್ಲವೇ ಎಂದು ಅರ್ಥವೆ? ಅಲ್ಲ. ಬಹುಕಾಲ ಯೋಗದಿಂದ ಸಾಧಿಸಿದರೆ ನಾವೂ ಅದನ್ನು ಕಾಣಬಹುದು; ತರ್ಕದ ಮೇರೆಯನ್ನು ಮುಟ್ಟಿ ಅದರಾಚೆಯ ಉತ್ತಮವಾದ ಜ್ಞಾನ ಯಾವುದಿದೆ ಆ ಸರ್ವಲೋಕದ ವಿಪುಲಜ್ಯೋತಿಯನ್ನು ಪಡೆಯಬಹುದು.

ಶಕ್ಯಂ ಧೀರ್ಘೇಣ ಕಾಲೇನ ಯುಕ್ತೇನಾಮಂತ್ರಿತೇನ ಚ
ಹೇತೂನಾಮಂತಮಾಸಾದ್ಯ ವಿಪುಲಂ ಜ್ಞಾನಮುತ್ತಮಂ
ಜ್ಯೋತಿಃ ಸರ್ವಸ್ಯ ಲೋಕಸ್ಯ ವಿಪುಲಂ ಪ್ರತಿಪದ್ಯತೇ

## ೪೦
## ಧರ್ಮೋ ರಕ್ಷತಿ ರಕ್ಷಿತಃ

ಇಷ್ಟೆಲ್ಲ ಹೇಳಿದಮೇಲೆ ಈ ಧರ್ಮ ಎನ್ನುವುದು ನಿಜವಾಗಿ ರಕ್ಷಿಸುತ್ತದೆಯೇ ಎಂದು ಮತ್ತೆ ಪ್ರಶ್ನೆ ಬರುತ್ತದೆ. ಧರ್ಮದಲ್ಲಿ ನಡೆಯುತ್ತ ಕಾಡನ್ನು ಸೇರಿದ ಯುಧಿಷ್ಠಿರನಿಗೆ ದ್ರೌಪದಿ ಹೇಳಿದಳು.

"ರಾಜಾನಂ ಧರ್ಮಗೋಪ್ತಾರಂ ಧರ್ಮೋ ರಕ್ಷತಿರಕ್ಷಿತಃ
ಇತಿಮೇ ಶ್ರುತಮಾರ್ಯಾಣಾಂ ತ್ವಾಂ ತು ಮನ್ಯೇ ನರಕ್ಷತಿ

ರಾಜನು ಧರ್ಮವನ್ನು ಪಾಲಿಸುವನಾದ್ದರಿಂದ ಧರ್ಮ ರಾಜನನ್ನು ಪಾಲಿಸುತ್ತದೆ ಎಂದು ಹಿರಿಯರ ವಚನ. ಆದರೆ ಅದೇಕೋ ನಿನ್ನನ್ನು ರಕ್ಷಿಸಲಿಲ್ಲ."

ಯುಧಿಷ್ಠಿರನು ಹೇಳಿದನು:

ನಾಹಂ ಧರ್ಮಫಲಾಕಾಂಕ್ಷೀ ರಾಜಪುತ್ರಿ ಚರಾಮ್ಯುತ
ದದಾಮಿ ದೇಯಮಿತ್ಯೇವ ಯಜೇಯಷ್ಟವ್ಯಮಿತ್ಯುತ
ಅಸ್ತು ವಾತ್ರಫಲಂ ಮಾವಾ ಕರ್ತವ್ಯಂ ಪುರುಷೇಣಯತ್
ಗೃಹೇ ನಿವಸತಾಕೃಷ್ಣೇ ಯಥಾಶಕ್ತಿ ಕರೋಮಿ ತತ್
ಯಸ್ಯನಾರ್ಷಂ ಪ್ರಮಾಣಂ ಸ್ಯಾತ್ ಶಿಷ್ಟಾಚಾರಶ್ಚಭಾಮಿನಿ
ನವೈತಸ್ಯಾಪರೋಲೋಕೋ ನಾಯಮಸ್ತೀತಿ ನಿಶ್ಚಯಃ
ದಾನಮಾರ್ಜವಮೇತಾನಿ ಯದಿಸ್ಯುರಫಲಾನಿ ವೈ

ನಾಚರಿಷ್ಯನ್ ಪರೇ ಧರ್ಮಂ ಪರೇ ಪರಪರೇಽಪಿ ವಾ
ಕರ್ಮಣಾಮುತಪುಣ್ಯಾನಾಂ ಪಾಪಾನಾಂ ಚ ಫಲೋದಯಃ
ಪ್ರಭವಶ್ಚಾಪ್ಯಯಶ್ಚೈವ ದೇವಗುಹ್ಯಾನಿ ಭಾಮಿನಿ
ನ ಫಲಾದರ್ಶನಾತ್‌ಧರ್ಮಃ ಶಂಕಿತವ್ಯೋ ನ ದೇವತಾಃ
ವಿಮೃಶ್ಯ ಸರ್ವಮಸ್ತೀತಿ ನಾಸ್ತಿಕ್ಯಂ ಭಾವಮುತ್ಸೃಜ

"ರಾಜಪುತ್ರಿ, ನಾನು ಧರ್ಮವನ್ನು ಅದರಿಂದ ಬರುವ ಫಲದ ಆಸೆಗಾಗಿ ನಡಸುತ್ತಿಲ್ಲ. ದಾನ ನೀಡಬೇಕು ನೀಡುತ್ತಿದೇನೆ, ಯಜ್ಞ ಮಾಡಬೇಕು ಮಾಡುತ್ತಿದೇನೆ. ಅದರಿಂದ ಫಲ ಇರಲಿ ಬಿಡಲಿ ಮಾಡತಕ್ಕದ್ದು ಯಾವುದು ಅದನ್ನು ಮಾಡಬೇಕು. ಆರ್ಷ ಶಿಷ್ಟಾಚಾರ ಪ್ರಮಾಣ ಗಳಲ್ಲದೆ ಹೋದರೆ ನಮಗೆ ಇಹವಿಲ್ಲ ಪರವಿಲ್ಲ. ದಾನ ಆರ್ಜವ ನಿಷ್ಫಲವೇ ಆದರೆ ಯಾರೂ ಯಾವ ಧರ್ಮವನ್ನೂ ಮಾಡುತ್ತಿರಲಿಲ್ಲ. ಆದರೆ ಒಳ್ಳೆಯದು ಕೆಟ್ಟದರ ಫಲ ಇಲ್ಲದೆ ಹೋಗುವುದಿಲ್ಲ. ಅದು ದೇವ ಗುಹ್ಯ; ನಮಗೆ ಕಾಣುವುದಿಲ್ಲ. ಫಲ ಗೋಚರವಾಗಲಿಲ್ಲವೆಂಬ ಕಾರಣದಿಂದ ಧರ್ಮ ವಿದೆಯೋ ಎಂದು ದೇವತೆಗಳುಂಟೋ ಎಂದು ಶಂಕೆಬೇಡ. ಯೋಚನೆಮಾಡಿ ಇದೆಲ್ಲ ಉಂಟೆಂಬುದನ್ನು ಕಂಡುಕೊ, ನಾಸ್ತಿಕ ಭಾವವನ್ನು ಬಿಡು."

"ನಾನು ನಿನ್ನ ಸೇವೆ ಮಾಡಿದೇನಲ್ಲ, ನೀನು ನನಗೆ ಏನು ಕೊಡು ತ್ತೀಯೆ" ಎಂದು ಧರ್ಮದೊಡನೆ ವ್ಯಾಪಾರ ಬೇಡ. ಅದು ರಕ್ಷಿಸದೆ ಬಿಡುವುದಿಲ್ಲ. ಉಪನಿಷತ್ತು ಸತ್ಯಮೇವ ಜಯತೇ ನಾನೃತಂ ಎಂದಿತು. ಮಹಾಭಾರತ ಹೇಳಿದೆ:

ಧರ್ಮೋಜಯತಿನಾಧರ್ಮಃ ಸತ್ಯಂ ಜಯತಿನಾನೃತಂ

ಧರ್ಮವೇ ಗೆಲ್ಲುವುದು, ಅಧರ್ಮ ಅಲ್ಲ. ಸತ್ಯಗೆಲ್ಲುತ್ತದೆ. ಅನೃತ ಗೆಲ್ಲುವುದಿಲ್ಲ.

ಸ್ಪೃಷ್ಟ್ವಾಮಪ್ಯಸಮುಥೋಽಹಿ ಜ್ವಲನ್ತಮಿವಪಾವಕಂ
ಅಧರ್ಮಃ ಸಂತತೋಽಧರ್ಮಂ ಕಾಲೇನಪರಿರಕ್ಷಿತಂ

ಅಧರ್ಮ ಧರ್ಮವನ್ನು ಸೋಲಿಸುವುದು ಹಾಗಿರಲಿ, ಎಂದೇ ಆಗಲಿ ಸೋಕಲಾರದು, ಸೋಕಿ ಉಳಿಯಲಾರದು. ಧರ್ಮಕ್ಕೆ ಸೋಲಿಲ್ಲ. ಅದನ್ನು ಕಾಲವೇ ರಕ್ಷಿಸುತ್ತಿದೆ.

ಕೊನೆಯಾಗಿ, ಈ ಮೊದಲು ಬಂದಿರುವ ಎರಡು ವಾಕ್ಯಗಳನ್ನು ಮರಳಿ ಹೇಳಬಹುದು :

**ಯತೋಧರ್ಮಸ್ತತೋಜಯಃ ಧರ್ಮೋರಕ್ಷತಿರಕ್ಷಿತಃ**

## ೪೧
## ಸ್ನಾತವ್ಯಂಭಾರತೇತೀರ್ಥೇ

ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್ ಎಂಬ ಪ್ರತಿಜ್ಞೆಯನ್ನು ಭಾರತದ ಋಷಿ ಎಷ್ಟು ಚೆನ್ನಾಗಿ ಸಾಧಿಸಿದನೆನ್ನುವುದು ಈ ಉಪನ್ಯಾಸ ದಿಂದ ಸ್ವಲ್ಪಮಟ್ಟಿಗೆ ಕಂಡಿರಬೇಕು. ಸ್ವಲ್ಪಮಟ್ಟಿಗೆ ಎನ್ನುವುದು ಬರಿಯ ವಿನಯದ ಮಾತಲ್ಲ. ಮಹಾಗ್ರಂಥದ ಯೋಗ್ಯತೆಯನ್ನು ಎಷ್ಟೇ ಲಂಬ ವಾದ ಉಪನ್ಯಾಸದಿಂದಾಗಲಿ ಸ್ಪಷ್ಟಪಡಿಸುವೆನೆನ್ನುವುದು ಮಿಥ್ಯಸಂಕಲ್ಪ. ಭಾರತ ಗ್ರಂಥ ಎಂಥ ವಿಸ್ತಾರವಾದ ಜ್ಞಾನ ಭಾಂಡಾರ ಎನ್ನುವುದನ್ನು ಈ ಕಾಲದ ನಾವು ಬೇಗನೆ ಕಂಡುಕೊಳ್ಳಬೇಕು. ಇಂದಿನ ನಮ್ಮ ಜೀವನವನ್ನು ಪರಿಷ್ಕರಿಸುವುದಕ್ಕೆ ಬೇಕಾದ ಸಾವಿರ ಸೂತ್ರ ಈ ಒಂದು ಗ್ರಂಥದಲ್ಲಿ ದೊರೆಯುತ್ತವೆ. ಇದು ಜನಾಂಗದ ಪೈತಾಮಹ ಸಂಪತ್ತು. ಒಂದು ಕಾಲದಲ್ಲಿ ಇದರ ಉದಾತ್ತ ಉಪದೇಶವನ್ನು ನಡಸಿ ಈ ಜನತೆ ಚೆನ್ನಾಗಿ ಬಾಳಿತು; ಈಚೆಗೆ ಅದನ್ನು ಮರೆತು ತನ್ನ ಐಶ್ವರ್ಯವನ್ನು ಕಳೆದುಕೊಂಡು ಪರಾಧೀನವಾಗಿ ತೊಳಲಿತು. ಈಗ ಪರಾಧೀನತೆಯಿಂದ ಬಿಡಿಸಿಕೊಂಡಿರುವ ಈ ಜನತೆ ಮತ್ತೆ ಉತ್ತಮವಾದ ವ್ಯಕ್ತಿ ಜೀವನ, ಸಮಾಜ ಜೀವನ, ರಾಷ್ಟ್ರ ಜೀವನವನ್ನು ನಿರ್ಮಿಸಬೇಕಾಗಿದೆ. ಹಿರಿಯರ ಧ್ವನಿ ಶತಮಾನಗಳ ಅಂತರವನ್ನು ದಾಟಿ, ಆತ್ಮದ ಸಮಾಜದ ದೇಶದ ಉನ್ನತಿಯನ್ನು ಸಾಧಿಸಿ ಎಂದೂ, ಲೋಕಕಲ್ಯಾಣದ ಮಾರ್ಗವನ್ನು ನಿರ್ದೇಶಿಸಿ ಎಂದೂ, ಕೂಗಿ ಹೇಳುತ್ತಿದೆ. ಜನತೆ ಆ ರಕ್ಷಕವಾಣಿಗೆ ಕಿವಿಗೊಡಬೇಕು. ತಾನು ಮಂಗಳವನ್ನು ಕಾಣಬೇಕು; ಲೋಕಕ್ಕೆ ಮಂಗಳವನ್ನು ತೋರಬೇಕು.

ಅಸಂಖ್ಯಾತ ಮಹಾಪುರುಷ ತಪಸ್ವಿ ಋಷಿಗಳ ಶಾಸನ ಆಶೀರ್ವಚನ ಶುಭಾಶಯವನ್ನು ಒಳಗೊಂಡ ಭಾರತ ಗ್ರಂಥ ಅವರ ತಪಸ್ಸು ಜ್ಞಾನ

ಧರ್ಮನಿಷ್ಠೆ ಸತ್ಯಸಂಕಲ್ಪ ಮಡುಗೂಡಿ ನಿಂತಿರುವ ಮಾನಸ ಸರೋವರ, ಪಾವನ ತೀರ್ಥ. ಪೂರ್ವಿಕರೊಬ್ಬರು, "ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ ಕಿಂತಸ್ಯ ಪುಷ್ಕರ ಜಲೈಃ ಅಭಿಷೇಚನೇನ" ಎಂದರು. ಭಾರತ ಗ್ರಂಥ ಪುಷ್ಕರಕ್ಕಿಂತ ಮಿಗಿಲಾದ ಪುಣ್ಯತೀರ್ಥ ಎಂಬ ಈ ಭಾವನೆ ಯಾವ ಕಾಲಕ್ಕೂ ಒಪ್ಪತಕ್ಕದ್ದು. ಮನುಜಕುಲವೇ ಈ ತೀರ್ಥದಲ್ಲಿ ಸ್ನಾನಮಾಡಿ ಉದ್ಧಾರವಾಗಬಹುದು.

ಅಗಾಧೇ ವಿಮಲೇ ಶುದ್ಧೇ ಕ್ಷಮಾಸತ್ಯ ಧೃತಿಹ್ರದೇ
ಸ್ನಾತವ್ಯಂ ಭಾರತೇ ತೀರ್ಥೇ ಸತ್ವಮಾಲಂಬ್ಯ ಶಾಶ್ವತಂ

6–49. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ (ಐತಿಹಾಸಿಕ ದೃಶ್ಯ
ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ನಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩
ಯಶೋಧರಾ (ನಾಟಕ)
ಮಲಾರ (ಪದ್ಯಗಳು)
ಸಣ್ಣ ಕತೆಗಳು ೪

ರವೀಂದ್ರನಾಥ ಠಾಕೂರರು
ಸಣ್ಣ ಕತೆಗಳು ೫
ಶ್ರೀ ರಾಮಕೃಷ್ಣ
ತಿರುಪಾಣಿ (ಗೀತಪ್ರಧಾನ ನಾಟಕ)
ಕರ್ನಾಟಕದ ಜನಪದ ಸಾಹಿತ್ಯ
ಕಾಕನಕೋಟೆ (ದೃಶ್ಯ)
ಆದಿಕವಿ ವಾಲ್ಮೀಕಿ
ವಿಮರ್ಶೆ ೪
ಸಣ್ಣ ಕತೆಗಳು ೬
ಗೌಡರ ಮಲ್ಲಿ (ಪದ್ಯ ಕಥೆ)
ರಾಮನವಮಿ ,,
ಮೂಕನ ಮಕ್ಕಳು ,,
ತಾಯ್ನುಡಿಯ ತಮ್ಮಡಿ (ಭಾಷಣ)
ನವರಾತ್ರಿ ೨, ೪ (ಕಥನ ಕವನ)
ಚಿತ್ರಾಂಗದಾ (ಭಾಷಾಂತರ)
ಸುನೀತ (ಪದ್ಯಗಳು)
ನವರಾತ್ರಿ ೩
ಪ್ರಸಂಗ (ಲೇಖನಗಳು)
ನವರಾತ್ರಿ ೫
ಸಣ್ಣ ಕತೆಗಳು ೭, ೮, ೯, ೧೦
ಚೆನ್ನಬಸವನಾಯಕ
ಮನವಿ (ಗೀತೆಗಳು)
ಪೂಜನ (ಮುನ್ನುಡಿಗಳ ಸಂಕಲನ)

(ಇಂಗ್ಲೀಷಿನಲ್ಲಿ)

Popular Culture in Karnataka
The Poetry of Valmiki
Short Stories (4 Vols.)
Subbanna (Story)
Rabindranath Tagore

---

# ಮುನ್ನುಡಿ

ಸ್ವಭಾವತಃ ಜೀವನವನ್ನು ಕುರಿತು ವಿಚಾರಮಾಡುವ ಪ್ರವೃತ್ತಿ, ಜೊತೆಗೆ ಸ್ವಲ್ಪ ಅನಾರೋಗ್ಯ, ಸೇರಿ ನಾನು ೧೯೩೪ರ ಸುಮಾರಿನಲ್ಲಿ, ತೋಚಿದ ಸಂಗತಿಯನ್ನು ಹಿಡಿದು ಯೋಚಿಸುವುದು ಆ ಯೋಚನೆಯ ಮುಖ್ಯಾಂಶವನ್ನು ನೆನಪಿಗಾಗಿ ಗುರುತು ಹಾಕಿಕೊಳ್ಳುವುದು, ಈ ಕ್ರಮವನ್ನು ಮೊದಲು ಮಾಡಿದೆನು. ಆರೋಗ್ಯ ಸರಿ ಹೋದಮೇಲೂ ಈ ಅಭ್ಯಾಸ ಬಿಡಲಿಲ್ಲ. ಹೀಗೆ ಆಗಿನಿಂದ ಈ ಹಿಂದಿನ ವರ್ಷದವರೆಗೆ ಆಗಾಗ ಗುರುತಿಸಿದ ಮಾತನ್ನು "ಚಿಂತನ" ದಲ್ಲಿ ನಮ್ಮ ಜನರ ಮುಂದೆ ಇರಿಸಿದೇನೆ.

ಇದು ದಿನ ಬಿಡದೆ ಬರೆದ ಒಂದು ಚರಿಯಲ್ಲ; ಒಳಗಿನ ಅಥವಾ ಹೊರಗಿನ ಸ್ಥಿತಿಯಿಂದ ಯೋಚನೆ ಆರಂಭವಾದ ಸಂದರ್ಭದಲ್ಲಿ ಹಲವು ದಿನ ಚಿಂತೆ ಮಾಡಿ ಮಾಡಿ ಯಾವುದೊ ನಿಶ್ಚಯಕ್ಕೆ ಬಂದು ಆ ನಿಶ್ಚಯ ನೆನಪಿರಲಿ ಎಂದು ಗುರುತಿಸಿದ ಟಿಪ್ಪಣಿಗಳ ಸಂಗ್ರಹ. ಸಂಗತಿಯಿಂದ ಸಂಗತಿಗೆ ಮಧ್ಯೆ ಕೆಲವು ಸಲ ಹಲವು ದಿನ, ಕೆಲವು ಸಲ ಹಲವು ತಿಂಗಳು, ಒಂದೆರಡು ಸಲ ಹಲವು ವರುಷ ಕಳೆದದ್ದುಂಟು.

ಈ ಟಿಪ್ಪಣಿಗಳನ್ನು ಓದುವ ಮಿತ್ರರು ಒಂದೊಂದರ ಮಾತೂ ಯಾವುದೊ ಒಂದು ಸಂದರ್ಭದಲ್ಲಿ ಮೂಡಿದ್ದು ಎಂಬ ವಿವರವನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕೆಂದು ಪ್ರಾರ್ಥನೆ. ಹೀಗೆ ಮಾಡಿದರೆ ಆಯಾ ಮಾತಿನ ಹಿನ್ನೆಲೆಯನ್ನು ರಚಿಸಿಕೊಳ್ಳುವುದು ಸುಲಭವಾಗುತ್ತದೆ. ಹಾಗೆಯೇ, ಯಾವುದೇ ಟಿಪ್ಪಣಿಗೆ ಅದರ ವ್ಯಾಪ್ತಿಗೆ ಮೀರಿದ ಅರ್ಥ ಆರೋಪ ಆಗುವುದು ತಪ್ಪುತ್ತದೆ.

ಹತ್ತು ಜನರಂತೆ ಬಾಳಿದ ವಿಚಾರಪರವಾದ ಒಂದು ಚೇತನ ಜೀವನದ ಮುಸಕು ಬೆಳಕಿನಲ್ಲಿ ಅರ್ಥ ಕಂಡು ಅರ್ಥ ಕಾಣದ ಒಂದು ದಾರಿಯನ್ನು ನಡೆದ ರೀತಿ ಈ ಕೃತಿಯಲ್ಲಿ ಕಂಡುಬರಬೇಕು. ಎಂದರೆ

ಇದು ಸಾಮಾನ್ಯ ಜೀವನ ಒಂದರ ವಿಚಾರಪಥದ ನಕ್ಷೆ. ಇದೇ ಚಪಲ, ಇದೇ ಭಯ, ಇದೇ ಚಿಂತೆ, ಇದೇ ಆಸೆ ಕೋಟಿ ಕೋಟಿ ಜೀವಗಳಲ್ಲಿ ಸದಾ ಮೂಡುತ್ತಿವೆ. ಜೊತೆಯ ಒಂದು ಜೀವ ಇಂಥ ಹೊತ್ತಿನಲ್ಲಿ ಏನೆಂದು ಯೋಚಿಸಿತು, ಹೇಗೆ ತೊಳಲಾಡಿತು, ಯಾವ ದಾರಿ ಹಿಡಿಯಿತು, ಹೇಗೆ ಸಮಾಧಾನಪಡೆಯಿತು, ಎನ್ನುವುದು ಇಂಥ ಜೀವಗಳಿಗೆಲ್ಲ ಕುತೂಹಲದ ಸಂಗತಿ; ಹಾಗೆಯೇ ಪ್ರಯೋಜನಕ್ಕೂ ಬರಬಹುದು. ಹೀಗಾದೀತೆಂಬ ನಿರೀಕ್ಷೆಯಿಂದ, ಹೀಗಾಗಲೆಂಬ ಅಪೇಕ್ಷೆಯಿಂದ, ನನ್ನ ಮಾನಸ ಜೀವನದ ಈ ರೇಖಾಪಟವನ್ನು ಸಹೃದಯರಿಗೆ ಒಪ್ಪಿಸಿದೇನೆ.

ಬೆಂಗಳೂರು ನಂದನ<br>
ಆಷಾಢ ಬಹುಳ ಸಪ್ತಮಿ

ಶ್ರೀನಿವಾಸ

# ಚಿಂತನ

ಲೋಕ ನನಗೆ ಯಾವಾಗಲೂ ಅನುಕೂಲವಾಗಿಯೇ ಇದ್ದಿದೆ; ಪ್ರತಿಕೂಲವಾಗಿದ್ದಿರುವುದು ಅದನ್ನು ಕುರಿತ ನನ್ನ ಕಲ್ಪನೆ.

ಪೂರ್ವ ವಯಸ್ಸಿನ ಜೀವಕ್ಕೆ ಬದುಕಿರುವುದೇ ಒಂದು ಸಂತೋಷ ಆಗಿರುತ್ತದೆ. ನಾನು ಈಗಲೂ ಆ ಸಂತೋಷವನ್ನು ಕಾಣಬೇಕು; ಜೊತೆಗೆ ಜೀವನ ಎನ್ನುವುದು ಸೇವೆಗಾಗಿ, ಪೂಜೆಗಾಗಿ, ಅನುಗೃಹೀತ ಆಗಿರುವುದನ್ನು ಮರೆಯದೆ ಇರಬೇಕು.

ಶಂಕೆ ಹತ್ತಿದ ವೇಳೆಯಲ್ಲಿ ನಾನು ಈ ಮಾತನ್ನು ಹೇಳಿಕೊಳ್ಳಬೇಕು: ಎಲ್ಲ ಸರಿಯಾಗಿದೆ, ಸರಿಯಾಗಿರುತ್ತದೆ. ಇದು ನಿಜ.

ಸದಾ ನಾನು ಬಾಳನ್ನು ಕುರಿತು ಹರ್ಷಯುಕ್ತವಾದ ಭಾವದಿಂದಿರಬೇಕು. ದೇವರು ನನಗೆ ತುಂಬ ಒಳಿತನ್ನು ನೀಡಿದ್ದಾನೆ; ಕೆಟ್ಟದನ್ನು ಮಾಡಿಲ್ಲ.

ಇಷ್ಟೇ ಅಲ್ಲ. ದೇವರು ನನಗೆ ನೀಡಿರುವ ಸಂಪತ್ತು ಅವನು ನನಗೆ ನೀಡಿಲ್ಲ ಎಂದು ನಾನು ತಿಳಿಯುವ ಸಂಪತ್ತಿಗಿಂತ ಎಷ್ಟೋಪಟ್ಟು ಮಿಗಿಲಾಗಿದೆ.

ಇದು ಇನ್ನೂ ನನ್ನ ಮನಸ್ಸಿಗೆ ಮುಟ್ಟಿಲ್ಲ, ಆದರೆ ತೋರಿದೆ. ಅವನು ಎಂದೂ ನನ್ನ ಕೈಬಿಟ್ಟಿಲ್ಲ; ಈಗಲೂ ನನ್ನನ್ನು ಹಿಡಿದಿದ್ದಾನೆ.

ಇದು ಅಹಂಕಾರದ ಮಾತಾಗಿ ಕಾಣುತ್ತದೆ. ನಾನೆಷ್ಟು ದೇವರೆಷ್ಟು!

ಆದರೆ ಅವನು ಎಂಥ ಕೃಪಾಳು ಎನ್ನುವುದನ್ನು ಅರಿತರೆ ಅವನು ಜೊತೆ ಗಿರುವನೆನ್ನುವುದು ಸೋಜಿಗ ಎನಿಸುವುದಿಲ್ಲ

ಉಳಿದವರಿಗೋ? ಆ ಸಂಗತಿಯನ್ನು ನಾನು ಕಾಣೆ. ಅವನು ಅವರ ಜೊತೆಗೂ ಇರಬೇಕು. ಅವನನ್ನು ಬಿಟ್ಟು ಯಾರುಂಟು? ಏನುಂಟು?

ಮಾಡಬೇಕಾದ ಕಾರ್ಯ: ಅದನ್ನು ಮಾಡುವುದರಲ್ಲಿ ನಾನು ಈಷದಪಿ ಹಿಂತೆಗೆಯಬಾರದು. ಅಂಥ ಕಾರ್ಯದಿಂದ ಶುಭವೇ ಸಾಧಿಸುತ್ತದೆ; ಅಶುಭ ಬರಲಾರದು.

ದೇವರೇ ಬೆಳಕು ತೋರುವವನು. ಅವನೇ ನಡಸುವವನು. ಇದು ಒಳಿತು ಎಂಬುದನ್ನು ಕಾಣುವ ದೃಷ್ಟಿಯನ್ನೂ ಅವನು ಅನುಗ್ರಹಿಸಬೇಕು. ಆ ಒಳಿತನ್ನು ಮಾಡುವ ಶಕ್ತಿಯನ್ನೂ ಅವನು ಅನುಗ್ರಹಿಸಬೇಕು.

ಅವನಿಂದ ಹೊರತಾಗಿ ದೃಷ್ಟಿ ಬರುವುದಿಲ್ಲ. ಅವನಿಂದ ಹೊರತಾಗಿ ಶಕ್ತಿ ಒದಗುವುದಿಲ್ಲ. ಇದನ್ನು ಪೂರ್ಣವಾಗಿ ಗ್ರಹಿಸುವುದು ಕಷ್ಟವಾಗಿದೆ; ಆದರೆ, ಸತ್ಯ ಇದೇ

ನಾನು ಸ್ವಾರ್ಥದಿಂದ ಬಯಸುತ್ತೇನೆ, ಅವನ ಸೇವೆ ಮಾಡಬೇಕು ಎಂದು. ದೇವರಿಗೆ ನನ್ನ ಸೇವೆಯಿಂದ ಆಗಬೇಕಾದ ಪ್ರಯೋಜನ ಯಾವುದೂ ಇಲ್ಲ; ನನಗೆ ಇದೆ.

ಆದಕಾರಣ ಚೆನ್ನಾಗಿ ಅವನ ಸೇವೆ ಮಾಡುವ ಸಲುವಾಗಿ ನಾನು ಅವನನ್ನು ನಂಬಿ ನಡೆಯುತ್ತೇನೆ; ಆಗ ಒಳಿತನ್ನು ಮಾಡುವ ಶಕ್ತಿ ಅಪಾರ ವಾಗಿ ಒದಗುತ್ತದೆ.

ಅಲ್ಲದೆ ನಾನು ಮಾಡಿದ್ದು ಒಳ್ಳೆಯದಾಗುತ್ತದೆ; ಒಳ್ಳಿತಲ್ಲದೆ ಬೇರೆ ಏನೂ ಆಗುವುದಿಲ್ಲ. ಏಕೆಂದರೆ ಅವನೇ ಅದನ್ನು ನನ್ನಿಂದ ಮಾಡಿಸುತ್ತಾನೆ.

ಜ್ಞಾನ ಸಿದ್ಧಿಸುವುದು ಕಷ್ಟ; ಭಕ್ತಿ ಸಿದ್ಧಿಸುವುದು ಸುಲಭವಲ್ಲ; ಕರ್ಮ ಸಿದ್ಧಿ ಸರಳ. ಸದ್ಯ ಕೈಗೆ ಕಾದಿರುವ ಕೆಲಸವನ್ನು ಮಾಡುತ್ತೇನೆ. ಅದನ್ನು

ಮಾಡುವುದಕ್ಕೆ ಬೇಕಾದ ಶಕ್ತಿಯನ್ನು ಅನುಗ್ರಹಿಸು ಎಂದು ದೇವರನ್ನು ಬೇಡುತ್ತೇನೆ.

ನಿತ್ಯಕರ್ಮದ ಕ್ರಮ ಯಾವುದಿದೆ ನಾನು ಅದನ್ನು ಬಿಡದೆ ನಡೆಯಬೇಕು. ನನ್ನ ಧರ್ಮದ ಆದ್ಯರು ಅದರ ಸಹಾಯದಿಂದ ದೇವರನ್ನು ಕಂಡರು.

ಬೆಳಕು ಮೂಡುತ್ತದೋ, ಮೂಡುವುದಿಲ್ಲವೋ, ಇದನ್ನು ಯಾರು ಹೇಳಬೇಕು? ದೇವರು ಕರುಣಿಸಬೇಕು, ಅದು ಮೂಡಬೇಕು. ಆದರೆ, ಅದು ಮೂಡಿದರೂ ಗಮನಿಸದೆ ನಾನು ಕೆಡಬಾರದು.

ಆದಕಾರಣ ಯಾವುದೇ ಸಂಗತಿಯಲ್ಲಿ ದಾರಿ ಅಸ್ಪಷ್ಟವಾದಾಗ ನಾನು ನನ್ನ ಹಿರಿಯರನ್ನು ನೆನೆಯುತ್ತೇನೆ; ಅವರು ಈ ಸಂದರ್ಭದಲ್ಲಿ ಹೇಗೆ ನಡೆಯುತ್ತಿದ್ದರು ಎಂದು ಪ್ರಶ್ನೆಮಾಡಿಕೊಳ್ಳುತ್ತೇನೆ.

ಬೇರೆಯವರ ದುಃಖವನ್ನು ಕಂಡ ಹೊತ್ತಿನಲ್ಲಿ ನಾನು ನನ್ನ ಸಲುವಾಗಿ ಭೀತಿ ಪಡುವುದು ಕೂಡದು. ಆ ದುಃಖವನ್ನು ಹೇಗೆ ನಿವಾರಿಸಿಯೇನು ಎಂದು ಯೋಚಿಸಬೇಕು. ಕೈಯಲ್ಲಾದದ್ದನ್ನು ಮಾಡಬೇಕು.

ಈ ದಿನ ನಿನ್ನೆ ಅಲ್ಲ ಈ ಬಾಳು ಇನ್ನೊಬ್ಬರದಲ್ಲ. ನಿನ್ನೆಯ ಯೋಚನೆ ಇಂದಿನ ಬಾಳನ್ನು ತಿದ್ದುವುದಿಲ್ಲ. ಬೇರೆ ಬಾಳಿನ ಸಂಗತಿ ಈ ಬಾಳನ್ನು ನಿರ್ಧರಿಸುವುದಿಲ್ಲ.

ಒಳಿತಾಗಿ ಬಾಳಲು ಈ ದಿನವೆ ತೊಡಗು. ಈ ದಿನ ಅದರ ಅವಕಾಶ ತಪ್ಪಿಹೋಗಿಲ್ಲ. ನಾಳೆ ಎಂದರೆ ಒಂದು ದಿನ ಹೆಚ್ಚಾಗಿ ಕಳೆದುಹೋಗಿರುತ್ತದೆ.

ಬೇರೆ ಬಾಳಿನ ಬೇನೆಯನ್ನು ನೋಡಿ ನಿನಗಾಗಿ ನೀನು ಅಂಜುವೆಯೇನು? ಆ ಬೇರೆಯ ಬಾಳಿನ ಆನಂದವನ್ನು ನೋಡಿ ನೀನೂ ಆನಂದವನ್ನು ನಿರೀಕ್ಷಿಸುವೆಯಾ?

ಇನ್ನೊಂದು ಜೀವಕ್ಕೆ ಕನಿಕರ ತೋರಲು ನಾಚಿಕೊಳ್ಳಬೇಡ: ನಿನಗೆ ಕನಿಕರ ತೋರಲು ದೇವರು ನಾಚಿದರೆ ನಿನ್ನ ಗತಿಯೇನು?

ಭೂತವಾದದ್ದನ್ನು ಭೂತಮಾಡಿಕೊಳ್ಳುವುದು ಬೇಡ. ಭವಿಷ್ಯವನ್ನು ಕಲ್ಪಿಸಿಕಟ್ಟುವುದು ಬೇಡ. ಈ ಹೊತ್ತನ್ನು ಕುರಿತು ಭೀತಿ ಬೇಡ.

ಆದದ್ದರಲ್ಲಿ ಒಳಿತು ಯಾವುದು ಅದನ್ನು ಸ್ಮರಿಸುತ್ತೇನೆ. ಈ ದಿನ ಯಾವುದು ಒಳಿತು ಅದನ್ನು ಮಾಡುತ್ತೇನೆ. ಮುಂದೆ ಒಳಿತಾಗಿ ನಡೆಯುವಂತೆ ಭಗವಂತನು ಅನುಗ್ರಹಿಸಲಿ ಎಂದು ಕೋರುತ್ತೇನೆ.

ದೇವರು ನನಗೆ ದಯಪಾಲಿಸಿರುವ ಮೈ, ಮನಸ್ಸು, ಆತ್ಮ, ಸಂಕಲ್ಪ ಈ ಯಾವುದರ ಶಕ್ತಿಯನ್ನೂ ನಾನು ತಕ್ಕಷ್ಟು ಬಳಸಿದ್ದಿಲ್ಲ.

ನಾನು ನನ್ನ ವಿಷಯಕ್ಕೆ ಅಧೀರನಾಗಲೊಲ್ಲೆ. ಗತಕಾಲ ನನಗೆ ಎಷ್ಟು ಸಹಾಯಕವಾಗಿ ಇದ್ದಿದೆ! ಅನಾಗತವನ್ನು ಕುರಿತು ಏಕೆ ಶಂಕೆ ಪಡಲಿ?

ನಿನ್ನೆ ಒಂದು ಸಂದರ್ಭದಲ್ಲಿ ತಪ್ಪಿ ನಡೆದೆನಲ್ಲವೆ? ಇಂದು ಅದೇ ಸಂದರ್ಭದಲ್ಲಿ ಮರಳಿ ತಪ್ಪುವುದು ಬೇಡ.

ನಿನ್ನೆ ಒಂದು ಮಾತಿನಲ್ಲಿ ನಾನು ಅಂಜಿ ನಡೆದೆನಲ್ಲವೆ? ಈ ದಿನ ನಾನು ಅಂಜಲೊಲ್ಲೆ. ಧೈರ್ಯದಿಂದ ಸಾಗುತ್ತೇನೆ.

ಸರ್ವದಾ ಭಾವನೆ, ಮಾತು, ಕ್ರಿಯೆ ಒಳ್ಳಿತೇ ಆಗಲಿ.

ನಾನು ಎಲ್ಲರಂತೆ ಒಬ್ಬ. ಎಲ್ಲರಂತೆ ಬಾಳಬೇಕು. ಎಲ್ಲರಿಗಾಗಿ ಬಾಳಬೇಕು.

ನನಗೆ ಸುಖಿಯಾಗುವ ಅಭಿಲಾಷೆ. ಸುಖಿ ಹೇಗೆ ಆದೇನು? ಸುಖಿ ಯಾಗಬೇಕೆಂದು ಅತಿಯಾಗಿ ಯೋಚಿಸದೆ ಇರುವುದರಿಂದ. ನಾನು ಸುಖಿ ಯಾಗುವ ದಾರಿ ಇತರರಿಗೆ ಹೇಗೆ ಸುಖ ನೀಡಿಯೇನು ಎಂದು ನಡೆಯುವುದ ರಲ್ಲಿದೆ.

ಮನಸ್ಸಿನಿಂದ ಎಲ್ಲ ತಪ್ಪು ಎಣಿಕೆಗಳನ್ನು ಕೊಡವಿಹಾಕು. ಮನುಷ್ಯನ ಮನಸ್ಸಿನ ಯೋಚನೆಯ ಬಹುಭಾಗ ಹುಚ್ಚುಹುಚ್ಚು: ತಿಪ್ಪೆಗೆ ಹಾಕುವ ಯೋಚನೆ.

ಸಂಕಲ್ಪದ ಶಕ್ತಿಗೆ ಗಾಂಧೀಜೀ ನಿದರ್ಶನ. ಅವರ ಸಂಯಮದ ನೂರ ರಲ್ಲಿ ಒಂದಂಶ ಸಿದ್ಧಿಸಿದರೆ ನನ್ನ ಬಾಳು ಸಾರ್ಥಕವಾದೀತು. ದೇವರು ನಮ್ಮ ಒಬ್ಬೊಬ್ಬರಲ್ಲೂ ಸಂಕಲ್ಪ ಶಕ್ತಿಯನ್ನು ಇಟ್ಟಿದಾನೆ; ಒಬ್ಬೊಬ್ಬರೂ ಅದನ್ನು ಬಳಸುತ್ತಿಲ್ಲ.

ಯಾವ ಕೆಲಸವನ್ನು ಮಾಡಲಿ, ಏನೆಂದು ಯೋಚಿಸಲಿ, ಏನು ಆಗ ಲಿದೆ, ಎಂದು ಸರ್ವದಾ ಚಿಂತಿಸುವುದು ಒಳ್ಳಿತಲ್ಲ.

ಹೀಗಾದರೆ ಹೇಗೆ ಎಂಬುದಾಗಿ ಕಲ್ಪಿಸುವುದು ಬೇಡ. ಕಲ್ಪಿಸುವುದೇ ಆದರೆ, ಒಳ್ಳಿತನ್ನೇ ಕಲ್ಪಿಸಿಕೊ.

ಆತ್ಮಪರೀಕ್ಷಣ ಒಳ್ಳೆಯದು; ಆದರೆ ಅದು ಬಹು ಸುಲಭದಲ್ಲಿ ಅತಿ ಆಗುತ್ತದೆ.

ಎಷ್ಟು ಹೇಳಿದರೂ ಇದು ಸತ್ಯ. ಬಾಳನ್ನು ನಮಗೆ ಕೊಟ್ಟಿರುವುದು ಮುಖ್ಯವಾಗಿ ಬಾಳುವುದಕ್ಕೆ, ತಿಳಿಯುವುದಕ್ಕಲ್ಲ.

ಹೇರಳವಾಗಿ ಪ್ರಶ್ನೆಗಳನ್ನು ಹಾಕಿಕೊಳ್ಳುವುದು ಎದುರಿಗೆ ಒಗಟಿಗಳ ಬುಟ್ಟಿಯೊಂದನ್ನು ಇಟ್ಟುಕೊಂಡಂತೆ. ಬಾಳಿನ ಉದ್ದೇಶ ಇವನ್ನು ಬಿಡಿ ಸುವುದಲ್ಲ.

ಅಲ್ಲದೆಯೊ ಬಾಳುವೆ ಒಂದು ರಹಸ್ಯ. ಅದನ್ನು ಪೂರ್ಣವಾಗಿ ತಿಳಿಯುವುದು ಸಾಧ್ಯವಲ್ಲ.

ಸರಿಯಾಗಿ ಬಾಳುವುದಕ್ಕೆ ಇಂಥ ತಿಳಿವು ಆವಶ್ಯಕವೂ ಅಲ್ಲ.

ಅಂದಂದಿನ ಕರ್ತವ್ಯದ ಕೆಲಸವನ್ನು ಅಂದಂದು ಮಾಡಿ, ಅದರ ವಿಷಯ ಬಹಳವಾಗಿ ಚಿಂತೆ ಮಾಡದೆ ಇರಬೇಕು. ಇದೇ ಒಳ್ಳೆಯ ಜೀವನ.

ಈ ಯೋಚನೆಯನ್ನೆಲ್ಲ ನಾನು ಈ ಮೊದಲು ಮಾಡಿದ್ದುಂಟು. ಆದರೆ ಈ ಎಲ್ಲ ಇನ್ನೂ ಮನಮುಟ್ಟಬೇಕಾಗಿದೆ.

ಕೆಲವು ಸಂದರ್ಭದ ನಮ್ಮ ಹಿಂಜರಿವು ಕಾಳಿದಾಸನ ದುಷ್ಯಂತ ಆಸ್ಥಾನಕ್ಕೆ ಬಂದ ಶಕುಂತಲೆಯನ್ನು ಕಂಡಾಗ ಅನುಭವಿಸಿದಂಥದು. ವಿಧಿ ನಮ್ಮ ಮೇಲೆ ಹಾರವನ್ನು ಹಾಕುತ್ತದೆ: ಅದು ಹಾವೋ ಎಂದು ನಾವು ಅಂಜುತ್ತೇವೆ.

ನನ್ನ ಸುಖ, ನನ್ನ ಕಷ್ಟ, ಎಂದು ಯೋಚಿಸುವ ವೇಳೆ ನಮ್ಮ ನಡೆ ತಪ್ಪಬಹುದು. ಪರರ ಕಷ್ಟ ಪರರ ಸುಖವನ್ನು ಕುರಿತು ಯೋಚಿಸಿದರೆ ಹೆಜ್ಜೆ ತಪ್ಪುವುದಿಲ್ಲ.

ನಮ್ಮನ್ನು ಮುಂದು ಮಾಡಿಕೊಂಡು ಯೋಚಿಸುವ ಹೊತ್ತಿನಲ್ಲಿ ನಮ್ಮ ನಡೆ ತಪ್ಪಬಹುದು. ಕರ್ತವ್ಯ ಮುಂದಾದಾಗ ತಪ್ಪುವುದಿಲ್ಲ.

ಇಂದಿನ ಯಾವುದೇ ಸಂಗತಿ ಹಿಂದಿನ ಒಂದು ದಿನದ ಒಂದು ಒಳ್ಳೆಯ ಕ್ಷಣವನ್ನು ನೆನಪಿಗೆ ತಂದರೆ ಆ ಕ್ಷಣ ಮರಳಿ ಬಂದಿತು ಎಂದು ಹೇಳಿಕೊ.

ಬೇರೆ ಒಂದು ಸಂಗತಿ ಒಂದು ಕೆಟ್ಟ ಕ್ಷಣದ ನೆನಪನ್ನು ತಂದರೆ ದೇವರ ಕೃಪೆಯಿಂದ ಅದನ್ನು ದಾಟಿದ್ದಾಯಿತು ಎಂದುಕೊ.

ದಿನವೂ ನಾವು ಇದನ್ನು ನೆನೆಯುತ್ತಿರಬೇಕು: ಹಿಂದಿನದು ಕೆಟ್ಟದೇ ನಿದ್ದಿತು ಅದೆಲ್ಲ ಕಳೆದಿದೆ, ಒಳ್ಳಿತೇನಿದ್ದಿತು ಅದೆಲ್ಲ ಉಳಿದಿದೆ.

ಹೀಗೆನ್ನಲು ಕಾರಣ ಇದು: ಕೆಟ್ಟುದು ನಶ್ವರ, ಒಳ್ಳಿತೇ ಸತ್ಯ.

ದೇವರು ನಮ್ಮ ತಪ್ಪುಗಳನ್ನು ಮರೆಯುತ್ತಾನೆ. ಒಳ್ಳೆಯನ್ನು ನೆನೆಯುತ್ತಾನೆ. ನಮ್ಮ ಧರ್ಮದ ಆಚಾರ್ಯರುಗಳು ಹೇಳಿರುವಂತೆ ಅವನು 'ಪಿತಾ' ಮತ್ತು 'ಕ್ಷಮಿಣಾಂ ವರ'.

ದೇವರು ನನ್ನ ಬಾಳನ್ನು ತುಂಬ ಒಳ್ಳಿತರಿಂದ ತುಂಬಿದಾನೆ. ಅವನು ಇದನ್ನು ಮಾಡಿರುವುದು ನನಗಾಗಿ ಅಲ್ಲ, ಇತರರಿಗಾಗಿ. ಇದು ನನಗೆ ನೆನಪಿರಬೇಕು.

ಒಡೆಯನ ಸಮ್ಮುಖದಲ್ಲಿ ಆನಂದದಿಂದಿರು. ಅವನು ಪ್ರಸನ್ನನಾಗಿದಾನೆ, ಕೃಪಾಳುವಾಗಿದಾನೆ ನೀನು ಆನಂದಿಸಲೆನ್ನುವುದು ಅವನ ಅಪೇಕ್ಷೆ.

ದೇವರು ನನಗೆ ಒಂದು ತೊಲ ನಿತ್ರಾಣ ಕೊಟ್ಟಿದ್ದರೆ ಜೊತೆಗೆ ಹತ್ತು ತೊಲ ತ್ರಾಣವನ್ನು ಕೊಟ್ಟಿದ್ದಾನೆ. ಒಂದು ತೊಲ ಭಯದೊಂದಿಗೆ ಹತ್ತು ತೊಲ ಧೈರ್ಯ, ಒಂದು ತೊಲ ಸಂದೇಹದೊಂದಿಗೆ ಹತ್ತು ತೊಲ ನಿಶ್ಚಯವನ್ನು ನೀಡಿದಾನೆ.

ದೇವರು ಈ ಬಾಳನ್ನು ಹೇಗೆ ಬೆಳೆಸಬೇಕೆಂದಿದಾನೋ, ಎಂದು ನನ್ನ ಮನಸ್ಸು ಒಮ್ಮೊಮ್ಮೆ ತುಡಿಯುತ್ತದೆ ಆಗ ನಾನು ಹಿರಿಯನೊಬ್ಬ ಇಂಥದೇ ಹೊತ್ತಿನಲ್ಲಿ ಹೇಳಿಕೊಂಡ ಮಾತನ್ನು ನೆನೆಯುತ್ತೇನೆ: 'All is, if I have grace to use it so, as ever in my great Taskmaster's eye.'

ದುರ್ಬಲವಾದ ಯೋಚನೆಗಳನ್ನು ಕೊಡಹು; ಚುರುಕಾಗು; ಕೆಲಸ ಮಾಡು; ವೃಥಾ ಚಿಂತೆಯನ್ನು ಒಪರಿ ಬಿಸುಡು.

ನಾವು ಮಾಡುವ ಅನೇಕ ಯೋಚನೆ ಇಲ್ಲದ ಒಬ್ಬ ಹಗೆಯನ್ನು ಮೂರ್ತಿಮಾಡಿಕೊಂಡು ಅದರೊಂದಿಗೆ ಕಾದುವ ರೀತಿಯದು. ಮನಸ್ಸು

ಕೊಟ್ಟು ಮಾಡುವುದಾದರೆ ಇದಕ್ಕಿಂತ ಹೆಚ್ಚಿನ ಉಪಯೋಗದ ಕೆಲಸ ಎಲ್ಲಿ ಹೊತ್ತೂ ಉಂಟು.

ಎಷ್ಟು ಸಾರಿ ನಾವು ಇಲ್ಲದ ಒಂದು ಕಷ್ಟವನ್ನು ಎದುರಿಸಲು ತೊಡಗುತ್ತೇವೆ! ಪರಿಸ್ಥಿತಿ ನಮಗೆ ಅಸುಕೂಲವಾಗಿದೆ. ಆದರೆ ನಮಗೆ ಶ್ರಮ ಸಾಲದೆನ್ನಿಸುತ್ತದೆ.

ಕೆಟ್ಟದು ಆದೀತೋ ಎಂದು ವೃಥಾ ಯೋಚಿಸುವುದನ್ನು ಬಿಟ್ಟರೆ ಮನುಷ್ಯನಿಗೆ ಭಯವಿಲ್ಲ.

ನನಗೆ ನಿನ್ನೆಯ ಮಾತೇಕೆ? ಇನ್ನೊಬ್ಬರ ಮಾತೇಕೆ? ನಾಳೆಯ ಮಾತೇಕೆ? ಈ ಕ್ಷಣ ಆದಷ್ಟು ಒಳ್ಳಿತನ್ನು ಮಾಡಬೇಕು. ಇಷ್ಟು ನನ್ನ ಕೆಲಸ.

ಅಂಜಿಕೆ, ಶಂಕೆ, ಹಿಂಜರಿವು, ಇವು ಜೀವನದಲ್ಲಿ ಅನರ್ಥಗಳು. ಅವು ಗಳ ಮೂಲ ಹಿಂದನ್ನೂ ಮುಂದನ್ನೂ ನೋಡುವುದು. ಇದೇ ಅಜ್ಞಾನ. ಈ ಅಜ್ಞಾನದ ತೆರೆಯನ್ನು ಕಳೆಯೆಂದು ದೇವರನ್ನು ಬೇಡು.

ಅರಿಯುವ ಯಾವ ಪ್ರಜ್ಞೆ ಇದೆಯೆಂದು ನಾವು ಹಿಂದಾದವನ್ನು ಪರಿಶೀಲಿಸೋಣ? ಅಥವಾ ಕಾಣುವ ತೀವ್ರ ದೃಷ್ಟಿ ಇದೆಯೆಂದು ಮುಂದಿರುವುದನ್ನು ನಿಟ್ಟಿಸೋಣ? ಈ ಹೊತ್ತು ಯತ್ಕಿಂಚಿತ್ ಪನನ್ನೂ ಮಾಡುವ ಶಕ್ತಿಯಿರುವಂತಿದೆ. ಇದನ್ನು ಮಾಡಿದರೆ ಸಾಕು.

ಆಲಸ್ಯವನ್ನು ಗುಡಿಸಿ ಎಸೆ; ನಿತ್ರಾಣವನ್ನು ತುಳಿದುಬಿಡು; ಹರ್ಷ ಚಿತ್ತನಾಗು; ಒಳ್ಳಿತನ್ನು ಮಾಡು.

ಅಧೈರ್ಯವೀಗ ಬಾಳಿನ ಹಿರಿಯ ತಲೆಬೇನೆ ಅಧೈರ್ಯವನ್ನು ಒಲ್ಲೆನೆಂದು ಒದರು.

ಮಾಡಲು ಕೆಲಸ ಒದಗಿದಾಗ 'ಕರಿಷ್ಯೇ' ಎನ್ನು. ಅದೇ 'ಕರೋಷಿ'

ತಪ್ಪು ಯೋಚನೆಯನ್ನು ಮತ್ತೊಮ್ಮೆ ಮಾಡಬೇಡ ; ಅಧೀರ ಭಾವನೆಗೆ ಮತ್ತೆ ಎಡೆಕೊಡಬೇಡ.

ಯೋಚನೆ ಒಳಿತಾದರೆ ಅದನ್ನು ಒಮ್ಮೆ ಮಾಡಬೇಡ.

ಸಂಕಲ್ಪವೆಲ್ಲ ಭಗವಂತನಿಂದ ಬರುತ್ತದೆ. ಮಾಡುತ್ತೇನೆ ಎಂದು ನೀನು ಒಳ್ಳೆಯ ಕೆಲಸದಲ್ಲಿ ತೊಡಗಿದಾಗ ನಿನ್ನನ್ನು ತಡೆಯಬಲ್ಲ ಶಕ್ತಿಯಿಲ್ಲ.

ಅಧೀರ ಚೇತನದ ಪ್ರೇರಣೆಗಳಿಂದ ಕಂಗೆಡಬೇಡ. ಅವು ಮರೆಯ ಹಗೆಗಳು. ಅವನ್ನು ಹೊರಕ್ಕೆ ಎಳೆ; ವಿಚಾರ ಖಡ್ಗದಿಂದ ಕಡಿ. ಆಮೇಲೆ ಭಯವಿಲ್ಲ.

ಅಸ್ಪಷ್ಟವಾದ ಯಾವುದೇ ತರದ ಶಂಕೆಯಾದಾಗ ಯೋಚನೆ ಮಾಡಿ ಅದರ ರೂಪವನ್ನು ಸ್ಪಷ್ಟಪಡಿಸಿಕೊ. ವಿಚಾರ ಮಾಡು. ಅದು ನಿಲ್ಲುವುದಿಲ್ಲ.

ಒಳ್ಳೆಯವನೆಂದು ಕಂಡರೆ ಸಾಲದು, ಒಳ್ಳೆಯವನು ಆಗು.

ಇದು ಹೆರವರಿಗೆ ಹೇಗೆ ಕಂಡೀತು ಎಂದು ಹೆಜ್ಜೆ ಹೆಜ್ಜೆಗೂ ಯೋಚಿಸಬೇಡ.

ಊಹೆಯ ಬುದ್ಧಿವಂತ ವ್ಯಕ್ತಿಯೊಬ್ಬನನ್ನು ಕಲ್ಪಿಸಿಕೊಂಡು ನಾನು ಹಾಗಿದ್ದೇನೆಯೋ ಎಂದು ಕಾಲ ಕಳೆಯಬೇಡ. ಒಂದೊಂದು ಕ್ಷಣವೂ ನಿನ್ನಿಂದ ಆದಷ್ಟು ಚೆನ್ನಾಗಿ ನಡೆದುಕೊ. ಆಗ ನೀನೆ ಆ ಊಹೆಯ ಬುದ್ಧಿವಂತನಾಗುವೆ.

ಯಾವನೂ ತಾನು ಹೊರತು ಬೇರೊಬ್ಬನಲ್ಲ. ಹೀಗೆ ಆಗಿರುವ ನೀನು ನಿನ್ನ ಯೋಗ್ಯತೆಗೆ ನಿಲುಕುವ ಮೇಲ್ಮಟ್ಟವನ್ನು ಮುಟ್ಟು.

ದೈವ ಸಂನಿಧಿಯಲ್ಲಿ ಬೇರೊಬ್ಬನಂತೆ ಇರಲು ಬಯಸಬೇಡ. ನಿನ್ನ

ದೈವಕ್ಕೆ ನೀನು ಅರ್ಪಿಸಬಹುದಾದ ಅನರ್ಘವಸ್ತು ಆದಷ್ಟು ಚೆನ್ನಾಗಿ ನೀನು ಬಾಳಿದ ನಿನ್ನ ಬಾಳು.

ಮನುಷ್ಯನಿಗೆ ಅಧೋಮುಖವಾದ ಪ್ರವೃತ್ತಿಗಳಿವೆ, ಊರ್ಧ್ವಮುಖವಾದ ಪ್ರೇರಣೆಗಳಿವೆ. ಎಲ್ಲ ಜೀವನವೂ ಇವುಗಳ ಹೋರಾಟ. ಎಷ್ಟೇ ಸಾವಕಾಶವಾಗಿ ಆದರೂ ಪ್ರೇರಣೆಗಳು ಗೆಲ್ಲುವುವು.

ನಾನು ಬಹು ಉತ್ತಮ ಜೀವಿಯಲ್ಲ, ಬಹು ಅಧಮನೂ ಅಲ್ಲ; ಸಾಮಾನ್ಯ ಚೇತನದ ಗುಂಪಿನಲ್ಲಿ ಒಬ್ಬ. ಈ ಗುಂಪಿನ ಜೊತೆಯಲ್ಲಿ ನಾನು ದುಡಿಯಬೇಕು.

ವ್ಯರ್ಥವಾದ ಯೋಚನೆ ಒಂದನ್ನು ತೆಗೆದುಕೊಂಡು ಅದನ್ನು ಪರಿಶೀಲಿಸುತ್ತಾ ನಿಲ್ಲಬೇಡ.

ಮನುಷ್ಯನಿಗೆ ಭಯಬರುವುದು ಅದನ್ನು ಗೆದ್ದು ಧೀರನಾಗುವ ಸಲುವಾಗಿ. ಸಂದೇಹ ಬರುವುದು ಅದನ್ನು ಜಯಿಸಿ ನಂಬಿಕೆಯನ್ನು ಸಾಧಿಸುವ ಸಲುವಾಗಿ.

ನನ್ನನ್ನು ಪರೀಕ್ಷಿಸಬೇಡ, ಕೆಟ್ಟುದರಿಂದ ತಪ್ಪಿಸಿ ಕಾಪಾಡು, ಎಂದದ್ದು ಶ್ರೇಷ್ಠ ಪ್ರಾರ್ಥನೆ.

ಜೀವನ ಚೆನ್ನವಾಗುವುದು ಹೇಗೆ? ಯೋಚಿಸಿ ನೋಡಿದರೆ ಇದಕ್ಕೆ ಉತ್ತರ ಇದನ್ನು ಮಾಡು, ಇದನ್ನು ಬಿಡು, ಹೀಗೆಂದು ಯೋಚಿಸು, ಹೀಗೆಂದು ನಂಬು, ಇವೇ ಮುಂತಾದ ವಿವರಗಳಲ್ಲಿ ರೂಪುಗೊಳ್ಳುತ್ತದೆ. ಅದನ್ನು ಮಾಡಬೇಕು; ಅದನ್ನು ಬಿಡಬೇಕು; ಹಾಗೆಂದು ಯೋಚಿಸಬೇಕು; ಹಾಗೆಂದು ನಂಬಬೇಕು.

ಎಲ್ಲ ಹೊತ್ತೂ ಜೀವನ ಹೇಗಿರಬೇಕೊ ಹಾಗಿದೆ ಎನ್ನು. ನಿನ್ನ ಕರ್ತವ್ಯ ಏನಿದೆ ಅದನ್ನು ಮಾಡು.

ಪ್ರತಿದಿನವೂ ಪ್ರಯತ್ನ ಪೂರ್ವಕ ದುರ್ಬಲ ಭಾವನೆಗಳನ್ನು ಕಿತ್ತೆಸೆ. ಬಲ ಕೂಡುವುದಕ್ಕೆ ಇದೇ ದಾರಿ.

ಉದಾತ್ತವಾಗಿ ಯೋಚಿಸು. ಉದಾತ್ತವಾಗಿ ನುಡಿ. ಉದಾತ್ತವಾಗಿ ನಡೆ. ಇದು ಹೇಗೆ ಎಂದು ಚಿಂತೆ ಮಾಡು; ದಾರಿ ಕಾಣುತ್ತದೆ

ಸಾವು ಜೀವನಕ್ಕೆ ಅಂತ್ಯದ ಮಹಾ ಸಂಭಾವನೆ ಆಗುವಂತೆ ಬಾಳಬೇಕು.

ಕ್ವಾಹಮತ್ಯಂತದುರ್ಬುದ್ಧಿಃ ಕ್ವಚಾತ್ಮಹಿತವೀಕ್ಷಣಂ ಯದ್ಧಿತಂ ಮಮ ದೇವೇಶ ತದಾಜ್ಞಾಪಯ ಮಾಧವ.

ಕಳೆದ ಕಾಲ ಚೆನ್ನವಾಗಿದ್ದಿತು: ಅದನ್ನು ನಾನು ಆಗಾಗ ತಪ್ಪು ಭಾವನೆಯಿಂದ ಕೆಡಿಸಿದೆನು. ಸದ್ಯದ ಕಾಲ ಚೆನ್ನಾಗಿದೆ: ಇದನ್ನೂ ನಾನು ಹಾಗೆಯೇ ಕೆಡಿಸುತ್ತಿದೇನೆ. ಬರುವ ಕಾಲ ಚೆನ್ನಾಗಿರುತ್ತದೆ: ತಪ್ಪು ಯೋಚನೆಯಿಂದ ಅದೂ ಕೆಡಬಾರದು.

ಅಧೈರ್ಯಪಡಿಸುವ ಕಥೆಗಳನ್ನು ಮರೆ. ನಿನಗೆ ಎಷ್ಟು ಸಾಧ್ಯ, ಕ್ಷಣ ಕ್ಷಣವೂ ಅಷ್ಟು ಒಳ್ಳಿತಾಗಿ ಬಾಳು. ಸಿದ್ಧವಾಗಿರುವ ಜೀವನವನ್ನು ಸವಿ. ನಿನ್ನ ಜನರ ಸೇವೆ ಮಾಡು. ಅಜಾಗ್ರತೆಯಿಂದ ಕೆಲಸ ಕೆಡಿಸಿಕೊಳ್ಳಬೇಡ.

ನಿನಗೆ ತಿಳಿದಿರುವ ಅತ್ಯುನ್ನತ ರೀತಿಯಿಂದ ನಿನ್ನ ನಡತೆ ತಪ್ಪುವಂತೆ ಕಂಡಾಗ, ಒಲ್ಲೆ ಎನ್ನು.

ಪತನವನ್ನು ಹೀಗೆ ಮತ್ತೆ ಮತ್ತೆ ಒಲ್ಲೆ ಎನ್ನುವುದರಿಂದ ಶಕ್ತಿ ಕೂಡುತ್ತದೆ.

ಯಾವುದೋ ರೀತಿ ಒಳ್ಳಿತೆಂದು ಕಂಡರೆ ಅದನ್ನು ಸಾಧ್ಯವಾದಷ್ಟೂ ಬೆಳಸಿಕೊ.

ನಿನ್ನ ಸದ್ಯದ ಸ್ಥಿತಿ ನಿನ್ನ ಉದ್ಧಾರಕ್ಕಾಗಿ ಒದಗಿದೆ.

ಕೆಲವು ವೃಥಾ ಯೋಚನೆಗಳು, ಕೆಲವು ಪ್ರಯೋಜಕ; ಕೆಲವು ತಪ್ಪು ಮಾತುಗಳು, ಕೆಲವು ಒಳ್ಳೆಯವು; ಕೆಲವು ಅಸಾಧು ಕೃತ್ಯಗಳು, ಕೆಲವು ಸಾಧು.

ಹಿಂದಿನದೆಂಬ ಕಾಲ ಇವುಗಳ ಒಂದು ಮೂಟೆ. ಮುಂದಿನ ಕಾಲವೂ ಇಷ್ಟಲ್ಲದೆ ಬೇರೆ ಏನೂ ಆಗಲಾರದು. ಆದರೂ ಪ್ರಯಾಸಪಟ್ಟು ಸಲ್ಲದ್ದನ್ನು ಕಡಿಮೆಮಾಡಿ ಒಳ್ಳಿತನ್ನು ಸ್ವಲ್ಪ ಹೆಚ್ಚಿಸು.

ವೃಥಾ ಭೀತಿ ಇಲ್ಲದಿದ್ದರೆ ಬಾಳು ಅಣಿಮುತ್ತು. ಸ್ವಾರ್ಥ ಕಡಿಮೆ ಯಾದೊಡನೆ ಸುಖ ಹೆಚ್ಚುತ್ತದೆ. ಭೀತಿ ಸ್ವಾರ್ಥದ ಬೆನ್ನು.

ಯೋಚಿಸುವುದನ್ನು ಕಡಿಮೆ ಮಾಡು. ದುಡಿಮೆಯನ್ನು ಹೆಚ್ಚಿಸು. 'ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ.'

ಬರುವ ಕಾಲದಲ್ಲಿ ನೀನು ಸರಿಯಾಗಿ ನಡೆದುಕೊಂಡರೆ ಈ ಮೊದಲು ತಪ್ಪಿ ನಡೆದ ಲೆಕ್ಕ ಅಳಿಸಿಹೋಗುತ್ತದೆ.

ನಾನು ಈ ದಿನ ಈ ಮೊದಲಿನಷ್ಟೇ ಶಕ್ತನಾಗಿದ್ದೇನೆ. ಆದರೆ ಮಾಡುವ ಕೆಲಸ ಕಡಿಮೆ ಬಿದ್ದಿದೆ. ಇದಕ್ಕೆ ಕಾರಣ ನಾನು ವ್ಯವಹಾರದ ಭಾರವನ್ನು ಅತಿಯಾಗಿ ಹೊತ್ತು ಬಗ್ಗಿರುವುದು.

ಮೈಯಾಗಲಿ, ಮನಸ್ಸಾಗಲಿ, ಆಯುಧಗಳು ಮಾತ್ರ. ನಾವು ಮಾಡು ಎಂದದ್ದನ್ನು ಅವು ಮಾಡುತ್ತವೆ. ಎರಡೂ ನಮ್ಮ ಆಜ್ಞೆಗೆ ಅಧೀನವಾಗಿವೆ.

ಇವನ್ನು ತಿದ್ದುವುದಾದರೂ ಕಷ್ಟವಲ್ಲ. ತಿದ್ದುವುದೆನ್ನುವುದು ಯಾವುದಿದೆ ಅದು ಸುಲಭವೆಂದು ಹೇಳಬಹುದು.

ಅವು ಈ ಮೊದಲು ಆದ ಅಭ್ಯಾಸವನ್ನು ಇಟ್ಟುಕೊಂಡಿರುತ್ತವೆ; ಅದನ್ನು ಬಿಡಿಸುವುದು ಕಷ್ಟ. ಆದಕಾರಣ ಮೈ ಮನಸ್ಸುಗಳನ್ನು ತಿದ್ದುವುದು ಕಷ್ಟ ಎಂದು ನಮಗೆನಿಸುತ್ತದೆ.

ನಿಜದಲ್ಲಿ ಈ ತಿದ್ದುವುದು ಬಹು ಸುಲಭ. ಈ ಮೊದಲು ತಿದ್ದಿದಂತೆ ಅವು ಈಗ ನಡೆಯುತ್ತಿವೆ.

ತಾಳ್ಮೆಯಿಂದ ಅವನ್ನು ನಾಡುತ್ತ ನಿಂತರೆ ಅವು ನಾವು ಬಯಸಿದಂತೆ ನಡೆಯುವುವು.

ನನ್ನಿಷ್ಟಕ್ಕೆ ನೋಡಿದರೆ ನಾನು ಎಚ್ಚರದಿಂದಿರಬೇಕಾದದ್ದು ಊಟ ದಲ್ಲಿ; ಉಳಿದಂತೆ ನಾನು ನನ್ನಿಷ್ಟದಂತೆ ದುಡಿಯಬಹುದು. ಕೆಲಸ ಹೆಚ್ಚಾಯಿತು, ಅದರಿಂದ ತೊಂದರೆಯಾಯಿತು, ಎನ್ನುವುದು ಬರಿಯ ಮಾತು.

ಜೀವನದಲ್ಲಿ ವಿಚಾರಯುಕ್ತವಾದ ನಿಲುವು ಇರಬೇಕು. ಆದರೆ ವಸ್ತುಸ್ಥಿತಿಯನ್ನು ಬಿಟ್ಟು ಭಾವನೆ ಮುಂದಾಗಬಾರದು.

ನಾವು ಜೀವನದ ಆರಂಭದಲ್ಲಿ ಲೆಕ್ಕವಿಲ್ಲದಷ್ಟು ತಪ್ಪು ತಿಳಿವಳಿಕೆಯನ್ನು ಸಂಗ್ರಹಿಸುತ್ತೇವೆ. ಅದನ್ನು ಸ್ವಲ್ಪ ಸ್ವಲ್ಪವಾಗಿ ಕಳೆದುಕೊಳ್ಳುವುದು ಉಳಿದ ಬಾಳಿನ ಕೆಲಸ.

ಈ ಮೊದಲು ನನಗೆ ದುರ್ಬಲವಾದ ಆಲೋಚನೆ ಬಂದದ್ದುಂಟು. ಬಂದುವು ಹೋದುವು: ಅವು ಮರಳಿ ಬರುವುದಕ್ಕೆ ನನ್ನ ಸಮ್ಮತಿಯಿಲ್ಲ.

ತಪ್ಪು ತಿಳಿವಳಿಕೆಯನ್ನು ಒಂದು ಹರುಕು ಅಂಗಿಯಂತೆ ಕಳಚಿ ಹಾಕು.

ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ ಯೇಷಾಂ ಇಂದೀವರಶ್ಯಾಮೋ ಹೃದಯೇ ಸುಪ್ರತಿಷ್ಠಿತಃ.

ಜನ ವಿಶೇಷವಾಗಿ ಮಾತಿನಲ್ಲಿ ದೇವರುಂಟು ಎನ್ನುತ್ತೇವೆ; ನಿಜವಾಗಿ ನಮಗೆ ನಂಬಿಕೆಯಿಲ್ಲ. ನಮ್ಮ ಕೃತಿಯಲ್ಲೆಲ್ಲ ನಾವು ದೇವರಿಲ್ಲ ಎಂಬಂತೆಯೇ ನಡೆದುಕೊಳ್ಳುತ್ತೇವೆ.

ನಮ್ಮ ಪೂರ್ವಜರು ದೇವರನ್ನು ಗೋಪಾಲನೆಂದೂ ನಮ್ಮನ್ನು ಗೋವುಗಳೆಂದೂ ವರ್ಣಿಸಿದರು. ಒಂದರ್ಥದಲ್ಲಿ ಇದು ನಿಜ. ನಾವು ಹೊಟ್ಟೆ ತುಂಬಿಕೊಳ್ಳುವುದಕ್ಕೆ ಮನೆಮಕ್ಕಳ ಹೊಟ್ಟೆ ಹೊರೆಯುವುದಕ್ಕೆ ಮಾಡುವ ಕೆಲಸದಿಂದ ಅವನು ಲೋಕವನ್ನು ನಡೆಸುತ್ತಿದಾನೆ.

ನಾವು ತಿದ್ದಿಕೊಳ್ಳಬೇಕಾದ ಒಂದು ತಪ್ಪು ಭಾವನೆ, ಚೇತನವೆಲ್ಲ ನಮಗೆ ಪರಿಚಿತವಾದ ರೂಪಗಳಲ್ಲೇ ಇರಬೇಕು ಎನ್ನುವುದು; ಅದರಲ್ಲೂ ದೇಹವಾಗಿ ಇರಬೇಕು ಎನ್ನುವುದು. ದೇವರು ಸದಾ ನಮ್ಮೊಂದಿಗಿದ್ದಾನೆ: ನಮಗೆ ಪರಿಚಿತವಾದ ರೂಪಗಳಲ್ಲಿ ಅಲ್ಲ ಅಷ್ಟೆ.

ನಾವು ತಿದ್ದಿಕೊಳ್ಳಬೇಕಾದ ಇನ್ನೊಂದು ತಪ್ಪು, ಸಂಭಾಷಣೆಯೆಲ್ಲ ಮಾತಿನಿಂದ ನಡೆಯುತ್ತದೆ ಎಂದಿರುವುದು. ಮನಸ್ಸು ಮನಸ್ಸಿನೊಂದಿಗೆ ನುಡಿಯಿತು ಎನ್ನುವುದುಂಟು. ಅಂಥ ಸಮಯದಲ್ಲಿ 'ನುಡಿ' ಎನ್ನುವುದು ನಮಗೆ ಬರಿಯ ರೂಪಕ ಆಗುತ್ತದೆ. ವಾಸ್ತವವಾಗಿ ಇಂಥ ಕಡೆ 'ನುಡಿ' ರೂಪಕವಲ್ಲ; ನಿಜದಲ್ಲಿಯೂ ನುಡಿ.

ಇಂಥ ತಪ್ಪುಗಳಿಂದ ಬಿಡಿಸಿಕೊಂಡೆವಾದರೆ ನಾವು ದೇವರನ್ನು ಮುಟ್ಟಲೂಬಹುದು. ಅವನ ಧ್ವನಿಯನ್ನು ಕೇಳಲೂಬಹುದು.

ನನಗೆ ಇದು ತೋಚಿದೆ. ಆದರೂ ನಾನು ತಪ್ಪು ತಿಳಿವಳಿಕೆಯಿಂದ ಇನ್ನೂ ದಾಟಿಲ್ಲ.

ನನ್ನ ಜೀವನದಲ್ಲಿ, ನಾನು ಸರಿಯಾಗಿ ತಿಳಿದುಕೊಳ್ಳುವುದಾದರೆ, ನಾನು ದೇವರ ಧ್ವನಿಯನ್ನು ಕೇಳಿರುವುದೂ ಅವನು ನನ್ನ ಪ್ರಾರ್ಥನೆಯನ್ನು ಲಾಲಿಸಿರುವುದೂ ಅದೆಷ್ಟು ಸಾರಿ! ನೆನೆದರೆ ಆಶ್ಚರ್ಯವಾಗುತ್ತದೆ.

ನಾನು ಬಹು ಎಳೆಯ ಹುಡುಗ. ಶಿವಾರಪಟ್ಟಣಕ್ಕೆ ಶಾಲೆಗೆ ಹೋಗುತ್ತಿದ್ದೆ: ಆಗ ಒಂದು ಸಲ.

ಒಂದು ದಿನ ವಿಶ್ವೇಶ್ವರಪುರದಲ್ಲಿ ಶ್ರೀ ಕೆ. ಎಚ್. ರಾಮಯ್ಯನವರ ಮನೆಯ ಬಳಿ ನಡೆಯುತ್ತ, ಬಾಳು ಚೆನ್ನವಾಗಬೇಕಾದರೆ ದೇವರು ಎಂಬ ನಂಬಿಕೆ ಬೇಕೇ ಎಂದು ಜಿಜ್ಞಾಸೆ ಮಾಡಿಕೊಳ್ಳುತ್ತಿದ್ದೆ: ಆಗ ಒಂದು ಸಲ.

ಒಂದು ಸಲ ನಾನು ನಂಜನಗೂಡಿಗೆ ದೇವರ ದರ್ಶನಕ್ಕೆಂದು ಹೋದಾಗ.

ಅದರ ಮಾರನೆಯ ವರುಷ ಮತ್ತೆ ನಂಜನಗೂಡಿಗೆ ಹೋದಾಗ.

ಒಮ್ಮೆ ತಿರುಪತಿಯಲ್ಲಿ ದೇವರಿಗೆ ತಿರುಮಂಜನಕ್ಕೆ ನೀರನ್ನು ತರ ಬೇಕೆಂದು ನನಗೆ ತುಂಬ ಬಯಕೆ ಆದಾಗ.

ಮರಳಿ ಅಲ್ಲಿಯೇ ನಾನು ದೇವರ ಪ್ರಸಾದದ ಪಾಯಸವನ್ನು ಬಯಸಿದಾಗ.

ಮತ್ತೊಮ್ಮೆ ಇದಕ್ಕೂ ಮೊದಲು ಛತ್ರದಲ್ಲಿ ಎಳೆಯ ಹುಡುಗನೊಬ್ಬನು ಹಸಿದುಕೊಂಡಿರುವ ವೇಳೆ ನಾನು ಮನಸ್ಸಿನಲ್ಲಿ ಮನಸ್ಸಿಲ್ಲದೆ ಸ್ವಲ್ಪ ಅನ್ನ ವನ್ನು ತಿನ್ನುವುದಕ್ಕೆ ಎತ್ತಿಕೊಂಡಾಗ.

ದೈವ ಇಚ್ಛಿಸಿದಾಗ ಅದರ ನಮ್ಮ ಮಧ್ಯೆ ಇಂಥ ವ್ಯವಹಾರ ಸಾಧ್ಯ ವಾಗುವುದಷ್ಟೇ ಅಲ್ಲ. ಮನುಷ್ಯ ಮನುಷ್ಯರ ಮಧ್ಯೆ ಒಂದು ಒಳ್ಳೆಯ

ಪ್ರೇರಣೆ ಈ ರೀತಿ ಮನಸ್ಸಿನಿಂದ ಮನಸ್ಸಿಗೆ ಹಾಯುವುದುಂಟು. ಇದನ್ನೇ ಇರಬೇಕು, ಪಶ್ಚಿಮದೇಶಗಳ ಜನ telepathy ಎಂದು ಕರೆಯುತ್ತಾರೆ.

ಒಂದು ಸಲ ಮಂಜೇಶ್ವರದ ಅನಂತರಾಯರು ನನ್ನ ವಿಷಯಕ್ಕೆ, ನಾನು ಅವರ ವಿಷಯಕ್ಕೆ, ಸ್ನೇಹದಿಂದ ಒಲಿದಾಗ ಹೀಗಾಯಿತು.

ಶ್ರೀ ಬಿಂದೂರಾಯರ ವಿಷಯದಲ್ಲಿ ಹೀಗೆ ಒಂದಲ್ಲ ಎರಡು ಸಲ ಆದದ್ದುಂಟು.

ಹಾಗೆಯೇ ಒಂದು ಸಲ ನಾನು ಶ್ರೀ ನರಸಿಂಹಮೂರ್ತಿ ಜೊತೆಯಾಗಿ ಬಹು ಹೊತ್ತು ನಡೆದ ಮೇಲೆ ಇಬ್ಬರೂ ಒಂದೇ ಕ್ಷಣದಲ್ಲಿ ಎಪಿಕ್‌ಟೇಟಸ ನನ್ನು ಕುರಿತ ಮಾತನ್ನೆತ್ತಿದೆವು-

ಈ ಎಲ್ಲ ಸಂದರ್ಭದಲ್ಲಿಯೂ ನನ್ನ ಮತ್ತು ಜೊತೆಗಾರರ ಮನಸ್ಸಿಗೆ ಆ ಕ್ಷಣದ ಹಿಂದೆ ಬಂದ ಮಾತಿಗೆ ಸಂಬಂಧಿಸದ ಬೇರೆಯಾದ ಒಂದೇ ಸಂಗತಿ ಮನದಲ್ಲಿ ಮೂಡಿತು.

ಇದು ಆಗಿರಬಹುದು ಹೇಗೆ? ನನಗೆ ತೋರುತ್ತದೆ, ನಮ್ಮೆಲ್ಲರ ಮನಸ್ಸು ಒಂದೇ ಕ್ಷೇತ್ರ, ಅದರಲ್ಲಿ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಅನುಕೂಲ ಸಂದರ್ಭಗಳಲ್ಲಿ ಭಾವ ಪ್ರವಹಿಸುತ್ತದೆ.

ಅನುಕೂಲವಾದ ಈ ಸಂದರ್ಭಗಳು ಎಂಥವು ಎನ್ನುವುದು ತಿಳಿದರೆ ನಾವು ಉದ್ದೇಶ ಪೂರ್ವಕ ಈ ಸಂಬಂಧವನ್ನು ಬೆಳಸಬಹುದು.

ಆದರೆ ಇದೆಲ್ಲದರಿಂದ ನಾನು ಸದ್ಯ ಗ್ರಹಿಸುವ ಸಂಗತಿ ಇಷ್ಟು: ನಮ್ಮ ಯಾವ ಒಂದು ಮನಸ್ಸೂ ವಿಸ್ತಾರವಾದ ಒಂದು ಮಹಾ ಮನಸ್ಸಿನ ಒಂದು ತಾಕು, ನಾವು ಅದನ್ನು ಸ್ವಲ್ಪ ಕಾಲಕ್ಕೆ ಸಾಗುವಳಿಗೆ ಪಡೆದಿದ್ದೇವೆ.

ನಮ್ಮದು ಎಂಬ ಮನಸ್ಸು ತೀರ ನಮ್ಮದೇ ಆಗಿರದ ಈ ಗತಿಯನ್ನು ಕೆಲವು ವರ್ಷಗಳ ಹಿಂದೆ ನಾನು ಕೆಟ್ಟದೆಂದು ತಿಳಿಯಬಹುದಾಗಿತ್ತು. ಈಗ ಹಾಗೆನಿಸುವುದಿಲ್ಲ.

ಅಷ್ಟೆ ಅಲ್ಲ, ದೇವರದಲ್ಲದೆ ನನ್ನ ಬಳಿ ಯಾವುದೂ ಇಲ್ಲ ಎಂಬ ತಿಳಿವಳಿಕೆ ಈಗ ನನಗೆ ತುಂಬ ಸಮಾಧಾನವನ್ನು ತರುತ್ತದೆ.

ಆ ಸಮಾಧಾನದ ತಳಪಾಯ ಇದು. ನನಗೆ ಇಷ್ಟನ್ನು ಕೊಡಬೇಕಾದರೆ ಅವನು ಅದೆಂಥ ಕೃಪಾಳು! ಈ ವರೆಗೆ ನನ್ನನ್ನು ನೋಡಿಕೊಂಡ ಆ ಕೃಪೆ ಮುಂದೂ ನನ್ನನ್ನು ನೋಡಿಕೊಳ್ಳುತ್ತದೆ.

ನೋಡಿಕೊಳ್ಳುವುದೇನಿದೆ ಎಂದು ನಮ್ಮ ಮನಸ್ಸು ಪ್ರಶ್ನೆ ಕೇಳುತ್ತದೆ. ಅದರಲ್ಲೂ ಎಲ್ಲವೂ ಸರಿಯಾಗಿರುವಾಗ, ಅಥವಾ ಸರಿಯಾಗಿದೆಯೆಂದು ನಾವು ತಿಳಿದಿರುವಾಗ ಈ ಪ್ರಶ್ನೆ ಬಹು ಸುಲಭ.

ಯಾವುದರಿಂದ ಕಾಯಬೇಕು ಎಂದರೆ ಯಾವುದರಿಂದಲೂ ಕಾಯಬೇಕು, ಎಲ್ಲದರಿಂದಲೂ ಕಾಯಬೇಕು.

ದುರ್ಗತಿಯ ಅಧಃಪಾತಾಳದಿಂದ ಸದ್ಗತಿಯ ಉಚ್ಚ ಶೃಂಗದ ವರೆಗಿನ ಯಾವ ಅವಸ್ಥೆಯಲ್ಲಿಯೂ ನಮಗೆ ದೇವರ ರಕ್ಷೆ ಬೇಕೇ ಬೇಕು.

ಸದ್ಗತಿಯ ಉನ್ನತ ಶಿಖರದಲ್ಲಿ ಕೂಡ ಈ ರಕ್ಷಕ ಹಸ್ತ ಇಲ್ಲದೆ ಕ್ಷೇಮವಿಲ್ಲ. ಜಯವಿಜಯರಿಗಿಂತ ಎತ್ತರದ ಸ್ಥಳದಲ್ಲಿ ಯಾರು ಇದ್ದಾರು? ಆದರೇನು, ಆ ಸ್ಥಳದಿಂದ ಅವರು ಉರುಳಿದರು. ಇನ್ನು ಕಡಮೆಯ ಸ್ಥಳಗಳ ಮಾತೇನು!

ನೀನೇನು ಅರ್ಜುನನಲ್ಲ, ಭೀಮನಲ್ಲ, ನಿಜ. ಆದರೂ ನಿನ್ನದು ಎಂದು ಒಂದು ಬಾಳುವೆಯಿದೆ. ನೀನು ಅದನ್ನು ಚೆನ್ನಾಗಿ ಬಾಳಬೇಕು. ಹೇಗೋ ಬಾಳಿ ಅದನ್ನು ಅಕಲಾಯ ಮಾಡಬಾರದು.

ನನ್ನ ಬಾಳು, ನಾನು ಚೆನ್ನಾಗಿ ಬಾಳಬೇಕು, ಎಂದು ನೀನೆಂದರೆ, "ಎಲಾ ಇವನ ಪೊಗರು ಇಷ್ಟು!" ಎಂದು ದೈವ ಎಣಿಸೀತು, ಎಂಬದಾಗಿ ಅಂಜಬೇಡ. ಅಷ್ಟೇ ಅಲ್ಲ; ನಿನ್ನ ಬಾಳನ್ನು ನಿನ್ನದೆಂದು ತಿಳಿದು ನೀನು ಚೆನ್ನಾಗಿ ಬಾಳುವುದೇ ದೈವಕ್ಕೆ ಇಷ್ಟ. ಹಾಗೆ ಮಾಡದಿರುವುದೇ ಆ ಸನ್ನಿಧಿಯಲ್ಲಿ ಅಪರಾಧ.

ಜೀವನದಲ್ಲಿ ನಾವು ಮಾಡುವ ದೊಡ್ಡ ತಪ್ಪು ಎಂದರೆ ದೇವರನ್ನು ಸಾಕಾದಷ್ಟು ಬಾರಿ ನೆನೆಯದೇ ಇರುವುದು; ಅಥವಾ ನೆನೆದೆವು, ಅವನು ಪ್ರತ್ಯಕ್ಷವಾಗುತ್ತಿರುವ ರೀತಿಯಲ್ಲಿ ಅವನನ್ನು ಕಾಣದೆ ಬೇರೆ ರೀತಿಯಲ್ಲಿ ಕಾಣಬಯಸುವುದು. ದೇವರು ನಮ್ಮೆದುರಿಗೆ ಸಾವಿರ ಆಕಾರದಲ್ಲಿ ಬಂದು ನಿಲ್ಲುತ್ತಾನೆ: ನಾವು ಅವನನ್ನು ನಿರಾಕಾರನೆಂದು ಭಾವಿಸಲು ಬಯಸುತ್ತೇವೆ. ಅನಂತನಾದ ಅವನು ಸಾಂತನಾಗಿ ನಮಗೆ ಒದಗುತ್ತಾನೆ: ನಾವು ಅವನ ಆನಂತ್ಯವನ್ನು ಮುಂದುಮಾಡಿ ತೊಳಲುತ್ತೇವೆ. ದೇವರು ನಿರಾಕಾರ ಹೌದು; ಅನಂತ ಹೌದು. ಆದರೆ ನಮ್ಮ ಶಕ್ತಿಗೆ ನಿಲುಕುವ ಸಲುವಾಗಿ ಅವನೇ ಕರುಣಿಸಿ ಕಿರಿದಾಗಿ ರೂಪಾಗಿ ಎದುರಿಗೆ ಬಂದರೆ ನಾವು ನೋಡದೆ ಇರಬೇಕೆ? ಗುರುತಿಸದೆ ಇರಬೇಕೆ?

ಒಬ್ಬೊಬ್ಬನೂ ತನ್ನ ಮನೋಧರ್ಮವನ್ನು ತಿದ್ದಿಕೊಳ್ಳಬೇಕು. ಎಲ್ಲರಿಗೂ ಏಕ ಸೂತ್ರ ಅನ್ವಯಿಸುವುದಿಲ್ಲ. ಒಳನೋಟದ ಸ್ವಭಾವದವನು ಬಾಹ್ಯ ಪ್ರಪಂಚದ ಮೇಲೆ ದೃಷ್ಟಿ ಬೀರುವುದನ್ನು ಕಲಿಯಬೇಕು. ಮೂರು ಕ್ಷಣ ಏಕ ಮನಸ್ಸಿನಿಂದ ಯೋಚಿಸಲಾರದ ಹೊರನೋಟಕಾರ ತನ್ನ ಆಂತರ್ಯದಲ್ಲಿ ಒಂದು ಲೋಕ ಇರುವುದನ್ನು, ಅದು ಹೊರಗಿನ ಲೋಕಕ್ಕಿಂತ ಕಿರಿದಲ್ಲ ಎಂಬುದನ್ನು, ತಿಳಿದುಕೊಳ್ಳಬೇಕು.

ಕೆಲವು ವರ್ಷಗಳ ಹಿಂದೆ ನಮ್ಮ ಎರಡನೆಯ ಮಗು ತುಂಬ ಕಾಯಿಲೆ ಬಿದ್ದು ಉಳಿಯುತ್ತಾಳೋ ಇಲ್ಲವೋ ಎಂದು ಭಯ ಆದಾಗ ನಾನು ದೇವರ ಕಡೆಗೆ ತಿರುಗಿ, ನಾವೇನು ಇವಳನ್ನು ಕಳೆದುಕೊಳ್ಳಬೇಕೊ, ಎಂದು ಕೇಳಿದೆನು. ದೇವರು ಮಗುವನ್ನು ನಮಗೆ ಉಳಿಸಿಕೊಟ್ಟನು. ಮರಳಿ ಇನ್ನೊಪ್ಪಯೆಂಜಾ ದಿನಗಳಲ್ಲಿ ಮನೆಯವರೆಲ್ಲಾ ಹಾಸಿಗೆ ಹಿಡಿದು ಮಲಗಿದಾಗ ನನ್ನ ಮನಸ್ಸು ದೇವರತ್ತ ತಿರುಗಿತು. ಮತ್ತೆ ಹಾಗೆಯೇ ಸಾವಿರದೊಂಬೈನೂರ ಇಪ್ಪತ್ತೆರಡರಲ್ಲಿ ನನ್ನ ಆರೋಗ್ಯ ಕೆಟ್ಟಾಗ ಒಮ್ಮೆ ತೊಂದರೆ ಬಂದಾಗ ಮಾತ್ರ ನಾನು ದೇವರ ಕಡೆ ಮುಖ ಮಾಡಿದೆನು. ದೇವರಿಗೆ ನಾವು ಬೇಕಾಗಿ,

ತೊಂದರೆಯಲ್ಲಿ ಹೊರತು ನಾವು ಅವನ ಕಡೆ ತಿರುಗುವುದಿಲ್ಲ ಎಂದರೆ, ಅವನು ಏನು ಮಾಡಬೇಕು? ಇಲ್ಲ ನಮಗೆ ತೊಂದರೆ ಕೊಡಬೇಕು, ಇಲ್ಲ ನಮ್ಮ ಕೈ ಬಿಡಬೇಕು. ಇದರಲ್ಲಿ ನಮಗೆ ಯಾವುದು ಇಷ್ಟ? ನಾವು ಸರಿಯಾಗಿ ತಿಳಿದುಕೊಳ್ಳುವುದಾದರೆ ಕಷ್ಟವೆನ್ನುವುದೆಲ್ಲ ದೇವರು ನಮ್ಮನ್ನು ತನ್ನ ಕಡೆಗೆ ತಿರುಗಿಸಿಕೊಳ್ಳುವ ಸಂದರ್ಭ. ಬೇಕಾದ ಕಷ್ಟ ಬರಲಿ ನಾವು ಅದನ್ನು ಒಪ್ಪಿಕೊಳ್ಳಬೇಕು. ಕಷ್ಟವನ್ನು ಕೊಡಲೊಲ್ಲದೆ ದೇವರು ಕೈ ಬಿಡುವುದು ನಮಗೆ ಬೇಡ.

ಆ ಕಷ್ಟವೆನ್ನುವುದೂ ಅಷ್ಟೆ: ದೇವರತ್ತ ಮುಖ ಮಾಡುವವರೆಗೆ ಅದು ದುಸ್ತರವೆಂದು ಕಾಣುತ್ತದೆ. ಮುಖ ಮಾಡಿದ ಮೇಲೆ ಅದು ಸಹ್ಯವಾಗುತ್ತದೆ.

ಎಲ್ಲ ಕಾಲದಲ್ಲಿ ಎಲ್ಲ ದೇಶದಲ್ಲಿ ಮಾನವನಿಗೆ ದೈವದ ಕಂಠ ಕೇಳಬಂದಿದೆ.

ಯಾವ ಭಾಷೆಯಲ್ಲಿ, ಯಾವ ಮುಖದಿಂದ, ಅದು ಮೊಳಗಿತು ಎನ್ನುವುದು ಮುಖ್ಯವಲ್ಲ: ಆ ಭಾಷೆ ಮುಖಗಳು ಯಾವವೇ ಆದರೂ ಕೇಳಬಂದ ಕಂಠ ದೈವಿಕವೇ ಸರಿ.

ಗಾನದಲ್ಲಿ 'ಋಷಭ' ಸ್ವರ ಇದೆ. ರಾಗ ಯಾವುದಾದರೇನು? 'ಋಷಭ' 'ಋಷಭ'ವೇ. ಕೇಳುವ ಶಬ್ದ ಬೇರೆಯಾಗಿರಬಹುದು: ನುಡಿಯುತ್ತಿರುವ ಸ್ವರ ರಿ,ಗ,ಮ. ಶಬ್ದ ಸ್ವರವನ್ನು ಹೊದೆದಿದೆ; ಆ ಕಾರಣದಿಂದ ಮರೆಸಿದೆ.

ಈ ಮಾತು ಬೇರೆ ವಿಷಯಕ್ಕೂ ಒದಗುತ್ತದೆ ಗಂಡಿನ ಒಡಲು ಹೆಣ್ಣಿನ ಒಡಲು ನಮಗೆ ವ್ಯತ್ಯಸ್ತವಾಗಿ ಕಾಣುತ್ತವೆ. ಒಡಲು ವ್ಯಕ್ತಿಯಲ್ಲ: ವ್ಯಕ್ತಿ ಜೀವ; ಒಮ್ಮೆ ಕೆಂದು ಬಣ್ಣದ ಅಂಗಿಯಲ್ಲಿ ಒಮ್ಮೆ ಕರಿಯ ಬಣ್ಣದ ಅಂಗಿಯಲ್ಲಿ ಕಾಣುತ್ತದೆ. ಗಂಡೊಡಲು ಒಂದು ಬಣ್ಣದ ಅಂಗಿ; ಹೆಣ್ಣೊಡಲು ಬೇರೊಂದು ಬಣ್ಣದ ಅಂಗಿ. ಅವನ್ನು ಹೊದೆದಿರುವ ತತ್ವ ಬೇರೆ ಅಲ್ಲ.

ಸಾಹಿತ್ಯದ ಹಿಂದಿರುವ ಸ್ವರದ ಈ ಉಪಮಾನ ಇತರ ಸಂದರ್ಭ

ಗಳಲ್ಲೂ ಅನ್ವಯಿಸುತ್ತದೆ. ಪೂರ್ವದೇಶಗಳ ತತ್ವ ಶಾಸ್ತ್ರವನ್ನು ಪಶ್ಚಿಮ ದೇಶಗಳು ಒಪ್ಪುವ ವೇಳೆ ಒಪ್ಪುವರ ಮನಸ್ಸು ಹೊರಗಿನ ಸಾಹಿತ್ಯದ ಮೇಲೆ ಗಮನವಿರಿಸಿರುವುದಿಲ್ಲ;. ಅದರ ಹಿಂದಿನ ಸ್ವರವನ್ನು ಗುರುತಿಸಿಕೊಳ್ಳುತ್ತದೆ.

ಹೊರಗಿನ ಸಂದರ್ಭವನ್ನು ದಾಟಿ ಮರೆಯ ತತ್ವವನ್ನು ಹಿಡಿಯುವುದೇ ಬೆಳವಣಿಗೆಯ ಲಕ್ಷಣ. ಎಳೆಯ ಮಕ್ಕಳು ನಮ್ಮ ಮನೆಯ ಸೂರ್ಯ ನಮ್ಮ ಬೀದಿಯ ಸೂರ್ಯ ಎನ್ನುತ್ತಾರೆ. ವಯಸ್ಸು ಬಂದಾಗ ಅವರಿಗೆ ಲೋಕಕ್ಕೆಲ್ಲ ಒಬ್ಬನೇ ಸೂರ್ಯ ಎನ್ನುವುದು ತಿಳಿಯುತ್ತದೆ.

ಭೌತವಾದ ಸಂಗತಿಗಳಿಗೆ ಭೌತಾತೀತ ತಾತ್ಪರ್ಯವನ್ನಾರೋಪಿಸಿ ನಾವು ಭಯಪಟ್ಟುಕೊಳ್ಳುತ್ತೇವೆ. ಭೌತಾತೀತ ಆದ ಸಂಗತಿಗಳಿಗೆ ಭೌತ ಪರವಾದ ರೂಪವನ್ನು ಕೊಟ್ಟು ಗೊಂದಲ ಮಾಡಿಕೊಳ್ಳುತ್ತೇವೆ. ಈ ಎರಡು ರೀತಿಯ ಸಂಗತಿಗಳನ್ನು ಆಯಾ ರೀತಿಯಲ್ಲಿ ತಿಳಿದೆವಾದರೆ ನಮ್ಮ ತಿಳಿವಳಿಕೆ ಶುದ್ಧವಾಗುತ್ತದೆ.

ಒಂದು ಗೂಬೆ ಕೂಗುತ್ತದೆ. ಅದರಿಂದ ನಮಗೆ ಭಯ ಆಗಬೇಕಾದ ಕಾರಣವಿಲ್ಲ.

ಹಿರಣ್ಯಕಶಿಪು ನರಸಿಂಹಾವತಾರದ ಕಥೆಯಿದೆ. ಅದು ಒಂದು ಅದ್ಭುತ ಎಂದು ನಮಗೆ ಕಾಣಬೇಕಾದದ್ದಿಲ್ಲ.

ನಿಭಾರ್ವುಕನಾದ ಒಬ್ಬ ಮನುಷ್ಯನನ್ನು ವರ್ಣಿಸುವುದರಲ್ಲಿ ವರ್ಡ್ಸ್‌ವರ್ತ್ ಕವಿ A primrose by the river's brim, A mere primrose was to him ಎಂದಿದ್ದಾನೆ. ಇಲ್ಲದ್ದನ್ನು ಊಹಿಸಿಕೊಂಡು ಭಯಪಡುವ ಭಾವುಕನಿಗಿಂತ ಜಡನಾದ ಇಂಥ ಮಕ್ಕನಾಗಿರುವುದೇ ಮೇಲು ಎಂದು ನನಗೆ ಕೆಲವು ವೇಳೆ ತೋರುತ್ತದೆ.

ನಿನಗಾಗಿ ನೀನು ಏನನ್ನೂ ಬಯಸದ ಸ್ಥಿತಿಗೆ ಬಂದಾಗ ಇತರರಿಗಾಗಿ

ತುಂಬ ಬಯಕೆಗಳನ್ನು ಬಯಸಲು ಆರಂಭಿಸುತ್ತೀಯೆ. ಕಾರ್ಯ ಬಹಳ ನಡೆದು ಜನ್ಮ ಸಾರ್ಥಕವಾಗುವುದಕ್ಕೆ 'ಸ್ವ' ವಿಷಯದಲ್ಲಿ ತೃಪ್ತನಾಗಿರುವುದು ತಾಯಿಬೇರು.

ದಿನದಿನದ ಜೀವನದ ಆಗುಹೋಗುಗಳನ್ನು ಸಹಿಸಿಕೊಂಡು ಬಾಳುವುದನ್ನು ನಾನು ಅಭ್ಯಾಸ ಮಾಡಬೇಕು. ಆಯದ ಸಿರಿ(ಕ್ಷೆ)ಯಿಂದ, ಅನಾದರಣೆಯ ಭಯದಿಂದ, ಉದ್ವೇಗಗೊಳ್ಳದಂತೆ ಇರಬೇಕು. ಮುಖ್ಯವಾದ ಮೊದಲ ಸಂಗತಿ ಮರ್ಯಾದೆಯಿಂದ ನಡೆದುಕೊಂಡು ಅನ್ನವನ್ನು ಗಳಿಸಿಕೊಳ್ಳುವುದು: ದೇವರು ನನಗೆ ಇಷ್ಟರ ದಾರಿಯನ್ನು ತೋರಿಸಿದನು. ಇದಾದ ಮೇಲೆ ಮುಖ್ಯವಾದ ಸಂಗತಿ, ನನ್ನ ಜೀವನ ಜೊತೆಯ ಜನರಿಗೆ ಉಪಯೋಗಿಯಾಗಿರಬೇಕು ಎನ್ನುವುದು: ಇದಕ್ಕೂ ದೇವರು ನನಗೆ ದಾರಿ ತೋರಿಸಿದಾನೆ. ಈ ಎರಡು ವಿಷಯದಲ್ಲಿ ದೇವರು ತೋರಿಸಿರುವ ಕರುಣೆಗೆ ನಾನು ಅರ್ಹನಾಗಿ ಬಾಳಬೇಕು; ಅವನೇ ಕನಿಕರಿಸಿಕೊಡುವ ವಸ್ತು ಸಂಪತ್ತಿಗಿಂತ ಹೆಚ್ಚನ್ನು ಬಯಸಬಾರದು.

ಮಾನವರು ಬಹುಶಃ ಲೋಕದೆದುರಲ್ಲಿ ಸಾಲಗಾರರು. ನಾವು ಲೋಕಕ್ಕೆ ಕೊಡುವುದು ಕಡಮೆ, ಅದರಿಂದ ಪಡೆಯುವುದು ಹೆಚ್ಚು. ಯಾವನಾಗಲಿ ತಾನು ಪಡೆಯುವುದಕ್ಕಿಂತ ಹೆಚ್ಚು ಕೊಡುತ್ತಿದೇನೆಂದು ತಿಳಿಯುವನೆ? ಇದಕ್ಕೆ ಚಿಂತೆಯೇಕೆ? ಅವನು ಲೋಕಕ್ಕೆ ಸಾಲಕೊಡುವ ಸಾಹುಕಾರ; ಸಂತೋಷಿಸಲಿ.

ಈ ಮಾತನ್ನು ಎಪಿಕ್ಟೀಟಸ್ ಯಾವುದೋ ಪ್ರಕರಣದಲ್ಲಿ ಹೇಳಿದಾನೆಂದು ನನ್ನ ನೆನಪು.

ಬಹುದಿನ ಏನೂ ಕಳೆದಿಲ್ಲ, ನಾನು ಕೈಯಲ್ಲಿ ಕಾಸಿಲ್ಲದ ಹುಡುಗನಾಗಿ ನಡೆದೆನು ಈಗ ದೇವರು ನನ್ನನ್ನು ಕೈಯಲ್ಲಿ ಕಾಸುಳ್ಳ ಮನುಷ್ಯನನ್ನಾಗಿ ಮಾಡಿದಾನೆ. ಇದನ್ನು ಮಾಡಿದವನು ಇದಕ್ಕಿಂತ ಹೆಚ್ಚಿನ, ಇದಕ್ಕಿಂತ ಕಡಿಮೆಯ, ಏನನ್ನು ಮಾಡುವುದಕ್ಕೂ ತಕ್ಕವನು.

ಸಂಸಾರಿಯಾದ ಒಬ್ಬ ಸಾಮಾನ್ಯ ಮನುಷ್ಯ ಈ ನಿಲುವನ್ನು ಒಪ್ಪಿಕೊಳ್ಳಲಾರ; ಆದರೆ ಸರಿಯಾದ ನಿಲುವು ಇದೇ ಎಂಬದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ.

ಏಕೆಂದರೆ, ಇದನ್ನಂಗೀಕರಿಸಿದ ಬಾಳು ಸಮಂತವಾಗಿ ಸಾರ್ಥಕವಾಗುತ್ತದೆ.

ನಮಗೆ ಬರುವುದೆನ್ನುವ ಎಲ್ಲ ಒಳ್ಳಿತೂ ಇತರರ ನಡತೆಯನ್ನವಲಂಬಿಸಿರುತ್ತದೆ. ನಾವು ಮಾಡುವುದೆನ್ನುವ ಎಲ್ಲ ಒಳ್ಳಿತೂ ಅವಲಂಬಿಸಿರುವುದು ನಮ್ಮ ನಡತೆಯನ್ನು. ಬರುವ ಒಳ್ಳಿತಕ್ಕಿಂತ ಹೆಚ್ಚಾಗಿ ಮಾಡುವ ಒಳ್ಳಿತನ್ನು ಕುರಿತು ನಾವು ಶ್ರದ್ಧೆವಹಿಸಿರಬೇಕು.

ಈ ನಾನು ದೇವರ ವಸ್ತು. ಎಂದಮೇಲೆ, ತನ್ನಿಷ್ಟದಂತೆ ನಡೆಸಿಕೊಳ್ಳಲು ಅವನು ಇದರ ಒಡೆಯ.

ಈ ಯಥಾರ್ಥ ತತ್ತ್ವವನ್ನು ನಾವು ಗ್ರಹಿಸಿದೆವಾದರೆ ಬಾಳು ಎಷ್ಟು ಸಫಲ, ಎಷ್ಟು ಸುಖಿ ಆಗಬಹುದು!

ಏನೂ ಇಲ್ಲ ಇದು ಒಂದು ಸಲ ಮನಸ್ಸನ್ನು ಮುಟ್ಟಿದಾಗ ನನಗೆ ಎಂಥ ಸುಖ ಆಗುತ್ತದೆ!

ಅನುದಿನದ ಆಗುಹೋಗನ್ನು ದುರ್ಲಕ್ಷಿಸಿ ಇತರರ ಸುಖಕ್ಕಾಗಿ ಸದಾ ದುಡಿಯುತ್ತಿರುವ ಒಂದು ಸ್ಥಿತಿಯನ್ನು ನಾನು ಊಹಿಸಿಕೊಳ್ಳುತ್ತೇನೆ. ಅದರ ಸುಖಕ್ಕೆ ಪರಿಮಿತಿಯಿಲ್ಲ ಎಂದು ಕಾಣುತ್ತದೆ.

ದೇವರು ನನಗೆ ಬಹುತೆರನ ಸೌಭಾಗ್ಯವನ್ನು ನೀಡಿದ್ದಾನೆ ಅವನೇ ಇದನ್ನೂ ನೀಡಬೇಕು ಇದಕ್ಕಿಂತ ಹಿರಿದಾದ ಸೌಭಾಗ್ಯವೊಂದಿಲ್ಲ.

ನಾನು ಇನ್ನೂ ಶರಣಾಗತಿಯನ್ನು ಮುಟ್ಟಿಲ್ಲ, ಅರ್ಪಣವನ್ನು ಸಾಧಿಸಿಲ್ಲ. ಆಸೆ ಭಯ ಇನ್ನೂ ನನ್ನನ್ನು ಅಲುಗಿಸುತ್ತಿವೆ.

ಎಲ್ಲ ಚೆಲುವೂ ದೇವರದು ಎನ್ನುವುದು ನನಗೆ ಇನ್ನೂ ಮನ ಮುಟ್ಟಿಲ್ಲ.

ಚೆಲುವ ಮುಖವೊಂದನ್ನು ಕಂಡಾಗ ಅದನ್ನು ನೋಡಲು ನಾನು ಹಿಂದೆಗೆಯುತ್ತೇನೆ. ನನ್ನನ್ನೇ ಕಾಣದೆ ಮನಸ್ಸು ಅದರ ವಿಷಯದಲ್ಲಿ ತಪ್ಪು ಎಣಿಸೀತು ಎಂದು ನನಗೆ ಭಯ.

ಆದರೆ ಸತ್ಯವಾಗಿ ಒಳ್ಳೆಯದೆನ್ನುವುದು ಏನಿದೆ ಅದೆಲ್ಲ ದೇವರದು ಹೊರತು ಅನ್ಯಥಾ ಅಲ್ಲ. ಇಂಥದನ್ನೆಲ್ಲ ನಾನು ಸರಳವಾಗಿ ನೋಡಬೇಕು; ನೋಡುತ್ತಾ ಅಲ್ಲೆಲ್ಲಾ ನನಗೆ ಕಾಣುವುದು ದೈವ ಎನ್ನುವುದನ್ನು ನೆನೆಯಬೇಕು.

ಮನಸ್ಸಿನಲ್ಲಿ ಈ ಭಾವ ನೆಲಸಿದ್ದರೆ ತಪ್ಪು ಎಣಿಕೆ ತಲೆ ಹಾಕಲಾರದು.

ತಿರುಚ್ಚಾನೂರಿಗೆ ಹೋಗುತ್ತಾ ನನಗೆ ಒಂದು ತತ್ವ ಹಠಾತ್ ಹೊಳೆಯಿತು. ಅಲ್ಲಿಂದ ಹಿಂತಿರುಗುತ್ತಾ ಅದು ಸ್ಥಿರವಾಯಿತು.

ದೇವರು ನಮಗೆ ಒಳಗೆ ಆಸೆಯಾಗಿ ಮೂಡುತ್ತಾನೆ. ಹೊರಗೆ ಅದನ್ನು ತಣಿಸುವ ವಸ್ತುವಾಗಿ ಕಾಣುತ್ತಾನೆ.

ನಮಗೆ ಎಷ್ಟು ವಿಧದ ಆಸೆ ಇವೆ ಅಷ್ಟು ವಿಧದಲ್ಲಿ ನಾವು ಅವನನ್ನು ಬಯಸಬೇಕೆಂದು ಅವನ ಸಂಕಲ್ಪ. ಲೋಕದಲ್ಲಿ ಅವನು ನಮಗೆ ಈ ಬಯಸುವ ರೀತಿಯನ್ನು ಕಲಿಸುತ್ತಿದ್ದಾನೆ.

ಕಂಪನ್ನು ಅರಿಯುವ ಮೂಗನ್ನು ಕೊಟ್ಟು ಅವನು ಅದನ್ನು ತಣಿಸುವ ಹೂವಾಗಿ ಅರಳುತ್ತಾನೆ.

ಗಂಡು, ಹೆಣ್ಣು ಎಲ್ಲ ಇದನ್ನು ಗ್ರಹಿಸಬೇಕು.

ಸರಕಾರದವರು ಈಚೆಗೆ ನಮ್ಮ ಪಂಕ್ತಿಯಲ್ಲಿ ಕೆಲವರಿಗೆ ಪ್ರಮೋಷನ್‌ಗಳನ್ನು ತಪ್ಪಿಸಿದ್ದಾರೆ.

ಇತರರಿಗೂ ಹೀಗೆ ಮಾಡುತ್ತಾರೆಂದು, ನಾನೂ ಈ ವರ್ತನೆಗೆ ಗುರಿಯಾಗಬಹುದೆಂದು, ವದಂತಿ. ಇದು ನಿಜ ಅಲ್ಲ ಎಂದು ನನ್ನ ನಂಬಿಕೆ. ಆದರೆ ವದಂತಿ ನಿಜವಾದರೆ ಹೇಗೆ?

ವದಂತಿ ನಿಜವಾದರೆ ನಾನು ಒಂದು ಸಂಗತಿಯನ್ನು ಮರೆಯದೆ ಇರಬೇಕು. ಮರೆಯುವುದಿಲ್ಲ ಎಂದು ನಂಬಿದ್ದೇನೆ.

ಆ ಸಂಗತಿ ಇದು: ಇಂಥ ಅನ್ಯಾಯಕ್ಕೆ ಗುರಿಯಾದವರಲ್ಲಿ ನಾನು ಮೊದಲಲ್ಲ. ಅಧಿಕಾರ ವರ್ಗದಲ್ಲಿ ಪ್ರಮೋಷನ್ ಪಡೆಯುವುದು ಜೀವನದ ಅಂತಿಮ ಧ್ಯೇಯವಲ್ಲ.

ಏನೇ ಆಗಲಿ ನಮ್ಮ ಜನರಿಗೆ ನಾನು ಮಾಡಬಹುದಾದ ಅತ್ಯಧಿಕ ಸೇವೆಯಾವುದು, ಅದನ್ನು ನಾನು ತಿಳಿಯಬೇಕು. ಅಧಿಕಾರ ವರ್ಗದಲ್ಲಿ ಪ್ರಮೋಷನ್ ಬರಲಿ ಬಿಡಲಿ, ತಪ್ಪದೆ ಆ ಸೇವೆಯನ್ನು ಸಲ್ಲಿಸಬೇಕು.

ಪರಿಚಯದ ಒಬ್ಬ ಮನುಷ್ಯ ನಮ್ಮ ಜೊತೆಗಿದ್ದರೆ ನಾವು ದಾರಿ ನಡೆಯುವ ಹೆಂಗಸರನ್ನು ನೋಡಲು ಹಿಂಜರಿಯುತ್ತೇವೆ. ಪರಿಚಯದ ಆ ಮನುಷ್ಯನ ಒಳ್ಳೆಯ ಅಭಿಪ್ರಾಯವನ್ನು ಉಳಿಸಿಕೊಳ್ಳಬೇಕೆಂದು ನಮಗೆ ಆಸೆ.

ದೇವರು ಸದಾ ನಮ್ಮೊಂದಿಗಿದ್ದಾನೆ. ಆದರೆ ಪರಿಚಯದ ಜನವಿಲ್ಲದಿದ್ದರೆ ನಮ್ಮ ಕಣ್ಣು ಅಲೆಯುತ್ತದೆ.

ಯಾವ ಪರಿಚಯದ ಜನಕ್ಕಿಂತ ಹೆಚ್ಚು ಹತ್ತಿರದಲ್ಲಿದ್ದುಕೊಂಡು, ಯಾವ ಪರಿಚಿತನು ನೋಡುವುದಕ್ಕಿಂತ ಹೆಚ್ಚು ಸ್ಪಷ್ಟವಾಗಿ ದೇವರು ನಮ್ಮ ನಡತೆಯನ್ನು ನೋಡುತ್ತಿದ್ದಾನೆ. ಇಲ್ಲವೇ ಇದು ನಮಗೆ ನಿಶ್ಚಯವಾಗಿಲ್ಲ; ಇಲ್ಲವೇ ಅವನು ನಮ್ಮನ್ನು ಒಳ್ಳೆಯವರು ಎಂದು ಎಣಿಸಲಿ ಎಂದು ನಮಗೆ ಆಸೆ ಇಲ್ಲ. ಇದೆಂಥ ವಿವೇಕ?

ದೃಷ್ಟಿಗೋಚರವಾದ ವಸ್ತುಲೋಕ ನಮ್ಮನ್ನು ಎಷ್ಟು ದಾರಿ ಕೆಡಿಸಿದೆ ಎನ್ನುವುದನ್ನು ಇದು ತೋರಿಸುತ್ತದೆ.

ಎಳೆತನದಿಂದ ನಮಗೆ ಒಂದು ಕಲ್ಪನೆ ಬೆಳೆದು ಭದ್ರವಾಗಿರುತ್ತದೆ: ಇರುವುದು ಎಂದರೆ ಒಂದು ಆಕಾರ ಧರಿಸಿರುವುದು.

ಎಳೆತನದಿಂದ ನಾವು ಇನ್ನೊಂದು ಸಂಗತಿಯನ್ನು ಕಲಿತರೆ ಚೆನ್ನಾದೀತು: ನೋಡುವುದು ಕಣ್ಣಲ್ಲ, ಮನಸ್ಸು; ಕಣ್ಣು ನೋಟಕ್ಕೆ ಒಂದು ಸಾಧನ ಅಷ್ಟೆ. ಅಲ್ಲದೆ ಮನಸ್ಸು ಹೊರಗಿನ ಈ ಸಾಧನದ ಮೂಲಕ ಮಾತ್ರ ಅಲ್ಲದೆ ಇದನ್ನು ಬಳಸದೆಯೂ ತತ್ವವನ್ನು ಕಾಣುತ್ತದೆ.

ಒಳಗಣ್ಣು ಕಾಣುವ ಇಂಥ ತತ್ವ ಹೊರಗಣ್ಣು ಕಾಣುವ ಸಾಕಾರದಷ್ಟೇ ಸತ್ಯ ತಥ್ಯ.

ಹೀಗೆ ಹಾಗೆ, ಲೆಕ್ಕವನ್ನು ಹೇಗೆ ಹಾಕಿ ನೋಡಿದರೂ ಲೋಕ ಉಪಕಾರಿ ಆಗಿರುವುದು, ನನ್ನ ಮೇಲೆ ಸಾಲ ಹೊತ್ತಿರುವುದು, ಸ್ಪಷ್ಟ ಕಾಣುತ್ತದೆ.

ಹೀಗಿದ್ದರೂ ನಾನು ಮತ್ತಷ್ಟು ಮಗುದಷ್ಟು ಬೇಕು ಎನ್ನುತ್ತಿದ್ದೇನೆ. ಏಕೆ ಹೀಗೆ ?

ನನಗಿಂತ ಹೆಚ್ಚು ಸಾಲಗಾರರಾದ ಇತರರು ಮತ್ತಷ್ಟು ಮಗುದಷ್ಟನ್ನು ಪಡೆಯುತ್ತಿದ್ದಾರೆ ಎಂಬ ಕಾರಣದಿಂದಲೇ ?

ಪಡೆಯುತ್ತಿದ್ದಾರೆ ಸರಿ. ಆದರೆ ಅದರಿಂದ ಅವರು ಮತ್ತಷ್ಟು ಮಗುದಷ್ಟು ಸಾಲಕ್ಕೆ ಇಳಿಯುತ್ತಿದಾರೆ.

ಹೀಗೆ ಮತ್ತಷ್ಟು ಮಗುದಷ್ಟು ಸಾಲಗಾರನಾಗಬೇಕೆಂದು ಯಾರು ಬಯಸಬಹುದು? ಅದು ಸಾಲ ಎಂದು ತಿಳಿಯದವರು ಬಯಸಬಹುದು; ತಿಳಿದವರು ಬಯಸಲಾರರು.

ಈರ್ಷೆ ಅಲ್ಪವಾದ ಆತ್ಮದ ಮುಮ್ಮೊದಲ ದೋಷ.

ಅದಕ್ಕೆ ಕಾರಣ, ಎಲ್ಲ ಒಳ್ಳಿತು ದೇವರು ಕೊಟ್ಟು ನಮಗೆ ಬರಬೇಕು ಎನ್ನುವುದನ್ನು ಗ್ರಹಿಸದಿರುವುದು.

ಇದನ್ನು ಗ್ರಹಿಸಿದರೆ ನಮ್ಮ ಜೊತೆಯಾತನಿಗೆ ಒದಗಿದ ಭಾಗ್ಯ ದೇವರು ಅವನಿಗೆ ಕೊಟ್ಟದ್ದು ಎನ್ನುವುದನ್ನು ನಾವು ಕಾಣುವೆವು.

ಅವನು ನಮ್ಮನ್ನಾಗಲಿ ಬಿಟ್ಟಿಲ್ಲ. ನಮಗೂ ಕೊಟ್ಟಿದ್ದಾನೆ.

ಅಷ್ಟು ಕೊಡಲಿಲ್ಲ? ಇರಬಹುದು; ಆದರೆ ಇಷ್ಟನ್ನು ಕೊಟ್ಟದ್ದುಂಟು.

ಇದನ್ನು ಕೊಟ್ಟನೆಂದು ನಮ್ಮ ಮನಸ್ಸಿನಲ್ಲಿ ಕೃತಜ್ಞತೆ ಇದೆಯೇ?

ನನ್ನ ಸೋದರನಿಗೆ ಎರಡು ಅಂಗಿ ಕೊಟ್ಟು ನನಗೆ ಅವನು ಒಂದಂಗಿ ಕೊಟ್ಟನೆಂದು ನಾನು ಗೊಣಗುಟ್ಟುವುದೇ? "ನಾನು ಎಷ್ಟೋ ಒಳ್ಳೆಯವನು; ನನ್ನ ಸೋದರ ಅಷ್ಟು ಒಳ್ಳೆಯವನಲ್ಲ." ಕೊಡುವ ಧಣಿಗೆ ಇದರ ನಿರ್ಣಯವನ್ನು ಏಕೆ ಬಿಡಲೊಲ್ಲೆ?

—"ಸರಿ. ಹೀಗೆ ವಾದಿಸುತ್ತ ಹೋದರೆ ಪ್ರಪಂಚದಲ್ಲಿ ಯಾರೂ ಐಶ್ವರ್ಯವನ್ನು ಪಡೆಯಲು ಯತ್ನ ಮಾಡುವಂತಿಲ್ಲ."—

ಈ ಮಾತು ಸರಿಯಲ್ಲ. ಯತ್ನ ಎಂದೂ ಇರಬಹುದು. ಅದನ್ನು ಮಾಡೆಂದು ದೈವ ನಿಯಮಿಸುತ್ತಿದೆ. ಅವಕಾಶ ಇಲ್ಲದಿರುವುದು ಯಾವುದಕ್ಕೆಂದರೆ ಅತೃಪ್ತಿಗೆ; ಹೊಟ್ಟೆಯುರಿಗೆ; ಸ್ವಾರ್ಥ ಅಜ್ಞಾನಗಳ ಸಂಯೋಗದಿಂದ ಉದಯಿಸುವ ಇತರ ದುರಾಶೆಯುಗಳಿಗೆ.

ಜೀವನದ ಕಾರ್ಯದಲ್ಲಿ ಅದೆಲ್ಲ ಒಂದು ಆಟ ಎಂಬಂತೆ ವಿಲಾಸದಿಂದ ತೊಡಗುವುದು ತಿಳಿವಳಿಕೆಯ ತುತ್ತತುದಿ. ಇದನ್ನು ಮಾಡಬಲ್ಲ ಮನುಷ್ಯನು ಎಂದೂ ಆ ಕಾರ್ಯವನ್ನು ಮಾಡದೆ ಬಿಡುವುದಿಲ್ಲ.

ನಿನ್ನ ಅಲಸಿಕೆ ಮಾಯುವುದಕ್ಕೆ ಇಷ್ಟು ಒಳ್ಳೆಯ ಔಷಧಿ ಇನ್ನೊಂದಿಲ್ಲ.

ಒಂದು ಆಟದಲ್ಲಿ ಹೇಗೆ ಹಾಗೆ ಕೆಲಸದಲ್ಲಿ ಸುಖವಿದೆ. ಅದನ್ನು ಕಂಡುಕೋ. ಆಡಿ ಲಾಭವೇನು ಎನ್ನುವುದಿಲ್ಲ: ದುಡಿದು ಲಾಭವೇನು ಎನ್ನಬೇಡ.

ತಾನು ಈ ಕೆಲಸವನ್ನು ಇಷ್ಟು ಚೆನ್ನಾಗಿ ಮಾಡಿದ್ದೇನೆ, ಇದನ್ನು ಮೀರಿಸುವುದು ಯಾರಿಗೂ ಸಾಧ್ಯವಿಲ್ಲ, ಎಂದು ಯಾವನೇ ಆಗಲಿ ತನ್ನ ಯಾವುದೇ ಕೆಲಸವನ್ನು ಕುರಿತು ಹೇಳುವುದು ತಪ್ಪು.

ಆ ಮಾಡಿದ ಕೆಲಸ ಎಷ್ಟು ಚೆನ್ನ ಆದರೆ ಅಷ್ಟೂ ಅದರ ವಿಷಯದಲ್ಲಿ ಅದನ್ನು ಮಾಡಿದವನಿಗೆ ಅಪ್ರತ್ಯಯ ಇರುತ್ತದೆ.

ಚೆಂದದ ಕಲ್ಪನೆಗೆ ರೂಪುಕೊಡುವ ಶಕ್ತಿ ಬೆಳೆದಂತೆ ಚೆಂದವೆನ್ನುವುದರ ಕಲ್ಪನೆಯೂ ಹೆಚ್ಚು ತೀವ್ರವಾಗುತ್ತದೆ. ಕಲ್ಪನೆ ಪೂರ್ಣವಾಗಿ ಕೈಸಾರಿತೆಂದು ಅವನಿಗೆ ಎಂದೂ ತೋರುವುದಿಲ್ಲ.

ಹಾಗೆ ತೋರಿತೋ ಕಲ್ಪನೆ ಕೊನರುತ್ತಿಲ್ಲ; ಅವನ ಕೈಗೆ ಸಿಕ್ಕಿದ ಮಟ್ಟ ಶಿಖರವಲ್ಲ.

ಇನ್ನು ಮುಂದೆ ಇದಕ್ಕಿಂತ ಚೆನ್ನಾದ ರಚನೆ ನಡೆಯದು ಎನ್ನುವ ಚೆನ್ನವನ್ನು ಯಾರು ಸಾಧಿಸಬಹುದು? ಇದರಂಥ ಇನ್ನೊಂದು ಕೆಲಸ ಇದಕ್ಕಿಂತ ಚೆನ್ನಾಗಿ ಈ ಮೊದಲು ಎಲ್ಲಿಯೂ ಆಗಿಲ್ಲವೇ?

ಈ ಮೊದಲಲ್ಲಿ ಅಲ್ಲಿ ಆದದ್ದು ಇನ್ನು ಮೇಲೆ ಇಲ್ಲಿ ಆಗಬಹುದು. ಇದು ಕೆಲಸಗಾರನ ಮಾತಲ್ಲ. ಇವನು ಇನ್ನೊಬ್ಬ ಬೇರೆ ಬೇರೆ; ಆದರೆ ಇಬ್ಬರ ಶಕ್ತಿಗೂ ಬೇರು ಒಂದೇ: ಅದು ದೈವ.

ಒಳಗೆ ದೈವ ಇದ್ದರೆ ಹೊರಗೆ ದೈವಕಾಣುವುದು ಇದ್ದರೆ ಎನ್ನುವುದರ ಅರ್ಥ ಇರುವುದನ್ನು ಕಂಡದ್ದರೆ ಎಂದು.

ತತ್ವತಃ ಈ ಒಳಗು ಹೊರಗು ಎನ್ನುವುದು ಬೇರೆ ಬೇರೆಯಲ್ಲ.

ಒಂದುಹೂವಿನಲ್ಲಿ ದೈವದ ಚೆಲುವು ಕಂಡ ವೇಳೆ ದೈವ ನಮ್ಮ ಹೃದಯದಲ್ಲಿದೆ.

ದೈವ ಎಲ್ಲ ಜೀವನದ ತಳಹದಿಯ ಜೀವನ. ನಮ್ಮ ಒಂದೊಂದು ಉಸಿರೂ ನಮಗೆ ದೇವನು ನೀಡಿ ಬಂದಿದೆ.

ಮನುಷ್ಯನಿಗೆ ಯಾವುದನ್ನೂ ಕೊಡುವ ದಾತ ಅವನು. ನಾನು ಪಡೆದಿರುವುದೆಲ್ಲಾ ನನಗೆ ಅವನಿಂದ ಬಂದಿದೆ.

ನಾನು ಬಯಸಿದ ಏನನ್ನಾಗಲಿ ಪಡೆಯದೆ ಹೋದರೆ ದೇವರು ನನಗೆ, ಅದನ್ನು ಬಿಡು ಇತ್ತ ಬಾ, ಎಂದು ನನ್ನನ್ನು ಬೇರೆಯ ದಿಕ್ಕಿಗೆ ಕರೆಯುತ್ತಿದಾನೆ ಎಂದರ್ಥ. ನನಗೆ ಯಾವುದು ಹಿತ ಅದನ್ನು ಅವನು ಬಲ್ಲನು. ಅದಕ್ಕಾಗಿ ಅವನು ನನ್ನ ಬಾಳಿನ ಒಂದೊಂದು ಕ್ಷಣವೂ ಅದನ್ನು ತಿದ್ದುತ್ತಿದಾನೆ.

ಸ್ವಾಭಾವಿಕ ಪ್ರವೃತ್ತಿಗಳನ್ನು ಸರ್ವದಾ ಅಡಗಿಸಿಕೊಂಡಿರುವುದು ಮಾನವನ ಸಾಮಾನ್ಯ ಜೀವನದ ಸೂತ್ರವಾಗಿಬಿಟ್ಟಿದೆ.

ಸತ್ಯದೈವಗಳ ಅನ್ವೇಷಣದ ಪ್ರವೃತ್ತಿ, ಹೆಣ್ಣು ಗಂಡಿನ ಒಲವಿನ ಪ್ರವೃತ್ತಿ, ಉಳಿದವರಿಗಿಂತ ಮೇಲಾಗಬೇಕೆಂಬ ಪ್ರವೃತ್ತಿ ಈ ಮಾತಿಗೆ ಉದಾಹರಣೆಗಳು

ಒಂದನ್ನು ನಾವು ನಮ್ಮ ಯೋಗ್ಯತೆಗೆ ಮಿಂಚಿದ್ದು ಎನ್ನುತ್ತೇವೆ; ಇನ್ನೊಂದನ್ನು ಕೊಳಕು ಎನ್ನುತ್ತೇವೆ; ಮತ್ತೊಂದನ್ನು ದುರಭಿಮಾನ ಎನ್ನುತ್ತೇವೆ. ಒಳ್ಳೆಯದಕ್ಕೆ ಹೀಗೆ ಕೆಟ್ಟ ಹೆಸರನ್ನಿಟ್ಟು ಬಾಳುವೆಯನ್ನು ಬರಡು ಮಾಡುತ್ತೇವೆ.

ನಮಗೆ ಬುದ್ಧಿ ಇರುವುದೇ ಅದನ್ನು ಬಳಸಿ ದೈವವನ್ನು ತಿಳಿಯುವ ಉದ್ದೇಶಕ್ಕಾಗಿ. 'ತಿಳಿಯುವುದು ಎಂದರೆ ಸಂಪೂರ್ಣವಾಗಿ ಗ್ರಹಿಸುವುದು ಎಂದಲ್ಲ; ಎಷ್ಟು ಸಾಧ್ಯ ಅಷ್ಟನ್ನು ಒಳಕೊಳ್ಳುವುದು.

ದೈವ ಎನ್ನುವುದನ್ನು ಬುದ್ಧಿಯ ಮೂಲಕ ಸಂಪೂರ್ಣವಾಗಿ ಗ್ರಹಿಸಲಾಗಲಿಲ್ಲ ಎಂಬ ಕಾರಣದಿಂದ ನಾವು ಅದನ್ನು ಬಳಸಿ ಪ್ರಯೋಜನವಿಲ್ಲ ಎಂದು ತೆಪ್ಪನಾಗುತ್ತೇವೆ. ರೈಲಿನಲ್ಲಿ ಕುಳಿತರೆ ಅದು ಒಂದು ಸ್ಟೇಷನ್ನಿನಲ್ಲಿ ನಿಲ್ಲುತ್ತದೆ ಮನೆಗೆ ಮುಟ್ಟಿಸುವುದಿಲ್ಲ ಎಂಬ ಕಾರಣದಿಂದ ರೈಲಿನಲ್ಲಿ ಕುಳಿತು ಕೊಳ್ಳುವುದಿಲ್ಲ ಎಂದಂತೆ.

ಶಕ್ತವೋ ಅಶಕ್ತವೋ, ಎಂಥದೇ ಆದರೂ ನನ್ನ ಬುದ್ಧಿ ದೇವರು ನನಗೆ ನೀಡಿದ ಆಸ್ತಿ; ಅದನ್ನು ಬಳಸದೆ ಬಿಡುವುದು ಸಲ್ಲದು. ಅದು

ನನ್ನದೆಂದು ಅದನ್ನು ಹಳಿಯುವುದೂ ಸಲ್ಲದು. ಹೀಗೆ ಹಳಿದರೆ ಆ ಹಳಿವು ದೈವ ಕೊಟ್ಟ ಆಸ್ತಿಯನ್ನು ತಟ್ಟುತ್ತದೆ.

ಹೆಣ್ಣು ಗಂಡಿನ ಒಲವಿನ ಪ್ರವೃತ್ತಿಯನ್ನು ಅತಿಯಾಗಿ ಅಡಗಿಸಿ ನಾವು ಈ ವಿಷಯದಲ್ಲಿ ಬಹು ಸುಲಭವಾಗಿ ಉದ್ರೇಕಗೊಳ್ಳುವ ಸ್ಥಿತಿಗೆ ಬಂದಿದ್ದೇವೆ. ಇದು ಸಹಜವಾದ ಪ್ರವೃತ್ತಿಯೆಂದು ಎಳೆತನದಿಂದಲೂ ತಿಳಿದು ಬೆಳೆದರೆ ಈ ವಿವರದಲ್ಲಿ ನಮ್ಮ ಸ್ವಭಾವ ಈಗ ಇರುವುದಕ್ಕಿಂತ ಹೆಚ್ಚು ಆರೋಗ್ಯಕರವಾಗಿ ಇದ್ದೀತು.

ಮೇಲಾಗಿ ಬಾಳುವ ಆಸೆಯೂ ಅಷ್ಟೇ. ನಮ್ಮ ಸ್ವಭಾವದ ದಿವ್ಯಾಂಶದಲ್ಲಿ ಅತ್ಯಂತ ದಿವ್ಯವಾದ ಅಂಶ ಅದು. ಆದಷ್ಟು ಹೆಚ್ಚಾಗಿ ಆದಷ್ಟು ಚೆನ್ನಾಗಿ ದುಡಿಯುವುದು ಸೇವೆ; ನಮ್ಮ ಜೀವನವನ್ನು ಅತ್ಯಂತವಾಗಿ ಸಾರ್ಥಕಗೊಳಿಸುವ ಮಾರ್ಗ. ಸರಿಯಾಗಿ ತಿರುಗಿಸಿದರೆ ಇದು ಎಂಥ ಒಳ್ಳೆಯ ಪ್ರವೃತ್ತಿಯಾಗಬೇಕು! ಆದರೇನು, ನಾವು ಇದನ್ನು ತಿರುಗಿಸಲು ನೋಡುವುದಿಲ್ಲ. ವಿನಾಶದ ಹೆಸರಲ್ಲಿ ಅಡಗಿಸಿ ಕೊಲ್ಲುತ್ತೇವೆ.

ಹಿಂದಿರುಗಿ ನನ್ನ ಬಾಳಿನ ದಾರಿಯನ್ನು ನೋಡುವಾಗ ನನಗೆ ಎಲ್ಲ ಕಷ್ಟದ ವೇಳೆ ದೈವ ನನ್ನನ್ನು ಅರಸಿ ಬಂದು ಕಾಪಾಡಿರುವುದು ಕಾಣುತ್ತದೆ. ಅದೇ ಮುಂದೂ ನನ್ನನ್ನು ಕಾಯಬೇಕು; ಕಾಯುತ್ತದೆ; ನಾನು ಬಲ್ಲೆ.

ಜೀವನ ಒಂದಷ್ಟು ಅಧಿಕಾರ ಮಾತ್ರವಲ್ಲ; ಸಂಪತ್ತು ಎಂದು ಕರೆದು ಲೋಕಪೂಜಿಸುವ ಧನಕನಕ ವಸ್ತುವಾಹನ ಅಲ್ಲ; ಜೀವನ ದೇವರನ್ನರಿಯಲು ನಮಗೆ ದೊರೆತಿರುವ ಅವಕಾಶ.

ಮನುಷ್ಯನ ಒಳ್ಳೆಯ ಕೆಟ್ಟ ಪ್ರವೃತ್ತಿಗಳ ಮಧ್ಯೆ ನಡೆಯುವ ಯುದ್ಧವೇ ನಿಜವಾದ ಕುರುಕ್ಷೇತ್ರ ಯುದ್ಧ.

ದೈವ ನನ್ನ ಬುದ್ಧಿಯ ಮೂಲಕ ನನಗೆ ಒಳ್ಳೆಯ ಮನುಷ್ಯನಾಗು

ಎಂದು ಹೇಳುತ್ತಿದೆ. ನಾನು ಹೇಳುತ್ತಿದೇನೆ, ನಾನು ಡೆಪ್ಯುಟಿ ಕಮಿಷನರ್ ಆಗಬೇಕು ಎಂದು. ಒಳ್ಳೆಯ ಮನುಷ್ಯನಾಗುವುದು ಈ ಡೆಪ್ಯುಟಿ ಕಮಿಷನರ್ ಪದವಿಗಿಂತ ಅದಕ್ಕಿಂತ ಹೆಚ್ಚಿನ ಪದವಿಗಿಂತ ಹೆಚ್ಚಿನ ಸಂಗತಿ ಎನ್ನುವುದನ್ನು ನಾನು ಅರಿತಿಲ್ಲ.

ನಾನು ಒಂದು ಕಾಲದಲ್ಲಿ ಊಟಕ್ಕಾಗಿ ಮನೆಯಿಂದ ಮನೆಗೆ ಹೋಗುತ್ತಿದ್ದೆನು. ಈಗ ಒಂದೇ ಮನೆಯಲ್ಲಿ ಊಟ ಮಾಡುತ್ತಿದೇನೆ ಊಟ ಎಲ್ಲಿ ಎನ್ನುವುದು ದೊಡ್ಡ ಮಾತಲ್ಲ: ಬಾಳು ಎಂಥದು ಎನ್ನುವುದೇ ದೊಡ್ಡ ಮಾತು.

ನಾನು ದಿನ ಕಳೆದಂತೆ ನಿನಗೆ ಹತ್ತಿರವಾಗಿ ಸರಿಯುತ್ತಿದೇನೆಯೋ ? ಹಾಗೆ ಸರಿಯುವಂತೆ ಅನುಗ್ರಹ ಮಾಡು

ನಾನು ಎಂದೂ ಒಬ್ಬ ತಿರುಕ. ಅಂದು ಇತರರ ಮನೆಗಳಲ್ಲಿ ತಿರಿದೆನು; ಇಂದು ನೀನು ನನ್ನದೆಂದಿರುವ ಈ ನಿನ್ನ ಮನೆಯಲ್ಲಿ ತಿರಿಯು ತ್ತಿದೇನೆ. ಆದರೆ ಒಂದು ಸಂಗತಿ ನನಗೆ ಎಂದೂ ಮರೆಯುವುದು ಬೇಡ: ನಾನು ಬೇಡುವವನು, ನೀನು ನೀಡುವವನು. ಎಂದಿಗೂ ಬೇಡುವುದು ನನ್ನ ಪಾತ್ರ; ನಿನ್ನದು ಎಂದೆಂದಿಗೂ ನೀಡುತ್ತಿರುವುದು.

ಅವರವು ಎಂದ ಆ ಮನೆಗಳಲ್ಲಿ ಅಂದು ನೀಡಿದವನು ನೀನೇ.

ಎಂದೇ ಆಗಲಿ ಎಲ್ಲಿಯೋ ಆಗಲಿ ಕೊಡಲು ಬಲ್ಲವನು ನೀನೇ.

ಮಗು ಬೆಳೆದು ಎದೆಹಾಲನ್ನು ಬಿಟ್ಟು ಬೇರೆಯ ಆಹಾರದಿಂದ ಬೆಳೆಯುವ ದಿನ ಬಂದಾಗ ಅದು ಎದೆಯನ್ನು ಬಿಡದಿದ್ದರೆ ತಾಯಿ ಮೊಲೆಯ ತೊಟ್ಟಿಗೆ ಸ್ವಲ್ಪ ಕಹಿಯನ್ನು ಸವರುತ್ತಾಳೆ; ಮಗುವಿನ ಎದೆಹಾಲಿನ ಆಸೆಯನ್ನು ಬಿಡಿಸುತ್ತಾಳೆ ಪ್ರಾಪಂಚಿಕ ಸುಖಸೌಭಾಗ್ಯದ ನಮ್ಮ ಆಸೆ ಯನ್ನು ಬಿಡಿಸಲು ದೇವರು ನಮಗೆ ಹೀಗೆಯೇ ಮಾಡುತ್ತಾನೆ.

ಮನುಜ ಕುಲ ಆರಂಭದ ದೆಸೆಯಲ್ಲಿ ದಿನದಿನದ ಜೀವನದಲ್ಲಿ ದೈವವನ್ನು ಕಾಣುತ್ತಿದ್ದಿತು

ಸಾಮಾನ್ಯವಾದ ಸಂಗತಿಗಳನ್ನು ಕುರಿತು ಅದು ಪಡುತ್ತಿದ್ದ ಆಶ್ಚರ್ಯವನ್ನು ಈಗ ನಾವು ಪಡಲಾರೆವು. ಆ ಆಶ್ಚರ್ಯವನ್ನು ಮರಳಿ ಮೂಡಿಸುವುದು ತತ್ವವಿಚಾರದ ಉದ್ದೇಶ; ಎಳೆಯ ದಿನದ ಆ ಮುಗ್ಧದೃಷ್ಟಿಯನ್ನು ಮರಳಿ ಕಣ್ಣಿಗೆ ನೀಡುವುದು ಕಲೆಯ ಉದ್ದೇಶ; ಆ ಆರಂಭಕಾಲದ ಮಾನವನು ಸೂರ್ಯ, ಚಂದ್ರ, ನಕ್ಷತ್ರಗಳನ್ನು ಕಂಡಾಗ ಅನುಭವಿಸಿದ ಭಕ್ತಿಗೌರವಗಳಿಂದ ಚೇತನವನ್ನು ಸೋಕುವುದು ಧರ್ಮದ ಉದ್ದೇಶ.

ಸ್ವಭಾವತಃ ನಾನು ದುರ್ಬಲವಾದ ನಂಬಿಕೆಯ ಮನುಷ್ಯ; ದೇವರು ನನ್ನ ನಂಬಿಕೆಯನ್ನು ಬಲಪಡಿಸಬೇಕು.

ದೇವರು ಸದಾ ನನ್ನನ್ನು ಕಾಯುತ್ತಿರುವುದನ್ನು ನಾನು ನಿಜವಾಗಿ ಬಲ್ಲೆನಾದರೆ ಯಾವುದೇ ವಿಷಯದಲ್ಲಿ ನನಗೆ ಭಯ ಹೇಗೆ ಬಂದೀತು? ಆದರೆ ಭಯವೆನ್ನುವುದು ನನ್ನ ನಿರಂತರ ಮನೋಧರ್ಮವಾಗಿದೆ. ಆದರೆ ಇದೂ ನಿಜ: ದೇವರು ನನ್ನನ್ನು ರಕ್ಷಿಸುತ್ತಿರುವನೆನ್ನುವುದೂ ನನಗೆ ಆಗಾಗ ತಿಳಿಯುತ್ತದೆ.

ದೈವಸಾನ್ನಿಧ್ಯ ಸಂತತವಾದರೆ ಮಾತ್ರ ನಾನು ನಿಜವಾಗಿ ಸುಖಿ ಆಗಬಹುದು.

ಸ್ವಲ್ಪವೇ ಸಾಕಾಗಿದ್ದ ಒಂದು ಕಾಲ ನನ್ನ ಜೀವನದಲ್ಲಿ ಒಮ್ಮೆ ಇದ್ದಿತು. ಕೆಲವು ಕಾಲ ಐಶ್ವರ್ಯವನ್ನನುಭವಿಸಿದ ಮೇಲೆ ಈಗ ನನಗೆ ಬಹಳವೂ ಸಾಲದೆ ಇದೆ. ಮನುಷ್ಯನು ಹೀಗೆ ಸುಖದಿಂದ ಕೆಡುತ್ತಾನೆ. ನಾನು ಐಹಿಕ ಸೌಭಾಗ್ಯಕ್ಕೆ ಅತಿಯಾದ ಬೆಲೆಯನ್ನು ಕೊಡುತ್ತಿದ್ದೇನೆ.

ಒಳ್ಳೆಯ ಮಾತು ಕೆಟ್ಟ ಮಾತು ನನ್ನ ಅಂತರಂಗವನ್ನು ತೀವ್ರವಾಗಿ

ಮುಟ್ಟುತ್ತವೆ. ಮೊದಲಿಗಿಂತ ಹೆಚ್ಚು ತೀವ್ರವಾಗಿ ಎಂದು ಹೇಳಲಾರೆ; ಆದರೆ ಇದು ತಕ್ಕಷ್ಟು ತೀವ್ರವೇ. ಈ ವಿಷಯದಲ್ಲಿ ನಾನು ಯುಕ್ತವಾದ ಪರಿಜ್ಞಾನವನ್ನು ಅಭ್ಯಾಸ ಮಾಡಬೇಕು.

ಒಂದೇ ಮೆಚ್ಚಿಗೆ ಮಾನವನಿಗೆ ಬಯಸಲು ಯೋಗ್ಯವಾದದ್ದು: ಅದು ದೇವರ ಮೆಚ್ಚಿಗೆ. ಒಂದು ಅಸಮಾಧಾನವನ್ನು ಮೂಡಿಸಿದನೇ ಅವನು ಕೆಟ್ಟ: ಆ ಅಸಮಾಧಾನ ದೈವದ ಅಸಮಾಧಾನ.

ಮನುಷ್ಯನಿಗೆ ಇದೇ ಸಾಧುವಾದ ಕಲ್ಪನೆ ಇದಲ್ಲದೆ ಬೇರೆ ಯಾವ ಕಲ್ಪನೆಯೂ ಸಾಧುವಲ್ಲ

ದೇವರ ಅಸಮಾಧಾನ ತೀರಾ ಅಶುಭ ಎಂದೆನೆ? ಹಾಗಾದರೆ ಇದರಿಂದ ತಪ್ಪಿಸಿಕೊಂಡಾರು ಯಾರು? ನಾನಂತೂ ಅಲ್ಲ. ಈ ವಿಚಾರದಲ್ಲಿ ಪರಿಹಾರವಿರುವುದು ಒಂದು ನಿಶ್ಚಯದಲ್ಲಿ: ನಾನು ಬಹಳ ತಪ್ಪುಮಾಡಿರುವುದು ನಿಜ; ಆದರೆ ನೀನು ಅದರಲ್ಲಿ ನೂರರ ಒಂದು ಅಂಶಕ್ಕೆ ದಂಡನೆ ಮಾಡಿದರೂ ನನಗೆ ಉಳಿವಿಲ್ಲ; ನಾನು ಉಳಿದಿರುವುದರ ಒಂದೇ ಕಾರಣ ನೀನು ಕರುಣಾಳು ಎನ್ನುವುದು.

ಇದು ಶರಣಾಗತಿ.

ಚೇತನ ಹೀಗೆಂದಾಗ ದೇವರು ಅದನ್ನು ಒಪ್ಪಿಕೊಳ್ಳುತ್ತಾನೆ. ಇದರಿಂದಲೇ ಅವನನ್ನು ಹಿರಿಯರು ಸುಲಭ, ಸುಶೀಲ ಎಂದು ವರ್ಣಿಸಿದರು.

ಇತರರು ನನಗಿಂತ ಧೀರರಾಗಿರುವುದು ನನಗೆ ಕಾಣುತ್ತದೆ. ಶ್ರೀ...... ಇವರು ಇದಕ್ಕೆ ಉದಾಹರಣೆ. ನನಗೆ ಅವರ ಆ ಮನೋದಾರ್ಢ್ಯವೂ ಇಲ್ಲ; ಆ ಧೈರ್ಯವೂ ಇಲ್ಲ.

ಒಂದೊಂದು ಜೀವಕ್ಕೂ ದೈವವನ್ನು ಸಮೀಪಿಸಲು ಅದರದರ ರೀತಿ ಇದೆ. ಆ ರೀತಿ ಎಂಥದು ಎನ್ನುವುದು ಮುಖ್ಯವಲ್ಲ; ದೂರ ಹೋಗಲಿಲ್ಲ, ಹತ್ತಿರಕ್ಕೆ ಸಾರುತ್ತಿದೆ, ಎನ್ನುವುದು ಮುಖ್ಯ.

ನಾನು ಹಲವು ಸಲ ಪೂಜೆಯ ಹೊತ್ತಿನಲ್ಲಿ, "ಇದೆಲ್ಲ ನಿನ್ನದು,

ಇದರ ಚಿಂತೆ ನನಗೇಕೆ? ನಿನ್ನದಾದದ್ದನ್ನು ನೀನು ಚೆನ್ನಾಗಿಯೇ ನೋಡಿಕೊಳ್ಳುವೆ," ಎಂದು ನೆನೆಯುತ್ತೇನೆ. ಆದರೆ ಪೂಜೆ ಮುಗಿದ ಮೇಲೆ ಮನಸ್ಸು ಹಿಂದನ್ನು ಮುಂದನ್ನು ಪರಿಶೀಲಿಸತೊಡಗುತ್ತದೆ. ಅರ್ಪಣ ಸುಲಭವಲ್ಲ.

ನಾನು ಎಲ್ಲವನ್ನೂ ದೇವರಿಗೆ ಕೊಟ್ಟು ಮತ್ತೆ ಎಲ್ಲವೂ ನನ್ನದೆಂಬಂತೆ ನಡೆಯುತ್ತೇನೆ. ನಿಜದಲ್ಲಿ ಇದು ಕಳವು.

ನಾವು ದೇವರೊಂದಿಗೆ ಮಕ್ಕಳು ನಮ್ಮೊಂದಿಗೆ ಆಡುವಂತೆ ಆಡುತ್ತೇವೆ. ಆಟದ ಸಾಮಾನನ್ನು ಈ ಕ್ಷಣ ಕೊಟ್ಟುಬಿಡುವುದು; ಉತ್ತರಕ್ಷಣ ಅದನ್ನು ಹಿಂದಕ್ಕೆ ಸೆಳೆದುಕೊಂಡು ಆಡತೊಡಗುವುದು.

ದೇವರು ನಮಗೆ ಬಹುತೆರನ ಅನುಗ್ರಹವನ್ನು ತೋರಿಸುತ್ತಾನೆ. ಅವನು ನೀಡುತ್ತಿರುವುದನ್ನು ನಾವು ಸೆಳೆಯುತ್ತಿದ್ದೇವೆಂಬಂತೆ ನಾವು ನಡೆಯುತ್ತೇವೆ. ನಮ್ಮ ಸೆಳೆತದಲ್ಲಿ ಆತುರ, ಅವಿಶ್ವಾಸ, ಕಾಣುತ್ತವೆ. ಇದು ನಮ್ಮ ಸ್ವಭಾವ.

ಮೃಗಶಾಲೆಯಲ್ಲಿ ಇರುವ ಮುಂಗಸಿಗೆ ನೀವಾಗಿ ಒಂದು ಕಡಲೆಕಾಯನ್ನು ನೀಡಿ. ನೀವೇ ಸಂತೋಷದಿಂದ ಅದನ್ನು ನೀಡುತ್ತಿದ್ದರೂ ಮುಂಗ ಅದನ್ನು ನಿಮ್ಮಿಂದ ಕಸಿದುಕೊಳ್ಳುತ್ತಿರುವಂತೆ ಸೆಳೆಯುತ್ತದೆ. ಅದು ಅದರ ಸ್ವಭಾವ. ನೀವು ಸಮ್ಮತವಾಗಿ ಕೊಡುತ್ತೀರಿ ಎನ್ನುವುದನ್ನು ಅದು ಕಾಣದು; ಕಂಡರೂ ನಂಬದು.

ಕೆಟ್ಟದು ಎನ್ನುವುದನ್ನು ನಿರಾಕರಿಸುವಷ್ಟನ್ನು ನಾವು ಕಲಿತೆವೇ ಎಷ್ಟು ಒಳಿತಾದೀತು. ಒಳ್ಳಿತನ್ನು ಕುರಿತ ನಮ್ಮ ಕಲ್ಪನೆಯಲ್ಲಿ ಒಳ್ಳಿತಲ್ಲದ ಬಹು ಅಂಶ ಬೆರೆತುಕೊಂಡಿದೆ. ಇದನ್ನು ತೊರೆಯುವುದೇ ಒಂದು ದೊಡ್ಡ ಕೆಲಸ.

ನಮಗೆ ದೇವರು ಬೇಕು. ದೇವರು ಎನ್ನುತ್ತಾ ಆ ಭಾವನೆಯೊಂದಿಗೆ ನಾವು ಬೆರಸುವ ಅಂಧವಿಶ್ವಾಸ ಬೇಡ. ಈ ಬೇಡದ ಭಾಗವನ್ನು ಸುಲಿದು

ಎಸೆದೆವಾದರೆ ಹತ್ತು ಮತಗಳು ದೇವರು ದೇವರು ಎನ್ನುವ ವಸ್ತು ಒಂದೇ ಎನ್ನುವುದು ವ್ಯಕ್ತವಾಗುವುದು.

ಕೆಟ್ಟುದು ಎಲ್ಲಿಯೋ ಇರಲಿ ಅದನ್ನು ಬಿಟ್ಟಿ ಎನ್ನಬೇಕು. ಹಾಗೆಂದರೆ ನೀನು ಮುಕ್ತ. ಕೋಪ ಕೆಟ್ಟದು. ಅದು ಬೇರೆಯವರಲ್ಲಿ ಕಂಡಾಗ ನೀನು ಬೇಸರಪಡುತ್ತೀಯ; ಅದು ನಿನ್ನಲ್ಲಿ ಕಂಡಾಗಲೂ ಅಂತೇ ಬೇಸರಪಡು. ಬೇರೆಯವನಲ್ಲಿ ಕಾಣುವ ಹಟ ನಿನಗೆ ಬೇಸರವನ್ನುಂಟುಮಾಡುತ್ತದೆ. ಬೇರೆಯವನ ಚಪಲಬುದ್ಧಿಯನ್ನು ಕಂಡೂ ನಿನಗೆ ಬೇಸರ. ಇವು ನಿನ್ನಲ್ಲಿ ಕಂಡಾಗಲೂ ಹಾಗೆಯೇ ಬೇಸರಪಡು.

ಇವು ನಿನ್ನವಾದಾಗ ಅವುಗಳ ವಿಷಯ ನೀನು ಬೇಸರಪಟ್ಟಿದ್ದರೆ ಅವು ಇನ್ನೊಬ್ಬರಲ್ಲಿ ಕಂಡಾಗ ಬೇಸರಪಡಲು ನಿನಗೆ ಅಧಿಕಾರಬರುತ್ತದೆ. ಹಾಗಲ್ಲದೆ ಬರುವುದಿಲ್ಲ

ಬರ್ಟ್ರಂಡ್ ರಸೆಲ್ ಹೇಳುತ್ತಾರೆ: “ವರ್ಡ್ಸ್‌ವರ್ತ್ ಹರೆಯದಲ್ಲಿ ಫ್ರಾನ್ಸಿನ ರಾಷ್ಟ್ರವಿಪ್ಲವದ ವಿಷಯದಲ್ಲಿ ಸಹಾನುಭೂತಿ ತೋರಿದನು, ಒಳ್ಳೆಯ ಕಾವ್ಯವನ್ನು ಬರೆದನು, ಔರಸಳಲ್ಲದ ಒಬ್ಬ ಮಗಳನ್ನು ಪಡೆದನು. ವಯಸ್ಸಾದ ಮೇಲೆ ಒಳ್ಳೆಯವನಾದನು, ಕೆಲಸಕ್ಕೆ ಬಾರದ ಕೃತಿಗಳನ್ನು ರಚಿಸಿದನು.” ಬರ್ಟ್ರಂಡ್ ರಸೆಲ್ ಬುದ್ಧಿವಂತರು. ಇಂಥವರು ಈ ಮಾತನ್ನಾಡಿರುವುದು ಸೋಜಿಗವೆನ್ನಬೇಕು. ವರ್ಡ್ಸ್‌ವರ್ತ್ ಹರೆಯದಲ್ಲೂ ಅಷ್ಟೇ, ವಯಸ್ಸಾದ ಮೇಲೂ ಅಷ್ಟೇ, ಒಂದೇ ರೀತಿಯಲ್ಲಿ ನಡೆದನು: ಎಂದರೆ ಅವನ ಕೆಲಸ ಒಂದಷ್ಟು ಸರಿ, ಒಂದಷ್ಟು ತಪ್ಪು. ಒಳ್ಳೆಯ ಕಾವ್ಯದೊಂದಿಗೆ ಬಂದದ್ದರಿಂದ ಪರಸ್ತ್ರೀ ಸಂಗ ಒಳ್ಳಿತಲ್ಲ. ಕೆಲಸಕ್ಕೆ ಬಾರದ ಕಾವ್ಯದೊಂದಿಗೆ ಬಂದದ್ದರಿಂದ ಸದ್ವರ್ತನದ ಬೆಲೆ ಅಳಿಯುವುದಿಲ್ಲ. ಒಳಿತು ಒಳಿತೇ; ಕೆಟ್ಟದು ಕೆಟ್ಟದೆ. ನೀತಿ ಬಯಸುವುದು ಎಲ್ಲ ವೇಳೆಯೂ ಎಲ್ಲ ದಿಕ್ಕಿನಲ್ಲೂ ಒಳ್ಳಿತನ್ನೇ ಮಾಡು ಎಂದು. ನೀನು ನಡೆಯುವ ನಡತೆ ಒಳ್ಳಿತಾಗಿರಲಿ; ನೀನು ಬರೆಯುವ ಕಾವ್ಯ ಚಂದವಾಗಿರಲಿ.

ಇದು ಅಸಾಧ್ಯ ಎಂದು ಯಾರಾದರೂ ಹೇಳುವರೋ? ಒಳ್ಳಿತು: ಸಾಧ್ಯಕ್ಕೆ ನಮ್ಮ ಅಲ್ಪಮತಿಯ ಮಿತಿಯನ್ನು ಇಕ್ಕುವುದು ಬೇಡ.

ಬೇರೊಬ್ಬರ ಶ್ರೇಯಸ್ಸನ್ನು ನಿನ್ನದಕ್ಕಿಂತ ಎಷ್ಟು ಹೆಚ್ಚಾಗಿ ನೀನು ಬಯಸುತ್ತೀಯೆ ಅಷ್ಟು ಮಟ್ಟಿಗೆ ನಿನ್ನ ಬಾಳು ಸಾರ್ಥಕ ಆಗುತ್ತದೆ. ಅದು ಈಗ ಬಂಜೆಯಾಗಿರುವುದಕ್ಕೆ ಕಾರಣ ನೀನು ಈ ಸೂತ್ರಕ್ಕೆ ವಿರೋಧವಾಗಿ ನಡೆಯುತ್ತಿರುವುದು.

ನಿನಗೆ ಐಹಿಕ ಸಂಪತ್ತು ಬರುವುದು ಬಹು ವೇಳೆ ನಿನ್ನನ್ನು ಕುರಿತು ಮತ್ತೊಬ್ಬನ ಅಭಿಪ್ರಾಯ ಏನು ಅದನ್ನು ಅವಲಂಬಿಸಿರುತ್ತದೆ. ನಿನಗೆಷ್ಟು ಸಾಧ್ಯ ಅಷ್ಟು ಗುಣವನ್ನು ಸಾಧಿಸು. ನೀನು ಹೀಗೆ ಮಾಡಿದರೂ ಆ ಇನ್ನೊಬ್ಬ ನಿನ್ನನ್ನು ಸರಿಯಾಗಿ ಕಾಣದಿದ್ದರೆ ನಿನಗೆ ಚಿಂತೆ ಬೇಡ ಆ ತಪ್ಪು ಅವನದು, ನಿನ್ನದಲ್ಲ.

ಏನೇ ಆಗಲಿ ಯಾವ ಹೊತ್ತಿನಲ್ಲೂ ಈ ಅತ್ಯುನ್ನತ ಗುಣಕ್ಕಿಂತ ಕಡಮೆಯದನ್ನು ಬಾಳುವುದು ನಿನಗೆ ಸಲ್ಲದು. ಪ್ರತಿಫಲ ನೋಡಿಕೊಂಡು ಅದಕ್ಕೆ ತಕ್ಕಷ್ಟೇ ಗುಣವಂತನಾಗುವುದಕ್ಕೆ ನಿನಗೆ ಅಧಿಕಾರವಿಲ್ಲ. "ನಾನು ಮಾಡಬೇಕಾದದ್ದು ಎಷ್ಟು" ಎನ್ನುವುದಕ್ಕೆ ಉತ್ತರ "ನಿನ್ನ ಕೈಯಲ್ಲಾದಷ್ಟು." ಅದಕ್ಕೆ ಕಡಮೆ ಕಮ್ಮಿ ಆಳತೆ.

ಜೀವನದಲ್ಲಿ ಹಲವು ವೇಳೆ ನಿನ್ನಷ್ಟು ಶಕ್ತನಲ್ಲದವನೊಬ್ಬನು ನಿನಗಿಂತ ಹೆಚ್ಚಿನ ಸಂಪತ್ತನ್ನು ಪಡೆಯುತ್ತಾನೆ. ಅಷ್ಟಕ್ಕಾಗಿ ನೀನು ನಿನ್ನ ಶಕ್ತಿಗಿಂತ ಕಡಮೆಯಾಗಿ ಕೆಲಸ ಮಾಡುವೆಯಾ?

ಆ ಇನ್ನೊಬ್ಬ ನಿನಗೆ ಸಮ ಅಲ್ಲ ಎನ್ನುವೆ ಇದು ನೀನೇ ಹೇಳುವ ಮಾತು. ಈ ವಿಷಯದಲ್ಲಿ ಸಂದೇಹ ತಪ್ಪಿದ್ದಲ್ಲ.

ಈ ಚರ್ಚೆಗಾಗಿ ಇದು ನಿಜವೆಂದು ಒಪ್ಪೋಣ ಅವನು ನಿನ್ನಷ್ಟು

ಒಳ್ಳೆಯವನಲ್ಲ; ಆದರೆ ಅವನ ತಂದೆ ಪುಣ್ಯವಂತರು, ಅವನಿಗೆ ಹಣ ಬಿಟ್ಟು ಹೋದರು. ಅದಕ್ಕಾಗಿ ನೀನು ನಿನ್ನ ಕೆಲಸವನ್ನು ಅರ್ಧಮರ್ಧ ಮಾಡುತ್ತೀಯಾ?

ಅವನ ಅಪ್ಪ ಅವನಿಗೆ ಆಸ್ತಿ ಬಿಡಲಿಲ್ಲ, ಅವನ ಗೆಳೆಯ ಹೆಚ್ಚಿನ ಒಂದು ಪ್ರಮೋಷನ್ ಕೊಟ್ಟನು. ನಿನ್ನ ಕೆಲಸವನ್ನು ಕೆಡಿಸುವುದಕ್ಕೆ ಇದಾದರೂ ಕಾರಣವಾಗುತ್ತದೆಯೇನು?

ಈ ಪ್ರಮೋಷನನ್ನು ಅವನಿಗೆ ಕೊಡುವುದಕ್ಕಾಗಿ ನಿನಗೆ ತಪ್ಪಿಸಿದರೆನ್ನು: ಇದು ಹೆಚ್ಚಿನ ಕಾರಣವೋ?

ನಿನ್ನ ಬಾಳುವೆಗೆ ಎಂಥೆಂಥ ಮಹನೀಯ ಜನರ ಆಲೋಚನೆ ಸಾರಿ ಬಂದಿದೆ, ಸದಾ ಅದನ್ನು ನೆನೆ. ಅದಕ್ಕೆ ಒಪ್ಪುವಂತೆ ನಡೆ. ಧೀರನಾಗು; ಸೇವೆ ಮಾಡು; ಸಜ್ಜನನಾಗು.

ಲೋಕ ನಿನ್ನನ್ನು ಚೆನ್ನಾಗಿ ಕಾಣಲಿಲ್ಲವೆಂದು ನೀನು ದೇವರಿಗೆ ಅಪಚಾರ ಮಾಡಬೇಡ.

ನಿನ್ನ ಶಾಲೆಯ ಉಪಾಧ್ಯಾಯ ನಿನಗೆ ಅನ್ಯಾಯ ಮಾಡಿ ಅವನ ಇಷ್ಟದ ಇನ್ನೊಬ್ಬ ಹುಡುಗನಿಗೆ ಪಕ್ಷಪಾತ ತೋರಿದರೆ ಅವನ ಮೇಲೆ ಬೇಸರಗೊಂಡು ನೀನು ನಿನ್ನ ಪಾಠವನ್ನು ಅಸಡ್ಡೆಮಾಡುವೆಯಾ? ಹಾಗೆ ಮಾಡಿದರೆ ನೀನು ಯೂನಿವರ್ಸಿಟಿಯ ಪರೀಕ್ಷಕನಲ್ಲಿ ಸೋಲುವೆ.

ಕೊನೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗು: ಅದೇ ಗುರಿ. ಅದಕ್ಕೆ ದಾರಿ, ಸದಾ ನಿನ್ನ ಕೈಯಲ್ಲಾದಷ್ಟು ಚೆನ್ನವಾದ ಉತ್ತರ ಬರೆಯುವುದು. ಪಕ್ಷಪಾತಿ ಉಪಾಧ್ಯಾಯನಿಗೆ ಕೊಡುವ ಉತ್ತರವೂ ಸಾಧ್ಯವಾದಷ್ಟು ಚೆನ್ನವೇ ಆಗಿರಬೇಕು.

ಇವನೆದುರಿಗೆ ಹೀಗೆ ಉತ್ತರಕೊಟ್ಟ ಅಭ್ಯಾಸ ಕೊನೆಯ ಪರೀಕ್ಷೆಯಲ್ಲಿ ಸರಿಯಾಗಿ ಉತ್ತರಕೊಡುವ ಶಕ್ತಿಯನ್ನು ತರುತ್ತದೆ.

ಪಕ್ಷಪಾತಿಗೆ ನಾನು ಪ್ರಿಯನಾಗಲಿಲ್ಲವಲ್ಲಾ ಎಂದು ನೀನು ಕೊರಗ

ಬೇಡ. ಹೀಗೆ ಪ್ರಿಯನಾಗುವುದು ಮುದ್ದು ಮರಿ ನಾಯಿ ಕುರಿಗೆ ಸಂದ ಮಾತು. ಲೋಕದ ಪಕ್ಷಪಾತಿ ಮಹಂತರು ನಿನ್ನನ್ನು ಮುದ್ದಿಸಲಿಲ್ಲವೆಂದರೆ ಇದರಿಂದ ನೀನು ಸ್ವಲ್ಪ ಹೆಮ್ಮೆಪಡುವುದೇ ಸರಿ. ನೀನು ಇವರು ಮುದ್ದಿಸುವ ನಾಯಿ ಕುರಿ ಅಲ್ಲ; ಪ್ರಾಯಶಃ ಒಬ್ಬ ಮಾನವನಾಗಿದ್ದೀಯೆ.

ನಿನ್ನ ವಿಷಯಕ್ಕೆ ಈ ಮಾತು ಸಲ್ಲುವುದಾದರೆ ಎಷ್ಟು ಚೆನ್ನವಾದೀತು: He never bowed his head to any man.

" ಯಾವ ಮನುಷ್ಯನಿಗೂ ಇವನು ತಲೆ ತಗ್ಗಿಸಲಿಲ್ಲ:" ದೈವಕ್ಕೆ ಮಾತ್ರ ತಗ್ಗಿಸಿದನು.

" ದೈವಕ್ಕೆ ಎಂದರೆ ? "

ಎಲ್ಲಿಯೇ ಆಗಲಿ ತನಗೆ ಕಂಡ ಒಳ್ಳಿತಕ್ಕೆ.

ನೀನು ತಾಳ್ಮೆತಪ್ಪಿ ಹೇಳುತ್ತೀಯೆ: "ನಾನು ಚೆನ್ನಾಗಿ ಕೆಲಸ ಮಾಡಿದ್ದೇನಲ್ಲಾ ನನಗೆ ದೇವರು ಪ್ರತಿಫಲ ಏಕೆ ಕೊಡಲಿಲ್ಲ?"

ಇದು ಏತರ ಪ್ರಶ್ನೆ ? ಶಾಲೆಯ ಉಪಾಧ್ಯಾಯ ಕೊನೆಯ ಪರೀಕ್ಷಕ ಬೇರೆ ಎನ್ನುವ ಮಾತು ಇಲ್ಲಿ ಸಾಲದೇಹೋಯಿತೇ ? ಸಾಕಾಯಿತು, ಇನ್ನು ಪ್ರಶ್ನೆ ಏಕೆ ?

" ಪಕ್ಷಪಾತಿ ಏಕೆ ಹೀಗೆ ಮಾಡಬೇಕು ? "

ದೇವರು ನಿನ್ನ ಬಾಳಿನಲ್ಲಿ ವ್ಯಕ್ತವಾಗಹೊರಟಿದ್ದಾನೆ: ನೀನು ಸದಾ ಆ ವ್ಯಂಜನಕ್ಕೆ ಅರ್ಹನಾಗಿಯೇ ಇದ್ದೀಯಾ ?

ಇದು ದೈವದ ತಪ್ಪಲ್ಲ. ಉಪಾಧಿಯ ತಪ್ಪು.

ನೀನು ಕೆಲವು ವೇಳೆ ದೈವಕ್ಕೆ ಅನರ್ಹವಾದ ಉಪಾಧಿಯಾಗುವಂತೆ ಆ ಇನ್ನೊಬ್ಬನು ಅನರ್ಹ ಉಪಾಧಿಯಾಗುತ್ತಾನೆ. ಪಕ್ಷಪಾತ ಮಾಡುವಾಗ ದೈವ ವ್ಯಕ್ತವಾಗುವುದಿಲ್ಲ: ಉಪಾಧಿ ವ್ಯಕ್ತವಾಗುತ್ತದೆ. ಉಪಾಧ್ಯಾಯ ಪರೀಕ್ಷಕ ಬೇರೆ ಎಂಬುದರ ಸಾಮ್ಯ ಇರುವುದು ಇದರಲ್ಲಿ.

ಹಾಡು ಬಿಡಾರದ ಕೃಷ್ಣಪ್ಪನವರದು. ಅದು ಗ್ರಾಮೋಫೋನಿನ ಹಿತ್ತಾಳೆಯ ಕೊಂಬಿನಲ್ಲಿ ಹಾಯ್ದು ಬರುತ್ತಿದೆ.

ಜೀವನ ನಮ್ಮ ತಂದೆತಾತದಿರಿಗೆ ಬಹು ಕಠಿಣವಾಗಿದ್ದಿತು: ನನಗೆ ಅದು ಎಷ್ಟೋ ಸುಖತರವಾಗಿದೆ. ಆದರೆ ಅವರಿಗೆ ದೇವರಲ್ಲಿದ್ದ ನಂಬಿಕೆಯಲ್ಲಿ ನೂರರಲ್ಲಿ ಒಂದು ಪಾಲು ನನಗೆ ಬಂದಿಲ್ಲ. ಪಾಲಿನ ಮಾತೇನು? ಅವರು ನಂಬಿದ್ದರು, ನನಗೆ ನಂಬಿಕೆ ಬಂದಿಲ್ಲ.

ಎಂಥ ಕಷ್ಟದಲ್ಲೂ ಅವರ ನಂಬಿಕೆ ಕುಗ್ಗದೆ ನಿಂತಿತು. ನನ್ನದೋ ಅಲ್ಪಸ್ವಲ್ಪ ಯಾವುದೇ ಕಷ್ಟ ಕಂಡಿತೆಂದರೆ ಸಾಕು, ಓಟ ಕೀಳುತ್ತದೆ.

ನಮ್ಮ ಆಧ್ಯಾತ್ಮಿಕ ದಿನಚರಿ ಆರೋಗ್ಯ ಶಾಸ್ತ್ರವನ್ನು ಹತ್ತಿರ ಇಟ್ಟುಕೊಂಡು ಅದನ್ನು ಪ್ರತಿದಿನ ಪಾರಾಯಣ ಮಾಡಿ ಕ್ರಮವಾಗಿ ಅದರ ಎಲ್ಲ ಸೂತ್ರಗಳನ್ನೂ ಮುರಿಯುವಂತೆ ಇದೆ. ನಾವು ಒಳ್ಳೆಯ ದಾರಿಯನ್ನು ಬಲ್ಲೆವು, ತುಳಿಯುವುದಿಲ್ಲ.

ಪೆರಿಯಾಳ್ವಾರವರು ದೇವರನ್ನು "ಎನ್ನೈ ವೆಳ್ಳುಯಿರ್ ಆಕ್ಕವಲ್ಲ" "ನನ್ನನ್ನು ಬಿಳಿ ಉಸಿರು ಮಾಡಬಲ್ಲ" ಎಂದು ಹೊಗಳಿದ್ದಾರೆ.

ಇದು ನಿಜ. ದೇವರು ಸದಾ ನಮ್ಮನ್ನು ಶುದ್ಧಮಾಡಿ ಒಳ್ಳೆಯ ಆಲೋಚನೆ ಒಳ್ಳೆಯ ಪ್ರವೃತ್ತಿ ಒಳ್ಳೆಯ ಆಕಾಂಕ್ಷೆಗಳನ್ನು ಕೊಡುತ್ತಿದಾನೆ. ಸದಾ ನಾವು ತಪ್ಪು ಆಲೋಚನೆ ತಪ್ಪು ಪ್ರವೃತ್ತಿ, ತಪ್ಪು ಆಕಾಂಕ್ಷೆಗಳಿಗೆ ಮರಳುತ್ತಿದ್ದೇವೆ.

ಹಾಗಾದರೆ ಗತಿ? ನಾನು ಕೆಲವು ವೇಳೆ ಈ ಪ್ರಶ್ನೆಯನ್ನು ಕೇಳಿ ತಿರುವಳ್ಳಿಕ್ಕೇಣಿಯ ಒಬ್ಬ ಪಾತ್ರೆ ತೊಳೆಯುವ ಹೆಂಗಸು ಅವಳ ಮಗುವನ್ನು ನೆನೆಯುತ್ತೇನೆ. ಆ ತಾಯಿ ಪಾತ್ರೆ ತಿಕ್ಕುತ್ತಿದ್ದಳು; ಮಗು ಪಕ್ಕದಲ್ಲಿ ಕುಳಿತಿದ್ದಿತು. ಪಾತ್ರೆಗಳನ್ನು ತೊಳೆದು ಬೆಳಗಿ ಅವಳು ಒತ್ತಟ್ಟು ಇರಿಸುವಳು: ಮಗು ಅವುಗಳ ಮೇಲೆ ಮಣ್ಣುಚೆಲ್ಲಿ ಅವನ್ನು ಮತ್ತೆ ಕೊಳಕು ಮಾಡುವುದು. ಅವಳು ಮತ್ತೆ ತೊಳೆದಿಡುವಳು; ಇದು ಮತ್ತೆ ಕೆಡಿಸುವುದು ಅವಳ ಕೆಲಸವನ್ನು ಕೆಡಿಸುವುದು ಮಗುವಿಗೆ ಆಟ. ಕೊನೆಗೆ ತಾಯಿ ಮಗುವನ್ನೆತ್ತಿ ಮುದ್ದಿಕ್ಕಿ ಅದನ್ನು ಇನ್ನೊಂದು ಪಕ್ಕದಲ್ಲಿ ಕುಳ್ಳಿರಿಸಿದಳು; ಬೆಳಗಿದ ಪಾತ್ರೆಯನ್ನು ಅದರ ಹತ್ತಿರ ಇಡಲಿಲ್ಲ.

ನನ್ನ ಅನುದಿನದ ಜೀವನದಲ್ಲಿ ನನ್ನ ಸ್ವಭಾವದ ಮೇಲ್ತರದ ಪ್ರವೃತ್ತಿಗಳು ಮರಳಿ ಮರಳಿ ಕೀಳ್ತರದ ಪ್ರವೃತ್ತಿಗಳಿಗೆ ಸೋಲುವುದೇ ವಾಡಿಕೆಯಾಗಿದೆ.

ನನಗೆ ಅನೇಕ ವೇಳೆ, ನಾನು ಈ ಮೇಲ್ತರದ ಪ್ರವೃತ್ತಿಗಳು ಮಾತ್ರ ಎಂದೂ ಅವಕ್ಕೆ ತಕ್ಕಷ್ಟು ಯೋಗ್ಯವಲ್ಲದ ಒಂದು ವಸ್ತುವಿನೊಂದಿಗೆ ಬಾಳುವುದರಲ್ಲಿ ಅವು ಹೀಗೆ ಸೋಲುತ್ತಿವೆ ಎಂದೂ ತೋರಿರುವುದುಂಟು. ನಾನೇನೋ ಒಳ್ಳೆಯವನಾಗಿಯೇ ಇದ್ದೇನು: ಆದರೆ ನನಗೆ ಒಂದು ದೇಹ ಒಂದು ಮನಸ್ಸು ಇವೆ, ನಾನು ಅವುಗಳೊಂದಿಗೆ ಬಾಳಬೇಕಾಗಿದೆ. ಅವು ನನ್ನನ್ನು ಒಳ್ಳೆಯವನಾಗಿರಲು ಬಿಡುವುದಿಲ್ಲ.

ನಾವು ಪ್ರಾಯಶಃ ನಮ್ಮ ಸ್ವಭಾವದ ಕೀಳಾದ ಅರ್ಧವನ್ನು ಕಿತ್ತೇ ಎಸೆದೇವು; ಆದರೆ ಹಾಗೆ ಮಾಡುವುದಿಲ್ಲ. ಇದಕ್ಕೆ ಕಾರಣ ಹಾಗೆ ಕಿತ್ತು ಎಸೆಯುವುದು ನಮಗೆ ನೋವನ್ನುಂಟುಮಾಡುವುದು.

ನಮ್ಮ ಸ್ವಭಾವದ ಮೇಲರ್ಧ ಕೀಳರ್ಧ ಬೆರಳಿನ ಕೊನೆಯ ಮಾಂಸ ಉಗುರು ಹೇಗೆ ಹಾಗೆ ಕೂಡಿ ಬೆಳೆದಿವೆ. ಕೀಳರ್ಧ ನಮಗೇನೋ ಅಷ್ಟು ಒಪ್ಪಿಗೆ ಅಲ್ಲದಿದ್ದರೂ ಅದನ್ನು ನಾವು ಕಿತ್ತೆಸೆಯಲಾರೆವು.

ಬೆರಳು ಉಗುರನ್ನು ಹೆರವನೆಂದೇ ಕಾಣಬಹುದು; ಉಗುರಿನ ಕೆಲ ಭಾಗವನ್ನು ಕತ್ತರಿಸಿದರೂ ನೋಯುವುದಿಲ್ಲವೆನ್ನುವುದೂ ನಿಜ. ಆದರೆ ಹೀಗೆ ಕತ್ತರಿಸಬಹುದಾದ ಭಾಗ ಇರುವಂತೆ ಹೀಗೆ ಕತ್ತರಿಸಲಾಗದ ರೀತಿಯಲ್ಲಿ ಉಗುರ ಒಂದು ಭಾಗ ಬೆರಳೊಡನೆ ಅಂಟಿದೆ. ಉಗುರಿನ ಈ ಭಾಗವನ್ನು ಮುಟ್ಟಿದರೆ ಬೆರಳು ಅಳುಕುತ್ತದೆ.

ಉಗುರು ಬೆರಳಿಂದ ಬೇರೆ ಎಂದು ಅದನ್ನು ತೀರ ತೆಗೆದುಹಾಕುವಂತಿಲ್ಲ; ಅದರ ಹೆಚ್ಚಿನ ಭಾಗ ಶರೀರ ಬಿದ್ದು ಹೋಗುವವರೆಗೂ ಬೆರಳೊಡನೆ ಒಂದು ಅಂಗವಾಗಿ ಇದ್ದೇ ಇರುತ್ತದೆ.

ನಾವು ಮನುಷ್ಯಜನ್ಮದಲ್ಲಿರುವಷ್ಟು ದಿನ ನಮ್ಮ ಸ್ವಭಾವದ ಕೀಳ್ತರದ ಪ್ರವೃತ್ತಿಗಳನ್ನು ತಾಳ್ಮೆಯಿಂದ ಸಹಿಸಬೇಕು. ಅವು ತಲೆದೋರಿದಾಗ

ಅವನ್ನು ತಡೆಯುವ ಶಕ್ತಿ ಅನುಗೃಹೀತ ಆದರೆ ಅದೇ ಪುಣ್ಯ ಎಂದು ತಿಳಿಯಬೇಕು.

ಎಷ್ಟೋ ಸಲ ಜೀವನದಲ್ಲಿ ನಮ್ಮ ಮನಸ್ಸು ಇಂಥ ಅಂಥ ಕೇಡು ಸಂಭವಿಸಿದರೆ ಏನು ಗತಿ ಎಂದು ಪ್ರಶ್ನೆ ಕೇಳುತ್ತದೆ. ಸರಿ, ಆ ಕೇಡು ಸಂಭವಿಸುವುದಾಗಿದ್ದರೆ ನಾವು ಮೊದಲೇ ಭಯಪಟ್ಟು ಅದನ್ನು ತಪ್ಪಿಸು ವಂತಿಲ್ಲ. ಅದು ಸಂಭವಿಸುವುದಿಲ್ಲ ಎನ್ನೋಣ. ಅದರ ವಿಷಯ ಹೀಗೆ ಭಯಪಡುವುದೇ ಒಂದು ಕೇಡು.

ಭವಿಷ್ಯವನ್ನು ಕುರಿತು ಹೀಗೆ ಯೋಚಿಸುವುದು ಶಕ್ತಿ ಮತ್ತು ಹೊತ್ತಿನ ವ್ಯರ್ಥ ವಿನಿಯೋಗ: ನಾಳೆ ಚೆನ್ನವಾಗಿರಲೆಂಬ ಆತುರದಲ್ಲಿ ಈ ಹೊತ್ತನ್ನು ಹಾಳು ಮಾಡುವ ವ್ಯವಸಾಯ.

" ಅದು ಸರಿ. ಆದರೂ ಮನಸ್ಸಿಗೆ ಹೀಗೆ ತೋರುತ್ತದಲ್ಲಾ. ಅದಕ್ಕೆ ಸಮಾಧಾನವಾಗುವಂತೆ ಒಂದು ಉತ್ತರ ಬೇಡವೆ ? "

ನಾಳೆಯನ್ನು ಕುರಿತ ಇಂದಿನ ಇಂಥ ಎಲ್ಲ ಚಿಂತೆ ಮನುಷ್ಯನಿಗೆ ತನ್ನನ್ನು ಕುರಿತು ಅತಿ ಮೋಹದಿಂದ ಬರುತ್ತದೆ. ಮುಂದೆ ಹೀಗಾದರೆ ಗತಿ ಏನು ಎಂಬುದಕ್ಕೆ ಕಾರಣವಾಗುವಂತೆ ಹಿಂದೆ ಏನಾದರೂ ಆಯಿತೇನು?

ಒಂದು ಸಂಗತಿ ನಮಗೆ ನೆನಪಿರಬೇಕು ಲೋಕದ ಜೀವನದಲ್ಲಿ ನಮ್ಮದು ಒಂದು ಭಾಗ. ಆ ಜೀವನದಲ್ಲಿ ಕಷ್ಟವೆನ್ನುವುದುಂಟು. ಅದರ ಒಂದು ಭಾಗ ನಮ್ಮ ಪಾಲಿಗೆ ಬರಬಹುದು. ಬಂದರೆ ನಾವು ಅದನ್ನು ಒಪ್ಪಿಕೊಳ್ಳಬೇಕು.

ಊರ ತುಂಬ ಇನ್‌ಫ್ಲೂಯೆಂಜಾ ವಿಷ ಹರಡಿ ಗಾಳಿಯೇ ಕೆಟ್ಟುಹೋಗಿರುವುದಾದರೆ ನೀನೊಬ್ಬನು ಅದನ್ನು ತಪ್ಪಿಸಿಕೊಳ್ಳುವೆಯಾ ? ನಿನ್ನೊಬ್ಬನಿಗಾಗಿ ಲೋಕದ ನಿಯಮ ಬೇರೆಯಾಗಲೆನ್ನುವೆಯೇನು ? ನಿನ್ನ ಆತ್ಮಪ್ರೇಮ ಇಷ್ಟು ಅತಿಯಾಗಬಾರದು.

ಹೇಗೇ ಇರಲಿ ಒಂದು ಸಂಗತಿ ಮಾತ್ರ ಸದಾ ಸ್ಮರಣೆಯಲ್ಲಿರಬೇಕು.

ಮನುಷ್ಯಜಂತುವಾದದ್ದಕ್ಕೆ ಒದಗಬಹುದಾದ ಅತಿ ದಾರುಣ ದುಸ್ಥಿತಿಗೆ ನಿನಗೆ ಮಧ್ಯದಲ್ಲಿ ದೇವರ ಕರುಣೆ ಒಂದು ಹೊರತು ಬೇರೆ ಯಾವುದೂ ಅಡ್ಡ ಇಲ್ಲ.

ಅವನು ನಿನ್ನ ದಾರಿಯನ್ನು ಸುಗಮವಾಗಿರಿಸಿದನೇ, ಅದನ್ನು ದುರ್ಗಮ ಮಾಡತಕ್ಕದ್ದು ಯಾವುದೂ ಇಲ್ಲ. ಆ ದಾರಿ ಸ್ವಲ್ಪ ದುರ್ಗಮ ವಾಗಬೇಕು, ಅದರಿಂದ ನಿನಗೆ ಶ್ರೇಯಸ್ಸು, ಎಂದು ದೈವ ಯೋಚಿಸಿರುವು ದಾದರೆ ಅದನ್ನು ಸುಗಮ ಮಾಡುವರು ಬೇರೆ ಯಾರೂ ಇಲ್ಲ.

ಅಥವಾ ದಾರಿ ಸ್ವಲ್ಪ ದುರ್ಗಮವಾಗಿರುವುದು ನಿನಗೆ ಶ್ರೇಯಸ್ಸೆಂದು ದೈವ ಎಣಿಸುವಾಗ ಅದು ದುರ್ಗಮವಾಗಿರುವುದು ಬೇಡ ಎಂದು ನೀನು ಬಯಸುವೆಯಾ? ನೀನು ಪ್ರಾಜ್ಞಮಾನಿ ಆಗಿರಬಹುದು: ಆದರೆ ಇಷ್ಟು ಮುಟ್ಟಿನ ಪ್ರಾಜ್ಞಮಾನ ಬೇಡ.

ನನ್ನ ದೇವರೇ, ನನ್ನ ದೊರೆಯೇ, ನನ್ನ ತಂದೆಯೇ, ಸದಾ ನನಗೆ ಒಳ್ಳೆಯ ಪ್ರೇರಣೆಗಳನ್ನು ಅನುಗ್ರಹಿಸು: ಜೀವನದಲ್ಲಿ ವೃಥಾ ಚಿಂತೆ ಬೇಡ.

ಜೀವನದ ಒಡಪುಗಳನ್ನು ಬಿಡಿಸುವುದರಲ್ಲಿ ನಾನು ತುಂಬ ಕಾಲವನ್ನು ವ್ಯರ್ಥ ಮಾಡುತ್ತಿದೇನೆ. ನನಗೆ ಸಾರ್ಥಕವಾದ ಯೋಚನೆಗಳನ್ನು ಮಾತ್ರ ಅನುಗ್ರಹಿಸು.

ಉನ್ನತ ಜೀವನದ ದರ್ಶನ ಮಿಂಚಿ ಮರೆದಿದೆ: ಅದು ನನಗೆ ಸತತ ವಾಗಲಿ, ನನ್ನ ಭಾವ ಅಲ್ಲಿಂದ ಕೆಳಗಿಳಿಯದಿರಲಿ.

ಈಗಲೋ ನನ್ನ ಬಾಳು, ಗಣಿತ ಪುಸ್ತಕದಲ್ಲಿರುವ ಎಣ್ಣೆ ಸವರಿದ ಕಂಬ ಅದನ್ನೇರುವ ಮಂಗನ ಲೆಕ್ಕದಂತೆ ಆಗಿವೆ. ಮಂಗ ಒಂದು ನಿಮಿಷಕ್ಕೆ ಒಂದು ಅಡಿಯಂತೆ ಏರಿ ಎರಡು ನಿಮಿಷಕ್ಕೆ ಎರಡು ಅಡಿ ಜಾರುತ್ತದಂತೆ: ಅದು ಕಂಬದ ತಲೆಯನ್ನು ಮುಟ್ಟುವುದು ಎಂದು?

ಈ ಲೆಕ್ಕದ ಮಂಗ ಏರುವುದಕ್ಕಿಂತ ಹೆಚ್ಚಾಗಿ ಜಾರಲಾರದು. ನೆಲ ಅದನ್ನು ತಡೆಯುತ್ತದೆ. ಇದು ಮಂಗನ ಪುಣ್ಯ.

ನಮಗೆ ಬಾಳಿನಲ್ಲಿ ಈ ಪುಣ್ಯ ಇಲ್ಲ. ಪೂರ್ವೇತಿ ಪೂರ್ವಃ ತಪ್ಪಿ ಪೂರ್ವಕ್ಕಿಂತ ಅಧಃ ಆಗಬಹುದು.

ಹೀಗಾಗದಂತೆ ಕಾಯುವುದು ನಿನ್ನ ಕೃಪೆ ಒಂದೇ.

ಎಲ್ಲ ವೇಳೆ ಎಲ್ಲಾ ಎಡೆ ನೀನೆ ನನಗೆ ಜೊತೆಗಿರು. ಇರು ಎಂದು ಹೇಳಲೇಕೆ? ನೀನು ಜೊತೆಯಾಗಿದೀಯೆ. ನನಗೆ ಇದರ ಅರಿವನ್ನು ಕೊಡು; ಧೀರವಾಗಿ ನಡೆಯುವುದನ್ನು ಕಲಿಸು.

ಭಯ ತಪ್ಪಿದರೆ ನನ್ನ ನಡೆ ತಪ್ಪಬಹುದೋ? ನಾನು ಬಾಳುತ್ತಿರುವುದು ನಿನ್ನ ಸಾನ್ನಿಧ್ಯದಲ್ಲಿ ಎನ್ನುವುದನ್ನು ಮರೆಯದಿದ್ದರೆ ತಪ್ಪಲಾರದು. ಹಾಗೂ ಆ ಅಪಾಯ ಇರುವುದಾದರೆ, ನನ್ನನ್ನು ಹಿಡಿದುಕೊ, ಉದ್ಧಾರ ಮಾಡು.

ಸಮಾಧಾನವಾದ ಮನಸ್ಸಿನಿಂದ ಧೀರನಾಗಿ ಸತ್ಯದಲ್ಲಿ ನಡೆಯುವುದನ್ನು ಕಲಿಸಿಕೊಡು. ನಾನು ಅಲ್ಪನಾದರೂ ನನ್ನ ದೇವರು ತನ್ನ ಕರುಣೆಯ ಹೆಚ್ಚಳದಲ್ಲಿ ನನ್ನನ್ನು ಉದ್ಧರಿಸಿ ಕಾಯುತ್ತಿದಾನೆ ಎಂದು ನನ್ನಿಂದ ಹೇಳಿಸು.

ಆಶಾಭಂಗ ಬೇಡವೆಂದರೆ, ಜೀವನದಲ್ಲಿ ಬಹಳವನ್ನು ಆಶಿಸುವುದು ಬೇಡ. ಮೈಯಿಂದಾಗಲಿ ಮನಸ್ಸಿನಿಂದಾಗಲಿ ಬುದ್ಧಿಯಿಂದಾಗಲಿ ಸಂಕಲ್ಪದಿಂದಾಗಲಿ ಬಹಳವನ್ನು ನಿರೀಕ್ಷಿಸದಿದ್ದರೆ ಅತೃಪ್ತಿ ತಪ್ಪುತ್ತದೆ

ಹೀಗೆ ತನ್ನಿಂದ ಅಲ್ಲದೆ ಹೆಂಡತಿಯಿಂದ ಸೋದರರಿಂದ ಬಂಧುಗಳಿಂದ ಮಿತ್ರರಿಂದ ಬಹಳವನ್ನು ನಿರೀಕ್ಷಿಸದಿದ್ದರೆ ಬೇಸರದಿಂದ ತಪ್ಪಿಸಿಕೊಂಡು ಬಾಳಬಹುದು.

ಈ ಮನೋಧರ್ಮವನ್ನು ಅಭ್ಯಾಸಮಾಡಿದರೆ ಆಶಾಭಂಗ ತಪ್ಪುವುದಲ್ಲದೆ ಮೈಮನಸ್ಸು ಬುದ್ಧಿಸಂಕಲ್ಪ ಏನನ್ನು ಸಾಧಿಸಿಕೊಡುತ್ತವೆ ಅಷ್ಟಕ್ಕಾಗಿ ಅವಕ್ಕೆ ನಾವು ಕೃತಜ್ಞರಾಗುತ್ತೇವೆ. ಹೆಂಡತಿ, ತಮ್ಮ, ಬಂಧು ಮಿತ್ರ, ಎಷ್ಟು ಪ್ರೀತಿ ಆದರ ತೋರಿಸುತ್ತಾರೆ ಅಷ್ಟರಲ್ಲಿ ನಮಗೆ ಸುಖ ಕಾಣುತ್ತದೆ.

ಬಹುಬೇಗನೆ ಇದರಿಂದ ಇನ್ನೊಂದು ಸಂಗತಿ ಮನ ಮುಟ್ಟುತ್ತದೆ: ನಮ್ಮ ಯೋಗ್ಯತೆ ಬಹಳವೇನೂ ಅಲ್ಲದಿದ್ದರೂ ಲೋಕಜೀವನ ಆ ಯೋಗ್ಯತೆಗೆ ಮಿಂಚಿದ ಪ್ರೇಮ ಆದರಗಳಿಂದ ನಮ್ಮ ಜೀವನವನ್ನು ತುಂಬುತ್ತಿದೆ.

ನಿಜವಾಗಿ ನೋಡಿದರೆ ದೇವರು ನಮ್ಮನ್ನು ಕಾಯುತ್ತಿರುವುದು ಎನ್ನುವುದು ಹೀಗೆಯೇ.

ಈ ವಿಚಾರಸರಣಿ ಸರಿಯಾದುದೆನ್ನುವುದಕ್ಕೆ ಪ್ರಮಾಣವೇನೆಂದರೆ ಇದರಿಂದ ಜೀವನದಲ್ಲಿ ಸ್ವಾರ್ಥ ಕಡಮೆಯಾಗುತ್ತದೆ; ಜೀವನ ಸಫಲವಾಗುತ್ತದೆ.

ಇತರರು ತನಗೆ ತನ್ನ ಯೋಗ್ಯತೆಗೆ ಮಿಂಚಿದ ಪ್ರೀತಿ ಆದರಗಳನ್ನು ತೋರುತ್ತಿದಾರೆಂದು ತಿಳಿದ ಮನುಷ್ಯನು ಅವರಿಗಾಗಿ ತಾನು ಎತ್ತಷ್ಟು ಒಳಿತನ್ನು ಮಾಡಲು ನೋಡುತ್ತಾನೆ.

ಸಂಸಾರದಲ್ಲಿರುವಷ್ಟು ದಿನ ಮನುಷ್ಯನಿಗೆ ಶುಭವುಂಟು ಅಶುಭ ಉಂಟು. ಎಂದ ಮೇಲೆ ಅಶುಭ ಆದೀತು ಎಂದಾಗ ಭೀತಿ ಉಂಟು.

ಎಂದರೆ ಭೀತಿ ಸಂಸಾರದ ಒಂದು ಅನಿವಾರ್ಯ ಲಕ್ಷಣ. ಈ ಕಾರಣದಿಂದ ಮನುಷ್ಯನು ಭಯಕ್ಕೆ ಬಂದು ಪರಿಹಾರವನ್ನು ಕಂಡುಕೊಳ್ಳಬೇಕಾಗಿದೆ. ಭಯದ ಆ ಪರಿಹಾರ ದೇವರಲ್ಲಿ ನಂಬಿಕೆ.

ಆದಕಾರಣ ಸದಾ ಹೀಗೆ ಪ್ರಾರ್ಥಿಸು: ನೀನು ನನ್ನನ್ನು ಸಂಸಾರದಲ್ಲಿ ಇರಿಸಿದೆ, ನೀನೆ ಸದಾ ಜೊತೆಗಿದ್ದು ನನ್ನನ್ನು ರಕ್ಷಿಸು.

ತಾಯಿಯಾದವಳು ಮಗುವನ್ನು ನೀರಿರುವ ತೊಟ್ಟಿಯಲ್ಲಿ ಸ್ನಾನಕ್ಕಾಗಿ ಮಲಗಿಸುತ್ತಾಳೆ; ಅದು ಅದರಲ್ಲಿ ಮುಳುಗಿಕೊಳ್ಳದಂತೆ ಅವಳೆ ನೋಡಿಕೊಳ್ಳಬೇಕು.

ತಾಯಿಕೋಳಿ ಮರಿಯ ಮೇಲೆ ಹೆಜ್ಜೆ ಇಟ್ಟಾಗ ಮರಿಗೆ ನೋವಾಗುವುದಿಲ್ಲ ಎಂದು ಮಲೆಯಾಳಿಯಲ್ಲಿ ಒಂದು ಗಾದೆ ಇದೆಯಂತೆ. ಆದರೂ

ಮರಿ ಕೀಚೆಂದು ಕೂಗುತ್ತದೆ; ಬೆದರುತ್ತದೆ; ಮೊರೆಯುತ್ತದೆ. ದೇವರು ನಮ್ಮ ಒಳ್ಳಿಯದಕ್ಕಾಗಿ ನಮ್ಮ ಬಾಳಲ್ಲಿ ಸುಳಿಯುತ್ತ ನಮ್ಮ ಮೇಲೆ ಅಡಿ ಇಟ್ಟಾಗ ನಾವು ಹೀಗೆಯೇ ನಿಷ್ಕಾರಣವಾಗಿ ಹೆದರುತ್ತೇವೆ, ಕೂಗಿಕೊಳ್ಳುತ್ತೇವೆ.

ಜೀವನದಲ್ಲಿ ಅನುಭವಿಸಬೇಕಾಗಿ ಬಂದ ತೊಂದರೆಯನ್ನು ನೆನೆದು ನಾನು ಕೆಲವು ವೇಳೆ ಗೊಣಗುಟ್ಟುತ್ತೇನೆ. ಇದಕ್ಕಿಂತ ಹೆಚ್ಚಿನ ಎಷ್ಟು ತೊಂದರೆಯಿಂದ ನನ್ನನ್ನು ರಕ್ಷಿಸಿ ದೇವರು ಉದ್ಧರಿಸಿದಾನೆ ಎನ್ನುವುದು ಆಗ ನನಗೆ ನೆನಪಿರುವುದಿಲ್ಲ. ಷೇಕ್ಸ್‌ಪಿಯರ್ ಕವಿಯ ಏರಿಯಲ್ ರೀತಿಯ ಪ್ರಾಣಿ ನಾನು; ದೇವರು ಪ್ರಾಸ್ಪೆರೋ ಅಂಥ ಧಣಿಯಲ್ಲ. ನನ್ನ ಪೂರ್ವ ಸ್ಥಿತಿಯನ್ನು ನೆನೆಯ ಹೇಳದೆ ನನ್ನ ತಂದೆ ನನ್ನ ಬೇಡಿಕೆಗಳನ್ನು ಸಲ್ಲಿ ಸುತ್ತಿದಾನೆ.

ಎಳೆತನದಲ್ಲಿ ಒಂದು ದಿನ ನಾನು ತೊಟ್ಟಿಲಲ್ಲಿ ಮಲಗಿರುವಾಗ ಒಂದು ಸರ್ಪ ನನ್ನ ತಲೆಯ ಮೇಲೆ ಹೆಡೆಯಾಡಿಸಿತಂತೆ. ಜೀವನದಲ್ಲಿ ಮಹತ್ಪದವಿ ಬರುವುದಕ್ಕೆ ಇದು ಸೂಚನೆ ಎಂದು ನಮ್ಮಲ್ಲಿ ನಂಬಿಕೆ ಅಧಿಕಾರ ವರ್ಗ ದಲ್ಲಿ ನನಗೆ ದೊರೆಯಬಹುದಾದ ದೊಡ್ಡ ಸ್ಥಳಗಳು ದೊರೆಯದಾಗ ನಾನು ಸರ್ಪ ಹೆಡೆಯಾಡಿಸಿದ್ದರ ಫಲ ಇಷ್ಟೇನೆ ಎಂದು ಪ್ರಶ್ನೆ ಕೇಳಿಕೊಂಡಿದೇನೆ. ನನಗೆ ತಿಳಿವಳಿಕೆ ಸಾಲದು: ಹೆಡೆ ಆಡಿದ್ದಕ್ಕೆ ಈಗ ದೊರಕಿರುವ ಔನ್ನತ್ಯ ಸಾಲದೇನು? ಅನ್ನಕ್ಕೆ ಕಷ್ಟಪಟ್ಟ ಕಡುಬಡವ ಹುಡುಗ ಡೆಪ್ಯುಟಿ ಕಮೀಷನರ್ ಆಗಿದ್ದೇನಲ್ಲಾ ಇದು ಕಡಮೆಯೆ ?

ಇದು ಕಡಮೆ ಎನ್ನೋಣ; ಇದಕ್ಕಿಂತ ದೊಡ್ಡ ಸ್ಥಾನ ದೊರೆಯಿ ತೆನ್ನೋಣ. ನನ್ನ ನಿರೀಕ್ಷೆ ಅಲ್ಲಿಗಾದರೂ ಮುಗಿಯಬಹುದೇ? ನಾನು ಅದಕ್ಕೆ ಮೇಲೆ ಏನನ್ನೂ ಬಯಸುವುದಿಲ್ಲವೆ?

ಲೋಕದಲ್ಲಿ ದೈವಿಕವಲ್ಲದೆ ಲವಲೇಶ ಇಲ್ಲ. ಆದರೆ ಇದೆಲ್ಲಾ ದ್ವೈವದ ಹಿಮ್ಮುಖ. ಮುಖ ಅತ್ತಲಾಗಿದೆ.

ಹೀಗೆ ಕಾಣುವ ಲೋಕದಲ್ಲಿ ನಾನು ನನ್ನ ಪ್ರತಿಬಿಂಬವನ್ನು ನೋಡುತ್ತೇನೆ. ದೇವರನ್ನು ಗುರುತಿಸುವುದಿಲ್ಲ.

ಪ್ರತಿಫಲಿಸಿದ ನನ್ನ ಬಿಂಬದ ಮೇಲೆ ಪ್ರೀತಿ ಕಡಮೆಯಾದರೆ ನನಗೆ ಒಡನೆ ದೇವರ ದರ್ಶನ ಆಗುವುದು.

ಜೀವನವನ್ನು ಕುರಿತು ನನಗೆ ಕಾಣುತ್ತಿರುವುದೆಲ್ಲಾ ನನ್ನ ಕಡೆ. ಇದರ ಹಿಂಬದಿಯೇ ದೇವರ ಕಡೆ.

ನಾನು ಆ ಕಡೆಯನ್ನು ನೋಡಿದೆನಾದರೆ ನನಗಾಗ ದೇವರು ಮಾತ್ರ ಕಾಣುತ್ತಾನೆ; ದೇವರಲ್ಲದೆ ಏನೂ ಕಾಣುವುದಿಲ್ಲ.

ನನ್ನ ರಂಗನನ್ನು ಕಂಡ ಕಣ್ಣು ಬೇರೆ ಏನನ್ನೂ ಕಾಣವು ಎಂದು ಆಳ್ವಾರು ಹಾಡಿದ ವಾಕ್ಯದ ಅರ್ಥ ಇದೇ.

ನಾನಲ್ಲದ ಎಲ್ಲವೂ ದೇವರೇ. ತಿಳಿವು ಸರಿಯಾದಂದು ಈ ನಾನು ಎನ್ನುವುದು ದೇವರನ್ನು ಬಿಟ್ಟ ಒಂದು ವಸ್ತು ಆಗುವುದಿಲ್ಲ.

ಒಂದು ಗಡಿಯಾರವನ್ನು ನಿರ್ಮಿಸುವ ಯಂತ್ರಕಾರ ಹೊತ್ತು ಎಷ್ಟು ಎಂದು ತಿಳಿಯುವ ಶಕ್ತಿಯನ್ನು, ಜೊತೆಗೆ ತನಗೆ ತಾನೇ ಕೀಲು ಕೊಟ್ಟು ಕೊಳ್ಳುವ ಶಕ್ತಿಯನ್ನು, ಅದರಲ್ಲಿ ಇರಿಸಿದನೆನ್ನೋಣ. ಆಗ್ಗೆ ಆ ಗಡಿಯಾರ ಈಗ ನಾವು ನೋಡುವ ಪರಾಧೀನಯಂತ್ರವಾಗಿರುವುದಿಲ್ಲ.

ಮನುಷ್ಯನನ್ನು ನಿರ್ಮಿಸುವಲ್ಲಿ ದೇವರು ಇಂಥ ಸ್ವಾಧೀನ ಯಂತ್ರ ವನ್ನು ಮಾಡಿದನು.

ನಡೆಸಿದರೆ ನಡೆಯುವುದು, ಕೀಲು ಕೊಡದಿದ್ದರೆ ನಿಲ್ಲುವುದು, ಸರಿ ಯಾದ ಹೊತ್ತು ಏನೇ ಇರಲಿ ಕೈಗಳು ತೋರಿಸುತ್ತಿರುವ ಗಂಟೆಯನ್ನು ಹಣೆಯ ಮೇಲೆ ಹೊತ್ತು ಲೋಕಕ್ಕೆ ತೋರಿಸುವುದು: ಇದಲ್ಲ ಮನುಷ್ಯನ ಪಾಲಿಗೆ ಬಂದ ಕೆಲಸ

ಮಾನವನ ಸ್ವಭಾವ ಸಾರ್ಥಕವಾಗುವುದಕ್ಕೆ ಅವನು ಸರಿಯಾವು

ವೆಂದು ತಿಳಿಯಲು ಯತ್ನ ಮಾಡಬೇಕು; ಅದನ್ನು ಸಾಧಿಸಲು ಆಶಿಸಬೇಕು; ಆ ಆಸೆಯ ಸಿದ್ಧಿಗಾಗಿ ಸಂಕಲ್ಪ ಮಾಡಬೇಕು, ಯತ್ನಿಸಬೇಕು.

ಇಷ್ಟು ಕೆಲಸ ನನಗೆ ಹೆಚ್ಚು ಎನ್ನುವ ಮನುಷ್ಯನು ತಾನು ಸಜೀವ ಸ್ವಾಧೀನ ಯಂತ್ರವಾಗುವುದಕ್ಕೆ ಪ್ರತಿಯಾಗಿ ನಿರ್ಜೀವ ಪರಾಧೀನ ಯಂತ್ರ ವಾಗಿದ್ದರೆ ಚೆನ್ನಾಗಿದ್ದಿತು ಎಂದಂತೆಯೇ ಸರಿ. ಇದು ಆತ್ಮಹನನ: ಮಾನವ ಸ್ವಭಾವಕ್ಕೆ ನಿಷಿದ್ಧವಾದ ನಿಷ್ಪ್ರವೃತ್ತಿ.

ಸುಖದಲ್ಲಿರುವಾಗ ಮನುಷ್ಯನು, ಇದು ನನಗೆ ಬಂದಿತೇಕೆ, ಇದರ ಸ್ವರೂಪ ಏನು ಎಂನು ವಿಚಾರಮಾಡ ನೋಡುವುದಿಲ್ಲ. ವಿಚಾರಕ್ಕೆ ಮನೋಧರ್ಮ ಬರುವುದು ಕಷ್ಟದಲ್ಲೇ. ಹೀಗೆ ವಿಚಾರಿಸುವುದು ಆಧ್ಯಾತ್ಮಿಕ ಆರೋಹಣದ ಮೂಲ ಸಾಧನ.

ವಿಚಾರವನ್ನು ಪ್ರಚೋದಿಸುವುದು ಎಂಬ ಕಾರಣದಿಂದ ಜೀವನದಲ್ಲಿ ನೋವಿಗೆ ಒಂದು ಮುಖ್ಯ ಸ್ಥಾನವಿದೆ.

ಸಂತೋಷವನ್ನು ಮನುಷ್ಯನು ನಿರ್ವಿಚಾರವಾಗಿ ಸ್ವೀಕರಿಸುತ್ತಾನೆ: ಅವನಿಗೆ ಅದು ಪೈತಾಮಹವಾದ ಆಸ್ತಿ; ಅದನ್ನು ಅವನು ಸಹಜವಾಗಿ ತನ್ನ ದೆಂದು ಗ್ರಹಿಸುತ್ತಾನೆ.

ಆತ್ಮ ಸ್ವರೂಪತಃ ಆನಂದ ಭಾಜನ ಎನ್ನುವುದಕ್ಕೆ ಇದೊಂದು ಸಾಕ್ಷಿ.

ಒಳ್ಳೆಯತನ ಕೈಗೆ ನಿಲುಕದೆ ಇಲ್ಲ. ಆದರೆ ಅದನ್ನು ನಮ್ಮದಾಗಿ ಮಾಡಿಕೊಳ್ಳುವುದ ಕಷ್ಟವಾಗುತ್ತದೆ. ಅಡಿ ಉದ್ದ ಅಡಿ ಅಗಲ ಅಡಿ ಎತ್ತರದ ಹೊನ್ನ ಇಟ್ಟಿಗೆ ನಮ್ಮೆದುರಿರಬಹುದು; ಅದನ್ನು ಎರಡು ಕೈಯಿಂದ ಎತ್ತಿ ಕೊಂಡು ಹೋದರೆ ಅದು ನಮ್ಮದೇ ಆಗಬಹುದು; ಆದರೆ ಅದನ್ನು ಎತ್ತಿ ಕೊಂಡು ನಡೆಯುವ ಬಲ ನಮಗಿಲ್ಲ.

ನಮ್ಮ ಮನಸ್ಸಿನಲ್ಲಿ ಕೆಟ್ಟ ಯೋಚನೆ ಬಂದಾಗ ನಾವು ಅದನ್ನು

ಮರೆಸಿಕೊಳ್ಳಬಲ್ಲೆವು ಎಂದು ನಾವು ಎಣಿಸುತ್ತೇವೆ. ಇದು ಎಲ್ಲರೂ ಮಾಡುವ ತಪ್ಪು. ನಾಗರೀಕತೆಯ ಹೆಸರಿನಲ್ಲಿ ನಮ್ಮ ಮೈಯ ಮೇಲೆ ಬಟ್ಟೆಯ ಮರೆಯಾದರೂ ಇದೆ: ನಮ್ಮ ಮನಸ್ಸಿಗೆ ಮುಖ ಒಂದು ತೆರೆಯಲ್ಲ; ಕನ್ನಡಿ. ಅದರ ಮೂಲಕ ಮನಸ್ಸನ್ನು ಇಷ್ಟವುಳ್ಳವರೆಲ್ಲ ನೋಡಬಹುದು.

ಯಾವನಾದರೂ ಒಂದು ಕೆಟ್ಟ ಶಬ್ದವನ್ನು ನುಡಿದರೆ ನಾನು ಅದಕ್ಕೆ ಕಿವಿಯನ್ನು ಕೊಡಬಾರದು ಕೆಟ್ಟದನ್ನು ಆಡುವ ಅಧಿಕಾರ ಅವನಿಗಿರುವಂತೆ ಕಿವಿಯನ್ನು ಮುಚ್ಚಿಕೊಳ್ಳುವ ಅಧಿಕಾರ ನನಗಿದೆ.

ಅಷ್ಟೇ ನಿಜವಾಗಿ ಅವನು ಅವನ ಬಾಯನ್ನು ಕೆಡಿಸಿಕೊಂಡನೆಂದ ಮಾತ್ರಕ್ಕಾಗಿ ನಾನು ಕೇಡಾಡಿ ನನ್ನ ಬಾಯನ್ನು ಕೆಡಿಸಿಕೊಳ್ಳಬೇಕಾದದ್ದಿಲ್ಲ.

ತಿಳಿಯದವನೊಬ್ಬ ಹೇಸಿಗೆಯ ಸನ್ನೆ ಮಾಡಿದರೆ ನಾನು ಪ್ರತಿಯಾಗಿ ಆ ಸನ್ನೆಯನ್ನು ಮಾಡುವೆನೆ? ಕಣ್ಣನ್ನು ಬೇರೆ ಕಡೆ ತಿರುಗಿಸುತ್ತೇನೆ. ನೀಚವಾಗಿ ನಡೆಯುವುದು ಅವನಿಗೆ ಇಷ್ಟವಿರಬಹುದು; ಅವನ ಇಷ್ಟವನ್ನು ಸಲ್ಲಿಸುವುದಕ್ಕಾಗಿ ನಾನು ನೀಚನಾಗಬೇಕಾದದ್ದಿಲ್ಲ.

ಇಂಥ ವೇಳೆಯಲ್ಲಿ ನಮ್ಮ ಹಿರಿಯರು ಹರಿ, ಶಿವ, ಎಂದು ನೆನೆದು ಉಚ್ಚರಿಸುತ್ತಿದ್ದರು: ಕೆಟ್ಟದನ್ನು ನಿವಾರಿಸುವ ನಿತ್ಯ ಶಕ್ತಿ, ಕೆಟ್ಟದರ ಪ್ರತಿಯಾದ ನಿತ್ಯ ಮಂಗಳ.

ನೆಲದಲ್ಲಿ ಹೊಲಸು ಕಂಡರೆ ನೀನು ಗಗನದತ್ತ ಕಣ್ಣೆತ್ತು

ಸೃಷ್ಟಿ ದೇವರ ಚಿತ್ರಕ್ಕೆ ಹಾಕಿರುವ ಚೌಕಟ್ಟು, ಕನ್ನಡಿ. ನಾವು ಅದರೆದುರು ನಿಂತು ಚೌಕಟ್ಟಿನ ಕನ್ನಡಿಯನ್ನು ಮುಖ ನೋಡಿಕೊಳ್ಳುವ ಕನ್ನಡಿಯಂತೆ ಬಳಸುತ್ತೇವೆ. ದೇವರಂತೂ ಇಲ್ಲವಾದರು: ಮುಖವಾದರೂ ಚೆನ್ನಾಗಿ ಕಾಣುವುದೆ? ಇಲ್ಲ.

ಯಾವ ಮನುಷ್ಯನಿಗೂ ಎದುರಾಳಿಯಲ್ಲಿ ತನಗೆ ಇಷ್ಟವಲ್ಲದ ಒಂದೆ

ರಡು ವಿವರ ಕಂಡೇ ಕಾಣುತ್ತದೆ. ಬುದ್ಧಿವಂತನಾದವನು ಇಂಥ ವಿವರವನ್ನು ಕುರಿತು ಅತಿ ಜಿಗುಪ್ಸೆ ಪಡುವುದಿಲ್ಲ; ಅದನ್ನು ಕಡೆಗಣಿಸಿ ಎದುರ ಆ ವ್ಯಕ್ತಿಯ ಕಡೆ ಮೈತ್ರಿಯಿಂದ ವರ್ತಿಸುತ್ತಾನೆ, ಆ ವ್ಯಕ್ತಿಯಿಂದ ಸಾಧ್ಯವಾದಷ್ಟು ಒಳ್ಳಿತನ್ನು ಸಾಧಿಸುತ್ತಾನೆ.

ಜನರೊಂದಿಗೆ ನಡೆಯುವುದರಲ್ಲಿ ಒಬ್ಬನು ಸುಖಿಯಾಗಿರುತ್ತಾನೆ, ಮತ್ತೊಬ್ಬನಿರುವುದಿಲ್ಲ. ಸಾಮಾನ್ಯವಾಗಿ ಇದರ ಕಾರಣ ಎದುರಾಳಿಯನ್ನು ಕುರಿತ ಇವರ ನಿಲುವಿನ ಭೇದ ಆಗಿರುತ್ತದೆ.

ನಮ್ಮ ತಾಯದಿರು ನಮ್ಮನ್ನು ದೊಡ್ಡವರನ್ನಾಗಿ ಮಾಡುವುದಕ್ಕೆ ಎಷ್ಟು ಸ್ವಾರ್ಥತ್ಯಾಗ ಮಾಡಿರುತ್ತಾರೆ, ಇದನ್ನು ನಿಜದಲ್ಲಿ ನಾವು ಯಾರೂ ಗ್ರಹಿಸಿಲ್ಲ. ಬಹಳ ವೇಳೆ ಮಗು ಸಣ್ಣದಾಗಿರುವಾಗ ಅದನ್ನು ಸಾಕುವುದಕ್ಕೆ ಪಡುವ ಕಷ್ಟ ಒಂದು ಸಾಕು. ಎಳೆಯ ಜೀವ ಉಳಿಯಲೆಂಬ ಆಶೆಯಿಂದ ಬೆಳೆದ ಜೀವ ತಾನು ಅಳಿಯುತ್ತಿರುತ್ತದೆ.

ಜೀವ ಜೀವದಿಂದ ಪುಷ್ಟವಾಗುತ್ತದೆ. ಜೀವವನ್ನು ತೆಗೆದುಹೊಳ್ಳದೆ ಬೆಳೆಯುವುದಿಲ್ಲ.

ಜೀವವಲ್ಲದೆ ಬೇರೆ ಏನು ಜೀವವನ್ನು ಪೋಷಿಸೀತು? ಬೇರೆ ಯಾವುದಕ್ಕೆ ಅದನ್ನು ಪೋಷಿಸುವ ಯೋಗ್ಯತೆ ಇದ್ದೀತು?

ಯಾರೋ ಕೇಳಿದರಂತೆ: ರಾಮ ರಾವಣನನ್ನು ಮನ್ನಿಸಲಿಲ್ಲ ಏಕೆ? ಕೊಲ್ಲುವುದು ಹೊರತು ಬೇರೆ ದಾರಿಯಿರಲಿಲ್ಲವೆ?

ಅದಕ್ಕೆ ಗುರು ಹೇಳಿದರಂತೆ: .ರಾವಣನಂಥವನನ್ನು ಕೊಲ್ಲಬೇಕು, ಬೇರೆ ದಾರಿಯಿಲ್ಲ, ಎಂದು

ಈ ಮಾತು ಸರಿಯೇ ಇರಬಹುದು. ಆದರೆ, ಇಷ್ಟೇ ನ್ಯಾಯವಾದ ಇನ್ನೊಂದು ಉದಾಹರಣೆ ಇದೆ. ಅದು ಏನೆಂದರೆ, ರಾಮನು ಉಳಿಸುವುದಕ್ಕೆ ಒಪ್ಪಿದ್ದರೂ ರಾವಣನು ಉಳಿಯುವುದಕ್ಕೆ ಒಪ್ಪುತ್ತಿರಲಿಲ್ಲ.

ಒಳ್ಳೆಯದು ಅನೇಕ ವೇಳೆ ಕೆಟ್ಟದರೊಂದಿಗೆ ಸಮಾಧಾನ ಮಾಡಿಕೊಳ್ಳಲು ಸಮ್ಮತಿಸುತ್ತದೆ. ಇಂಥ ಸಮಾಧಾನಕ್ಕೆ ಒಪ್ಪುವುದಿಲ್ಲ ಎಂದು ಕೆಟ್ಟದು ಖಂಡಿತ ಮಾಡಿಕೊಂಡಿದೆ.

ನಿಜವೇನೆಂದರೆ ಕೆಟ್ಟದಕ್ಕೆ ಆತ್ಮಪ್ರತ್ಯಯವಿಲ್ಲ. ಕೆಟ್ಟದು ಜೊತೆಗೆ ಬಂದರೆ ಅದನ್ನು ಸರಿಮಾಡಿಕೊಂಡೇನು ಎಂದು ಒಳ್ಳಿತಕ್ಕೆ ಧೈರ್ಯವುಂಟು; ಒಳ್ಳಿತನ್ನು ತನ್ನಂತೆ ಮಾಡಿಕೊಂಡೇನೆಂದು ಕೆಟ್ಟದಕ್ಕೆ ಧೈರ್ಯವಿಲ್ಲ.

ಗೆಳೆಯ ಒಮ್ಮೆ ಹೇಳಿದರು: ದೊಡ್ಡ ಅಧಿಕಾರದಲ್ಲಿರುವ ಒಬ್ಬ ಮನುಷ್ಯ ಎಲ್ಲರೊಂದಿಗೆ ಸುಲಭವಾಗಿ ನಡೆದುಕೊಳ್ಳುವುದು ಜನರಿಗೆ ಒಂದು ಸಂತೋಷ ಎಂದು.

ಅಧಿಕಾರಿಗಳು ಅಧಿಕಾರಕ್ಕೆ ಕೆಟ್ಟ ಹೆಸರನ್ನು ತಂದಿದ್ದೇವೆ ಎನ್ನುವುದು ಸ್ಪಷ್ಟವಾಗಿದೆ.

ಸರಿಯಾಗಿ ನೋಡಿದರೆ ಅಧಿಕಾರ ಅನ್ನವನ್ನು ಗಳಿಸುವುದಕ್ಕೆ ಕೈಕೊಂಡ ವ್ಯವಹಾರ. ಇದಕ್ಕೆ ತೀರ ಸಮಾನವಾದ ಬೇರೊಂದು ವ್ಯವಹಾರವೆಂದರೆ ಹಾವಾಡಿಗನದು. ಅವನು ಹಾವುಗಳೊಂದಿಗೆ ಆಡಿ ಅನ್ನವನ್ನು ಗಳಿಸುತ್ತಾನೆ. ಆ ಆಟವನ್ನು ಚೆನ್ನಾಗಿ ಆಡಬೇಕು; ಹಾಗೆಯೇ ಎಚ್ಚರದಿಂದ ಆಡಬೇಕು; ಅಷ್ಟಾದ ಮೇಲೆ ಅವನ್ನು ಬುಟ್ಟಿಯಲ್ಲಿ ಮುಚ್ಚಿಡಬೇಕು. ಅಧಿಕಾರದ ಕೆಲಸವನ್ನು ನಿರ್ವಹಿಸುವುದಕ್ಕೆಷ್ಟೋ ಅಷ್ಟಕ್ಕೆ ಅಲ್ಲದೆ ಬೇರೆ ಹೊತ್ತಿನಲ್ಲಿ ಅಧಿಕಾರಿ ಅಧಿಕಾರವನ್ನು ಹೊತ್ತು ತಿರುಗಬಾರದು. ಯಾವ ಹಾವಾಡಿಗನೂ ಹಾವುಗಳನ್ನು ಊಟದ ಹೊತ್ತಿನಲ್ಲಿ ಪಕ್ಕದಲ್ಲಿಟ್ಟುಕೊಳ್ಳುವುದಿಲ್ಲ; ಮಲಗುವಾಗ ಹಾಸಿಗೆಯಲ್ಲಿ ಬಿಟ್ಟುಕೊಳ್ಳುವುದಿಲ್ಲ.

ಗೆಳೆಯನಾದವನು ಕಟುವಾಗಿ ಒಮ್ಮೆ ನುಡಿದರೂ ಗೆಳೆತನಕ್ಕೆ ದೊಡ್ಡ ಆತಂಕ ಒದಗುತ್ತದೆ. ಒಂದೇ ಒಂದೆಂಬ ಈ ಕಟುಕು ಕೋಣೆಯ ಒಂದು ಮೂಲೆಯಲ್ಲಿ ಕುಳಿತ ಸರ್ಪನಂತೆ. ಆ ಮೂಲೆ ಹೊರತು ಕೋಣೆ ಬಿಡುವಾಗಿಯೇ ಇದೆ. ಆದರೆ ಅದರೊಳಕ್ಕೆ ಯಾರೂ ಸುಳಿಯುವುದಿಲ್ಲ.

ನಡೆಯುತ್ತಿರುವ ಗಡಿಯಾರ ಲೋಕದ ಹೊತ್ತು ಏನು ಎಂದು ತಿಳಿಸುತ್ತದೆ. ನಡೆಯದ ಗಡಿಯಾರ ತಾನು ನಿಂತುದು ಯಾವಾಗ ಎಂಬ ಒಂದು ಸಂಗತಿಯನ್ನು ಮಾತ್ರ ಹೇಳುತ್ತಿರುತ್ತದೆ.

ಅಪಕಾರವನ್ನು ಬಹುಕಾಲ ನೆನೆಯುವ ಮನುಷ್ಯ ನಡೆಯದೆ ನಿಂತಿರುವ ಈ ಗಡಿಯಾರದಂತೆ. ಅವನ ಮನಸ್ಸು ಎಲ್ಲವನ್ನೂ ಬಿಟ್ಟು ಈ ಅಪಕಾರದ ನೆನಪಿನಲ್ಲಿ ವ್ಯರ್ಥವಾಗುತ್ತಿದೆ.

ನಾನು ಸ್ವಭಾವವಾಗಿ ರೂಲು ರೆಗ್ಯುಲೇಷ‍ರ್ ಎಂದರೆ ಸ್ವಲ್ಪ ನಿಷ್ಠುರವಾಗಿ ನಡೆಸುವವನು ಒಟ್ಟಿನಲ್ಲಿ ಜನ ಇದನ್ನು ಮೆಚ್ಚುತ್ತಾರೆ; ಆದರೆ ತಮ್ಮೆದೆ ವ್ಯವಹಾರಕ್ಕೆ ಅನ್ವಯಿಸಿದಾಗ ಈ ಮನುಷ್ಯ ಕಠಿನ ಎನ್ನುತ್ತಾರೆ.

ಮತ್ತೆ ಹೇಳುವುದಾದರೆ ಒಟ್ಟಿನಲ್ಲಿ ಜನಕ್ಕೆ ರೂಲ್ ರೆಗ್ಯುಲೇಷ‍ರ್‌ನನ್ನು ಕಠಿನವಾಗಿ ಅನ್ವಯಿಸದಿರುವುದೇ ಇಷ್ಟ.

ಈ ದಾರಿಯನ್ನು ಬಿಟ್ಟು ಬೇರೊಂದು ರೀತಿಯಲ್ಲಿ ನಡೆದವರನ್ನು ಜನ ಹೊಗಳುತ್ತಾರೆ; ನಾನು ಕೇಳಿದ್ದೇನೆ.

ಬಹು ಎತ್ತರದ ಸ್ಥಾನಗಳಿಗೆ ಜನ ಬಯಸುವುದು ತಾವು 'ಸಹಾಯ' ಎಂದು ವರ್ಣಿಸುವ ಈಷದ ನ್ಯಾಯವನ್ನು ಮಾಡಲು ಒಪ್ಪುವವರನ್ನು. ಎಂದರೆ ಕೆಲವರ ಸುಖಕ್ಕಾಗಿ ಹತ್ತು ಜನದ ಒಳ್ಳಿತನ್ನು ಕಡೆಗಣಿಸಬಲ್ಲ ಮನುಷ್ಯ ಮಾತ್ರ ಅತ್ಯುನ್ನತ ಸ್ಥಾನಗಳಿಗೆ ಯೋಗ್ಯ.

ನಾನು ದೇಹದಲ್ಲಿರುವಷ್ಟು ಕಾಲ ದೈವವನ್ನು ಒಂದು ಆಕಾರವಾಗಿ ಮಾತ್ರ ಗ್ರಹಿಸಲು ಬಲ್ಲೆನು: ಆಕಾರವಿಲ್ಲದೆ ಅದು ಗೋಚರವಾದರೆ ನಾನು ಅಂಜುತ್ತೇನೆ.

ಮನುಷ್ಯ ತನ್ನ ದೇವರು ತನ್ನಂತೆ ಇರಬೇಕೆಂದು ಬಯಸುತ್ತಾನೆ.

ನಾಲ್ಕು ವರ್ಷದ ಹುಡುಗ ಆಟಕ್ಕೆ ತನ್ನ ವಯಸ್ಸಿನ ಹುಡುಗರನ್ನು ಕರೆದುಕೊಳ್ಳುತ್ತಾನೆ. ಹನ್ನೆರಡು ವರ್ಷದವರನ್ನು ಕರೆದುಕೊಳ್ಳುವುದಿಲ್ಲ.

ಧರ್ಮರಾಯನನ್ನು ಮುಗಿಸುವುದಕ್ಕೆ ದುರ್ಯೋಧನ ಒಂದು ಅರಗಿನ ಮನೆಯನ್ನು ಕಟ್ಟಿದನು. ಈ ಅಧರ್ಮರಾಯನನ್ನು ಮುಗಿಸುವುದಕ್ಕೆ ಬೇರೆ ಯವರು ಶ್ರಮಪಡುವ ಆವಶ್ಯಕತೆ ಇರಲಿಲ್ಲ. ಒಂದೊಂದು ಅನ್ಯಾಯ ದಿಂದಲೂ ದುರ್ಯೋಧನ ತನಗೆ ತನ್ನನ್ನು ನಂಬಿದವರಿಗೆ ಒಂದೊಂದು ಚಿತೆಯನ್ನು ನಿರ್ಮಿಸಿದನು.

ನಮ್ಮ ಸೋದರತ್ತೆ ತೀರಿಕೊಂಡಾಗ ನನಗೆ ಸಹಿಲಾಗದ ದುಃಖ. ಮನಸ್ಸಿನಲ್ಲಿ ಮಾತ್ರವಲ್ಲ, ದೇಹದಲ್ಲೆ ನೋವೊ ಎಂಬಂತೆ ಆಯಿತು ಆಕೆಗೆ ತುಂಬ ವಯಸ್ಸಾಗಿದ್ದಿತು. ಇನ್ನಷ್ಟು ದಿನ ಇರಬೇಕೆಂದು ಆಕೆಗೆ ಬಯಕೆ ಇರಲಿಲ್ಲ; ಬೇರೆ ಯಾರೂ ಬಯಸುವಂತಿರಲಿಲ್ಲ. ಹೀಗಿರುತ್ತಾ ನನಗೇಕೆ ಇಷ್ಟು ನೋವು ಎಂದು ನಾನು ವಿಸ್ಮಯಪಟ್ಟೆನು.

ಯೋಚಿಸಿದ್ದರಲ್ಲಿ ನನಗೆ ಈಚೆಗೆ ತೋರುತ್ತಿದೆ. ಇಂಥ ಹತ್ತಿರದ ನಂಟು ತೀರಿಕೊಂಡಾಗ ಆ ದೇಹದ ಸಾವು ನಮ್ಮ ದೇಹವನ್ನು ತಟ್ಟುತ್ತದೆ. ನಮ್ಮ ಬೆರಳು ಒಂದು ಸುಟ್ಟರೆ ಹೇಗೋ ಹಾಗೆ ಆ ಮೈಯ ಸುಡುವಿಕೆ ನಮಗೆ ನೋವನ್ನು ಉಂಟುಮಾಡುತ್ತದೆ.

ಎರಡೆಂದು ಕಾಣುವ ಈ ಮೈಗಳ ಮಧ್ಯೆ ಅಗೋಚರವಾದ ಒಂದು ಸಂಬಂಧ ಇರುತ್ತದೆ; ಎರಡೆಂಬ ಮೈಗಳು ಒಂದು ಮೈಯ ಎರಡು ಅಂಗಗಳೇ ಆಗಿರುತ್ತವೆ. ನಂಟು ಹತ್ತಿರವಾದಷ್ಟು ಇವುಗಳ ಸಾಮೀಪ್ಯ ನಿಕಟ ಆಗು ತ್ತದೆ, ಒಂದರ ನೋವು ಇನ್ನೊಂದಕ್ಕೆ ತಟ್ಟನೆ ತಟ್ಟುತ್ತದೆ.

ನಲ್ಲನಾವನೂ ತನ್ನ ನಲ್ಲೆ ತನ್ನನ್ನು ಮೆಚ್ಚಿದ್ದಾಳೆ ಎನ್ನುವುದನ್ನು ನಿಶ್ಶಂಕವಾಗಿ ನೆಚ್ಚಲಾರನು.

ನೆಚ್ಚಿಗೆಯ ಈ ಕೊರತೆ ಈ ಸಂಬಂಧದಲ್ಲಿ ಅನಿವಾರ್ಯವಾದದ್ದು. ಅವಳು ಎಂಥ ಶ್ರೇಷ್ಠ ಪದಾರ್ಥ ! ತಾನು ಅದಕ್ಕೆ ಸಾಕಾದಷ್ಟು ತಕ್ಕವನೇ?

ಜೊತೆಗೆ ಈ ಸಂಬಂಧದಲ್ಲಿ ಇನ್ನೊಂದು ಅಸ್ಪಷ್ಟ ಭಾವನೆ ಇರುತ್ತದೆ.

ತಾನು ಮನಸೋತಿರುವುದು ಒಂದು ಕನಸಿಗೆ. ಮನುಷ್ಯನನ್ನು ಸೆಳೆಯು ವುದು ಎದುರಿನ ಹೆಣ್ಣಲ್ಲ, ಹೆಣ್ಣನ್ನು ಕುರಿತ ಅವನ ಕಲ್ಪನೆ. ಹೆಣ್ಣಾದರೂ ಮನಸೋಲುವುದು ತನ್ನ ಗಂಡನೆಂಬ ಆ ಗಂಡಿಗಲ್ಲ, ಗಂಡನ್ನು ಕುರಿತ ಅವಳ ಕಲ್ಪನೆಗೆ.

ಗಂಡೆಲ್ಲ ಹೆಣ್ಣನ್ನು ಕುರಿತ ಒಂದು ಕನಸಿಗೆ, ಹೆಣ್ಣೆಲ್ಲ ಗಂಡನ್ನು ಕುರಿತ ಒಂದು ಕನಸಿಗೆ, ಮರುಳಾಗಿ ಮಾರುಹೋಗಿದೆ.

ನನ್ನ ಪರಿಚಯದ ದೊಡ್ಡ ಮನುಷ್ಯರೊಬ್ಬರು ನಮ್ಮ ಮಿತ್ರರೊಬ್ಬರಿಗೆ ನಾನು ಕಾಲೇಜ್ ದಿನವಲ್ಲಿ ಬಹು ಶ್ರದ್ಧೆಯಿಂದ ಪಾಠ ಮಾಡುತ್ತಿದ್ದೆನೆಂದೂ, ತಮ್ಮಂತೆ ಆಟದಲ್ಲಿ ಕಾಲಕಳೆಯುತ್ತಿರಲಿಲ್ಲವೆಂದೂ ಹೇಳಿದರಂತೆ. ಹೀಗೆ ಹೇಳಿದವರು ನನ್ನಷ್ಟೇ ಚೆನ್ನಾಗಿ, ಅಥವಾ ನನಗಿಂತ ಹೆಚ್ಚು ಚೆನ್ನಾಗಿ, ಪರೀಕ್ಷೆಯಲ್ಲಿ ತೇರ್ಗಡೆಹೊಂದಿರುವವರು. ಜೊತೆಗೆ ನಾನು ಕಾಲೇಜಿನಲ್ಲಿ ಇದ್ದ ಕಾಲದಲ್ಲಿ ನನ್ನ ಹತ್ತಿರ ಒಂದು ದಿನವಾದರೂ ಸುಳಿಯದವರು. ಅವರು ಒಂದೂರಲ್ಲಿದ್ದರು; ನಾನು ಬೇರೆ ಊರಲ್ಲಿದ್ದೆನು.

ಇವರು ಈ ಮಾತನ್ನೇಕೆ ಹೇಳಿದರು ಎಂದು ನಾನು ಯೋಚನೆ ಮಾಡಿದೇನೆ.

ಈ ಮಾತನ್ನು ಹೇಳುವ ಧ್ವನಿ ನನ್ನ ಶ್ರದ್ಧೆಯನ್ನು ಹೊಗಳುವುದಾಗಿ ಕಾಣುತ್ತದೆ: ಆದರೆ ಉದ್ದೇಶ ಅದಲ್ಲ.

ಈ ಮಾತನ್ನಾಡಿದ ಮಿತ್ರರು ಪುಸ್ತಕಪಿಶಾಚಿಯಾಗಿದ್ದರೆಂದು, ಒಂದು ದಿನ ಒಂದು ಆಟದಲ್ಲಿ ಸೇರಲಿಲ್ಲ ಎಂದು, ಇವರನ್ನು ಕಂಡ ಜನ ಹೇಳಿದ್ದನ್ನು ನಾನು ಕೇಳಿದೇನೆ.

ಇವರ ಮಾತಿನ ಉದ್ದೇಶ, ತಾನು ಬಹು ಬುದ್ಧಿವಂತ, ಇನ್ನೊಬ್ಬ ಅಷ್ಟು ಬುದ್ಧಿವಂತನಲ್ಲ, ಆದರೂ ಕಷ್ಟಪಟ್ಟು ಕೆಲಸ ಮಾಡಿ ತನಗೆ ಸಮಾನ ನಾದ, ಎಂದು ಹೇಳುವುದು.

ಮನುಷ್ಯನಿಗೆ ಈ ಹೆಮ್ಮೆ ಸಾಮಾನ್ಯ. ಅವನು ಜಯವನ್ನು ಬಯಸಿ

ಮುಡಿದು ಪಡೆಯುವುದರಲ್ಲಿ ತೃಪ್ತಿ ಕಾಣುವುದಿಲ್ಲ. ಒಂದು ಕಡೆ ನಿಂತು ಇವನು ಹುಬ್ಬು ಹಾರಿಸಿದರೆ ಜಯಲಕ್ಷ್ಮಿ ಇವನ ಕೊರಳಿಗೆ ಹಾರ ಹಾಕಬೇಕು.

ಪುಷ್ಪಕ ವಿಮಾನದಲ್ಲಿ ಎಷ್ಟು ಜನ ಕುಳಿತರೂ ಮತ್ತೊಬ್ಬನಿಗೆ ಸ್ಥಳ ಇರುತ್ತದೆಯಂತೆ. ವಿಮಾನ ಒಂದು ಇಂಥದು ಇರಬಹುದೋ ಇಲ್ಲವೋ. ಕನಿಕರಿಸುವ ಹೃದಯದಲ್ಲಿ ಈ ಲಕ್ಷಣ ಕಾಣುತ್ತದೆ. ಎಷ್ಟೇ ಜನವನ್ನು ಕುರಿತು ಕನಿಕರಿಸಿದರೂ ಅದು ಮತ್ತೆ ನೋವನ್ನು ನೋಡಿ ಮರುಗುತ್ತದೆ.

ಇತರರನ್ನು ಕುರಿತು ಒಳ್ಳೆಯ ಮಾತನ್ನಾಡುವಾಗ ಮನುಷ್ಯರು ಬೇಕೆಂದೋ ತಿಳಿಯದೆಯೋ ಒಂದು ಕೊಕ್ಕೆಯನ್ನಿಟ್ಟು ಮಾತನಾಡು ತ್ತಾರೆ. ದೇವರು ನಮ್ಮನ್ನು ಮಾಡಿರುವುದು ಹೀಗೆ. ಒಂದು ಪಾತ್ರೆಯಲ್ಲಿ ಅನ್ನವನ್ನಿಟ್ಟು ಅದನ್ನು ಬಗ್ಗಿಸಿದರೆ ಪಾತ್ರೆ ಅನ್ನದ ಬಹು ಭಾಗವನ್ನು ಕೊಟ್ಟರೂ ಎರಡಗುಳನ್ನು ಹಿಡಿದಿರುತ್ತದೆ ಒಂದು ನಾಯಿಯೊ ಒಂದು ಮಂಗವೊ ಅನ್ನವನ್ನು ಉಳಿಸಿಕೊಳ್ಳಬಹುದು. ಒಂದು ಪಾತ್ರೆಗೆ ಅದರಿಂದ ಆಗ ಬೇಕಾದದ್ದೇನು? ಅಗುಳನ್ನುಳಿಸಿಕೊಂಡು ಪಾತ್ರೆ ಮುಸುರೆ ಆಯಿತಷ್ಟೆ.

ನಮ್ಮ ಜೀವನದ ಉದಾತ್ತ ಭಾವದಲ್ಲಿ ಬಾಳುವುದಕ್ಕೆ ನಾವು ಅದರ ಅನುದಾತ್ತಭಾಗವನ್ನು ಪೋಷಿಸಬೇಕು. ಈ ಎರಡು ಭಾಗ ಹಾಗೆ ಸಂಸೃಕ್ತ ವಾಗಿವೆ. ಅಂಟಿಕೊಂಡ ವೈಯ ಅವಳಿಜವಳಿಯಂತೆ ಈ ಎರಡು ಭಾಗ ಜೊತೆಯಲ್ಲಿ ನಡೆಯುತ್ತ ಎರಡು ಬಾಳನ್ನು ಬಾಳಬೇಕು. ಒಂದು ನಡೆದಾಗ ಇನ್ನೊಂದು ನಡೆದು ಒಂದು ಮಲಗಿದಾಗ ಇನ್ನೊಂದು ಮಲಗಿ ಯೋಚನೆ ಆಸೆಗಳಲ್ಲಿ ಬೇರೆಯಾಗಿರಬೇಕು.

ತನ್ನ ವಿರೋಧಿಗಳೆಲ್ಲ ಒಮ್ಮುಖವಾಗಿ ಇದ್ದಾರೆನ್ನುವುದು ಮನುಷ್ಯನಿಗೆ ಸುಲಭವಾಗಿ ಬರುವ ಒಂದು ಭ್ರಮೆ. ವೀರಶೈವರು ಒಕ್ಕಟ್ಟಾಗಿದ್ದಾರೆ

ಎಂದು ಬ್ರಾಹ್ಮಣರು, ಬ್ರಾಹ್ಮಣರು ಒಕ್ಕಟ್ಟಾಗಿದ್ದಾರೆಂದು ವೀರಶೈವರು; ಮುಸ್ಲಿಮರು ಒಕ್ಕಟ್ಟಾಗಿದಾರೆಂದು ಹಿಂದುಗಳು, ಹಿಂದೂಗಳು ಒಕ್ಕಟ್ಟಾಗಿದಾರೆಂದು ಮುಸ್ಲಿಮರು: ತಿಳಿಯುತ್ತಾರೆ. ಎದುರಿಗೆ ನಿಂತು ಹೊಡೆದಾಡುವುದಕ್ಕೆ ಈ ಒಕ್ಕಟ್ಟು ಇರಬಹುದು; ಇದು ಹೊರತು ಬಾಳುವೆಗೆ ಇಂಥ ಒಕ್ಕಟ್ಟು ಇಲ್ಲ. ಜಗಳವಾಡುವುದಕ್ಕೆ ಹಿಂದು ಇಲ್ಲದಾಗ ಮುಸ್ಲಿಮರು ತಾವೇ ಪಂಗಡಗಳಾಗಿ ಕಾದುವರು. ಮುಸ್ಲಿಮರಿಲ್ಲದಿದ್ದರೆ ಹಿಂದೂಗಳೂ ಅಷ್ಟೆ. ಬ್ರಾಹ್ಮಣ ಜಗಳದ ಕಣದಿಂದ ಹೊರಟುಹೋದರೆ ವೀರಶೈವರು ಪಂಗಡಗಳಾಗಿ ಕಾದಾಡುವರು. ವೀರಶೈವ ಪ್ರತಿಕಕ್ಷಿಯಾಗಿಲ್ಲದ ಹೊತ್ತಿನಲ್ಲಿ ಬ್ರಾಹ್ಮಣರೇ ಕಕ್ಷಿ ಪ್ರತಿಕಕ್ಷಿ ಆಗುವರು.

ಒಬ್ಬನನ್ನು ಪ್ರತಿಕಕ್ಷಿ ಮಾಡಿಕೊಂಡು ಜಗಳ ಮಾಡುವುದು ಮನುಷ್ಯನಿಗೆ ಕಾಲಾನುಕ್ರಮದಿಂದ ಬೆಳೆದುಬಂದಿರುವ ರುಚಿ.

ನಾನು ನಾನು ಎಂಬ ಕೋಟ್ಯಂತರ ನಾವುಗಳು ಒಂದು ನಾನುವಿನ ಕೋಟ್ಯಂತರ ಅಂಗಗಳು.

ಒಂದರ ಅಂಗಗಳು ಬೇರೆ ಬೇರೆಯ ನಾನುಗಳು ಆಗಿ ಕಾಣುತ್ತವೆ.

ಇದು ಆಗಿದೆ ಹೇಗೆ?

ಒಂದು ಕನ್ನಡಿಯನ್ನು ತಕ್ಕ ರೀತಿಯಲ್ಲಿ ನಿರ್ಮಿಸಿದರೆ ಅದರೆದುರಿಗೆ ನಿಂತ ಮನುಷ್ಯನಿಗೆ ತನ್ನ ರುಂಡ ಮುಂಡದಿಂದ ಬೇರೆ ಎಂಬಂತೆ ತೋಳುಗಳು ತೊಡೆಗಳು ಮುಂಡದಿಂದ ಬೇರೆ ಎಂಬಂತೆ ಮುಂಡವೇ ಎರಡು ತುಂಡಾದಂತೆ ಕಾಣಬಹುದು. ಇಂಥ ಒಂದು ಕನ್ನಡಯನ್ನು ನಾನು ಒಂದು ಪ್ರದರ್ಶನದಲ್ಲಿ ನೋಡಿದೆ.

ಪ್ರಪಂಚ ಭಗವಂತನ ಇಂದ್ರಜಾಲದ ಕನ್ನಡಿಯ ಮನೆ: ಅದನ್ನು ಹೊಕ್ಕೊಡನೆ ನಮಗೆ ನೂರು ರೀತಿಯ ಭ್ರಮೆ ಸುತ್ತು ಕಟ್ಟುತ್ತದೆ.

ಇಪ್ಪತ್ತು ವರ್ಷದ ಹಿಂದೆ ನಿದ್ದೆಯಿಂದೆದ್ದು ನಾನು ಇಷ್ಟೇ ಸುಂದರ

ವಾದ ಒಂದು ಉದಯವನ್ನು ನೋಡಿದೆನು ಆ ಉದಯ ಜೀವಕ್ಕೆ ತಾನಾಗಿ ಸೊಗಸಿತು. ಈ ಉದಯ ಆ ಉದಯದ ನೆನಪಿನಿಂದ ಸೊಗಸಿದೆ. ನಿಜದಲ್ಲಿ ಇದು ಅದಕ್ಕಿಂತ ಕಡಮೆಯ ಸುಖದ ದಿನವಲ್ಲ. ಆದರೆ ಅದೇನೊ ಮಾರ್ಪಟ್ಟಿದೆ: ಇದು ಸೊಗಸುವುದಕ್ಕೆ ಅದರ ನೆನಪಿನ ಸಹಾಯ ಬೇಕಾಗಿದೆ.

ಗೆಳೆಯರೊಬ್ಬರು ತಮ್ಮ ಪರಿಚಯದ ಒಬ್ಬ ಮನುಷ್ಯನನ್ನು ಕುರಿತು ಹೇಳಿದರು: ಅವರ ಅಳಿಯ, ( ಅಥವಾ ಮೈದುನ, ಅಥವಾ ಇಂಥದೇ ಬೇರೆ ಒಂದು ನಂಟು, ) ಅವರ ಮನೆಯಲ್ಲಿದ್ದ, ತುಂಬ ಅನುಸರಿಸಿಕೊಂಡು ನಡೆದ; ಇವರು ಆಸ್ತಿವಂತರು, ಮಕ್ಕಳುಮರಿ ಅಷ್ಟೇನೂ ಇಲ್ಲ; ವಿಧೇಯನಾಗಿ ನಡೆದುಕೊಂಡ ಆ ನಂಟನಿಗೆ ಮದುವೆ ಮಾಡಿ ಒಂದಷ್ಟು ಹಣ ಕೊಡ ಬೇಕೆಂದು ಇವರಿಗೆ ಉದ್ದೇಶ ಇದ್ದಿತು; ಇದನ್ನು ಮಾಡುವ ಮೊದಲೇ ಈತ ತೀರಿಕೊಂಡರು.

ಸ್ವಲ್ಪ ವಿವರ ಮಾರ್ಪಟ್ಟರೆ ಇದೇ ಮಾತು ಅನೇಕ ಜೀವನಗಳ ಸಂಕ್ಷಿಪ್ತ ಚರಿತ ಆಗಬಹುದು.

ದೇವರು ಮನುಷ್ಯನಿಗೆ ಎಲ್ಲ ತಪ್ಪಿಗೂ ಶಿಕ್ಷೆಕೊಡುವುದಾದರೆ ಅವನಿಗೆ ಇದು ಹೊರತು ಏನನ್ನು ಮಾಡುವುಕ್ಕೂ ಬಿಡುವಿಲ್ಲದೆ ಹೋದೀತು. ಆದ ಕಾರಣ ಅವನ ತಪ್ಪುಗಳನ್ನು ಮನ್ನಿಸಲೇಬೇಕಾಗಿದೆ; ಮನುಷ್ಯನ ಸ್ವಭಾವ ವನ್ನು ತಿದ್ದಿ ಅವನನ್ನು ಉದ್ಧಾರಮಾಡಬೇಕಾಗಿದೆ. ಮನುಷ್ಯನು ತಪ್ಪಿನ ಕಡೆ ಒಲೆಯುವುದು ಕಬ್ಬಿಣ ಸೂಜಿಕಲ್ಲ ಕಡೆ ತಿರುಗುವಂತೆ ಎಂಬಷ್ಟು ಸಹಜ ಅನಿವಾರ್ಯ ಆಗಿದೆ. ಕಬ್ಬಿಣವನ್ನು ಸುಮ್ಮನೆ ಚಚ್ಚಿದರೆ ಅದು ಸೂಜಿಕಲ್ಲಿನ ಕಡೆ ತಿರುಗುವುದನ್ನು ಬಿಡುತ್ತದೆಯೆ? ಇದಾಗ ಬೇಕಾದರೆ ಕಬ್ಬಿಣದ ಸ್ವರೂಪ ಬೇರೆಯಾಗಬೇಕು. ಅದು ಚಿನ್ನವಾದೀತೇ? ಒಳ್ಳೆಯದು. ಆಗ ಲಿಲ್ಲ; ಉಕ್ಕಾದರೂ ಆಗಬೇಕು.

ಒಂದೊಂದು ಜೀವನವೂ ಜ್ಯೋತಿಯ ಒಂದು ವಾಹಿನಿ. ನೆನಪು

ಅದನ್ನು ಒಂದಾಗಿ ಮಾಡಿದೆ. ಹೊಳೆ ಕಾಲದ ಹರಹಿನ ಮೇಲೆ ಹರಿಯುತ್ತಿದೆ. ಇದರ ಮೂಲ ಎಲ್ಲ ಚೇತನಗಳ ಹಿಮಾಲಯದಲ್ಲಿದೆ. ಅದೇ ನಾವು ದೇವರು ಎಂದು ಹೆಸರಿಸುವ ತತ್ವ.

ಸತ್ಯ ಮನವರಿಕೆಯಾಗಬೇಕಾದರೆ ಮನುಷ್ಯ ಅದನ್ನು ಮಗುವಂತೆ ಹೀರಬೇಕು. ನಾವು ಹಿರಿಯರು ಎಂಬ ದೃಷ್ಟಿಯಿಂದ ಅದನ್ನು ಸಮೀಪಿಸಿ ದರೆ ಅವನು ಅದರ ಸ್ವಲ್ಪ ಭಾಗವನ್ನು ಗಂಡ ಹೆಂಡತಿಯನ್ನು ಕಂಡಂತೆ ಕಂಡು ತಣಿಯಬಹುದು. ಆದರೆ ಸತ್ಯದ ಅತ್ಯುನ್ನತ ಭಾವ ಹೀಗೆ ನಮಗೆ ಗೋಚರವಾಗುವುದಿಲ್ಲ.

ದೇವರಲ್ಲಿ ಭಕ್ತಿಯಿಂದ ನಡೆಯಬಯಸುವವನಿಗೆ ಒಂದು ಸಂಗತಿ ಬಹು ಬೇಗನೆ ಅನುಭವಕ್ಕೆ ಬರುತ್ತದೆ: ಇವನು ತಪ್ಪುಮಾಡಿದಾಗ ದೇವರು ಶಿಕ್ಷೆ ಕೊಡುವುದಿಲ್ಲ, ತಾನು ಕಷ್ಟಪಡುತ್ತಾನೆ. ಪಾಪ ತನ್ನದು, ನೋವು ದೇವರದು. ಇದು ಕಂಡೊಡನೆ ಈ ಮನುಷ್ಯ ಶಿಕ್ಷೆಗಿಂತ ಹೆಚ್ಚಾಗಿ ಈ ಸ್ಥಿತಿಗೆ ಅಂಜುತ್ತಾನೆ, ತಪ್ಪಿ ನಡೆಯಲು ಹಿಂಜರಿಯುತ್ತಾನೆ. ತಪ್ಪಿಗೆ ಶಿಕ್ಷೆ ಆಗುವುದಾದರೆ ಇವನು, ಮಾಡಿಕೋ ಹೋಗು, ನಾನು ತಪ್ಪು ಮಾಡಿದ ನೀನು ಬಡಿದೆ, ಒಂದಕ್ಕೊಂದು ಪೇಟಿ, ಎನ್ನಬಹುದು. ದೇವರ ವಿಷಯ ದಲ್ಲಿ ಈ ಮಾತಿಗೆ ಅವಕಾಶವಿಲ್ಲ.

ಏನಾದರೊಂದು ಪ್ರಿಯವಾದ ವಸ್ತು ಕಳೆದುಹೋಗುವ ವೇಳೆ ನಾವು ಭಯಪಡುವುದು, ಎಳೆಯ ಹುಡುಗ ಚೌಲದ ದಿನ ಕೂದಲು ಹೋಗುತ್ತ ದೆಂದು ಹೆದರುವ ತೆರನಾಗುತ್ತದೆ. ಚೌಲದಲ್ಲಿ ಕತ್ತರಿಸುವುದು ಕೊರಳನ್ನೋ ಎಂಬಂತೆ ಹುಡುಗ ಕೂಗುತ್ತಾನೆ. ಕೂದಲು ತಿರುಗಿ ಬೆಳೆಯುತ್ತದೆ; ಕತ್ತರಿಸು ವುದು ಬೇರೆ ಅವನು ಗಂಡು ಎಂಬುದರ ಗುರುತು; ಇದನ್ನು ಹುಡುಗ ಕಾಣನು.

ಆಹಾರ ಒಳ್ಳಿತಾದರೂ ಪೆಟ್ಟುಬಿದ್ದಾಗ ಅದನ್ನು ಬಿಟ್ಟು ಓಡುವುದಕ್ಕೆ ದೊಡ್ಡತನ ಬೇಕಿಲ್ಲ; ನೋವು ತಕ್ಕಷ್ಟು ಕಾರಣವಾಗುತ್ತದೆ.

ಪೆಟ್ಟು ಬಿದ್ದರೂ ಅದನ್ನು ಬಿಟ್ಟುಹೋಗಲಿಲ್ಲವೆಂದರೆ ಆ ಪ್ರಾಣಿ ನಾಯೋ ಎಮ್ಮೆಯೋ ಆಗಿರಬೇಕು.

ಯಾವ ದಿನವೂ ಅದು ಬಂದ ಹೊತ್ತಿನಲ್ಲಿ ಹೊಸತೇ. ಆಗ ಅದಕ್ಕಿಂತ ಹೆಚ್ಚು ಆಧುನಿಕ ಕಾಲವಿಲ್ಲ. ಯಾವ ದಿನವೂ ಪ್ರಾಚೀನವಾಗುವುದು ಬಾಳುವಂದಲ್ಲ; ಬಾಳಿ ಮುಗಿದ ಮೇಲೆ.

ಪ್ರತಿನಿಧಿಸಭೆಯಲ್ಲಿ ಕುಳಿತು ನಿರರ್ಥಕ ಪ್ರಶ್ನೋತ್ತರಗಳನ್ನು ಕೇಳುತ್ತಾ, ಈ ಹೊತ್ತಿನಲ್ಲಿ ಇದಕ್ಕಿಂತ ಒಳ್ಳೆಯ ಕೆಲಸವನ್ನು ಮಾಡಬಹುದಾಗಿದ್ದಿತು, ಎಂದುಕೊಂಡು ನಾನು ಮ್ಯಾಥ್ಯೂ ಆರ್ನಾಲ್ಡರ ಜಲಪುರುಷನ ಪ್ರೇಯಸಿಯ ಮಾತನ್ನು ಸ್ವಲ್ಪ ಮಾರ್ಪಡಿಸಿ "I lose my soul, office, here with thee," ಎನ್ನುತ್ತೇನೆ.

ಗೆಳೆಯರ ನಾದಿನಿಯ ಮಗನಿಗೆ ಬುದ್ಧಿ ಕೆಟ್ಟ ಸಂಗತಿ ತಿಳಿದಾಗ ನಾನು ಅವರಿಗೆ ಹೇಳಿದೆ. "ಬುದ್ಧಿ ಕೆಡುವುದೆನ್ನುವುದು ಎಲ್ಲರಿಗೂ ಉಂಟು. ಅತಿ ಆಸೆ ಅತಿ ಕೋಪದಲ್ಲಿ ನಾವು ಯಾರೇ ಆದರೂ ಸ್ವಲ್ಪ ಹೊತ್ತು ಹೀಗೆಯೇ ಆಡುತ್ತೇವೆ. ಬೆಟ್ಟದ ರಸ್ತೆಯಲ್ಲಿ ಕಾರು ಓಡಿಸುತ್ತಾ ದಾರಿ ತಪ್ಪಿದರೆ ಹೇಗೋ ಹಾಗೆ ಮನುಷ್ಯನ ಪಾಡು. ಬಹು ವೇಳೆ ಅದು ದಾರಿಬಿಟ್ಟು ಗುಡ್ಡಕ್ಕೆ ತಾಗುತ್ತದೆ; ಪೆಟ್ಟುಪೆಟ್ಟು ತಿಂದು ಉಳಿದುಕೊಳ್ಳುತ್ತದೆ. ಒಳಗಿನ ಜನಕ್ಕೆ ಗಾಯವಾಗಬಹುದು, ಪ್ರಾಣ ಹೋಗುವುದಿಲ್ಲ. ಒಮ್ಮೊಮ್ಮೆ ಅದು ಹಳ್ಳಕ್ಕೆ ಬೀಳುತ್ತದೆ; ಆಗ ಕಾರು ಹೋಯಿತು, ಜನ ಸತ್ತರು."

ನಾನು ತಪ್ಪಾಗಿ ಮೆಚ್ಚುವ ಪದಾರ್ಥಗಳಲ್ಲಿ ಕೂಡ ನಾನು ಮೆಚ್ಚಿಕೊಳ್ಳುವುದು ದೈವವನ್ನೇ. ತನ್ನ ತಾಯಿ ಎಂದು ಭ್ರಮಿಸಿ ಹೆರವರ ಹಿಂದೆ ಹೋಗುವ ಮಗು ಬಯಸುತ್ತಿರುವುದು ತಾಯನ್ನು, ಹೆರವರನ್ನಲ್ಲ.

ಸರ್ವದಾ ನನ್ನ ಜೀವಮಾನದಲ್ಲಿ ನನಗೆ ಒಂದು ಸಂಗತಿ ಕಂಡಿದೆ: ಮೇಲಿನ ಅಧಿಕಾರದ ಯಾವ ಮನುಷ್ಯನೂ ನನ್ನನ್ನು ತನ್ನ ಮನುಷ್ಯ ಎಂದು ಕಂಡದ್ದಿಲ್ಲ. ನಾನು ಇದನ್ನು ಕೆಟ್ಟದೆಂದು ಎಣಿಸಲಾರೆ. ನನ್ನನ್ನು ತನ್ನ ವಸ್ತು ಎಂದು ಕಂಡಿರುವುನು ದೇವರೊಬ್ಬನೇ. ದೈವಕ್ಕೆ ಒಪ್ಪಿಗೆಯಾಗ ಬಹುದಾದ ಒಳ್ಳೆಯತನ ನನ್ನಲ್ಲಿಲ್ಲ; ಭಗವಂತನ ಅನುಗ್ರಹಕ್ಕೆ ನಾನು ಯೋಗ್ಯನಲ್ಲ; ಆದರೆ ಎಲ್ಲ ವೇಳೆಯೂ ದೇವರು ನನ್ನನ್ನು ಎತ್ತಿಹಿಡಿದಿದ್ದಾನೆ.

ವಿಶ್ವಾಮಿತ್ರನು ಮೇನಕೆಗೆ ದಾಸನಾಗಿದ್ದದ್ದು ಪಂಚ ಪಂಚ ವರ್ಷ ಕಾಲವಂತೆ. ಇಷ್ಟು ವರ್ಷದ ಭೋಗದ ಅನಂತರ ಋಷಿಗೆ ವ್ರೀಡೆ ಮೂಡಿ ತಂತೆ; ಆಗ ಅವನು ಅವಳನ್ನು ಬಿಟ್ಟು ತಪಸ್ಸಿಗೆ ಹೋದನು. ಸರಕಾರದ ಅಧಿಕಾರ ನನ್ನ ಪಾಲಿನ ಮೇನಕೆ ಆಗಿದೆ. ೧೯೧೪ರಲ್ಲಿ ನಾನು ಇದಕ್ಕೆ ಸ್ವಾಗತಂ ತೇಽಸ್ತು ಅನುಗ್ರಹ್ಣೀಷ್ವ ಎಂದು ಹೇಳಿದೆನು; ಗಚ್ಛ ಭದ್ರೇ ಯಥಾ ಸುಖಂ ಎಂದು ಮುಂದೆ ಹೇಳಬೇಕಾಗಿದೆ.

" ಅಯ್ಯಾ, ನೀನು ಆ ಹೆಂಗಸನ್ನು ಕಳವು ಮಾಡಿದೆ ಏಕೆ " ಎಂದು ಗೋಪಾಲಸ್ವಾಮಿ ಬಂದಿಯನ್ನು ಕೇಳಿದರು. ಬಂದಿ ಹೇಳಿದ: " ನನ್ನ ವಯಸ್ಸು ಆಗುವುದಕ್ಕೆ ಎಷ್ಟೋ ಮುಂದಾಗಿ ನಮ್ಮಪ್ಪ ಒಂದು ಕೊಲೆ ಮಾಡಿದ್ದ. ಏನೂ ಮಾಡದೆ ಇದ್ದರೆ ನಾನು ನಮ್ಮಪ್ಪನ ಮಗ ಹೇಗೆ ? ಈ ಮೀಸೆ ಇದ್ದು ಪ್ರಯೋಜನವೇನು ? "

ಪ್ರತಿಷ್ಠೆ ಎನ್ನುವುದು ಸತ್ಕಾರ್ಯದಿಂದ ಹೇಗೋ ಹಾಗೆ ದುಷ್ಕಾರ್ಯ ದಿಂದಲೂ ಬರಬಹುದು. ಅದಕ್ಕೆ ಕಾರಣ ಕೆಲಸ ಎಂಥದು ಎನ್ನುವುದು ಅಲ್ಲ, ಸುತ್ತಿನ ಜನದ ಮನೋಧರ್ಮ.

ಇದೇ ಮಹನೀಯರಿಗೆ ಒಬ್ಬ ಕಳ್ಳ ಹೇಳಿದನಂತೆ: " ನಾನು ಈ ಸಲ ಸಿಕ್ಕಿಕೊಂಡೆ ಸ್ವಾಮಿ. ಇದಕ್ಕೆ ಮೊದಲು ಹತ್ತು ಸಲ ಕದ್ದೆ, ತಪ್ಪಿಸಿಕೊಂಡೆ. ನಮ್ಮಲ್ಲಿ ಎಷ್ಟೋ ಜನ ಮುಪ್ಪಿನ ತನಕ ಕದೀತಾರೆ, ಒಂದು ಸಲವೂ ಸಿಕ್ಕೊ ಳ್ಳೋದಿಲ್ಲ. ಪವನ ತಪ್ಪಿ ಒಂದು ಸಲ ಸಿಕ್ಕಿಕೊಂಡದ್ದಕ್ಕಾಗಿ ಕದಿಯುವು ದನ್ನ ಬಿಡು ಅಂದರೆ ಸರಿಯಲ್ಲ."

ಹಾಗೆಯೇ ಮಾತನಾಡುತ್ತಾ ಅವನೇ ಹೀಗೆಂದನು: ನಮ್ಮ "ಅದೃಷ್ಟ ಕೆಟ್ಟಿತು ಅಂದಾಗ ಕದ್ದು ಹೊರಗೆ ಬರೋ ಹೊತ್ತಿಗೆ ಎದುರಿಗೆ ಇಬ್ಬರು ಪೋಲೀಸಿನವರಿರುತ್ತಾರೆ. ಒಬ್ಬ ಇದ್ದರೆ ಏನಾದರೂ ಮಾಡಿ ಸಮದಾಯಿಸ ಬಹುದು. ಇಬ್ಬರಾದರೆ ಇವನೂ ಅವನೂ ತಮ್ಮ ತಮ್ಮ ಮರ್ಯಾದೆ ಉಳಿಸಿಕೊಳ್ಳೋಕೆ ಅಂತ ನಮ್ಮನ್ನ ಸ್ಟೇಷನ್ನಿಗೆ ಎಳಕೊಂಡು ಹೋಗ್ತಾರೆ."

ಕಳ್ಳ ಟಂಕಿನ ಅಕ್ಕಸಾಲಿಗನಿಗೆ, ಸರ್ಕಾರದ ಚಿತ್ರಕಾರನಾಗು, ತಿಂಗಳಿಗೆ ಇನ್ನೂರು ರೂಪಾಯಿ ಸಂಬಳ ಕೊಡುತ್ತೇವೆ, ಎಂದರಂತೆ. ಅವನು ಹೇಳಿದ: "ಹತ್ತು ದಿನ ಕೆಲಸ ಮಾಡಿದರೆ ಸಾವಿರ ರೂಪಾಯಿ ಗಳಿಸ ಬಲ್ಲೆ. ಇನ್ನೂರು ರೂಪಾಯಿಗೆ ಒಂದು ತಿಂಗಳೆಲ್ಲಾ ಯಾಕೆ ದುಡಿಯಲಿ?"

ಸರಿ ತಪ್ಪಿನ ಎಗ್ಗುಬಿಟ್ಟರೆ, ತಪ್ಪುಮಾಡುವುದೇ ದೊಡ್ಡಸ್ತಿಕೆ, ಕದ್ದು ತಪ್ಪಿಸಿಕೊಳ್ಳುವುದೇ ಅದೃಷ್ಟ, ಸುಳ್ಳು ನಾಣ್ಯವನ್ನು ಮಾಡುವುದು ಲಾಭದ ಕೆಲಸ. ಇಂಥ ಬುದ್ಧಿ ಗೋಪಾಲಸ್ವಾಮಿ ಮಾತನಾಡಿಸಿದ ಕೈದಿಗಳಲ್ಲಿ ಮಾತ್ರ ಕಾಣುವುದಿಲ್ಲ. ವ್ಯವಹಾರದಲ್ಲಿರುವ ನಾವು ಅನೇಕರು ಇಷ್ಟು ಸ್ಪಷ್ಟವಾಗಿ ಅಲ್ಲದಿದ್ದರೂ ಇಷ್ಟೇ ನಿಜವಾಗಿ ತಪ್ಪುಮಾಡಿ ಹೆಮ್ಮೆಪಡುತ್ತೇವೆ, ಅದೃಷ್ಟ ಎನ್ನುತ್ತೇವೆ, ಲಾಭ ಪಡೆಯುತ್ತೇವೆ

ಒಂದು ಕಡೆಯಿಂದ ಕೋಟೆ ಕಟ್ಟಿದಂತೆ ಕಾಣುವ ವಾದ ಇನ್ನೊಂದು ಕಡೆಯಿಂದ ನೋಡಿದರೆ ದಿಕ್ಕುಕೆಟ್ಟ ಮಾತಾಗುತ್ತದೆ. ಕಾಲಮೇಲೆ ನಿಂತ ಆಮೆ ಹೊರಗಡೆಗೆ ಚಿಪ್ಪು; ಬೆನ್ನಮೇಲೆ ಬಿದ್ದರೆ ಅದರ ಬಲ ಯಾವ ಕೆಲಸಕ್ಕೂ ಬಂದದ್ದಿಲ್ಲ.

ನನಗೆ ಬಹು ವೇಳೆ ಕಂಡಿದೆ; ನಾವು ಸಾವಿರ ಸಲ ಹಾಳಾಗುವುದಕ್ಕೆ ಬೇಕಾದುದನ್ನು ಮಾಡುತ್ತೇವೆ; ಸಾವಿರಸಲ ದೇವರು ಆ ಹಾಳನ್ನು ಸರಿ ಮಾಡಿ ನಮ್ಮನ್ನು ಉಳಿಸಿಕೊಳ್ಳಲು ಶ್ರಮಪಡುತ್ತಾನೆ

ಮನುಷ್ಯನಿಗೆ ಹಣ ಕೂಡಿಬರುವುದು ವೈಗೆ ಕಾವು ಕೂಡಿದಂತೆ.

ನಮಗೆ ಇಷ್ಟವಿರಲಿ, ಇಲ್ಲದೆ ಇರಲಿ, ನಾವು ಅದರ ಕೆಡಕಿಗೆ ಬಲಿಯಾಗುತ್ತೇವೆ. ಹಣವಂತಿಕೆಯ ಅಹಂಕಾರ ಬೇಡವೆಂದು ನಾನು ಎಷ್ಟೋ ಯತ್ನಮಾಡುತ್ತೇನೆ; ಆದರೂ ಅದು ಮಾತಿನಲ್ಲಿ ನಡತೆಯಲ್ಲಿ ತಲೆಯಿಕ್ಕದೆ ಬಿಡುವುದಿಲ್ಲ; ಹೇಗೂ ಸುಸುಳಿ ಕಾಣುತ್ತದೆ.

ದೇವರ ಕೃಪೆಯಿಂದ ನನ್ನ ಕೈಯಲ್ಲಿ ಹಣ ಬಹಳ ನಿಂತಿಲ್ಲ. ಅದು ನಿಂತಿದ್ದರೆ ನಾನು ಮತ್ತಷ್ಟು ಕೆಡುತ್ತಿದ್ದೆ.

ನನ್ನಲ್ಲಿ ಹಣವಿದೆ ಆದರೂ ನನ್ನ ಬುದ್ಧಿ ಕೆಟ್ಟಿಲ್ಲ ಎನ್ನುವುದು, ನನಗೆ ಜ್ವರ ಬಂದಿದೆ, ಆದರೆ ಮೈಕಾವು ಹೆಚ್ಚಿಲ್ಲ, ಎಂದಂತೆ.

ಬೇಬಿಲೋನಿಯಾದ ಜನರು ಕುದುರೆಯನ್ನು ಕಾಣರು: ಅವರ ಸೀಮೆಯಲ್ಲಿ ಕತ್ತೆಯೇ ವಾಡಿಕೆ. ಭಾರತ ದೇಶದಿಂದ ಅವರ ಸೀಮೆಗೆ ಕುದುರೆ ಹೋದಾಗ ಅವರು ಅದನ್ನು ಪೂರ್ವದೇಶದ ಕತ್ತೆ ಎಂದರಂತೆ.

ಪೂರ್ವದಿಂದ ಪಶ್ಚಿಮಕ್ಕೆ ಹೋಗಿ ಕೆಟ್ಟ ಹೆಸರನ್ನು ಹೊತ್ತ ಒಳ್ಳೆಯ ವಸ್ತು ಕುದುರೆ ಒಂದೇ ಅಲ್ಲ.

ನಮ್ಮ ಲೋಕ ಹಾರ್ಮೋನಿಯಂ ರೀತಿಯ ನಿರ್ಮಾಣ ಪರಲೋಕ ವೀಣೆಯಂಥದು. ಹಾರ್ಮೋನಿಯಂ ವಾದ್ಯದಲ್ಲಿ ಸ ರಿ ಮಧ್ಯೆ ಶೂನ್ಯ, ಯಾವ ಸ್ವರವೂ ಇಲ್ಲ: ವೀಣೆಯಲ್ಲಿ ತಂತಿ ಒಂದು ಗಮಕವನ್ನು ಕೊಡುತ್ತದೆ.

ಇಹಲೋಕದಲ್ಲಿ ೨ರ "square root" ಇಲ್ಲ.

ದೇವರಿದ್ದಾನೆ. ಆದರೆ ಅವನನ್ನು ತೋರಿಸುವುದು ಸಾಧ್ಯವಲ್ಲ.

ಗಣಿತ ಶಾಸ್ತ್ರದ ರೇಖಾ ಭಾಗದಲ್ಲಿ ರೇಖೆ ಎಂದರೆ ಅಗಲ ಇಲ್ಲದ ಉದ್ದ ಎಂದು ಹೇಳುತ್ತದೆ. ಇದು ಕಲ್ಪನೆಗೆ ಸಿಕ್ಕಬಹುದು, ಬರೆದು ತೋರಿಸುವುದಕ್ಕೆ ಬರುವುದಿಲ್ಲ.

ತೀರ ನೇರವಾದ ರೇಖೆ ಹೀಗೆಯೇ. ಮಾನವನ ಆತ್ಮ ಹೀಗೆಯೇ.

ಇದರಂತೆ ಹಲವು ತತ್ವಗಳು ಇರುವುದು ನಿಜ. ಆದರೆ ತೋರಬರುವುದಿಲ್ಲ.

ಅಗಸ್ಟೀನ್ ಸಾಧು ನಿರೂಪಿಸಿದ ಜೀವನಸೂತ್ರ ಒಂದಿದು: "ಮರುಕ ಒಂದಿರಲಿ, ಇದರಮೇಲೆ ಇಷ್ಟಬಂದದ್ದನ್ನು ಮಾಡು."

ದೇವರು ಸತ್ತನೆ ಎಂದು ಒಂದು ಪುಸ್ತಕಕ್ಕೆ ಹೆಸರು. ಈ ಎರಡು ಪದಗಳನ್ನು ಹೀಗೆ ಸೇರಿಸುವುದರಲ್ಲಿ ನಾವು ದೇವರು ಎಂಬ ಶಬ್ದದ ಸ್ವರೂಪವನ್ನೇ ಮರೆತಿರುತ್ತೇವೆ. ಇದು ನಮ್ಮ ತಪ್ಪೇ ಅಲ್ಲ; ಭಾಷೆಯ ತಪ್ಪು. ನಾಣ್ಯ ಸವೆಯುವಂತೆ ಪದಗಳ ಅರ್ಥ ಸವೆದು ಹೋಗುತ್ತದೆ. ಈ ಕಾರಣದಿಂದ ನಾವು, ನಂದಾದೀಪ ಆರದಂತೆ, ದೇವರು ಸತ್ತನೇ, ಇಂಥ ಶಬ್ದಯೋಜನೆಗಳನ್ನು ಮಾಡುತ್ತೇವೆ.

ಹರಿ ಎಂದು ಕರೆದರೂ ಶಿವ ಎಂದು ಕರೆದರೂ ಕರೆದತ್ತ ದೇವರು ತಿರುಗುತ್ತಾನೆ. ಕರೆಯುವ ನಮಗೆ ಈ ಎರಡೂ ಒಂದು ವಸ್ತುವಿನ ಹೆಸರೆಂದು ತಿಳಿಯದೆ ಇರಬಹುದು. ಜನ ತನ್ನನ್ನು ಹೀಗೂ ಕರೆಯುತ್ತಾರೆ ಹಾಗೂ ಕರೆಯುತ್ತಾರೆ ಎಂದು ದೇವರು ಬಲ್ಲನು.

ಪಶ್ಚಿಮ ದೇಶದಿಂದ ಬಂದ ವಿದ್ಯೆ ನಮ್ಮ ಪುರಾತನ ಶ್ರದ್ಧೆಗಳನ್ನು ಪುನಃ ಪರಿಶೀಲಿಸಿ ಎಂದು ಹೇಳಿ ಒಳ್ಳೆಯದನ್ನು ಮಾಡಿತು. ಆ ಶ್ರದ್ಧೆಗಳನ್ನು ಬಿಟ್ಟು ಪರದೇಶಗಳ ಶ್ರದ್ಧೆಗಳನ್ನು ಅಂಗೀಕರಿಸಿ ಎಂದಾಗ ನಮಗೆ ಒಳ್ಳಿತಾಗಲಿಲ್ಲ.

ಅಂಗಿಯ ತೋಳನ್ನು ಮೇಲುಕೆಳಗಾಗಿ ಎಳೆದು ಬಿಸಿಲಿಗಿಕ್ಕುವುದು ಒಳ್ಳೆಯದು. ಹಾಗೆಯೇ ಅಂಗಿಯನ್ನು ಹಾಕಿಕೊಂಡು ಒಳಮೈಯನ್ನೇ ಹೊರಗುಮಾಡುವುದು ಒಂದು ಕ್ರಮವಲ್ಲ.

ನಮ್ಮ ಜನಾಂಗದ ಅಧಿದೈವ ನಮ್ಮ ಜೀವನವನ್ನು ಅಂಗ ಅಂಗವಾಗಿ ತೊಳೆದು ಪರಿಷ್ಕರಿಸುತ್ತಿರುವಂತೆ ಕಾಣುತ್ತದೆ. ಹೊರಗಿನ ಜನದ ಕೈಯಲ್ಲಿ ನಾವು ಸದ್ಯ ಆಡಳಿತ ಕಲಿಯುತ್ತಿದ್ದೇವೆ; ಇನ್ನು ಮೇಲೆ ರಾಜಕೀಯವಾಗಿ ಸ್ವಾತಂತ್ರ್ಯ ಪಡೆಯುತ್ತೇವೆ. ಆಮೇಲೆ ತತ್ವ, ಆಮೇಲೆ ಧರ್ಮ, ಪರಿಷ್ಕಾರ ವಾಗಬೇಕು, ಜನಾಂಗ ಉದ್ಧಾರವಾಗಬೇಕು.

ಯಾರೋ ಹೇಳಿದರು ಲೋಕರಕ್ಷಣೆಗಾಗಿ ದೇವರು ಈಗ ಅವತಾರ ಮಾಡಬೇಕಾಗಿದೆ ಎಂದು.

ನಿಜದಲ್ಲಿ ಒಂದೊಂದು ಹೃದಯದಲ್ಲೂ ಒಂದೊಂದು ಅನುಕ್ಷಣವೂ ದೇವರ ಅವತಾರ ಆಗುತ್ತಲೇ ಇದೆ. ನಾವು ಅವನನ್ನು ನಿರಾಕರಿಸುತ್ತಿದೇವೆ. ಹೃದಯಗಳಲ್ಲಿ ಉದಿಸಿದ ದೈವವನ್ನು ಎಲ್ಲ ಜನ ಉಳಿಸಿಕೊಂಡರೆ ಅವನು ಹೊರಗೆ ಒಂದು ಮೂರ್ತಿಯಾಗಿ ಬರುವುದು ಅನವಶ್ಯಕವಾಗುತ್ತದೆ.

ಹೊರಗೆ ಕಾಣುವ ಅವತಾರ ಬೆಂಕಿಯು ಕೆಂಡದಂತೆ. ಮೈ ಕಾಯಿಸಿ ಕೊಳ್ಳಲು ಕೆಂಡ ಬೇಕಾಗುವುದು ತೀರ ಚಳಿಯ ದಿನದಲ್ಲಿ. ಮೈಯಲ್ಲಿ, ಗಾಳಿಯಲ್ಲಿ, ಲೋಕದಲ್ಲಿ, ನ್ಯಾಯವಾದ ಶಾಖ ಇದ್ದರೆ ಸೂರ್ಯನು ನಮ ಗಾಗಿ ಒಂದು ಕೆಂಡವಾಗಿ ಬರಬೇಕಾದದ್ದಿಲ್ಲ.

ಅವತಾರ ಒಂದು ಆವಶ್ಯಕ ಎನ್ನುವವರು ಲೋಕ ಬಹು ಕೆಟ್ಟಿದೆ ಎಂದು ಹೇಳುತ್ತಾರೆ.

ಮಾತನಾಡುತ್ತಾ ಒಬ್ಬರು ಹೇಳಿದರು: “ಆ ಮನುಷ್ಯನಿಗೆ ನೋಡಿ, ಮಕ್ಕಳೇ ಇಲ್ಲ. ಆದರೂ ಮಾಡಬಾರದ್ದನ್ನೆಲ್ಲಾ ಮಾಡಿ ಲಕ್ಷ ರೂಪಾಯಿ ಸಂಪಾದಿಸಿದ್ದಾನೆ.”

ಮಕ್ಕಳುಳ್ಳವರು ಅನ್ಯಾಯ ಮಾಡಬಹುದು ಎಂದು ಇವರ ಅರ್ಥ ಇರಲಾರದು. ಇದು ಮಾತಿನ ರೀತಿ.

ಅನ್ಯಾಯ ಮಾಡುವವನು ಮಕ್ಕಳಿಗಾಗಿ ಅದನ್ನು ಮಾಡುತ್ತಾನೆ ಎಂದು ಇವರ ಅರ್ಥ ಇರಬಹುದು

ಇದಾದರೂ ಸರಿ ಎಂದು ಹೇಳುವಂತಿಲ್ಲ. ಒಳ್ಳೆಯದನ್ನು ಮಾಡು ವವನು ಹೇಗೋ ಹಾಗೆ ಕೆಟ್ಟದನ್ನು ಮಾಡುವವನೂ ತಾನು ಮಾಡುವು ದನ್ನು ತನ್ನ ಸಂತೋಷಕ್ಕಾಗಿಯೇ ಮಾಡುತ್ತಾನೆ. ಉಪನಿಷತ್ತಿನ ನವಾ ಅರೇ ಪುತ್ರಸ್ಯ ಕಾಮಾಯ, ಆತ್ಮನಃ ಕಾಮಾಯ, ಎಂಬ ಮಾತು ಇಲ್ಲಿ ಸಂಪೂರ್ಣವಾಗಿ ಅನ್ವಯಿಸುತ್ತದೆ.

ತಾಯಿ ಕಿರಿಯ ಮಗನಿಗೆ ಒತ್ತಾಸೆಯಾಗಿ ಮಾತನಾಡಿದಳು ಎಂಬ ಕೋಪದಲ್ಲಿ ಹಿರಿಯ ಮಗ ಅವಳನ್ನು ನೀನು ನಿನ್ನ ಮಗ ಎಂದು ಬಾಯಿಗೆ ಬಂದಂತೆ ಬೈದನು. ನೀನು ನಿನ್ನ ಲೋಕ ಎಂದು ನಾವು ದೇವರಿಗೆ ಇಂಥದೇ ಮಾತನ್ನು ಹೇಳುತ್ತೇವೆ.

ಅಷ್ಟೇನೂ ಸರಿಯಾದ ಬಾಳುವೆಯನ್ನು ನಡೆಸದ ಒಬ್ಬಾತ ಸಂನ್ಯಾಸ ತೆಗೆದುಕೊಂಡರು.

ಇದಾದಮೇಲೆ ಅವರು ಚೆನ್ನಾಗಿಯೇ ನಡೆದುಕೊಂಡರು. ಆದರೂ ಜನ ಅವರನ್ನು ಒಪ್ಪಿಕೊಳ್ಳಲಿಲ್ಲ.

ಬಹು ಕಾಲ ಶೀತಾರಾಮಯ್ಯ ಎಂದು ರುಜಮಾಡಿ ಹಣ ಪಡೆದ ಮುದುಕರು ' ಶೀ ' ಬಿಟ್ಟು ' ಸೀ ' ಎಂದು ಬರೆಯಲು ಒಪ್ಪಲಿಲ್ಲ. ಏಕೆ ಎಂದರೆ " ' ಶೀ ' ಟ್ರೆಷರಿ ಜನ ನೋಡಿರುವ ಅಕ್ಷರ. ' ಸೀ ' ಎಂದು ಬರೆ ದರೆ ಅದು ನನ್ನ ರುಜು ಅಲ್ಲ ಎಂದು ಅವರು ತಿಳಿಯುತ್ತಾರೆ. ' ಶೀ ' ತಪ್ಪು ' ಸೀ ' ಸರಿ. ಆದರೂ ನಾನು ' ಶೀ ' ಎಂದೇ ಬರೆಯಬೇಕು," ಎಂದರು.

ಭಾವುಕನಾದ ಮನುಷ್ಯನ ಕಾಠಿಣ್ಯ ಇತರರಿಗೆ ಕೊಡುವ ನೋವಿ ಗಿಂತ ಅವನಿಗೇ ಹೆಚ್ಚಿನ ನೋವನ್ನು ಕೊಡುತ್ತದೆ. ಅವನ ತುಪಾಕಿಯಲ್ಲಿ ಮದ್ದುಂಟು, ಗುಂಡಿಲ್ಲ. ಅವನು ಅದನ್ನು ಸುಟ್ಟಾಗ ಎದುರಾಳಿಗೆ ಕೆಡಕಿಲ್ಲ;

ತುಪಾಕಿ ಮಾತ್ರ ಹಿಂದಕ್ಕೆ ಒದೆಯುತ್ತದೆ, ಇವನ ಭುಜವನ್ನು ನೋಯಿಸುತ್ತದೆ.

ಈ ದಿನ ನಾನು ಸೂರ್ಯ‍ಮೂಡುವುದನ್ನು ನೋಡಿದೆ. ಆ ಮುಖ ಅದೇನು ನಗೆಯಿಂದ ಬೆಳಗುತ್ತದೆ!

ಅನ್ಯಾಯವನ್ನು ದಿನ ಬಿಡದೆ ಯುಗವೆಲ್ಲ ನೋಡಿಯೂ ಇವನು ಬೇಸರಪಡದೆ ಇರುವುದು ಇದು ಆಶ್ಚರ್ಯ.

ಅವನು ತತ್ವವನ್ನು ಬಲ್ಲನು: ಆದಕಾರಣ ಅವನ ನಗೆ ಬಾಡದೆ ಇದೆ.

ಜೀವನ ಒಂದು ಆಟ: ಇದರ ಹೊಡೆದಾಟ ಬಡಿದಾಟ ನಿಜವಾದ ಕೇಡಲ್ಲ.

ಇದು ಒಂದು ಗರಡಿಯ ಮನೆ. ಇದರಲ್ಲಿ ಕೇಳಬರುವ ಗದೆಗಳು ಬಡಿಯುವ ಶಬ್ದ ಕಾಳಗದ ಕಣದ ಗದೆಗಳ ಶಬ್ದವಲ್ಲ.

ಅರ್ಜುನ ಕಿರಾತರು ಕಾದುವ ಹೊತ್ತು ಕೋಪವೆಲ್ಲ ಅರ್ಜುನನಿಗೆ; ಕಿರಾತನಿಗೆ ಕ್ಷೋಭೆಯಿಲ್ಲ. ಎದುರಾಳಿ ಶಕ್ತನಾಗಲಿ ಅವನ ಧೃತಿ ಬೆಳೆಯಲಿ ಎಂದೇ ಅವನು ಇವನಿಗೆ ಕಷ್ಟವನ್ನು ಒಡ್ಡುತ್ತಾನೆ.

ಬಾಳಿನ ಎಡರುಗಳಿಂದ ಸೋತು ನಾವು ಬೇಸರಪಡುತ್ತೇವೆ: ನಮ್ಮನ್ನು ತಿದ್ದಿ ರಕ್ಷಿಸುತ್ತಿರುವ ಸತ್ವಕ್ಕೆ ಬೇಸರವಿಲ್ಲ.

ಗೆಳೆಯ ನಿನ್ನೆ ರಾತ್ರಿ ಧಾರವಾಡಕ್ಕೆಂದು ಹೊರಟು ತಪ್ಪು ತಿಳುವಳಿಕೆಯಿಂದ ಗುಂತಕಲ್ ರೈಲಿನಲ್ಲಿ ಕುಳಿತರು. ಟಿಕೆಟ್ ಮನುಷ್ಯ ಗೋರೀಬಿದನೂರಿನಲ್ಲಿ ಇದನ್ನು ತಿಳಿದು ಅವರನ್ನು ಬೆಂಗಳೂರಿಗೆ ಹಿಂದಿರುಗಿಸಿದನು. ಬೆಳಗಾಗ ನನಗೆ ನಿದ್ದೆಗಣ್ಣಿನಲ್ಲಿ ಇವರ ಧ್ವನಿ ಕೇಳಿ ಆಶ್ಚರ್ಯ. ಎದ್ದು ಕೆಳಗಿಳಿದು ಬಂದರೆ ಸಂಗತಿಯನ್ನೆಲ್ಲ ಹೇಳಿದರು.

ಹಾಗೆಯೇ ಮಾತನಾಡುತ್ತಾ, ನಾನು ನಿಮಗೆ ನಮಸ್ಕಾರ ಮಾಡದೆ

ಹೊರಟುಹೋದೆ, ಅದರಿಂದ ಹೀಗಾಗಿರಬಹುದು, ಎಂದರು. ನಾನು ನಕ್ಕು, ಬೇರೆ ಇನ್ನು ಯಾರಿಗೆ ಯಾವ ಮರ್ಯಾದೆ ತೋರಿಸದೆ ಹೊರಟುಹೋದಿರಿ, ಯೋಚನೆಮಾಡಿ, ಎಂದೆ. ಅವರು, ಆಳಿಗೆ ನಾಲ್ಕಾಣೆ ಉಚಿತ ಕೊಡ ಬೇಕಾಗಿತ್ತು, ಕೊಡದೆಹೋದೆ, ಎಂದರು. ನಮಸ್ಕಾರ ತಪ್ಪಿದ್ದರಿಂದ ನಾನು, ನಾಲ್ಕಾಣೆ ತಪ್ಪಿದ್ದರಿಂದ ಆಳು, ಪಟ್ಟ ಅಥವಾ ಪಡಬಹುದಾಗಿದ್ದ ಅಸಮಾಧಾನ ಇವರನ್ನು ತಪ್ಪು ರೈಲಿನಲ್ಲಿ ಕುಳಿತುಕೊಳ್ಳುವಂತೆ ಮಾಡಿ ತೆಂದು ನಾವು ಹಾಸ್ಯವಾಗಿ ನಿರ್ಣಯಿಸಿದೆವು.

ಇದು ಹಾಸ್ಯಕ್ಕಲ್ಲದೆ ನಿಜ ಆದರೂ ಆಶ್ಚರ್ಯವಿಲ್ಲ. ನಾನು ನಮ ಸ್ಕಾರವನ್ನು ನಿರೀಕ್ಷಿಸದೆ ಇದ್ದರೂ ನಾನದನ್ನು ನಿರೀಕ್ಷಿಸುತ್ತೇನೆಂದು ತಿಳಿದು ಕೊಂಡು ಇವರು ನಮಸ್ಕಾರ ಮಾಡದೆ ಬಂದೆನಲ್ಲಾ ಎಂಬ ಚಿಂತೆಯಲ್ಲಿ ಸ್ಟೇಷನ್‌ಗೆ ಹೋದರೆ, ಅಲ್ಲಿ ಎತ್ತಲೋ ಜ್ಞಾನದಲ್ಲಿದ್ದು ತಮ್ಮ ರೈಲು ಯಾವುದು ಎಂದು ವಿಚಾರಿಸದೆ ಹೋಗುವುದು ತೀರಸಾಧ್ಯ. ಆಳಿಗೆ ನಾಲ್ಕಾಣೆ ಕೊಡಬೇಕಾಗಿದ್ದಿತು ಕೊಡದೆ ಬಂದೆ ಎಂಬ ಚಿಂತೆಯೂ ಹೀಗೆ ತಬ್ಬಿಬ್ಬು ಮಾಡಬಹುದು. ನನ್ನ ಅಥವಾ ಆಳಿನ ನಿರೀಕ್ಷೆ ಇಲ್ಲಿ ಮುಖ್ಯ ವಲ್ಲ. ಕರ್ತನ ಮನಸ್ಸಿನಲ್ಲಿರುವ ಕಲ್ಪನೆ ಯಾವುದು, ಅದಷ್ಟೆ ಮುಖ್ಯ.

ಸೃಷ್ಟಿ ಎಲ್ಲ ಇಷ್ಟೇ, ಏನಿದೆ ಅದು ಮುಖ್ಯವಲ್ಲ; ಏನೆಂದು ಕಾಣುತ್ತದೆ ಅದೇ ಮುಖ್ಯ.

ಏನು ಕಾಣುತ್ತದೆ ಅದಲ್ಲದೆ ಇರುವುದು ಬೇರೆ ಯಾವುದು? ಇದಲ್ಲ ಅದು ಎಂದು ಒಂದು ಹೊದಿಕೆಯನ್ನು ತೆಗೆದು ಒಳಗಿರುವುದನ್ನು ತೋರಿ ಸಿದರೆ ಅದು ಕೂಡ ಕಂಡದ್ದೇ. ಅದೇ ಕಂಡದ್ದು. ಹೊದಿಕೆಗಳನ್ನೆಲ್ಲಾ ಸೆಳೆದು ಹಾಕಿದರೆ ಕೊನೆಗೆ ಯಾವುದು ಕಾಣುತ್ತದೆ ಅದೇ ನಮ್ಮ ಪಾಲಿಗೆ ಸತ್ಯ.

ಇದು ಸತ್ಯವಲ್ಲದೆ ಇರಬಹುದಲ್ಲ ಎಂದರೆ ಹೌದು ಎನ್ನಬೇಕು. ಅದು ಅಸಾಧ್ಯವಲ್ಲ; ಆದರೆ ಆಗ್ಯೆ ನಾವೂ ಇಲ್ಲ.

ಕಂಡದ್ದು ಯಾವುದೂ ಸತ್ಯವಲ್ಲ ಎಂಬ ಸ್ಥಿತಿಯಲ್ಲಿ ಒಂದೇ ಒಂದು ವಸ್ತು ಉಳಿದು ನಿಂತಿರುತ್ತದೆ. ಅದೇ ಬ್ರಹ್ಮ, ದೈವ.

ನನ್ನಲ್ಲಿ ಕ್ರೋಧ ಇನ್ನೂ ಹಿಡಿತಕ್ಕೆ ಬಂದಿಲ್ಲ. ಯಾರಾದರೂ ಅನುಚಿತವಾಗಿ ನಡೆದುಕೊಂಡರೆ ಅದನ್ನು ಕುರಿತ ನನ್ನ ಮೊದಲನೆಯ ಪ್ರತಿಕ್ರಿಯೆ ಹೆಡೆ ಹರಡಿ ಮೇಲಕ್ಕೆ ಏಳುವುದು. ಹೆಡೆಯನ್ನು ಸೆಳೆದುಕೊಂಡು ನಾನು ತಾಳ್ಮೆಯನ್ನು ಹಿಡಿಯುತ್ತೇನೆ; ಕೆಲವು ವೇಳೆ ಇದು ಒಡನೆ ಆಗುತ್ತದೆ; ಕೆಲವು ವೇಳೆ ಸ್ವಲ್ಪ ಕಾಲವನ್ನು ಕೇಳುತ್ತದೆ. ಹೇಗೂ ಒಳಗೆ ಸರ್ಪ ಇದ್ದೇ ಇದೆ.

ಎದುರು ಜೀವಕ್ಕೆ ಕಠಿಣವಾಗಿರುವುದಕ್ಕಿಂತ ನಿನ್ನನ್ನು ಕುರಿತೇ ಕಠಿನವಾಗಿರು; ಇದು ಶ್ರೇಯಸ್ಸು.

ಗಂಡ ದೀರ್ಘಾಯುವಾಗಲೆಂದು ಹೆಂಡತಿ ಕಿವಿ ಮೂಗು ಚುಚ್ಚಿಸಿಕೊಳ್ಳುತ್ತಾಳೆ. ಆ ರಂಧ್ರಗಳನ್ನು ಆಭರಣಗಳ ನೆಲೆಯಾಗಿ ಮಾಡುತ್ತಾಳೆ. ಅವುಗಳ ಮೂಲಕ ತನ್ನ ಸೌಮಂಗಲ್ಯವನ್ನು ಭದ್ರಪಡಿಸಿಕೊಳ್ಳುತ್ತಾಳೆ.

ಎದುರಾಳಿಗೆ ಒಳ್ಳಿತನ್ನು ಬಯಸಿ ನೀನು ಸಹಿಸುವ ಕಷ್ಟ ಆತ್ಮಕಲ್ಯಾಣವನ್ನು ಸಾಧಿಸುತ್ತದೆ.

ಹೇಳುವುದನ್ನೆಲ್ಲಾ ಹೇಳಿ ತೋರಿದ ಚಿಂತೆಯನ್ನೆಲ್ಲಾ ಮಾಡಿ ಸತ್ಯವಂತ ಕೊನೆಗೆ ಒಂದು ನಿರ್ಣಯಕ್ಕೆ ಬರುತ್ತಾನೆ: ಯಾವುದೇ ವಿವಾದದಲ್ಲಿ ಎದುರು ಪಕ್ಷ ತನ್ನ ಮಾತನ್ನು ಕೇಳದಿದ್ದರೆ ಅದರ ಹೊಣೆ ತನ್ನದು, ಆ ಪಕ್ಷದ್ದಲ್ಲ. ನನ್ನ ಮಾತಿಗೆ ಇವರು ಒಪ್ಪಲಿಲ್ಲ ಎಂದು ಅವರೊಂದಿಗೆ ಬೇಸರವೇಕೆ ? ಅವರು ಒಪ್ಪುವಂತೆ ನಮ್ಮ ಭಾವನೆಯನ್ನು ವಿವರಿಸಿ ಹೇಳುವುದು ನಮ್ಮ ಭಾರ. ನನ್ನ ಕೈಯಲ್ಲಾದಷ್ಟು ಹೇಳಿದ್ದೇನೆ, ಅವರು ತಿಳಿದುಕೊಳ್ಳುವ ಯತ್ನಮಾಡುತ್ತಿಲ್ಲ, ಎನ್ನುವುದೇ ನಮ್ಮ ದೂರು? ಸರಿ; ನಿನ್ನ ಅಭಿಪ್ರಾಯವನ್ನು ವಿವರಿಸುವುದರಲ್ಲಿ ನೀನು ಆ ಸಂಗತಿಯನ್ನೂ ಗಣನೆಗೆ ತೆಗೆದುಕೊಳ್ಳಬೇಕು.

ಇದೇ ಜೀವನ. ನಾವು ಒಂದು ಗರಡಿಯಲ್ಲಿದ್ದೇವೆ. ಗರಡಿಗೆ ಬಂದವನು ಇದೇನಪ್ಪಾ ಇಲ್ಲಿ ಇಷ್ಟು ಶ್ರಮ ಪಡಬೇಕು ಎಂದು ಗೊಣಗುವುದಿಲ್ಲ.

ಅಲ್ಲಿಗೆ ಬರುವುದೇ ಶ್ರಮ ಪಡುವುದಕ್ಕೆ, ಶ್ರಮಪಟ್ಟು ಶಕ್ತಿಯನ್ನು ಗಳಿಸುವುದಕ್ಕೆ. ಅಥವಾ ಜೀವನ, ವಾರವೆಲ್ಲ ಪಾಠ, ಒಂದು ದಿನ ಪರೀಕ್ಷೆ, ನಡೆಯುವ ಶಾಲೆ. ಪರೀಕ್ಷೆಯ ದಿನ ನೀನು ನಿರೀಕ್ಷಿಸಿದ ಪ್ರಶ್ನೆಗಳನ್ನು ಕೊಡಬೇಕೆಂದು ಪರೀಕ್ಷಕನಿಗೆ ಹೇಳುವೆ ಏನು ? ಅವನು ಪ್ರಶ್ನೆ ಕೊಡುತ್ತಾನೆ; ನೀನು ಉತ್ತರ ಹೇಳುತ್ತೀಯೆ. ಯಾವ ಪ್ರಶ್ನೆಯನ್ನೇ ಕೇಳಲಿ ನಾನದಕ್ಕೆ ಸಿದ್ಧನಾಗಿದೇನೆ, ಎನ್ನುವುದೇ ಸರಿಯಾದ ನಿಲುವು.

ಎಂಥದೇ ಸನ್ನಿವೇಶ, ಯಾವುದೇ ಜನ, ಏನೇ ತೊಡಕು, ಜೀವನದಲ್ಲಿ ಬಂದರೂ ಎಲ್ಲವೂ ಪ್ರಸಾದ ಎಂದು ಅಂಗೀಕರಿಸಿ ಗೆಲ್ಲುವುದು ಮನುಷ್ಯನಿಗೆ ಗುರಿಯಾಗಬೇಕು.

ಈ ದಿನದ ಸಭೆಯಲ್ಲಿ ಶ್ರೀಮಾನ್ ಆಚಾರ್ಯರು ಸರಿಯಿಲ್ಲದ ಎರಡು ಮಾತನ್ನಾಡಿ ನಾನು ಸಮಾಧಾನ ಹೇಳುವುದರಲ್ಲಿ ಅಷ್ಟು ಹೊತ್ತನ್ನು ಕಳೆಯುವಂತೆ ಮಾಡಿದರು; ಸಭೆ ಮುಗಿದ ಮೇಲೆ ಹತ್ತಿರ ಬಂದು, "ನೀವು ಎಂಥ ಶಕ್ತರು ಎನ್ನುವುದು ಜನಕ್ಕೆ ತಿಳಿಯಲಿ ಎಂದು ನಾನು ಹಾಗೆ ಮಾಡಿದೆ; ಕವಿ ಹೇಳಿದ್ದಾನೆ, ಚುಚ್ಚಿದರೆ ಕೆಂಡ ಪ್ರತಾಪವನ್ನು ತೋರುತ್ತದೆ, ಸರ್ಪ ಹೆಡೆಯನ್ನು ಎತ್ತುತ್ತದೆ," ಎಂದು ಒಂದು ಶ್ಲೋಕವನ್ನು ಹೇಳಿದರು.

ನನ್ನ ದಕ್ಷತೆಯನ್ನು ಪ್ರಕಾಶ ಪಡಿಸಬೇಕಾದ ಹೊಣೆಯನ್ನು ತಾವು ತೆಗೆದುಕೊಳ್ಳಬಾರದಾಗಿತ್ತು ಎಂದು ಹೇಳಿ ನಾನು ಮಾತನ್ನು ಮುಗಿಸಿದೆನು.

ಕೆಂಡದ ಮಾತು ಸರ್ಪದ ಮಾತನ್ನು ಹೇಳಿದ ಕವಿ ಅದೇ ಹೊತ್ತಿನಲ್ಲಿ ಹೇಳದೆ ಬಿಟ್ಟರೂ ಇಂಥ ಮಿತ್ರರು ನೆನೆದುಕೊಳ್ಳದ ಕೆಲವು ಸಂಗತಿಯನ್ನು ಬಲ್ಲನು. ಮಾಣಿಕ್ಯ ಚುಚ್ಚದೆಯೇ ಹೊಳೆಯುತ್ತದೆ; ದೈವದ ಅಭಯ ಹಸ್ತ ನಾವು ಚುಚ್ಚದೆಯೇ ನಮ್ಮನ್ನು ರಕ್ಷಿಸಲು ಕಾದಿದೆ. ನನ್ನ ಕೆಲಸವನ್ನು ನಾನು ಚೆನ್ನಾಗಿ ಮಾಡುವುದಕ್ಕೆ ಎದುರು ಜನ ತಪ್ಪಿ ಏಕೆ ನಡೆಯಬೇಕು? ನನ್ನ ದೈವ ನನ್ನನ್ನು ಚೆನ್ನಾಗಿ ನಡೆಸಿಕೊಂಡರೆ ಇವರು ವಿರೋಧಿಸದೆಯೇ ನಾನು ದಕ್ಷನೆನಿಸಿ ಕೊಳ್ಳುತ್ತೇನೆ.

ಅಹಿಂಸೆ ಸರ್ವ ಶ್ರೇಷ್ಠ ತತ್ವವೆಂದು ತಿಳಿದ ನಮ್ಮ ಪೂರ್ವಿಕರು ನಮ್ಮ ಜನಕ್ಕೆ ಮಾಂಸಾಹಾರವನ್ನು ಬಿಡಿ ಎಂದು ನಿಯಮ ಮಾಡಿದರು.

ಎಲ್ಲೋ ಒಂದುಸಲ ಯಜ್ಞಕ್ಕಾಗಿ ಪಶುವಧೆ ಮಾಡಿದರೆ ಏನು ಎಂದರೆ, ಯಜ್ಞಕ್ಕೆಂದೂ ಪಶುವಧೆ ಬೇಡ, ಎಂದು ನಿರೂಪಿಸಿದರು.

ಮನುಷ್ಯನ ಸ್ವಭಾವದ ಒಂದು ಮುಖ್ಯ ಲಕ್ಷಣವನ್ನು ಅವರು ತಿಳಿದಿದ್ದರು; ನಾವು ಅದನ್ನು ಮರೆಯುತ್ತಿರುತ್ತೇವೆ.

ಯಾವ ಸಂಗತಿಯಲ್ಲೂ ಸಿದ್ಧಿಗೆ ಅವಿಚ್ಛಿನ್ನವಾದ ಅಭ್ಯಾಸ ಅವಶ್ಯ ಸಾಧನ.

ಅಹಿಂಸೆ ಮನಸ್ಸು ಬೆಳೆಸಿಕೊಳ್ಳಬೇಕಾದ ಒಂದು ಪ್ರವೃತ್ತಿ. ಅದನ್ನು ದಿನವೂ ಕೆಡಿಸಿಕೊಳ್ಳುವುದು ತಪ್ಪೇ ತಪ್ಪು; ವರ್ಷಕ್ಕೊಮ್ಮೆ ಕೆಡಿಸಿಕೊಂಡರೂ ತಪ್ಪಲ್ಲದೆ ಹೋಗುವುದಿಲ್ಲ.

ಮುಖದ ಮೇಲಿನ ಕೂದಲನ್ನು ವರ್ಷಕ್ಕೊಮ್ಮೆ ತೆಗೆದರೆ ದೀಕ್ಷೆ ಬೆಳಸಿ ಕ್ಷೌರ ಕರ್ಮ ಮಾಡಿಕೊಂಡಂತಾಯಿತು; ದಿನವೂ ಕ್ಷೌರ ಮಾಡಿಕೊಂಡರೆ ಕೂದಲ ಬುಡ ಇರಬಹುದು; ಬೆಳೆ ಸಾಧ್ಯವೇ ಇಲ್ಲ.

ಹಿರಿಯರೊಬ್ಬರು ತಮ್ಮ ಜೊತೆಯವರೊಬ್ಬರು ತೀರಿಕೊಂಡ ಸಂಗತಿ ಹೇಳಿ, ನಾನಿನ್ನೂ ಭದ್ರವಾಗಿದ್ದೇನೆ, ಜೊತೆಯ ಈ ಮನುಷ್ಯ ದಿನ ಮುಗಿಸಿ ಮರೆಯಾದ, ಎಂದರು.

ಈ ಬೇಸರ ಸಹಜವೇ. ಆದರೆ ಸ್ವಲ್ಪ ಯೋಚನೆಯಿಂದ ಇದನ್ನು ಹಿಡಿತಕ್ಕೆ ತರಬಹುದು. ಸಾವು ಅಪಘಾತದಿಂದ ಬಂದಿತ್ತಾದರೆ ಅದಕ್ಕೇನೂ ಹೇಳುವಂತಿಲ್ಲ; ಅಪಘಾತ ಯಾರಿಗಾದರೂ ಆಗಬಹುದು. ಸಾಮಾನ್ಯವಾಗಿ ಬಾಳುತ್ತಿದ್ದು ಗುಂಡಿಗೆ ನಿಂತಿತೆಂದರೆ ಅದು ಆಯಾ ದೇಹದ ಗುಣವನ್ನು ಅವಲಂಬಿಸಿ ಒದಗುವ ಕೊನೆ.

ಇದೇ ಹಿರಿಯರು ತಾವು ಚಿಕ್ಕಂದು ಕೊಂಡ ಒಂದು ಗಡಿಯಾರ ಇನ್ನೂ ಚೆನ್ನಾಗಿ ನಡೆಯುತ್ತದೆಂದು ಹೆಮ್ಮೆಯಿಂದ ಹೇಳುವುದುಂಟು. ಈ ಮಧ್ಯೆ

ಇತರರು ಹೊಸ ಗಡಿಯಾರಗಳನ್ನು ಕೊಂಡು ಅವು ಕೆಟ್ಟು ಹಾಳಾಗಿವೆ. ಮನುಷ್ಯನ ಮೈ ಗಡಿಯಾರದಂತೆ ಒಂದು ಯಂತ್ರ; ಅದರ ಆಯುಸ್ಸು ಅದರ ಸಹಜ ಶಕ್ತಿಯನ್ನು ಅವಲಂಬಿಸುತ್ತದೆ.

ಹೊರಗೆ ಕಾಣುವುದು ಒಳಗೆ ನುಡಿಯುವುದು ದೇವರಿಗೆ ನಿರಂತರ ವ್ಯಾಪಾರ. ಕಂಡಾಗ ಅವನನ್ನು ಗುರುತಿಸದೆ ಅವನ ನುಡಿಗೆ ಕಿವಿ ಕೊಡದೆ ಕುರುಡು ಕಿವುಡಾಗಿ ನಡೆಯುವುದು ನಮ್ಮ ನಿರಂತರ ವ್ಯಾಪಾರ.

ಪುಟ್ಟಿಯಾದ ಮಗು ತಾನು ಏನು ಮಾಡಿದಾಗ ತಾಯಿ ಅಣ್ಣ ಅಂಜುತ್ತಾರೆ ಎನ್ನುವುದನ್ನು ತಿಳಿದುಕೊಂಡು ಆ ಮೇಲೆ ಆಟಕ್ಕಾಗಿ ಮತ್ತೆ ಮತ್ತೆ ಅದನ್ನು ಮಾಡುತ್ತೇನೆನ್ನುತ್ತದೆ.

ಬ್ರಿಟನ್ ಫ್ರಾನ್ಸ್ ಮುಂತಾದ ರಾಷ್ಟ್ರಗಳಿಗೆ ಹಿಟ್ಲರ್ ಇದನ್ನೇ ಮಾಡಿದ. ಹೀಗೆ ಮಾಡುತ್ತಲೇ ಕೊನೆಗೆ ಯುದ್ಧ ಆರಂಭವಾಯಿತು.

ಕೆಟ್ಟದಾದೀತು ಎಂದು ಭಯಪಟ್ಟ ವೇಳೆ ಮನುಷ್ಯನ ಜೀವ ನಡುಗುವುದು ಸಹಜ. ಕೆಟ್ಟದಾದೀತು ಎಂದು ಭಯ ಪಡುವುದೂ ಮನುಷ್ಯ ಪ್ರಾಣಿಗೆ ಸಹಜವೇ. ಈ ಭಯಕ್ಕೆ ಪರಿಹಾರ ದೈವವನ್ನು ಮರೆಹೊಗುವುದು.

ಕೆಟ್ಟದಾಗಿ ದೇವರನ್ನು ಮರೆಹೊಕ್ಕರೆ ಮೂಡುವ ಮನೋಧರ್ಮ ಭಯದಿಂದಲೇ ಮೂಡಬಹುದು.

ಯೋಚನಾಪರವಾದ ಜೀವ ಭಯ ತಾನಾಗಿ ಮೂಡಿದಾಗ ಅದರಿಂದ ಈ ಒಳ್ಳೆಯದನ್ನು ಪಡೆಯಬಹುದು.

ಜೊತೆಗೆ ಇಂಥ ಜೀವ ನಿಜದಲ್ಲಿ ಕಷ್ಟಪಡುತ್ತಿರುವವರನ್ನು ಕುರಿತು ಸಹಜವಾಗಿ ಮರುಕವನ್ನೂ ಪಡೆಯುತ್ತದೆ.

ಯಾವ ಜೀವನದಲ್ಲಿ ಒಂದು ಕೇಡು ಬರಲು ಯಾವ ಕಾರಣ ಇದ್ದವೋ ನಾವು ಹೇಳುವಂತಿಲ್ಲ. ಬೇರೆ ಜೀವನದ ಮಾತೇನು? ನಾವು

ನಮ್ಮ ನಮ್ಮ ಜೀವನದಲ್ಲಿ ಯಾವ ಯಾವ ಕಾರಣದಿಂದ ಯಾವ ಯಾವ ಪ್ರವೃತ್ತಿ ಉದಿಸಿತು ಎಂದು ಪ್ರಾಯಶಃ ತಿಳಿಯಲಾರೆವು. ಯಾವ ಸಣ್ಣ ತಪ್ಪಿನಿಂದ ಯಾವ ದೊಡ್ಡ ಕೇಡು ಒದಗಬಹುದು ಇದನ್ನು ಹೇಳಲಾಗುವುದಿಲ್ಲ. ಆದ್ದರಿಂದ ಮನುಷ್ಯನು ಸದಾ ಒಳ್ಳೆಯದನ್ನೆಣಿಸಬೇಕು, ಒಳ್ಳೆಯದನ್ನು ಬಯಸಬೇಕು, ಒಳ್ಳೆಯದನ್ನು ಆಡಬೇಕು. ಜೀವನದ ವಿಷಯ ನಮಗೆ ತಿಳಿವಳಿಕೆ ಸಾಲದೆ ಇರುವ ಈ ಸ್ಥಿತಿ, ಎಂದರೆ ನಮ್ಮ ಅಜ್ಞಾನ, ಹೀಗೆ ಒಳ್ಳೆಯ ಬಾಳಿಗೆ ಮೂಲ ಆಗಬಹುದು.

ಭಯವೇ ಇಲ್ಲದಿರುವುದೇನೋ ಒಳ್ಳೆಯ ಸ್ಥಿತಿಯೇ. ಆದರೆ ಭಯವಿಲ್ಲದ ಮನುಷ್ಯ ಧೂರ್ತನಾದಾನೆಂಬ ಶಂಕೆ ಉಂಟು.

ಭಯವಿರಬೇಕು, ಅದನ್ನು ಭಕ್ತಿ ಅಡಗಿಸಬೇಕು. ಭಯ ಮೂಡಿ ಮನುಷ್ಯ ದೈವವನ್ನು ಮರೆ ಹೊಗಲಾರದೆ ಹೋದರೆ ಬಾಳು ಹದಗೆಡುತ್ತದೆ. ಇದನ್ನೆ ಶಾಸ್ತ್ರ ಮೋಹವೆಂದು ಕರೆದಿರುವುದು. ಅತಿ ಮಮತೆ ಅಜ್ಞಾನ ಮೋಹದ ತಾಯಿತಂದೆ.

ದೇವರಿದಾನೆ ಕಾಯುತ್ತಿದಾನೆ ಎನ್ನುವುದು ಒಳ್ಳೆಯದು ಎನ್ನುವುದಕ್ಕೆ ಮುಖ್ಯಕಾರಣ ಆ ನಂಬಿಕೆ ಮನುಷ್ಯನನ್ನು ಈ ಸಂಕಟದಿಂದ ಪಾರು ಮಾಡವುದೇ.

ದೇವರಿರುವುದು ಕಾಯುತ್ತಿರುವುದು ನಿಜವಾದರೆ ಜನಕ್ಕೆ ಕಷ್ಟ ಒದಗುತ್ತಿರುವುದೇಕೆ?

ಇದಕ್ಕೆ ಉತ್ತರ ಕೊಡಲು ಅವಶ್ಯಕವಾದ ತಿಳುವಳಿಕೆ ಮನುಷ್ಯನಿಗಿಲ್ಲ. ವಸ್ತುಸ್ಥಿತಿಯಿಂದ ವಿಚಾರ ಮಾಡುವುದಾದರೆ ಇಷ್ಟು ಕಾರಣ ಗೊತ್ತಾಗುತ್ತದೆ: ನಮ್ಮ ಕಷ್ಟದಲ್ಲಿ ನಾವು ಧೃತಿಯನ್ನು ಬೆಳೆಸಿಕೊಳ್ಳಬೇಕು, ಮತ್ತೊಬ್ಬರ ಕಷ್ಟದಲ್ಲಿ ಮರುಕ ತೋರಬೇಕು, ಇದಕ್ಕಾಗಿ.

ಯಾವ ವಸ್ತುವಿಗೂ ಒಳ್ಳೆಯ ನೆನಪಿಗಿಂತ ಕೆಟ್ಟ ನೆನಪು ಹೆಚ್ಚು ಸುಲಭವಾಗಿ ಅಂಟುತ್ತದೆ. ದರ್ಭೆಯನ್ನು ಮದುವೆಯಲ್ಲೂ ಬಳಸುತ್ತಾರೆ;

ಸಾವಿನಲ್ಲೂ ಬಳಸುತ್ತಾರೆ. ಆದರೆ ಅದನ್ನು ನೆನೆಯುವ ಬಹು ಜನರಿಗೆ ಅದು ಮದುವೆಯಲ್ಲಿ ಉಪಯೋಗಕ್ಕೆ ಬರುವುದರ ನೆನಪು ಬರುವುದಿಲ್ಲ, ಸಾವಿನ ನೆನಪು ಮಾತ್ರ ಬರುತ್ತದೆ.

ಬಾಳಿನಲ್ಲಿ ತಪ್ಪು ನೆನಪಿಂದ ಹೀಗೆ ಅರುಚಿಯಾಗುವ ವಸ್ತು ಅನೇಕ. ವಿಚಾರದಿಂದ ಈ ಅರುಚಿಯನ್ನು ತಿದ್ದಿಕೊಳ್ಳುವುದು ಅವಶ್ಯವಾದ ಕೆಲಸ, ಮುಖ್ಯವಾದ ಕೆಲಸ

ತಿದ್ದಿಕೊಳ್ಳದೆ ಇದ್ದರೆ ನಷ್ಟವೇನು ಎನ್ನುವುದುಬೇಡ; ಕೆಟ್ಟ ನೆನಪಿನ ಕಾರಣದಿಂದ ಒಳ್ಳೆಯದನ್ನು ತೊರೆಯುವ ಮನೋಧರ್ಮ ಬಹುದೂರ ಮುಟ್ಟಬಹುದು; ಬಹು ಅನರ್ಥಕ್ಕೆ ಕಾರಣವಾಗಬಹುದು

ಕಳ್ಳರಿದಾರೆಂದು ಊರನ್ನು ಬಿಡುವುದೇ ? ಪಾಪವಿದೆ ಎಂದು ಲೋಕವನ್ನು ಬಿಡುವುದೇ ?

ಅರ್ಧ ಹೊತ್ತು ಕತ್ತಲ ಅಧೀನದಲ್ಲಿ ಇದ್ದಿತು ಎಂದು ಬೆಳಕು ಆಕಾಶ ವನ್ನು ಕೈಬಿಡುವುದೇ ?

ಮನುಷ್ಯನು ಬೆಳಕಿನ ಸೇವಕ; ಅವನು ಅದರ ಪ್ರಭುತ್ವವನ್ನು ಸ್ಥಿರ ಪಡಿಸಬೇಕು, ಹರಡಬೇಕು.

ಕತ್ತಲು ಆಕ್ರಮಿಸುವೆನೆಂಬ ಸ್ಥಳದಿಂದ ಅದನ್ನು ಹೊಡೆದಟ್ಟಿ ಅಲ್ಲಿ ಅವನ ಒಡೆಯನ ಪ್ರಭುತ್ವವನ್ನು ಸ್ಥಾಪಿಸಬೇಕು.

ಒಳ್ಳಿತಾಗಿ ನಡೆಯಲು ಸಂಕೋಚ ಪಡಬೇಡ.

ಈ ಮೊದಲ ತನ್ನ ಜೀವನವನ್ನು ಪರಿಶೀಲಿಸುವ ಯಾವನಿಗೂ ಎಂಥ ತಪ್ಪು ಮಾಡಿದೆನು ಎಂದು ಹತ್ತೊಮ್ಮೆ ಪರಿತಾಪವಾಗುತ್ತದೆ. ಮತ್ತೆ ಇದೇ ತಪ್ಪು ತನ್ನಿಂದಾದರೆ ಏನು ಗತಿ ಎನ್ನಿಸುತ್ತದೆ.

ಈ ಎರಡು ಪ್ರವೃತ್ತಿಯೂ ನಮ್ಮ ಸ್ವಭಾವದ ಒಳ್ಳೆಯ ಭಾಗಕ್ಕೆ ಸೇರಿದುವು.

ಹಿಂದಾದ ತಪ್ಪಿಗೆ ಮನ್ನಣೆ ಕೋರಬೇಕು; ಮುಂದೆ ತಪ್ಪಾಗದಂತೆ ಬೆಳಕನ್ನು ಶಕ್ತಿಯನ್ನು ಬೇಡಬೇಕು.

ಏನನ್ನು ಯಾರನ್ನು ಇದಕ್ಕಾಗಿ ಬೇಡೋಣ?

ಬೇರೆ ಯಾವುದು ಉಂಟೋ ಇಲ್ಲವೋ, ನಮ್ಮ ಮನಸ್ಸಿನಲ್ಲೇ ಆಶೆ ಒಂದುಂಟಷ್ಟೆ? ಒಂದು ಎತ್ತರದ ಕಲ್ಪನೆ ಉಂಟಷ್ಟೆ?

ನಾನು ಈ ಗೆರೆಯನ್ನು ಮುಟ್ಟಬೇಕು ಎಂಬ ಬಯಕೆ ಮನಸ್ಸಿನಲ್ಲಿ ಮೂಡಲಿ; ಅದರಿಂದ ಬಾಳು ಮೇಲಕ್ಕೇಳುತ್ತದೆ.

ದೈವ ಎನ್ನುವುದು ಬೇರೆ ಏನೋ ಅಲ್ಲ; ಎಲ್ಲ ಚೇತನವನ್ನೂ ಆಕರ್ಷಿಸುತ್ತಿರುವ ಅತ್ಯುನ್ನತ ಸೌಜನ್ಯ, ಅತ್ಯುನ್ನತ ಸದ್ಗುಣ.

ನೆನೆದಷ್ಟು ಇದು ನಿಜವಾಗುತ್ತದೆ. ನಿಜವಾದಷ್ಟು ಒಂದು ವ್ಯಕ್ತಿಯಾಗುತ್ತದೆ.

ಆ ವ್ಯಕ್ತಿ ನಮ್ಮ ಕುಂದು ಕೊರತೆಗಳ ಸೋಂಕಿಲ್ಲದ ನಮ್ಮ ಸುಸ್ವಪ್ನದ ಘನ ವಿಗ್ರಹವಾಗುತ್ತದೆ. ಒಳ್ಳೆಯ ಬಾಳಿಗೆ ಬೇಕೆಂದ ಶಕ್ತಿಯನ್ನು ಕೊಡುತ್ತಾ ಸದಾ ಜೊತೆಗಿದ್ದು ಕಾಯುತ್ತದೆ.

"ನಂಬಿ ಕೆಟ್ಟವರಿಲ್ಲವೋ ಒಳ್ಳೆಯದನು ನಂಬದೆ ಕೆಟ್ಟರೆ ಕೆಡಲಿ."

ಹಾಡಿನಲ್ಲಿ ರಂಗಯ್ಯನ ಎಂದಿದೆ: ಇಲ್ಲಿ ಒಳ್ಳೆಯದನು ಎಂದಿದೆ. ನಾವು ಒಳ್ಳಿತನ್ನು ಬಯಸುವರಾದರೆ ನಮ್ಮ ಹೃದಯರಂಗದ ಅಯ್ಯ ಒಳ್ಳೆಯದರ ಆಕರವಾಗುತ್ತಾನೆ.

ಕಾಪಾಡು ಎಂದು ಕೂಗಿದವರೆಲ್ಲ ಬದುಕಿಕೊಂಡರೆ ಎನ್ನಬೇಡ. ಕೂಗು ಎದೆಯಾಳದಿಂದ ಬಂದಿದ್ದರೆ ಅದರ ಜೊತೆಗೆ ಬದುಕಬೇಕೆಂಬ ಬಯಕೆಯೂ ಮೂಡಿರುತ್ತದೆ. ಅದು ತೀವ್ರವಾದಷ್ಟೂ ಮನುಷ್ಯನ ಸಾಧನೆ ಬಲಪಟ್ಟಿರುತ್ತದೆ. ಸಾಧನೆ ಬಲವಾದಷ್ಟೂ ಸಿದ್ಧಿ ಹತ್ತಿರಬಂದಿರುತ್ತದೆ.

ಈ ಮೊದಲ ಬಾಳನ್ನು ಪರಿಶೀಲಿಸಿ ನಾವು ಸೋತ ಸಂದರ್ಭಗಳನ್ನು

ನೆನೆದು ನಾವು ಧೈರ್ಯಗೆಡಬಾರದು. ನಮ್ಮ ಮೈ, ನಮ್ಮ ಮನಸ್ಸು, ನಮ್ಮ ಬುದ್ಧಿ ಸ್ವಭಾವಗಳಿಗೆ, ಒಂದೊಂದು ಮಿತಿಯುಂಟು. ಇವುಗಳ ಯೋಗ್ಯತೆ ಇಷ್ಟೇ ಎಂದು ನಾವು ತಿಳಿಯಬೇಕು; ಆ ಮಿತಿಗಳನ್ನು ತಾಳ್ಮೆಯಿಂದ ಒಪ್ಪಿ ಕೊಳ್ಳಬೇಕು; ಅವನ್ನು ಹಿಗ್ಗಾ ಮುಗ್ಗ ಎಳೆಯದೆ ಉಪಾಯದಿಂದ ನಡೆಸಿ ಕೊಳ್ಳಬೇಕು.

ಕುದುರೆ ಏರುತ್ತಿದ್ದ ದಿನದಲ್ಲಿ ನಾನು ಆ ಪ್ರಾಣಿ ದಾರಿಯಲ್ಲಿ ಬಿದ್ದ ಯಾವುದೇ ಇಷ್ಟು ಸೊಪ್ಪಿಗೆ ಸೆಗಣಿಗೆ ಅಳುಕಿ ಹಿಂಜರಿದುದನ್ನು ನೋಡಿದ್ದುಂಟು. ಇಂಥ ವೇಳೆ ಕುದುರೆಯನ್ನು ಗದರುವುದು ಹೊಡೆಯುವುದು ವಿವೇಕವಲ್ಲ ಅದಕ್ಕೆ ಸಮಾಧಾನ ಹೇಳಿ ಅದು ಅಂಜಿದ ಆ ಪದಾರ್ಥ ಹಾವಲ್ಲ ಹುಳುವಲ್ಲ, ಇಷ್ಟು ಸೊಪ್ಪು ಇಷ್ಟು ಸೆಗಣಿ, ಎಂದು ತೋರಿಸಿದರೆ ಕುದುರೆ ತಿಳಿದುಕೊಳ್ಳುತ್ತದೆ, ಸಮಾಧಾನಕ್ಕೆ ಬರುತ್ತದೆ. ನಮ್ಮ ಮನಸ್ಸು ಈ ಕುದುರೆಯಂಥ ಒಂದು ವಸ್ತು. ಅಂಜಿತು ಎಂದು ಬೆದರಿತು ಎಂದು ಅದರ ಮೇಲೆ ಕೋಪಬೇಡ: ಅದಕ್ಕೆ ಸಮಾಧಾನ ಹೇಳಿ ಅಂಜಿಕೆಯನ್ನು ಬೆದರಿಕೆ ಯನ್ನು ಬಿಡಿಸುವುದು ಸಾಧ್ಯ; ಬಿಡಿಸುವುದೇ ಸರಿ.

ಮೈಯ ಮಾತೂ ಇಷ್ಟೆ.

ಮನಸ್ಸಿನ ಮಾತೂ ಇಷ್ಟೇ.

ಇವು ಯಾವುದರಿಂದ ತೊಂದರೆ ಪಡುತ್ತವೆ ಭಯಪಡುತ್ತವೆ ಎನ್ನುವು ದನ್ನು ತಿಳಿದು ಪರಿಶೀಲಿಸಿ ಮತ್ತೆ ಆ ತೊಂದರೆ ಪಡದಂತೆ ಆ ಅಂಜಿಕೆ ಬಾರದಂತೆ ಇವನ್ನು ನಡೆಸಿಕೊಳ್ಳಬೇಕು.

ಸದಾ ಬೀದಿಯಲ್ಲಿ ಒಬ್ಬರೊಡನೊಬ್ಬರು ಆಡಿಕೊಳ್ಳುತ್ತಿರುವ ಮಾತು ಕೇಳುವುದಕ್ಕೆ ಎಷ್ಟು ಚೆನ್ನಾಗಿರುತ್ತದೆ! ಇದರ ರುಚಿಯನ್ನು ಬಲ್ಲವನು ಒಂದು ನಾಟಕವನ್ನು ನೋಡಲು ಬಯಸಲಾರನು.

ನಿಜದಲ್ಲಿ ನಾಟಕವನ್ನು ರಚಿಸುವವರು ತಾವು ಕೇಳುವ ಇಂಥ

ನೂರು ಮಾತಿನಲ್ಲಿ ಹತ್ತು ಮಾತನ್ನು ಪೋಣಿಸಿ ಒಂದು ನಾಟಕವನ್ನು ಮಾಡುತ್ತಾರೆ.

ಮಾತಷ್ಟೇ ಅಲ್ಲ ನಟನವೂ ಅಷ್ಟೇ. ರಂಗದಲ್ಲಿ ತಾದಾತ್ಮ್ಯವೆನ್ನುವುದು ಸಿದ್ಧಿಸುವುದು ಬಹು ಒಳ್ಳೆಯ ನಟನಿಗೆ, ಕೆಲವು ವೇಳೆ. ಬೀದಿಯ ನಾಟಕದಲ್ಲಿ ನಟನ ತಾದಾತ್ಮ್ಯದಲ್ಲಿ ಕೃತಕತೆಯ ಸೋಂಕಿಲ್ಲ: ಇಲ್ಲಿ ಜೀವ ತಾನೆ ಆಟವಾಡುತ್ತದೆ.

ಮನುಷ್ಯನು ಅನೇಕ ವೇಳೆ ಇರುವ ಕಷ್ಟಸಾಲದು ಎಂಬಂತೆ ಇಲ್ಲದ ಕಷ್ಟವನ್ನು ಊಹಿಸಿ ಭಯಪಡುತ್ತಾನೆ.

ಇದು ತಪ್ಪಲ್ಲ: ಇದೇ ಹಿರಿಯರು ದುಃಖದೋಷಗಳ ಅನುದರ್ಶನ ಎಂದು ಕರೆದಿರುವ ಪ್ರವೃತ್ತಿ.

ಸಂಸಾರದಲ್ಲಿ ಬೇರೆಯವರಿಗೆ ಒದಗಿರುವ ಯಾವುದೇ ಕಷ್ಟ ನಮಗಾದರೂ ಒದಗಬಹುದು.

ಸಾಧ್ಯವಾದ ಕಷ್ಟವೆಲ್ಲಾ ಎಲ್ಲರಿಗೂ ಒದಗಿದ್ದರೆ ಲೋಕ ಉಳಿಯುತ್ತಿರಲಿಲ್ಲ. ಪ್ರತಿ ಪಕ್ಷದ ಜನರನ್ನು ಕೊಲ್ಲಬೇಕೆಂದೇ ಏರ್ಪಟ್ಟಿರುವ ಯುದ್ಧದಲ್ಲಿ ಕೂಡ ಯಾವ ಪಕ್ಷದ ಸೈನಿಕರೂ ಎಲ್ಲರೂ ಸಾಯುವುದಿಲ್ಲ.

ಯಾವ ಕಷ್ಟವೂ ಸಾಧ್ಯವಾದ ಜೀವನ ಪಥದಲ್ಲಿ ಅನೇಕ ಕಷ್ಟಗಳಿಂದ ತಪ್ಪಿಸಿಕೊಂಡು ಕೆಲವನ್ನು ಮಾತ್ರ ಅನುಭವಿಸುತ್ತ ಒಬ್ಬೊಬ್ಬರೂ ನಾವು ನಡೆಯುತ್ತಿದ್ದೇವೆ.

ಹೀಗೆ ಜೀವನವನ್ನು ನಡೆಸುತ್ತಿರುವ ಕ್ರಮ, ತತ್ವ, ಶಕ್ತಿ, ಯಾವುದೋ ಒಂದಿದೆ. ಇದನ್ನೇ ದೈವ ಎಂದು ಬಲ್ಲ ಜನ ಕರೆದಿರುವರು.

ಯಾವ ಕ್ಷಣದಲ್ಲೂ ನೀನು ಹೀಗೆಂದುಕೋ: ಇದುವರೆಗೆ ಎಷ್ಟೋ ಕಷ್ಟದಿಂದ ಪಾರುಮಾಡಿ ಕರೆದು ತಂದಿರುವ ಸತ್ವ, ತತ್ವ, ಶಕ್ತಿ ಮುಂದಾದರೂ ನನ್ನನ್ನು ನೋಡಿಕೊಳ್ಳಬೇಕು.

ಮಗುವಿಗೆ ಕನಸು ಎಚ್ಚರದ ವಿವೇಚನೆ ಇರುವುದಿಲ್ಲ. ಮಗು ಈ

ದಿನ ಬೆಳಗಾಗ ಎದ್ದು ತಾನು ರಾತ್ರಿ ಶಾಲೆಗೆ ಹೋಗಿದ್ದೆ ಎಂದು ಹೇಳಿದ. ಶಾಲೆಗೆ ಹೋಗಿದ್ದಂತೆ ಕಂಡ ಕನಸು ಅವನಿಗೆ ನಿಜವೇ ಆಗಿದ್ದಿತು.

ಮನೆಯವರು ಅವನಿಗೆ, ಅದು ಕನಸು, ನಿಜವಲ್ಲ, ಎಂದು ಹೇಳಿ ಕೊಟ್ಟರು. ತನ್ನ ಅನುಭವ ಆ ಅನುಭವದ ಇತರ ಪಾತ್ರಗಳಿಗೆ ಅನುಭವ ಅಲ್ಲದೆ ಇರುವ ಸ್ಥಿತಿ ಕನಸು ಎಂದು ಮನುಷ್ಯ ಹೀಗೆ ಕಲಿಯುತ್ತಾನೆ.

ಮಗು ತನಗೆ ಕಲ್ಕತೆಯಲ್ಲಿ ಒಂದು ಮನೆ ಇದೆ ಎಂದು ಹೇಳಿದ. ಅದು ಹೇಗಿದೆ ಎಂದು ಕೇಳಿದರೆ ವರ್ಣಿಸಿದ. ವರ್ಣನೆಯ ಒಂದೊಂದು ವಿವರವೂ ಗವಿಪುರದ ವಿಸ್ತರಣದಲ್ಲಿ ಅವನು ಈಗ ಬೆಳೆಯುತ್ತಿರುವ ಮನೆಯದು.

ನಾವು ಸ್ವರ್ಗವನ್ನು ಕುರಿತು ರಚಿಸುವ ವರ್ಣನೆಗಳು ಇಂಥವೇ ಎಂದು ನನಗೆ ತೋರುತ್ತದೆ.

ಬೆಳಗಾಗ ಮಕ್ಕಳಿಬ್ಬರೂ ಪೊಪ್ಪಾಯಿ ಮರದ ಬುಡದಲ್ಲಿ ನಿಂತಿದ್ದರು. ಏಕೆ ಎಂದು ನಾನು ಕೇಳಿದೆ. ಹುಡುಗ, ಹಣ್ಣಿಗಾಗಿ, ಎಂದ. ಮರದಲ್ಲಿ ಹಣ್ಣಿರಲಿಲ್ಲ: ಅವನಿಗೆ ಅದು ಸಂಗತಿಯೇ ಅಲ್ಲ. ಮರ ಉಂಟು, ತಾನುಂಟು; ಹಣ್ಣಿಲ್ಲದೆ ಉಂಟೇ?

ನಾವು ಜೀವನದಲ್ಲಿ ಒಳ್ಳೆಯದನ್ನು ಬಯಸುವುದು ಹೀಗೆಯೇ. ಅದಕ್ಕಾಗಿ ದುಡಿಯ ಬೇಡ, ಅದಕ್ಕಾಗಿ ಕಾಯಬೇಡ. ಜೀವನ ಇದೆ, ನಾವಿದೇವೆ; ಒಳ್ಳಿತು ಆಗಬೇಕು.

ಹುಡುಗರಿಬ್ಬರೂ ಮನೆಯೊಳಕ್ಕೆ ಓಡಿದರು; ನಾನು ಮುಂದು ತಾನು ಮುಂದು. ಇದರಲ್ಲಿ ಹಿರಿಯ ಮುಂದಾದ; ಆ ಪ್ರಯತ್ನದಲ್ಲಿ ಕಿರಿಯನನ್ನು ಕೆಳಕ್ಕೆ ತಳ್ಳಿದ. ನಾನು ಅವನಿಗೆ, ನೀನು ಅಣ್ಣ, ಅವನೊಂದಿಗೆ ಪೋಟಿ ಮಾಡಬಾರದು, ಎಂದೆ. ಅವನು, ನಾಳೆಯಿಂದ ಮಾಡುವುದಿಲ್ಲ, ನಾನು ಮುಂದೆಯೇ ಇರುತ್ತೇನೆ, ಎಂದ.

ಬೀದಿಯಲ್ಲಿ ಮನೆಯಲ್ಲಿ ಎಲ್ಲ ಕಡೆಯೂ ಒಂದೆ ಪ್ರಶ್ನೆ: ನಾನು ಮಂತ್ರಿಯಾಗುತ್ತೇನೆಯೇ ಎಂದು. ಆಗುತ್ತೇನೆಯೋ ಇಲ್ಲವೋ ನನಗೇ ತಿಳಿಯದು. ಬಹು ಜನ ತಾವು ಈ ವಿಷಯ ಬಹಳ ಚಿಂತೆ ಎಂದು ಹೇಳುತ್ತಿದ್ದಾರೆ. ನನಗಾದರೂ ಚಿಂತೆ ಉಂಟು. ಮಂತ್ರಿಯಾದೆನೇ ಸಂತೋಷ; ಆಗಲಿಲ್ಲ ಅಷ್ಟೇ ಸಂತೋಷ, ಇಲ್ಲ ಸಮಾಧಾನ, ಇರಬೇಕು. ಕೊಡುವನು ದೇವರು, ಬೇಡ ಎನ್ನುವನು ದೇವರು; ಎರಡು ರೀತಿಯಲ್ಲೂ ದೇವರು ನನ್ನನ್ನು ಕಾಯುತ್ತಿದ್ದಾನೆ.

ಈ ಮೊದಲು ನಾನು ಬಯಸಿದ ಏನೋ ನನಗೆ ದೊರೆಯದೆ ಇದ್ದಾಗ ಅದು ಒಳ್ಳಿತೇ ಆಯಿತೆಂದು ನನ್ನ ಮನಸ್ಸು ಕಂಡದ್ದುಂಟು. ಈಗ ಏನಾದರೊಂದು ಬಯಕೆ ಕೈಗೂಡದಿದ್ದರೆ ಅದೂ ನನ್ನ ಒಳ್ಳಿತಕ್ಕಾಗಿ ಎನ್ನುವುದನ್ನು ನನ್ನಮನ ಕಾಣಬೇಕು.

ಏನಾದರೂ ಸರಿಯೇ, ಅದು ದೇವರ ಕೃಪೆ, ಎಂಬ ನಿಲುವು ನನ್ನ ಜೀವನದಲ್ಲಿ ದೃಢವಾಗಬೇಕು.

ಬಾರದ ಕಷ್ಟವನ್ನು ಊಹಿಸಿ ಅದರಿಂದ ಬಳಲುವುದು ಬೇಡ: ಇರುವುದೇನು ನೋಡು; ಅದನ್ನು ಹಿಡಿದು ನಡೆ.

ಹಿರಿಯರು ಮಾತಿಗೆ ಮೊದಲು 'ಓಂ' ಎನ್ನುತ್ತಿದ್ದರು. 'ಓಂ' ಎಂದರೆ ಇರುವ ಸಂಗತಿ, ಅನುಭವದ ಸತ್ಯ. The Everlasting Yea.

ಇರುವ ಸ್ಥಿತಿಯನ್ನು ಮನದಟ್ಟು ಮಾಡಿಕೊ; ಅಲಸದೆ, ಅಳುಕದೆ, ಅಲ್ಲಿಂದ ಮುಂದಕ್ಕೆ ಅಡಿ ಇಡು.

ಒಂದು ಸಂಗತಿಯನ್ನು ಮರೆಯುವುದು ಬೇಡ: ಜೀವನ ನೀನು ಗಳಿಸಿದ ವಸ್ತು ಅಲ್ಲ, ನಿನಗೆ ದೊರಕಿದ ವಸ್ತು.

ಅಥವಾ ನೀನೇ ಅದಕ್ಕೆ ದೊರಕಿದ್ದೀಯೆ. ಅದು ನಿನ್ನನ್ನು ನಡಸುತ್ತಿದೆ.

ಅದನ್ನು ನಂಬಿ ನಡೆ; ಅದು ನಿನ್ನನ್ನು ನೋಡಿಕೊಳ್ಳುತ್ತದೆ. ನಿನ್ನ ಭುಜದ ಮೇಲೆ ನೀನೇ ಏರುವ ಯತ್ನ ಮಾಡಬೇಡ.

ಇರುವ ಸ್ಥಿತಿಯಿಂದ ಮುಂದಕ್ಕೆ, ಮೇಲಕ್ಕೆ, ಹೋಗುವುದು ಜೀವನಕ್ಕೆ ಒಂದು ಉದ್ದೇಶವನ್ನು ಒದಗಿಸುತ್ತದೆ, ಅರ್ಥವನ್ನು ಕಲ್ಪಿಸುತ್ತದೆ. ಬಾಳು ಚೆನ್ನವಾಗಲಿ; ಬಾಳು ಸಫಲವಾಗಲಿ; ಉದ್ಧಾರ ವಾಗಲಿ; ಯತ್ನಮಾಡು.

ಬಾಳು ಎನ್ನುವುದು ಏನು? ಇಷ್ಟು ಯೋಚನೆ, ಇಷ್ಟು ಮಾತು, ಇಷ್ಟು ಕೆಲಸ. ಯೋಚನೆಯನ್ನು ಚೆನ್ನ ಮಾಡು, ಮಾತು ಚೆನ್ನವಾಗಲಿ: ಚೆನ್ನವಾದ ಕೆಲಸ ಯಾವುದು ಅದನ್ನು ಮಾಡತೊಡಗು.

ಈಗ ಇದನ್ನು ನೀನು ಮಾಡತೊಡಗಿದರೆ ಹಿಂದೆ ಆದ ತಪ್ಪೆಲ್ಲ ಇದರಿಂದ ಅಳಿಯುತ್ತದೆ: ಮುಂದೆ ಏನೇ ಬಂದರೂ ನಿನಗೆ ಕೇಡಿಲ್ಲ.

ಈ ಮನೋಧರ್ಮ ದೃಢವಾದರೆ ಮುಂದಿನ ಜೀವನವನ್ನು ಕುರಿತು ಚಿಂತೆ ಅಳಿಯಿತು.

ಈ ಚಿಂತೆ ಎನ್ನುವುದು ಕೂಡ ಮನಸ್ಸಿಗೆ ಒಂದು ವಾಡಿಕೆ ಹೊರತು ಬೇರೆಯಿಲ್ಲ. ಚಿಂತೆ ಮಾಡಿ ಮಾಡಿ ಮನಸ್ಸು ಚಿಂತಿಸುವುದೇ ದೊಡ್ಡ ಕೆಲಸ ಎಂಬಂತೆ ವರ್ತಿಸುತ್ತದೆ. ಜೊತೆಗೆ ಆರೋಗ್ಯ ಸ್ವಲ್ಪ ಕೆಟ್ಟಿದ್ದರೆ ಶಕ್ತಿ ಸ್ವಲ್ಪ ಕುಗ್ಗಿದ್ದರೆ ಎಲ್ಲಕ್ಕೂ ಮೊದಲು ಮನಸ್ಸು ಚಿಂತೆಯನ್ನು ಕಟ್ಟಿಕೊಳ್ಳುತ್ತದೆ.

ಚಿಂತೆ ವ್ಯರ್ಥ ಎಂದು ಮನುಷ್ಯ ಮನಗಾಣಬೇಕು. ತನ್ನಿಂದಾದರೆ ಅದನ್ನು ಒದರಬೇಕು, ಅದರಿಂದ ಬಿಡಿಸಿಕೊಳ್ಳಬೇಕು. ಆಗಲಿಲ್ಲ: ಇದ ರಿಂದ ನನ್ನನ್ನು ಬಿಡಿಸಿ ಕಾಪಾಡು ಎಂದು ದೇವರಲ್ಲಿ ಮೊರೆಯಿಡಬೇಕು.

ನಮ್ಮ ಸ್ವಭಾವದ ಆಳದಲ್ಲಿ ಅಡಗಿ ನಮ್ಮ ಕಾಲನ್ನು ಹಿಡಿಯುವ ಮೊಸಳೆ ಚಿಂತೆ. ಅದಕ್ಕೂ ಆಳದಲ್ಲಿ ಮತ್ತಷ್ಟು ಮರೆಯಲ್ಲಿ ಅಡಗಿದ್ದು ನಾವು ಮೊರೆದಾಗ ಧಾವಿಸಿ ಬಂದು ಕಾಯುವ ಬಂಧು ದೈವ.

ಚಿಂತೆಯನ್ನು ಹೀಗೆ ಗೆದ್ದ ಮೇಲೆ ಅದು ಬಂದಿತೇಕೆ ಎಂದು ಯೋಚಿಸ ಬಹುದು, ಅದರ ಸ್ವರೂಪವನ್ನು ತಿಳಿಯಬಹುದು. ಇಂಥ ವಿಚಾರದಿಂದ ಮನುಷ್ಯನಿಗೆ ತಾನು ನಡೆದ ದಾರಿಯ ಅರಿವು ಬರುತ್ತದೆ; ತನ್ನನ್ನು ದೈವ ಕಾದಿರುವುದು ಮನತಟ್ಟುತ್ತದೆ.

ಜೀವನವನ್ನು ಕುರಿತ ವಿಚಾರ ಸಾಧು ಎನ್ನಿಸುವುದು ಇದರಿಂದ. ಇದರ ಮಿತಿಯನ್ನು ಮರೆತು ಮಾಡುವ ವಿಚಾರ ಶುಷ್ಕವಾಗುತ್ತದೆ.

ಚಿಂತೆ ಹೀಗೆ ದೈವಭಕ್ತಿಗೆ ಪ್ರೇರಕವಾಗಬಹುದು. ಜೀವನದ ಯಾವ ಅಧಃ ಪ್ರವೃತ್ತಿಯೂ ಇದೇ ರೀತಿಯಲ್ಲಿ ನಾವು ದೇವರ ಕಡೆ ತಿರುಗುವ ಕಾರಣವಾಗಬಹುದು.

ಜೀವನ ಒಂದು ಗರಡಿ: ನಮ್ಮ ಜಟ್ಟಿ ನಮಗೆ ಪಟ್ಟುಗಳನ್ನು ಕಲಿಸುತ್ತಿದ್ದಾನೆ. ಬಿದ್ದೇನೆಂಬ ಭಯ, ಬೀಳುತ್ತಿದ್ದೇನೆಂಬ ಅರಿವು, ಬಿದ್ದೆನೆಂಬ ದುಃಖ, ಇದೆಲ್ಲ ನಾವು ಗುರುವಿನಿಂದ ಪಾಠ ಕಲಿಯುತ್ತಿರುವ ಕ್ರಮ. ಬಿದ್ದದ್ದು ತಪ್ಪಲ್ಲ; ಎದ್ದು ನಿಲ್ಲು. ಮರಳಿ ಬೀಳುವುದಿಲ್ಲ ಎಂದು ನಿಶ್ಚಯಿಸಿಕೊ. ನಿನ್ನ ಗುರು ನಿನ್ನ ನಿಶ್ಚಯವನ್ನು ಮೆಚ್ಚುತ್ತಾನೆ; ಅದನ್ನು ಸಾಧಿಸಲು ನಿನಗೆ ನೆರವಾಗುತ್ತಾನೆ.

ಸಾಗರದಲ್ಲಿ ನೀರು ಹೆಪ್ಪುಗಟ್ಟಿ ಖಂಡಗಳಾಗಿ ಪರ್ವತಾಕಾರವಾಗಿ ಬಹು ದೂರ ತೇಲಿ ಬರುತ್ತದಂತೆ. ನಮ್ಮ ಒಂದೊಂದು ಚೇತನ ಆತ್ಮದ ಸಾಗರದಲ್ಲಿ ಆತ್ಮ ಹೆಪ್ಪುಗಟ್ಟಿ ಖಂಡವಾಗಿ ತೇಲುತ್ತ ಬಂದಿರುವ ಒಂದು ತುಂಡು.

ನಮ್ಮ ಮೈ ಈ ತುಂಡಿನ ದೃಷ್ಟಭಾಗ; ಆತ್ಮ ಸಾಗರದ ಒಳಗೆ ಅಡಗಿ ಕಾಣದೆ ಇರುವ ಭಾಗ.

ಖಂಡವಾಗಿ ಕಾಣುವ ಈ ನಾನು ನಾನು ಎಂಬ ಜೀವಗಳನ್ನು ತನ್ನ ವಕ್ಷದ ಮೇಲೆ ಆಡಿಸಿಕೊಂಡು ಸದಾ ಆವರಿಸಿ ಸದಾ ರಕ್ಷಿಸುತ್ತ ಇದೆ ಅನಂತವಾದ ಅಚಿಂತ್ಯವಾದ ಪರಮಾತ್ಮ ತತ್ತ್ವ.

ಹೊರಗೆ ಕಾಣುವ ನಾನು ಎಷ್ಟಿದೆ ಅಷ್ಟೇ ನಾವು ಎಂದುಕೊಂಡಾಗ ನಾವು ನಮ್ಮ ಸ್ವರೂಪವನ್ನು ಮರೆತಿದ್ದೇವೆ. ನಮಗೇ ಕಾಣದೆ ನಮ್ಮದೆಂಬ ಬಾಳುವೆ ಬಹಳ ಉಂಟು; ಅದನ್ನು ಕಾಯುವ ಅನಂತ ಜೀವನ ಒಂದು ಅದರಡಿಗೆ ಉಂಟು, ಅದರ ಸುತ್ತ ಉಂಟು.

ಅನಂತಸಾಗರದ ಆ ವಾತ್ಸ ವಕ್ಷದಿಂದ ನಮ್ಮ ಜೀವನ ಸರ್ವಸ್ವ ಉದಿಸಿದೆ. ನಾನು ಎಂಬಲ್ಲಿ ನಾವು ಗ್ರಹಿಸುವ ಸಮಸ್ತ ಅಂಗ ಉಪಾಂಗ ಗಳ ವ್ಯಕ್ತಿತ್ವ ಅದರಿಂದ ಬೆಳೆದಿದೆ.

ಅಚಿಂತ್ಯ ಅನಂತ ಪರಮಾತ್ಮ ತತ್ವ ನಮ್ಮ ಬಾಳನ್ನು ತನ್ನಂತೆ ಚೆನ್ನ ಮಾಡಲು ಬಯಸಿದೆ. ಇದನ್ನರಿತು ನಾವು ಕ್ಷಣ ಅನುಕ್ಷಣ ಅದಕ್ಕೆ, ನಿನ್ನಿಚ್ಛೆ ನಡೆಯಲಿ, ಈ ಬಾಳನ್ನು ಚೆನ್ನ ಮಾಡು, ಎಂದು ಹೇಳಬೇಕು; ಆ ಇಚ್ಛೆಗೆ ಮನಬಾಗಬೇಕು; ಜೀವನದ ಉದ್ಧಾರಕ ಶಕ್ತಿಯೊಂದಿಗೆ ಸಹಕರಿಸಬೇಕು.

ನಾವು ಎನ್ನುವುದು ನಮ್ಮದೆನ್ನುವುದು ಅದರ ಎದುರಿಗೆ ತೀರ ಅಲ್ಪ ನಮ್ಮ ಈ ಅಲ್ಪ ಶಕ್ತಿಯಿಂದ ನಾವು ಬದುಕುತ್ತೇವೆ ಎನ್ನುವುದು ಬೇಡ ಇರುವ ಆ ಅಲ್ಪವೂ ದೈವದಿಂದ ಬಂದದ್ದು. ಅದಷ್ಟೇ ಸಾಕು ಎಂದು ನಾವು ದೇವರೊಂದಿಗೆ ಭಾಗ ಮಾಡಿಕೊಳ್ಳಲಾಗದು.

ಭಾಗ ಮಾಡಿಕೊಂಡರೆ ನಮ್ಮ ಪಾಲಿಗೆ ಬರುವುದು ಬಹಳ ಸ್ವಲ್ಪ. ತಂದೆಯೊಂದಿಗೆ ಬಾಳಿದರೆ ಅವನ ಆಸ್ತಿಯೆಲ್ಲ ನಮಗೆ ಉಂಟು.

ಅವನೋ ತನಗಾಗಿ ಇದು ಯಾವುದನ್ನೂ ಬಯಸುವುದಿಲ್ಲ; ಎಲ್ಲ ಆಸ್ತಿಯನ್ನೂ ನಮ್ಮ ಸಲುವಾಗಿ ಕಾದಿದ್ದಾನೆ.

ಆದರೆ ಒಂದು ಸಂಗತಿ ನೆನಪಿರಬೇಕು: ತಂದೆಯ ಜೊತೆಗಿರುವ ಮಕ್ಕಳು ಒಬ್ಬೊಬ್ಬರೂ ಉಳಿದ ಮಕ್ಕಳ ಹಿತವನ್ನು ಕಾಯಬೇಕು.

ಸತ್ಯವಂತ ದೈವದೊಂದಿಗೆ ಸಹಕರಿಸುತ್ತಾನೆ, ಸೃಷ್ಟಿಯ ಹಿತವನ್ನು ಸಾಧಿಸುತ್ತಾನೆ; ಹಾಗೆ ಮಾಡುವುದರಲ್ಲಿ ತನ್ನ ಸುಖವನ್ನು ಕಾಣುತ್ತಾನೆ.

ಹೀಗೆ ಮಾಡದವನು ಬಹು ಬೇಗನೆ ತನಗೆ ಸ್ವಾರ್ಥವನ್ನು ಸಾಧಿಸು ವುದಕ್ಕೂ ಶಕ್ತಿ ಇಲ್ಲದ್ದನ್ನು ಕಂಡುಕೊಳ್ಳುತ್ತಾನೆ.

ಗೆಳೆಯರು ತಾವು ಜೀವನದಲ್ಲಿ ಪರಾವಲಂಬಿ ಆದೆನೆಂದು ಸಂಕೋಚ

ಸೂಚಿಸಿದಾಗ, ಪರಾವಲಂಬನವೇ ಬದುಕುವ ದಾರಿ, ಪರಾವಲಂಬಿಯಾಗದವನು ಕೆಟ್ಟ, ಎಂದು ನಾನು ಹೇಳಿದೆನಂತೆ. ಕಿರಿಯ ಗೆಳೆಯ ನನಗೆ ಇದನ್ನು ನೆನಪು ಮಾಡಿಕೊಟ್ಟರು.

ನಾನು, ನನಗೊಂದು ಅವಲಂಬನ, ಎಂಬ ಮಾತು ಎಲ್ಲಿ ಬಂದರೆ ಅಲ್ಲಿ ಇರುವುದು ಎರಡೇ ವಸ್ತು: ನಾನು ನನ್ನ ದೇವರು.

ದೇವರಿಗೆ ಭಾರವಾದೆನೆಂದು ಯಾರು ಸಂಕೋಚ ಪಡಬೇಕು? ಏಕೆ ಸಂಕೋಚ? ತಾನು ಪರಾವಲಂಬಿ ಎನ್ನುವುದನ್ನು ಯಾವುದೇ ಕಾರಣದಿಂದ ತಿಳಿದುಕೊಂಡವನು ಉದ್ಧಾರವಾದ.

ಯಾವುದೇ ಕಾರಣ, ಎಂದರೆ, ರೋಗ, ವಿಚಾರ ಪರತೆ, ಏನೋ ಒಂದು ಭಯ; ಇದು ಮೂರೂ ಅಲ್ಲದಿದ್ದರೆ ಸಮೀಚೀನವಾದ ತಿಳುವಳಿಕೆ.

ಗೀತೆ ಈ ಸಂದರ್ಭದಲ್ಲೇ ಆರ್ತ ಜಿಜ್ಞಾಸು ಅರ್ಥಾರ್ಥಿ ಜ್ಞಾನಿ ಎಂಬ ಪದಗಳನ್ನು ಬಳಸಿರುವುದು.

ನಿನಗಾಗಲಿ ಬೇರೆ ಯಾರಿಗಾಗಲಿ ಕಷ್ಟ ಬಂದ ಹೊತ್ತಿನಲ್ಲಿ ದೈವ ಜೊತೆಗಿದೆ ಎನ್ನುವುದನ್ನು ನೆನಪಿನಲ್ಲಿಡು. ಏಹುದ್ಯ ಭಕ್ತ ಹೇಳಿದಂತೆ Underneath are the Everlasting Arms.

ಎಲ್ಲ ಭಕ್ತರೂ ಇದನ್ನು ಕಂಡಿದ್ದಾರೆ. ನಿನಗೂ ಇದು ಕಂಡಿತೇ ಸಮ; ಕಾಣಲಿಲ್ಲ, ಬಲ್ಲವರು ಕಂಡದ್ದನ್ನು ನಂಬಿ ಬಾಳು.

ಏಹುದ್ಯರ ಇಂಥದೇ ಇನ್ನೊಂದು ಮಾತು Though He slay me yet shall I trust in Him. ಹಿರಣ್ಯಕಶಿಪು, ರಾವಣ, ಶಿಶುಪಾಲನ ಕಥೆಗಳ ಸಾರಾಂಶ ಇದು.

ಇಂಥದೇ ಇನ್ನೊಂದು ಏಹುದ್ಯ ವಚನ Though I walk through the valley of the shadow of death I shall not fear evil for Thou art with me.

ಸೃಷ್ಟಿಯ ವಿಸ್ತಾರದಲ್ಲಿ ದೇವರಿಲ್ಲದ್ದೆಂಬ ಸ್ಥಳ ಸೂಜಿಯ ಮೊನೆಯಷ್ಟಿಲ್ಲ.

ಕಷ್ಟದಲ್ಲಿರುವವರ ಜೊತೆಯಲ್ಲಿ ಅವನು ಇದ್ದೇ ಇದ್ದಾನೆ; ಸುಖವಾಗಿರುವವರನ್ನು ಅದರಿಂದ ಕೆಡದಂತೆ ನೋಡಿಕೊಳ್ಳುತ್ತಾನೆ; ಕಷ್ಟದಲ್ಲಿರುವವರನ್ನು ಅದರಿಂದ ಪಾರು ಮಾಡುತ್ತಾನೆ. ಇದಕ್ಕೆಲ್ಲ ಒಂದೇ ಒಂದು ಸಮಯ ಉಂಟು. ನಮಗಿರುವ ಸ್ವಾತಂತ್ರ್ಯವನ್ನು ಬಳಸಿ ನಾವು ದೈವದ ಕಡೆಗೆ ಮುಖ ಮಾಡಬೇಕು, ಅದರ ನೆರವನ್ನು ಬೇಡಬೇಕು.

ಜೀವ ಉನ್ನತ ರೀತಿಯದಾದರೆ ಅದು ಇತರರ ಕಷ್ಟವನ್ನು ತಾನು ಹೊತ್ತೇನೆನ್ನುತ್ತದೆ. ಭಾರತದ ಕೋನುಸಸ್ವ್ಯಾತ್ ಶ್ಲೋಕದ ಹಿರಿಯಾತ ಇಂಥ ಒಂದು ಜೀವ. ಮಹಾತ್ಮಾ ಏಸುಕ್ರೀಸ್ತ ಮಹಾತ್ಮಾ ಗಾಂಧಿ ಇಂಥ ಜೀವಗಳು.

ನಿಜವಾದ ಒಳ್ಳಿತನ್ನು ಬಲ್ಲ ಮನಸ್ಸು ದೇವರ ಸನ್ನಿಧಿಯಲ್ಲಿ ಕಷ್ಟ ಬೇಡವೆಂದು ಹೇಳಲಾರದು; ಈ ಮಹನೀಯ ಜೀವಗಳ ನಿಸ್ವಾರ್ಥ ಮನೋಧರ್ಮವನ್ನು ಬೇಡುತ್ತದೆ.

"ಈ ದೇವರು ಎಂಬ ಮಾತು ಜೀವಕ್ಕೆ ನಿಜವೆನಿಸಬೇಕಲ್ಲ."

ಯೋಚನೆ ಮಾಡು. ನೀನು ಸೃಷ್ಟಿಯಿಂದ ಬೇರೆಯಲ್ಲ; ಮಹಾಸಾಗರದ ಒಂದು ತೊಟ್ಟು ನೀರಿನಂತೆ, ಕಾನನದ ಒಂದು ಮರದ ಒಂದು ಎಲೆಯಂತೆ, ನೀನಿದ್ದೀಯ. ಒಟ್ಟು ಯಾವುದೋ ಜೀವ, ಒಟ್ಟು ಒಂದು ಮನಸ್ಸು, ಒಟ್ಟು ಒಂದು ಸೌಜನ್ಯ, ಒಟ್ಟಿನ ಒಂದು ಆತ್ಮೋನ್ನತಿ ನಿನ್ನಲ್ಲಿ ಚೂರು ಜೀವವಾಗಿ ಚೂರು ಮನಸ್ಸಾಗಿ ಚೂರು ಸೌಜನ್ಯ ಆತ್ಮೋನ್ನತಿಯಾಗಿ ಪ್ರಕಟವಾಗಿದೆ. ಲೋಕದ ಕಷ್ಟಕ್ಕೆ ನೀನೇ ಇಷ್ಟು ನೋಯುವುದಾದರೆ ನಿನ್ನನ್ನು ಒಂದು ಹನಿಯಾಗಿ ಒಂದು ಎಲೆಯಾಗಿ ತಳೆದಿರುವ ಸಾಗರ, ಕಾನನ, ನಿನಗಿಂತ ಕಡಮೆಯ ಮರುಕವನ್ನು ಪಟ್ಟೀತೇ? ನಮ್ಮ ಜೀವನವನ್ನು ಕುರಿತು ನಾವು ಪಡುವ ಕಕುಲಾತಿಗಿಂತ ಮಿಗಿಲಾದ ಕಕುಲಾತಿ ಇರಬೇಕು, ನಮ್ಮನ್ನು ಕುರಿತು ದೈವಕ್ಕೆ.

ಎಲೆ ಹನಿಯ ರೂಪಕವನ್ನು ತಿಳಿವಿಗೆ ನೆರವು ಎಂದಿಟ್ಟುಕೊ; ವರ್ಣನೆ

ಎಂದು ಗ್ರಹಿಸಬೇಡ. ದೈವದ ಸ್ವರೂಪವನ್ನು ಸಾಮಾನ್ಯ ಸ್ಥಿತಿಯಲ್ಲಿರುವ ಮಾನವ ಪ್ರಾಯಶಃ ತಿಳಿಯಲಾರ.

ಸಾಮಾನ್ಯ ಬುದ್ಧಿ ದೈವವನ್ನು ಕುರಿತ ಈ ಕಲ್ಪನೆಯನ್ನು ಗ್ರಹಿಸ ಹೋದ ವೇಳೆ ತಲೆತಿರುಗಿ ನಿಲ್ಲುತ್ತದೆ. ಹನಿ ಸಮುದ್ರವನ್ನು ಒಳಗೆ ಹಿಡಿದಿಡಬಲ್ಲದೇ ? ಎಲೆ ಒಟ್ಟು ವನವನ್ನು ಒಳಕೊಂಡೀತೆ?

ವಿಸ್ತಾರವಾದ ಲೋಕದಲ್ಲಿ ಒಂದು ಅಣುವಿಗೆ ಸಮನಾಗಿರುವ ಮಾನವಜೀವ ಈ ಲೋಕದ ಅಪಾರ ದೂರಗಳನ್ನು ಊಹಿಸಹೋದರೆ ಸೋಲಬೇಕು, ಭೀತಿಯಿಂದ ನಡುಗಬೇಕು.

ಆದರೆ ಒಂದು ಮಾತು. ಮನಸ್ಸು ಎಲ್ಲಿ ಹೋದರೂ ಅಲ್ಲೆ ಅದನ್ನು ಕಾಯುತ್ತಾ ನಮ್ಮ ತಂದೆ ಇದಾನೆನ್ನುವುದನ್ನು ಗಟ್ಟಿಮಾಡಿಕೋ. ಊಹೆ ನಿನಗೆ ಭಯವನ್ನು ತರುವುದಿಲ್ಲ, ಆನಂದವನ್ನು ತರುತ್ತದೆ.

ತಂದೆಯೆ? ಲೋಕದ ತಂದೆತನ ದೇವರ ತಂದೆತನದ ನೆರಳ ನೆರಳು. ಲೋಕದ ತಂದೆಗಳ ಪ್ರೇಮವಾತ್ಸಲ್ಯಗಳ ಸಾವಿರ ಸಾವಿರ ಪಟ್ಟು ಹೆಚ್ಚು ದೇವರ ಕೃಪೆ, ಅವನ ಕರುಣೆ, ಅವನ ವಾತ್ಸಲ್ಯ.

ದೇವರು ನಿನ್ನ ಬಾಳನ್ನು ತಿದ್ದುತ್ತಿರುವುದನ್ನು ಕಂಡುಕೋ. ಇದನ್ನು ಕಂಡು ಸಂತೋಷದಿಂದ ಒಪ್ಪಿಕೊ. ದಿನ ದಿನಕ್ಕೆ ಕ್ಷಣ ಕ್ಷಣಕ್ಕೆ ನಿನ್ನ ದೈವ ನಿನ್ನ ದೋಷವನ್ನು ತೊಳೆದು ಗುಣವನ್ನು ಬೆಳೆಸಿ ನಿನ್ನನ್ನು ಯೋಗ್ಯ ವಸ್ತುವನ್ನಾಗಿ ಮಾಡುತ್ತಿದೆ.

ದೇವರು ಕೊಡದೆ ಜೀವನದಲ್ಲಿ ಶುಭ ಇಲ್ಲ. ಮೈಯ ಆರೋಗ್ಯ, ಮನಸ್ಸಿನ ಶಾಂತಿ, ಸರಿಯಾಗಿ ಬಾಳುವುದಕ್ಕೆ ಅವಶ್ಯಕವಾದ ಅರಿವು, ತೊಂದರೆಯನ್ನು ಧೈರ್ಯದಿಂದ ಎದುರಿಸುವ ಕೆಚ್ಚು: ಇದು ಯಾವುದೂ ದೇವರ ಕೃಪೆಯಿಂದಲೇ ಒದಗಬೇಕು.

ದೇವರು ನನ್ನನ್ನು ಸರಿಯಾದ ದಾರಿಯಲ್ಲಿ ನಡೆಸಿರುವುದು ನನ್ನ ಬಾಳಿನಲ್ಲಿ ಉದ್ದಕ್ಕೂ ಕಾಣುತ್ತದೆ. ಇಂಥ ಹಲವು ಸಂಗತಿಗಳಲ್ಲಿ ಒಂದು ಪ್ರಮುಖವಾದ ಸಂಗತಿ ನಾವು ೧೯೫೪ರ ಆಚೆ ಸಂತಾನ ಸಾಕು ಎಂದು ನಿಶ್ಚಯ ಮಾಡಿಕೊಂಡದ್ದು.

ಈ ಒಂದು ಹೆಜ್ಜೆ ನನ್ನ ಜೀವನದಲ್ಲಿ ಎಷ್ಟೋ ಶುಭಕ್ಕೆ ಮೂಲವಾಯಿತು.

ಉಳಿದ ಹಲವು ಸಂಗತಿಯೊಂದಿಗೆ ಈ ಸಂಯಮ ನನಗೆ ಮಾಡಿದ ಉಪಕಾರ ಎಂದರೆ, ನನ್ನ ಹಣಕಾಸಿನ ಹೊಣೆಯನ್ನು ಒಂದು ಮಿತಿಯಲ್ಲಿ ನಿಲ್ಲಿಸಿ ನಾನು ಅಧಿಕಾರಿ ಜೀವನದಲ್ಲಿ ಶುಚಿಯಾಗಿ ಇರುವುದನ್ನು ಸಾಧ್ಯ ಮಾಡಿದ್ದು. ಕೊನೆಗೆ ಒಂದು ದಿನ ಜೀವ ಅಪಮಾನಪಟ್ಟುಕೊಂಡು ಕೆಲಸದಲ್ಲಿರುವುದು ಬೇಡ ಎಂದಾಗ ಕೆಲಸವನ್ನು ಬಿಡುವುದು ಸಾಧ್ಯವಾದದ್ದೂ ಕೂಡ ಇದರಿಂದಲೇ.

ಇಪ್ಪತ್ತು ವರ್ಷದ ಪೂರ್ವದಲ್ಲಿ ಸಂಯಮವನ್ನು ವರಿಸಿದಾಗ ಅದರಲ್ಲಿ ಈ ಫಲ ಹುದುಗಿದೆಯೆಂದು ನಾನೇನು ಬಲ್ಲೆ?

ಅದರಿಂದಲೇ ಈ ಹೆಜ್ಜೆಗೆ ದೈವ ಕಾರಣ ಎಂದು ಹೇಳಬೇಕಾಗುವುದು.

ಲೋಕದಲ್ಲಿ ನಮ್ಮ ಜೀವನ, ಒಂದು ಅಧಿಕಾರ ವರ್ಗದಲ್ಲಿಯ ಜೀವನದಂತೆ, ನಿಷ್ಕರ್ಷೆಯಾದ ಒಂದು ಕಾಲದ್ದು. ನಾನು ಕೆಲವು ವರ್ಷ ಸಿವಿಲ್ ಸರ್ವಿಸ್ಸಿನಲ್ಲಿದ್ದೆ; ಕೆಲವು ವರ್ಷ ಲೋಕದಲ್ಲಿ ಇದ್ದೇನು. ಆ ಅಧಿಕಾರದಲ್ಲಿ ದಕ್ಷನಾಗಿ ಹೆಸರು ಬರುವಂತೆ ದುಡಿದ ರೀತಿ ಜೀವನದಲ್ಲೂ ದಕ್ಷನಾಗಿ ಹೆಸರು ಬರುವಂತೆ ನಡೆಯಬೇಕು.

ಎಂದರೆ ಅಧಿಕಾರದಲ್ಲಿ ಒಂದು ಹೊಣೆ ಇರುವಂತೆ ಜೀವನದಲ್ಲಿ ಒಂದು ಹೊಣೆ ಇದೆ. ನಮಗೆ ಇದರ ಸ್ಮೃತಿ ಸಂತತವಾಗಿರುವುದಿಲ್ಲ. ಆದರೆ ಆ ಹೊಣೆ ಸಂತತ, ನಿರಂತರ.

ಬಾಳು ಸಾರ್ಥಕವಾಗುವುದು ದೈವದ ಕೃಪೆಯಿಂದ. ಆದರೂ ಸಾರ್ಥಕವಾಗಲಿ ಎಂಬ ಬಯಕೆ ನಮಗಿರಬೇಕು.

ಏನು ಮಾಡಿ ಜೀವನ ಸಾರ್ಥಕವಾದೀತು ಎಂಬ ವಿಚಾರ ಮನುಷ್ಯನನ್ನು ಕಾಡಬೇಕು. ಆಗ ಅವನು ಉದ್ಧಾರವಾಗುತ್ತಾನೆ. ಕ್ಷಣ ಕ್ಷಣ ತನ್ನ ನಡತೆಯನ್ನು ನಿಶ್ಚಯಿಸಿಕೊಂಡು ಸರಿಪಡಿಸಿಕೊಂಡು ದೈವದ ಅನುಗ್ರಹವನ್ನು ಬೇಡಿಕೊಂಡು ಮುಂದರಿಯುತ್ತಾನೆ.

ಎಂದರೆ ಅವನ ಬಾಳು ಕ್ಷಣ ಕ್ಷಣವೂ ಒಳ್ಳಿತಾಗುವ ಯತ್ನದಲ್ಲಿ ದುಡಿಯುತ್ತಿರುತ್ತದೆ; ಸುಖಿಸುತ್ತಿರುತ್ತದೆ.

ಲೋಕ ಜೀವನವಲ್ಲಿ ಮನುಷ್ಯ ಮಾತ್ರನ ಸ್ವಾತಂತ್ರ್ಯ, ಒಂದು ಕಬ್ಬಿಣದ ಚೂರಿನಲ್ಲಿ ಅಡಗಿರುವ ಪರಮಾಣು ಕೋಟಿಯ ಒಳಗಡೆ ಪರಮ ಪರಮಾಣು ವ್ಯೂಹದಲ್ಲಿ ಪ್ರೋಟಾನ್ ಎಂಬ ತುಣುಕು ನರ್ತಿಸುವ ಜಾತಿಯದು.

ಅವನಿರುವಲ್ಲಿ ಅವನು, ತನ್ನ ಒಂದು ಮಿತಿಯೊಳಗೆ, ಕೆಲವು ಸಂಗತಿಯಲ್ಲಿ, ತನ್ನಿಷ್ಟದಂತ ನಡೆಯಬಹುದು. ಅವನ ನಡತೆ ಲೋಕಜೀವನವನ್ನು ಬೇರೆ ಮಾಡುವುದಿಲ್ಲ.

ಆದರೆ ಅವನ ಸನ್ನಿವೇಶದಲ್ಲಿ ಅವನಿಗೆ ಕ್ಲುಪ್ತವಾಗಿರುವ ಪರಿಧಿಯಲ್ಲಿ ಅವನು ಸ್ವತಂತ್ರನೇ. ಮಗುವಿನ ಕೈಗೆ ಒಂದು ರೂಪಾಯನ್ನು ಕೊಟ್ಟು, ಏನು ಬೇಕೋ ಕೊಂಡುಕೋ, ಎಂದ ರೀತಿ, ಮನುಷ್ಯ ತನ್ನ ಜೀವನದಲ್ಲಿ ಸ್ವಾತಂತ್ರ್ಯ ಪಡೆದಿದಾನೆ.

ಮಗು ಆ ರೂಪಾಯಿಗೆ ಒಳ್ಳೆಯ ಪದಾರ್ಥವನ್ನು ಕೊಳ್ಳಬೇಕು.

ಅದು ಎಂಥ ಪದಾರ್ಥವನ್ನು ಕೊಂಡೀತು ಎಂಬ ವಿಷಯದಲ್ಲಿ ತಂದೆಯದು ಒಂದಭಿಪ್ರಾಯವಿದೆ. ಮಗು ಅದನ್ನು ಸರಿಯಾಗಿ ಬಳಸಿ ತಂದೆಗೆ ಖರ್ಚು ಕಡಮೆಯಾಗಬೇಕು ಎನ್ನುವುದೇನಿಲ್ಲ; ಆದರೂ ಮಗು ಕಾಸನ್ನು ಸರಿಯಾಗಿ ಬಳಸಲಿ ಎನ್ನುವುದು ತಂದೆಯ ಅಪೇಕ್ಷೆ.

"ಅಯ್ಯೋ? ಹಾಗಾದರೆ ನಾವು ತಪ್ಪಿದರೆ ಗತಿ?"

ತಪ್ಪದಂತೆ ನಡೆದುಕೊ; ನಡೆಯಲು ಪ್ರಯತ್ನಮಾಡು; ಹಾಗೂ

ತಪ್ಪೇ ಆದರೆ ಹೋಗಲಿ ಬಿಡು; ಇನ್ನೊಮ್ಮೆ ತಪ್ಪಬಾರದೆಂದು ನೀನೆ ಕಲಿಯುವೆ. ಹೀಗೆ ನೀನು ಸರಿಯಾದುದನ್ನು ಕಲಿಯಬೇಕೆನ್ನುವುದು ದೇವರ ಇಚ್ಛೆ.

ಎದ್ದು ಬಿದ್ದು, ನಡೆಯುವುದನ್ನು ಕಲಿಯುವ ಮಗು, ಮನುಷ್ಯ ದೇವರೆದುರಲ್ಲಿ.

"ಹೀಗೇಕೆ? ದೇವರು ನಮ್ಮನ್ನು ತಪ್ಪು ಮಾಡಲು ಬಿಡಬಹುದೆ?"

ಬಿಡಬಹುದೇ ಏತರದು? ಬಿಡದೆ ನಿನ್ನ ಸ್ವಾತಂತ್ರ್ಯ ಎಲ್ಲಿ? ನೀನು ತಪ್ಪದಂತೆ ದೈವ ತಾನೇ ನಿನ್ನನ್ನು ನಡೆಸಿದರೆ, ನೀನೊಂದು ಬರಿಯ ಯಂತ್ರ, ಚೇತನ ಆಗುವುದಿಲ್ಲ.

"ಚೇತನವಾಗದಿದ್ದರೆ ಬೇಡ. ತಪ್ಪದೆ ಇರುವುದೇ ನನಗೆ ಇಷ್ಟ."

ಎಲ್ಲ ಚೇತನವೂ ಹೀಗೆನ್ನುವ ಹಾಗಿದ್ದರೆ ದೈವ ಹೊರತು ಬೇರೆ ಆತ್ಮವಿಲ್ಲ; ಎಂದರೆ ಸೃಷ್ಟಿಯೇ ಇಲ್ಲ. ಇದು ದೇವರಿಗೆ ಸಮ್ಮತವಲ್ಲ. ಅವನು ಜೊತೆಯನ್ನು ಬಯಸಿದನು; ನಮ್ಮನ್ನು ಮಾಡಿದನು.

"ಜೊತೆ ಬೇಕೆಂದವನು ನಿರ್ದುಷ್ಟರಾದವರನ್ನು ಮಾಡಬೇಕಾಗಿತ್ತು."

ಅದನ್ನೇ ಮಾಡುತ್ತಿದಾನೆ. ನೀನು ನಿರ್ಮಲನಾಗಿ ನಿತ್ಯ ಸೂರಿಯಾಗಿ ಅವನೆದುರು ನಿಲ್ಲಬೇಕೆಂದು ಅವನ ಬಯಕೆ. ಅವನು ನಿನ್ನನ್ನು ಬೆಳಗುತ್ತಿದಾನೆ.

"ಈ ಬೆಳಗಾಟ ಇದೆಷ್ಟು ಸಾವಕಾಶ!"

ನಿನ್ನ ಮಗು ತಾನಾಗಿ ನಿನ್ನನ್ನು ಒಯಸುವಂತೆ ಮೆಚ್ಚುವಂತೆ ಮುದ್ದಿಸುವಂತೆ ಅದನ್ನು ತಿದ್ದಿದೀಯಾ? ಈ ವ್ಯಾಪಾರ ಮೆಲ್ಲನೆ ಆಗತಕ್ಕದು. ಆದರೆ ಕಾಲಕ್ರಮದಲ್ಲಿ ಆ ಸ್ಥಿತಿ ಬಂದಾಗ ನಿನಗೆ ಒಂದು ತೃಪ್ತಿ ಉಂಟು. ಹೀಗಲ್ಲದೆ ನೀನು ಮಗುವನ್ನು ಕುರಿತು, "ಜೋಕೆ, ನನ್ನ ಮೇಲೆ ಪ್ರೀತಿ ಇರಲಿ," ಎಂದು ಗದ್ದರಿಸಿ ಅದು ಅಂಜಿ ಅಂಜಿ ನಿನಗೆ ಒಂದು ಮುತ್ತು ಕೊಟ್ಟರೆ ನಿನಗೆ ಎಷ್ಟು ಸಂತೋಷವಾದೀತು?

ಒಂದು ಮಗುವಿನ ಪ್ರೇಮ ಬೆಲೆಯ ವಸ್ತುವಾಗುವುದಕ್ಕೆ ಅದು ತಾನಾಗಿ ಮೂಡಿದ ಪ್ರೇಮ ಎನ್ನುವುದು ಏಕೈಕ ಲಕ್ಷಣ.

"ಒಳ್ಳೆಯದು. ಇದು ಆದಷ್ಟು ಬೇಗನೆ ನಡೆಯಬಾರದೇ ?"

ಉದ್ದೇಶವೇನು? ಮಗು ಕಲಿಯುವುದು, ನೀನು ಕಲಿಸುವುದು, ಎಂಬ ವ್ಯವಹಾರದಲ್ಲಿ ಸಂತೋಷ ಕಾಣಬೇಕು.

ಉಪವನದಲ್ಲಿ ಸುಳಿಯಲು ಅದನ್ನು ಹೊಕ್ಕವನು ಅದರೊಳಗಿನ ಮಾರ್ಗಗಳನ್ನು ಆದಷ್ಟು ಬೇಗ ನಡೆದು ಹೆಬ್ಬಾಗಿಲತ್ತ ಓಡಿಬರುವುದಿಲ್ಲ. ಉಪವನದ ವಿಹಾರ ಅದರ ದಾರಿಗಳಲ್ಲಿ ಆದಷ್ಟು ಹೊತ್ತು ಸುಳಿಯುವುದರಲ್ಲಿದೆ.

ಮಗುವನ್ನು ಮುದ್ದಿಸುವವನು ತುಟಿಯನ್ನು ಕೆನ್ನೆಗೆ ಸೋಕಿಸಿ ಆದಷ್ಟು ಬೇಗನೆ ಮುಗಿಸುವುದಿಲ್ಲ.

ಕ್ಷಣದ ಆನಂದದಲ್ಲಿ ನಿಲ್ಲುವ ಯತ್ನ ಇರಲಿ. ದೈವ ನಮ್ಮೊಂದಿಗೆ ಈ ಸಂಬಂಧವನ್ನು ಬೆಳೆಸುತ್ತಿದೆ.

"ಆದರೆ ಕೆಲವು ವೇಳೆ ಇದು ಸ್ವಲ್ಪ ಬೇಸರವಾಗುತ್ತದೆ."

ಅಲ್ಲ! ನೀನು ನಿನ್ನ ಮಗುವನ್ನು ಎಂದಾದರೂ ಒಮ್ಮೆ ಆಟಕ್ಕೆಂದು ಕಾಡಿದ್ದುಂಟೊ? ಎಂದೂ ಇದನ್ನು ಮಾಡದವನು ಏತರ ತಂದೆ? ಗಹನ, ಗಂಭೀರ, ಪ್ರಗಲ್ಭ, ಮಹಾಪುರುಷನಾದಾನು; ಅಣ್ಣ ಅಪ್ಪ, ಚಿಕ್ಕಣ್ಣ, ಆಗುವುದಿಲ್ಲ.

"ಏನೆಂದರೂ ಈ ಆಟ ಸ್ವಲ್ಪ ಲಂಬಿಸಿದೆ ಎಂದೇ ಹೇಳಬೇಕು."

ಇದು ಸಾಧ್ಯ. ಒಮ್ಮೆ ಅದು ಮಗುವಿಗೆ ಹೆಚ್ಚು ಎಂದು ತೋರಬಹುದು; ನಿಜದಲ್ಲಿ ಅದು ಅಷ್ಟು ಹೆಚ್ಚಿಲ್ಲ. ನಮ್ಮ ತಂದೆಯ ಮತ್ತು ನಮ್ಮ ಮಧ್ಯದ ವ್ಯವಹಾರಕೇಳಿಯಲ್ಲಿ ಒಂದು ಬಾಳುವೆ ಎನ್ನುವುದು ಅನಂತಕಾಲದ ಒಂದು ಅತ್ಯಲ್ಪ ಶಕಲ. ದಿನಕಳೆದಂತೆ ನಮಗೆ ಇದು ತಿಳಿವಿಗೆ ಬರುತ್ತದೆ.

"ಇದು ಹೀಗೆ ಮೆಲ್ಲನೆ ತಿಳಿಯಬೇಕಾದ ಸಂಗತಿಯೇ?"

ಹೌದು. ಒಂದೊಂದು ಜೀವನವೂ ಜೀವದೈವಗಳ ಸಂಬಂಧ ಹೀಗೆ ಬೆಳೆಯುವ ಅವಕಾಶ. ಇದು ತಿಳಿಯದ್ದರಿಂದಲೇ ನಾವು ಭಯಪಡುವೆವು, ಬೇಸರ ಪಡುವೆವು.

"ತಿಳಿಯದಿರುವುದು ಏನು? ನಮ್ಮ ಅವಸ್ಥೆ ಏನು ಎನ್ನುವುದೇ?"

ನಮಗೆ ತಿಳಿಯದಿರುವ ಸಂಗತಿ ನಮ್ಮ ಅವಸ್ಥೆ ಒಳ್ಳಿತು ಎನ್ನುವುದು; ನಾವು ಒಂದು ಕ್ರೀಡಾಗೃಹದಲ್ಲಿ, ಒಂದು ವ್ಯಾಯಾಮ ಮಂದಿರದಲ್ಲಿ, ನಮ್ಮ ಹಿರಿಯನೊಂದಿಗೆ, ಜಟ್ಟಿಯೊಂದಿಗೆ, ಆಡುತ್ತ ಕಾದುತ್ತ ಇದ್ದೇವೆ ಎನ್ನುವುದು.

ನಿನ್ನ ಬಾಳ ದಾರಿಯನ್ನು ದೃಷ್ಟಿಸಿ ನೋಡು. ನೀನು ಕಷ್ಟ ಎಂದು ಕೊಂಡ ಎಷ್ಟು ಸಂದರ್ಭ ಅಷ್ಟು ಕಷ್ಟದ್ದಲ್ಲ ಎಂದು ಈಗ ಕಾಣುತ್ತದೆ.

ಬಂದ ಬಾಳನ್ನು ಬಾಳು. ಅದಷ್ಟು ಚೆನ್ನ ನಡೆ. ಹೀಗೆ ಬಾಳುವವನಿಗೆ ಜೀವನ ಒಂದು ಕೇಳಿ, ಗರಡಿಯಲ್ಲಿ ತೊಡಗಿದ ದುಡಿತ. ನೀನು ಹೀಗೆ ಬಾಳಬೇಕೆನ್ನುವುದು ನಿನ್ನ ದೈವದ ಇಚ್ಛೆ.

"ಆದರೂ ಸಂದರ್ಭ ಸ್ವಲ್ಪ ಬೇರೆಯಾಗಿದ್ದರೆ ಒಳಿತಾಗುತ್ತಿತ್ತೆಂದು ನನಗೆ ತೋರುತ್ತದೆ."

ಸರಿ: ಮಗು ತನ್ನ ಇಷ್ಟಕ್ಕೆ ಸರಿಯಾಗಿ ಆಟದ ನಿಯಮಗಳನ್ನು ಬೇರೆ ಮಾಡಬಯಸುತ್ತದೆ.

ನಿನ್ನ ಇಚ್ಛೆಯಂತೆ ನಡೆದರೆ ಆಟ ಈಗ ನೀನು ಆಡುತ್ತಿರುವುದಲ್ಲ, ಬೇರೆ ಒಂದು ಆಟ ಆಗುತ್ತದೆ.

ಕೆಲಸ ಕಷ್ಟವಾಯಿತೆಂದು ಉಬ್ಬಸ ಪಡಬೇಡ. ಕಷ್ಟ ಕೆಲಸದಲ್ಲಿರಬಹುದು; ನಿನ್ನ ಸ್ವಭಾವದಲ್ಲಿರಬಹುದು. ಎಲ್ಲಿದೆ ಕಂಡುಕೊ. ಅದನ್ನು ಧೃತಿಯಿಂದ ಎದುರಿಸು; ತುಳಿದು ನಿಲ್ಲು. ಇದೇ ಜೀವನ. ಈ ಚಳಕ, ಈ ನಿಶ್ಚಯ, ಈ ತಾಳ್ಮೆ, ಕಲ್ಲಿನಲ್ಲಿ ಒಂದು ನಗೆಯನ್ನು ರೂಪಿಸುವಂತೆ ಬಾಳಲ್ಲಿ ಸೊಗಸನ್ನು ಸಾಧಿಸುತ್ತದೆ.

ಯಾವನೂ ಎಲ್ಲ ವೇಳೆಯಲ್ಲಿಯೂ ತನ್ನ ಅತ್ಯುನ್ನತ ಪಾಕದಲ್ಲಿ ಇರಲಾರನು. ಬಹು ವೇಳೆ ಆ ಅತ್ಯುನ್ನತದ ಬದಿಯ ಎತ್ತರದಲ್ಲಿ ನಿಂತು ತೃಪ್ತಿ ಪಡಬೇಕಾಗುತ್ತದೆ. ಈ ವಿಷಯದಲ್ಲಿ ಬೇಸರ ಬೇಡ. ಎಂದೋ ಎಲ್ಲೋ ಒಮ್ಮೆಯಾದರೂ ಆ ಅತ್ಯುನ್ನತವನ್ನು ಮುಟ್ಟಬಲ್ಲೆವಲ್ಲ, ಅದೇ ಪುಣ್ಯ. ಅದು ತಪ್ಪಿದಾಗ ಅದರಿಂದ ಬಹು ಕೆಳಗೆ ಉರುಳದೆ ಇರುವುದೇ ಭಾಗ್ಯ.

ಒಂದು ಸಂಗತಿ ಜ್ಞಾಪಕ ಇರಲಿ. ನೀನು ದೇವರ ಸ್ವತ್ತು.

ಅವನು ತನ್ನ ವಸ್ತುವನ್ನು ನೋಡಿಕೊಳ್ಳಲು ಶಕ್ತನು. ನಿನ್ನ ವಿಷಯ ನೀನು ಕಾತರನಾಗಿ ಯೋಚಿಸುವುದು ವ್ಯರ್ಥ ಕಾಲಹರಣ, ಶಕ್ತಿವ್ಯಯ.

ನನ್ನ ಗತಿ ಏನೆಂದು ಯೋಚನೆಮಾಡುವುದೇ ಆದರೆ ನನಗೆ ದೇವರು ಗತಿ ಎಂದು ಉತ್ತರ ಹೇಳುವಷ್ಟಕ್ಕಾಗಿ ಆ ಯೋಚನೆ ಮಾಡು: ಆಗ್ಗೆ ಭಯವೂ ಶುಭವೆ, ಶಂಕೆಯೂ ಮಂಗಳವೆ.

ಈ ಅರ್ಥದಲ್ಲಲ್ಲದೆ ಭಯ ಶಂಕೆ ಎನ್ನುವುದು ಬರಿಯ ಹುಚ್ಚು.

ದೇವರ ಕೃಪೆಯಿಂದ ನನ್ನ ಜೀವನದಲ್ಲಿ ಎಲ್ಲ ಸಂಗತಿಯೂ ಸಾಧ್ಯವಾದಷ್ಟು ಸರಿಯಾಗಿವೆ. ಬಹು ದಿವಸದ ಹಿಂದೆ ನಾನು ನನ್ನ ಬಾಳಿಗೆ ಮಿಲ್ಟನ್ ಕವಿಯ ಒಂದು ವಾಕ್ಯವನ್ನು ಅನ್ವಯಿಸಿಕೊಂಡೆನು: All is if I have grace to use it so as ever in my great Task-master's eye. ಈ ವಾಕ್ಯ ಬಾಳಿಗೆ ಇಂದೂ ಸಲ್ಲುತ್ತದೆ.

ಉದ್ಧಾರವಾಗಲು ಅವಕಾಶವಿದೆ, ಕಾಲಮೀರಿಲ್ಲ; ದೇವರ ಅನುಗ್ರಹಒಂದು ಇರಬೇಕು, ಅಷ್ಟೆ.

# ಪೂಜನ

ಮಾಸ್ತಿ ವೆಂಕಟೇಶ ಅಯ್ಯಂಗಾರ್

ಜೀವನ ಕಾರ್ಯಾಲಯ
ಬಸವನಗುಡಿ,
ಬೆಂಗಳೂರು

# ಪೂಜನ

## ಮುನ್ನುಡಿ

"ಪೂಜನ" ಈ ಇಪ್ಪತ್ತೈದು ವರುಷಗಳಲ್ಲಿ ನಾನು ನನ್ನ ಜೊತೆಯ ಹಿರಿಯ ಕನ್ನಡ ಸಾಹಿತ್ಯೋಪಾಸಕರ ಕೃತಿಗಳಿಗೆ ಆಗಾಗ ಬರೆದ ಮುನ್ನುಡಿಗಳ ಸಂಕಲನ. ಈ ಎಲ್ಲ ಕೃತಿಗಳಲ್ಲಿ ನಮ್ಮ ಭಾಷೆಯ ದೇವಿ ಬೇರೆಬೇರೆಯ ರೂಪನ್ನು ತಳೆದು ಕಂಡಳು ಎಂದು ನನ್ನ ಕಲ್ಪನೆ. ಹಾಗೆ ಕಂಡ ದೇವಿಯನ್ನು ನಾನು ಮುನ್ನುಡಿಗಳಲ್ಲಿ ಪೂಜಿಸಿದೆನು. ಈ ಕಾರಣ ದಿಂದ ಸಂಕಲನಕ್ಕೆ "ಪೂಜನ" ಹೆಸರಾಗಿದೆ.

ಬರಿಯ ಮುನ್ನುಡಿಗಳನ್ನೆ ಸೇರಿಸಿ ಒಂದು ಪುಸ್ತಕವನ್ನು ಮಾಡು ವುದೆ ಎಂದು ಯಾರಿಗಾದರೂ ಶಂಕೆ ತೋರಬಹುದು. ಅಂಥ ಮಿತ್ರರು ಈ ಮುನ್ನುಡಿಗಳಲ್ಲಿ ಒಂದೆರಡನ್ನು ಓದಬೇಕೆಂದು ನಾನು ಪ್ರಾರ್ಥಿಸು ತ್ತೇನೆ. ಈ ಮುನ್ನುಡಿಗಳನ್ನು ನಾನು ಕಿರಿಯರ ಕೆಲಸವನ್ನು ಮೆಚ್ಚಿ ಆಶೀರ್ವದಿಸುವ ಹಿರಿಯನ ದೃಷ್ಟಿಯಿಂದ ಬರೆಯಲಿಲ್ಲ. ನಮ್ಮ ಹೊಸ ಸಾಹಿತ್ಯ ಸೃಷ್ಟಿಯಾಗಲು ಪ್ರೇರಕವಾದ ತತ್ವಗಳನ್ನೋ ಆಯಾ ಕೃತಿಗ ಳನ್ನು ನೋಡುವವರು ಅವನ್ನು ಯಾವ ದೃಷ್ಟಿಯಿಂದ ನೋಡಬೇಕು ಎನ್ನುವುದನ್ನೋ ವಿವರಿಸುವುದು ಆಯಾ ವೇಳೆಯಲ್ಲಿ ನನ್ನ ಉದ್ದೇಶವಾ ಗಿದ್ದಿತು. ಇಂಥ ಮಾತು ಆಯಾ ಕೃತಿಗೆ ಸಂಬಂಧಿಸಿರುವಷ್ಟೆ ಸ್ಪಷ್ಟವಾಗಿ ಸಾಹಿತ್ಯವನ್ನು ಕುರಿತ ಸಾಮಾನ್ಯ ಚರ್ಚೆಗೂ ಸಂಬಂಧಿಸಿರುತ್ತವೆ. ಹೀಗೆ ಹಲವು ವಿಚಾರ್ಯವಿವರಗಳಲ್ಲಿ ನನ್ನ ಮನಸ್ಸು ಹೇಗೆ ಹರಿಯುತ್ತದೆ ಎನ್ನುವುದು ಈ ಮುನ್ನುಡಿಗಳಲ್ಲಿ ಕಾಣುತ್ತದೆ.

ಈ ಕಾರಣದಿಂದಲೇ ಇರಬೇಕು, ಗೆಳೆಯ ಶ್ರೀ ಬೇಂದ್ರೆಯವರು ಕೆಲವು ವರ್ಷಗಳ ಹಿಂದೆಯೇ ನಾನು ನನ್ನ ಮುನ್ನುಡಿಗಳನ್ನು ಒಟ್ಟು

ಗೂಡಿಸಿ ಪ್ರಕಟಿಸಬೇಕೆಂದರು. ಅವರರುಚಿಯ ಮಿತ್ರರು ಹಲವರಿರಬೇಕು ಎಂದು ನನ್ನ ತಿಳಿವಳಿಕೆ. ಇಂಥ ಮಿತ್ರರಿಗೆ ಈ ಸಂಕಲನ ಒಪ್ಪಿಗೆಯಾದೀತೆಂದು ನನ್ನ ಹಾರೈಕೆ.

ಸಾಹಿತ್ಯದ ಯಾವುದೇ ಒಂದು ಸಂಗತಿಯನ್ನು ಚರ್ಚಿಸದ ಮೂರು ನಾಲ್ಕು ಬಹು ಸಣ್ಣವಾದ ಮುನ್ನುಡಿಗಳನ್ನು ಸಂಕಲನದಲ್ಲಿ ಸೇರಿಸಿಲ್ಲ.

ಅವರವರ ಪುಸ್ತಕಗಳಿಗೆ ಬರೆದುಕೊಟ್ಟು ಅವರವಾಗಿ ಮಾಡಿದ ಮುನ್ನುಡಿಗಳನ್ನು ಈಗ ನಾನು ಮರಳಿ ನನ್ನವಾಗಿ ಮಾಡಿಕೊಂಡು ಹೀಗೆ ಪ್ರಕಟಿಸುವುದನ್ನು ಈಗ ನಾನು ಇವಕ್ಕೆ ಸಂಬಂಧಿಸಿದ ಎಲ್ಲ ಮಿತ್ರರಿಗೂ ತಿಳಿಸಿಲ್ಲ ಈ ವಿಷಯದಲ್ಲಿ ಅವರಲ್ಲಿ ಹಲವರ ಒಪ್ಪಿಗೆಯನ್ನು ಊಹಿಸಿಕೊಂಡಿದೇನೆ: ಹೀಗೆ ಮಾಡುವುದರಲ್ಲಿ ನಾನು ವಹಿಸಿರುವ ಸ್ವಾತಂತ್ರ್ಯವನ್ನು ಅವರು ಮನ್ನಿಸಬೇಕೆಂದು ಈ ಮೂಲಕ ಬೇಡುತ್ತೇನೆ.

ಗವೀಪುರದ ವಿಸ್ತರಣ, ಬೆಂಗಳೂರು
ಖರ ಸಂವತ್ಸರ ಮಾರ್ಗಶಿರ ಶುದ್ಧ
ಸಪ್ತಮಿ ಬುಧವಾರ
5-12-1951

ಮಾಸ್ತಿ ವೆಂಕಟೇಶ ಅಯ್ಯಂಗಾರ್

# ವಿಷಯ ಸೂಚಿಕೆ.

ಶ್ರೀ "ಆನಂದಕಂದ"ರ

# "ಮುದ್ದನ ಮಾತು"

ಕೆಲವು ತಿಂಗಳ ಹಿಂದೆ ಕವಿಭೂಷಣ ಬೇಟಗೇರಿಯವರು ಈ ಕಾವ್ಯದ ಕೆಲವು ಪದ್ಯಗಳನ್ನು ನನಗೆ ಓದಿಹೇಳಿದರು. ಆಗ ನನಗೆ ಉಂಟಾದ ಅತಿಶಯವಾದ ಸಂತೋಷವನ್ನು ನಾನು ಅವರಿಗೆ ಸ್ವಲ್ಪ ಮಟ್ಟಿಗೆ ತಿಳಿಸಿದೆನು. ತನ್ನ ಮಗುವನ್ನು ಮೆಚ್ಚಿ ಮುದ್ದಿಡುವ ಸ್ವಲ್ಪ ಹಿರಿಯ ಗೆಳತಿಯನ್ನು ಕುರಿತು ಅದರ ತಾಯಿ, ಎತ್ತಿಕೋ ಅಕ್ಕಾ, ಎಂದು ಹೇಳುವಂತೆ ಅವರು ಇದಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದರು. ಕಾವ್ಯದ ಮೇಲಣ ಮೆಚ್ಚಿಗೆಯಿಂದಲೂ ಅವರು ನನ್ನಲ್ಲಿ ತೋರಿದ ವಿಶ್ವಾಸಕ್ಕೆ ತಕ್ಕಂತೆ ನಡೆಯಬೇಕೆಂಬ ಆಸೆಯಿಂದಲೂ ಆ ಕೆಲಸಕ್ಕೆ ನಾನು ಒಪ್ಪಿಕೊಂಡೆನು.

ಈ ಕಾವ್ಯವು ಕನ್ನಡದಲ್ಲಿ ಹೊಸಮಾದರಿಯದು. ಮಕ್ಕಳೆಂದರೆ ನಮಗೆಲ್ಲ ಪ್ರೀತಿಯುಂಟು. ತಂದೆತಾಯಿಯಾದವರೆಲ್ಲ ಒಂದು ಸಲವಾದರೂ ತಮ್ಮ ಮಗು ಹೇಳಿದ ಮಾತನ್ನೊ ಆಡಿದ ಆಟವನ್ನೊ ಇತರರಿಗೆ ಹೇಳಿಕೊಂಡು ಸಂತೋಷಪಡುವರು. ಆದರೆ ಅಂಥ ಮಾತನ್ನೂ ಆಟವನ್ನೂ ಬಹುಕಾಲ ನೆನಪಿನಲ್ಲಿಟ್ಟುಕೊಳ್ಳುವ ತಂದೆಯಾಗಲಿ ತಾಯಾಗಲಿ ಅಪೂರ್ವ. ಅದನ್ನು ಒಂದು ಪದ್ಯದಲ್ಲಿ ವರ್ಣಿಸುವವರಂತೂ ಇಲ್ಲವೆನ್ನಬಹುದು. ನಮ್ಮ ಹಿಂದಣ ಕಾವ್ಯಗಳಲ್ಲಿ ಮಕ್ಕಳ ವಿಚಾರವಾದ ಕೆಲವು ವರ್ಣನೆಗಳುಂಟು. ಅವು ಕಾವ್ಯದ ಧಾಟಿಯಲ್ಲಿ ಬರೆಯಲ್ಪಟ್ಟಿವೆ. ದಾಸರು ಬರೆದ ಬಾಲಕೃಷ್ಣಪರವಾದ ಗೀತೆಗಳಲ್ಲಿ ಗೋಪಿಕಾ ವಿನೋದದ ವಿಷಯವೇ ಹೆಚ್ಚು. ಇವು ಉತ್ತಮವಾದ ಕಾವ್ಯಗಳೇ. ಆದರೆ ಇಲ್ಲಿ ಎಲ್ಲ ಮಕ್ಕಳ ಸಾಮಾನ್ಯವಾದ ಮಾತು ಆಟದ ವರ್ಣನೆ ಬಂದ ಹಾಗಾಗಲಿಲ್ಲ. ಈ ಸಾಮಾನ್ಯದ ಮಾತೂ ಆಟವೂ ಕಾವ್ಯಕ್ಕೆ ವಸ್ತುವೇ; ಏಕೆಂದರೆ ಅವು ನಮ್ಮ ಮನಸ್ಸಿನಲ್ಲಿ ಸಂತೋಷ

ವನ್ನೂ ಮೆಚ್ಚಿಗೆಯನ್ನೂ ಕನಿಕರವನ್ನೂ ಉಂಟುಮಾಡುತ್ತವೆ. ಅವುಗಳ ಸಹಜವಾದ ವರ್ಣನೆ ರಸಾತ್ಮಕವಾಗುವುದಕ್ಕೆ ದಾರಿಯುಂಟು; ಅದನ್ನು ಹಾಗೆ ವರ್ಣಿಸುವ ಕೃತಿ ಕಾವ್ಯವಾಗುವುದು. ಈ ವಸ್ತುವನ್ನು ಈ ರೀತಿಯಲ್ಲಿ ಉಪಯೋಗಿಸುವುದು ನಮ್ಮ ಸಾಹಿತ್ಯದಲ್ಲಿ ಹೊಸದಾರಿ. ಕವಿಭೂಷಣರು ತಮ್ಮ ಕೃತಿಯಲ್ಲಿ ಈ ವಸ್ತುವನ್ನು ಬಹಳ ಚೆನ್ನಾಗಿ ಉಪಯೋಗಿಸಿದ್ದಾರೆ.

ಕಾವ್ಯದ ವಸ್ತು ಮುದ್ದನ ದಿನದಿನದ ಆಟಪಾಟವಾದದ್ದರಿಂದ ಕಾವ್ಯದ ಭಾಷೆಯೂ ವೃತ್ತವೂ ಅದಕ್ಕೆ ಅನುಗುಣವಾಗಿವೆ. ಮುದ್ದನಾಡಿದನೆಂಬ ಮಾತು ಅವನ ವಯಸ್ಸಿಗೆ ತಕ್ಕದ್ದಾಗಿರಬೇಕು. ಸಮಾಸಪದಗಳನ್ನು ಸೇರಿಸಿ ಮಹಾಸ್ರಗ್ಧರಾದಿ ವೃತ್ತಗಳಲ್ಲಿ ಅವನು ಏನೆಂದನೆಂದು ಬರೆದರೆ ಮಾತು ಮುದ್ದನದಾಗಲಾರದು; ಮುದ್ದನ ಮಾತಿನ ವಿಷಯವನ್ನು ಬೇರೆಯ ಮಾತಿನಲ್ಲಿ ಹೇಳಿದಂತೆ ಆಗುವುದು. ಮಗುವಿನ ಮಾತಿನಲ್ಲಿಯ ಸೊಗಸು ಅದರ ವಿಷಯವನ್ನು ಮಾತ್ರವಲ್ಲ, ರೀತಿಯನ್ನೂ ಅವಲಂಬಿಸಿದೆ. ಅದಕ್ಕೆ ಸಮಾಸ ಪದಗಳುಮಾತ್ರವಲ್ಲ, ಪದಸಂಧಿಯೂ ದೂರ, ಅದರಲ್ಲಿ ಬರಿಯ ತೊದಲೂ ಚೆನ್ನವೇ. ಆ ತೊದಲನ್ನೂ ಬರೆವಣಿಗೆಯಲ್ಲಿ ತಂದರೆ ಚೆನ್ನಾಗಿದ್ದೀತು. ಅದು ಆಗಲಿಲ್ಲವೆನ್ನಿ, ಮಾತಿನ ಸರಳತೆಯನ್ನಾದರೂ ತರಬೇಕು; ಮಗುವಿನ ಭಾವನೆ ಎಷ್ಟು ಅಚ್ಚವೆಂಬುದನ್ನು ಸಾಧ್ಯವಾದಷ್ಟುಮಟ್ಟಿಗೆ ತೋರಿಸಬೇಕು. ಅದು ಆಡುವ ಮಾತಿನ ರೀತಿಯ ಅನುಕರಣವೂ ಇದರಲ್ಲಿ ಅವಶ್ಯಕ. ಇಲ್ಲಿ ರೀತಿಯನ್ನು ಬಿಟ್ಟರೆ ಕಾರ್ಯ ಸಿದ್ಧಿಸದು. ಈ ಕೆಲಸ ಭಾವಚಿತ್ರದ ಕೆಲಸ: ಸ್ವಭಾವಕ್ಕೆ ಸಮೀಪವಾಗಿರುವುದು ಈ ಕೆಲಸದಲ್ಲಿ ಸಿದ್ಧಿಗೆ ಮುಖ್ಯಸಾಧನ. ಆದ್ದರಿಂದ ಈ ಕಾವ್ಯದಲ್ಲಿ ಭಾಷೆ ಮಗುವಿನ ದಿನದ ಭಾಷೆಯಾಗಿದೆ; ವೃತ್ತವು ಅದನ್ನು ಒಳಗೊಳ್ಳಬಹುದಾದ ಒಂದು ಕನ್ನಡದ ವೃತ್ತವಾಗಿದೆ.

ಈ ವೃತ್ತವು ಕನ್ನಡದ್ದೇ ಎಂದು ಕೆಲವರು ಕೇಳುವುದು ನಿಜ. ಹೌದೆಂದೇ ನನ್ನ ಭಾವನೆ. ಇದು ಹೇಗೆ ಎಂಬ ಚರ್ಚೆಗೆ ಈ ಮುನ್ನುಡಿಯಲ್ಲಿ ಅವಕಾಶವಿಲ್ಲ. ಒಂದು ಮಾತನ್ನು ಮಾತ್ರ ಹೇಳಬಹುದು. ಪಂಕ್ತಿಗಳು ಪ್ರಾಯಶಃ ಯಾವುದಾದರೊಂದು ಷಟ್ಪದಿಯ ಸಣ್ಣಪಂಕ್ತಿ

ಗಳು. ಪದ್ಯ ಆರು ಪಾದಕ್ಕೆ ಮುಗಿಯುವುದಿಲ್ಲ; ಚೌಪದಿ ಅಷ್ಟಪದಿ ಗಳಂತೆ, ಅಥವಾ ರಗಳೆಗಳ ವೃತ್ತಗಳಂತೆ, ಮುಂದಕ್ಕೆ ನಡೆಯುವುದು. ಆದರೆ ಆ ನಡೆ ಸುಲಭವಾಗಿದೆ, ಓದಿಗೆ ಹಿತವಾಗಿದೆ. ಎಂದರೆ ಅದು ಛಂದಸ್ಸಿನ ಮೂಲಸೂತ್ರಕ್ಕೆ ವಿರೋಧಿಯಾಗಿಲ್ಲ: ಅದನ್ನು ಅನುಸರಿಸಿದೆ. ಪದ್ಯದ ಕಟ್ಟಡ ಹಿಂದಿನ ಕವಿಗಳದಲ್ಲ; ಆದರೆ ಅದರ ಇಟ್ಟಿಗೆ ಅವರು ಉಪಯೋಗಿಸಿದ ಅಚ್ಚಿನದೇ.

ಇನ್ನು ಕಾವ್ಯದ ಗುಣಕಥನವನ್ನು ಮಾಡುತ್ತ ಈ ಮುನ್ನುಡಿಯನ್ನು ಬೆಳೆಯಿಸಲು ನನಗೆ ಇಷ್ಟವಿಲ್ಲ. ಓದುವವರು ಮಕ್ಕಳನ್ನು ಕಂಡೇ ಇದಾರೆ. ಅವುಗಳ ಮಾತನ್ನು ಕೇಳಿದಾರೆ. ಅವುಗಳ ಆಟಗಳನ್ನು ನೋಡಿ ಆನಂದಪಟ್ಟಿದಾರೆ; ಅವು ಅಳುತಿರಲು ಮರುಕಗೊಂಡು ಎತ್ತಿ ಕೊಂಡಿದಾರೆ. ಕೆಲವರು ಒಂದೊಂದು ಸಲ ಈ ಎಳಸಾದ ಮನಸ್ಸು ಈ ಕಠಿಣವಾದ ಪ್ರಪಂಚಕ್ಕೆ ಬರಲೇಕೆ, ಇಲ್ಲಿ ಬೆಳೆದು ಬಿರುಸಾಗಿ ಖೇದಗಳಿಗೆ ಸಿಕ್ಕಲೇಕೆ, ಎಂದು ಯೋಚಿಸಿರುವರು. ಈ ಕಾವ್ಯವನ್ನು ಓದುವಲ್ಲಿ ಸ್ವಭಾವವಾಗಿಯೂ ಪ್ರೀತಿವಂತರಾದ ತಂದೆತಾಯಿಗಳು ತಮ್ಮ ಮಕ್ಕಳ ಮಾತು ಆಟವನ್ನು ಇದರಲ್ಲಿ ಗುರುತಿಸಿದರೂ ಸರಿಯೆ; ಮಕ್ಕಳ ಮಾತಿಗೆ ಅಷ್ಟು ಗಮನಕೊಡದವರು ತಮ್ಮ ಮಗುವೂ ಇಂಥ ಮಾತ ನ್ನಾಡುವುದೇನೋ ಎಂದು ಅದನ್ನು ಇನ್ನಷ್ಟು ಗಮನದಿಂದ ನೋಡುವು ದಾದರೂ ಸರಿಯೆ; ಯೋಚನಾಪರರು ವರ್ಡ್ಸ್‌ವರ್ತ್ ಕವಿಯಂತೆ ಇದರಿಂದ ಹೊಸತತ್ತ್ವದ ಕಟ್ಟಡವೊಂದನ್ನು ಕಟ್ಟುವುದಾದರೂ ಸರಿಯೆ; ಇಲ್ಲವೇ ತಮ್ಮನ್ನು ಮಗುವೆಂದೂ ದೇವರನ್ನು ತಾಯೆಂದೂ ನೆನೆದು ತಾವು ಸಂಸಾರದಲ್ಲಿ ಪಡುತ್ತಿರುವ ಸುಖದುಃಖದ ಅನುಭವಗಳಿಗೆ ಮುದ್ದನ ಮಾತುಗಳನ್ನು ಅನ್ವಯಿಸಿಕೊಂಡರೂ ಸರಿಯೆ; ಅವರು ಕಾವ್ಯದಿಂದ ಒಂದು ರೀತಿಯ ಫಲವನ್ನು ಪಡೆದಂತಾಯಿತು, ಆಗ್ಗೆ ಕವಿಯು ಈ ಕೃತಿಯನ್ನು ರಚಿಸಿದ್ದು ಸಾರ್ಥಕವಾಯಿತು.

ಈ ಕಾವ್ಯವನ್ನು ಓದುವವರು ಯಾರಾದರೂ ಕವಿಯು ಠಾಕೂರರ 'ಕ್ರೆಸೆಂಟ್ ಮೂನ್' ಕಾವ್ಯವನ್ನು ನೋಡಿ ಇದನ್ನು ಬರೆದಿರಬಹುದೆಂದು ಭಾವಿಸುವ ಸಂಭವವುಂಟು. ಠಾಕೂರರಂಥ ಹಿರಿಯರ ದೀಪದಿಂದ

ತಮ್ಮ ದೀಪವನ್ನು ಹಚ್ಚಿಕೊಳ್ಳಲು ಯಾರೂ ನಾಚಿಕೊಳ್ಳಬೇಕಾದದ್ದಿಲ್ಲ. ಆದರೆ ಕವಿ ಭೂಷಣರು ಇಂಗ್ಲೀಷು ಕಲಿತವರಲ್ಲವೆಂದೂ ಬಂಗಾಳಿಯನ್ನರಿಯರೆಂದೂ ನಾನು ಕೇಳಿದೇನೆ. ಅವರು ಕ್ರೆಸೆಂಟ್ ಮೂನ್ ಎಂಬ ಈ ವಿಷಯದ ಕಾವ್ಯವಿದೆಯೆಂದು ಕೇಳಿರಬಹುದು. ಆದರೆ ಈ ಕಾವ್ಯವು ಅನುಕರಣದ ಫಲವಲ್ಲ; ಕವಿಯ ಹೃದಯದಿಂದ ಬಂದಿದೆ. ಇದರಲ್ಲಿ ನನಗೇನೂ ಆಶ್ಚರ್ಯ ತೋರುವುದಿಲ್ಲ. ಕನ್ನಡ ನಾಡಿನಲ್ಲಿ ಮಕ್ಕಳಿಲ್ಲವೆ? ಅವು ಆಡುವುದಿಲ್ಲವೆ? ಅವುಗಳನ್ನು ನೋಡಿ ನಾವು ಯಾರೂ ನಲಿಯುವುದಿಲ್ಲವೆ? ಈಚೆಗೆ ಸ್ವೈಜವಾದ ಕವಿತೆಯನ್ನು ಕಾಣದ ನಮ್ಮ ಪ್ರಕೃತದ ದುರವಸ್ಥೆಯಲ್ಲಿ ಕವಿಯೊಬ್ಬನು ಬಂದರೂ ನಮಗೆ ಅವನಲ್ಲಿ ಸಂದೇಹ. ಆದರೆ ನಮ್ಮಲ್ಲಿ ಕೆಲಕಾಲದಿಂದ ಸ್ವೈಜವಾದ ಕಾವ್ಯವಿಲ್ಲದೆ ಹೋಗಿದ್ದರೂ ಅದರ ವಸ್ತುವಾದ ಅನುಭವಕ್ಕೆ ಶೂನ್ಯತೆ ಬಂದಿಲ್ಲ. ಆ ಅನುಭವ ನಿತ್ಯವಾದುದು, ಸರ್ವಜನ ಸುಲಭವಾದುದು; ಬೇಡಿದಂದು ಕಾವ್ಯವಾಗಲು ಅದು ಸದಾಸಿದ್ಧವಾಗಿರುವುದು.

1927

ಸೌಭಾಗ್ಯವತಿ " ಭಾರತಿ " ಯವರ

## " ತಪಸ್ವಿನೀ "

ಕವಿವರ ರವೀಂದ್ರನಾಥ ಠಾಕೂರರ ಉಪನ್ಯಾಸವೊಂದು, ಕಾವ್ಯ ಪ್ರೇಮಿಗಳಿಗೆ ಇಷ್ಟವಾದರೂ ಕಾವ್ಯದಲ್ಲಿ ನಿರ್ಲಕ್ಷಿಸಲ್ಪಟ್ಟಿರುವ ಪಾತ್ರಗಳನ್ನು ಸುಂದರವಾಗಿ ವರ್ಣಿಸುತ್ತದೆ. ಆ ಪಾತ್ರಗಳಲ್ಲಿ ಲಕ್ಷ್ಮಣನ ಪತ್ನಿ ಊರ್ಮಿಳಾದೇವಿ ಪ್ರಮುಖಳು. ಸೀತಾರಾಮರೊಡನೆ ತನ್ನ ಪತಿಯೂ ಅರಣ್ಯಕ್ಕೆ ಹೊರಡಲು ಈ ರಾಜಕುಮಾರಿ ಅವನಿಗೆ ಏನು ಹೇಳಿದಳು? ಅವನಿಂದ ಯಾವ ಉತ್ತರವನ್ನು ಪಡೆದಳು? ಅವರು ಹೊರಟುಹೋದ ಮೇಲೆ ಸೋರುಮಳೆ ಸುರಿದ ಹುಣ್ಣಿಮೆಯ ರಾತ್ರಿಯಂತೆ ಐಶ್ವರ್ಯವಿದ್ದೂ ಶೋಭಿಸಲಾರದೆ ಹೋದ ಅಯೋಧ್ಯೆಯಲ್ಲಿ ಈ ಮಹಿಳಾಮಣಿ ದಿನಗಳನ್ನು ಹೇಗೆ ನೂಕಿದಳು? ವನವಾಸದಿಂದ ಅವರು ಮರಳಿ ಬಂದಾಗ ಊರ್ಮಿಳೆ ಏನಾಗಿದ್ದಳು? ಲಕ್ಷ್ಮಣನಿಗೆ ಏನು ಹೇಳಿದಳು? ಇದನ್ನೆಲ್ಲ ತಿಳಿಯಲು ನಮಗೆ ಬಹಳ ಕುತೂಹಲವಿದೆ. ಆದರೆ ಈ ವಿಷಯ ಯಾವುದನ್ನೂ ಕಾವ್ಯ ನಮಗೆ ಹೇಳಿಲ್ಲ.

ಇದುವರೆಗೆ ಹೇಳದೆ ಇದ್ದ ತಪ್ಪನ್ನು ಇಂದು ಅದು ಸರಿಪಡಿಸಲು ಯತ್ನ ಮಾಡಿದೆ. ಲಕ್ಷ್ಮಣನು ವನವಾಸಕ್ಕೆ ತೆರಳಿದಾಗ ಊರ್ಮಿಳೆ ಒಂದು ತಪಸ್ಸನ್ನು ಕೈಕೊಂಡಳು. ಅವನಿಗೆ ಅಡವಿಯೇ ಅಯೋಧ್ಯೆಯಾದಂದು ಊರ್ಮಿಳೆಗೆ ಅಯೋಧ್ಯೆಯೇ ಅಡವಿಯಾಯಿತು. ಸರಯೂ ನದಿಯ ತೀರದಲ್ಲಿ ಒಂದು ಆಶ್ರಮವನ್ನು ಮಾಡಿಕೊಂಡು ಅವಳು ಹದಿನಾಲ್ಕು ವರ್ಷಗಳನ್ನು ಸಾಧನೆಯಲ್ಲಿ ಕಳೆದಳು. ತಪದ ಭರದಲ್ಲಿ ಅವಳಿಗೆ ದಿನಗಳ ಹರಿವು ತಿಳಿಯಲಿಲ್ಲ. ಅವಳ ಬಾಳು ತಪೋವನದ ಬಾಳಿನಲ್ಲಿ ಕಲೆತುಹೋಯಿತು. ನೊಂದ ಮನಸ್ಸು ನೋವನ್ನರಿಯುವ ದೃಷ್ಟಿಯನ್ನು ಹೊಂದಿತು. ನೊಂದ ಹೃದಯ ನೋವಿನೊಂದಿಗೆ ಬೇಯುವ ಕರುಣೆಯಲ್ಲಿ ಪಳಗಿತು. ನೊಂದ ಜೀವ ನೋವನ್ನು ತಡೆಯುವ ಬಲವನ್ನು ಆರ್ಜಿಸಿತು. ಆಶ್ರಮದ ಮೃಗ

ಪಕ್ಷಿಗಳ ಕಷ್ಟಸುಖವನ್ನು ತನ್ನದಾಗಿ ಅನುಭವಿಸುತ್ತ ಲಲನೆ ವಿಶ್ವ ಜೀವನ ದಲ್ಲಿ ತನ್ನ ವ್ಯಕ್ತಿತ್ವವನ್ನು ಮರೆತಳು.

ನಾನೆಂಬ ಅರಿವು ಅವಳಿಗೆ ಮರಳಿ ಬಂದದ್ದು ಲಕ್ಷ್ಮಣನು ಅರಣ್ಯ ದಿಂದ ಹಿಂತಿರುಗಿ ಅವಳನ್ನು ಅರಸಿಕೊಂಡು ಬಂದಾಗಲೇ. ಎರಡು, ನಾಲ್ಕು, ಆರು ಎಂಬ ವ್ಯವಹಾರದ ಸಂಖ್ಯೆಗಳನ್ನು ಅವಳು ಮರೆತಿದ್ದಳು. ಸೀತಾರಾಮರೊಡನೆ ಲಕ್ಷ್ಮಣನು ಮರಳಿ ಬಂದ ದಿನ ಅವು ಮತ್ತೆ ಅವಳಿಗೆ ನೆನಪಿಗೆ ಬಂದವು. ಅಯೋಧ್ಯೆಯ ಜನ ಸರಯೂ ನದಿಯ ಮೇಲೆ ದೋಣಿಗಳಲ್ಲಿ ತಂಡತಂಡವಾಗಿ ಹೋಗುತ್ತಿರಲು ಇದೇನೆಂದು ಊರ್ಮಿಳಾದೇವಿ ಯೋಚಿಸಿದಳು. ಆಗ ಅವಳಿಗೆ ಆ ದಿನವು ತನ್ನ ಪ್ರಿಯ ಬಂಧುಗಳ ಆಗಮನದ ದಿನವೆಂದು ಸ್ಮರಣೆಗೆ ಬಂದಿತು.

ಸೌಭಾಗ್ಯವತಿ ರಾಜಮ್ಮನವರು ಈ ಕಾವ್ಯದಲ್ಲಿ ಲಕ್ಷ್ಮಣನ ಧರ್ಮ ಕಾಂತೆ ಅವನನ್ನೂ, ಅಕ್ಕನನ್ನೂ, ಭಾವನನ್ನೂ ಮರಳಿ ನೋಡಿದ ಸಂದರ್ಭವನ್ನು ವರ್ಣಿಸಿದಾರೆ. ಇದರಲ್ಲಿ ಹೇಳಿರುವುದೆಲ್ಲವೂ ಇಲ್ಲಿ ಹೇಳಿರುವ ರೀತಿಯಲ್ಲಿಯೇ ನಡೆದಿರಬೇಕೆಂದು ನಮ್ಮ ಮನಸ್ಸು ಒಪ್ಪು ತ್ತದೆ. ಊರ್ಮಿಳೆ, ಲಕ್ಷ್ಮಣ, ರಾಮ, ಸೀತಾದೇವಿ, ಹನುಮಂತ ಇವರೆಲ್ಲ ಇಲ್ಲಿ ಹಲ ಕೆಲವು ಮಾತುಗಳಲ್ಲಿ ಸ್ಫುಟವಾಗಿ ಕಣ್ಣೆದುರಿಗೆ ಬರುತ್ತಾರೆ. ಚಿಗರಿಯೊಂದು, ಅದರ ಮರಿಯೊಂದು, ಸರಯೂನದಿ, ತಪೋವನ, ಇವುಗಳ ಚಿತ್ರಗಳು ಕತೆಯಲ್ಲಿ ಅಂದವಾಗಿ ಸೇರಿವೆ. ಮೈತ್ರಿಯ ಭರದಲ್ಲಿ ಸೇವಕತನವನ್ನು ಮರೆತ, ಸೇವಕನ ಸಲಿಗೆಯಲ್ಲಿ ರಾಮನು ದೇವರೆಂಬುದನ್ನು ಮರೆಯದ, ಹನುಮಂತನ ಚಿತ್ರವು ಇಲ್ಲಿ ಹತ್ತು ಮಾತಿನಲ್ಲಿ ಮೇಲೆದ್ದು ಕಾಣುತ್ತದೆ. ಕೆಲವು ಮಾತಿನಲ್ಲಿ ಬಹಳ ಅರ್ಥ ತೋರುವುದು ಈ ಕೃತಿಯಲ್ಲಿ ಹಿರಿಯ ಗುಣ. ‘ ನಿನ್ನ ತಪ ಮುಗಿದುದೊ ’ ಎಂದು ಕೇಳಿದ ಲಕ್ಷ್ಮಣನಿಗೆ ಅವನನ್ನು ಆಗತಾನೆ ಕಂಡ ಊರ್ಮಿಳೆ ‘ ಈಗಳೇ ಸಿದ್ಧಿ ’ ಎಂದು ಹೇಳುವಳು. ಊರ್ಮಿಳೆಯ ಜೀವನದ ಸಾರಸೂತ್ರ ಈ ಎರಡು ಮಾತಿನಲ್ಲಿ ಅಡಗಿ ತೋರುತ್ತದೆ. ಶ್ರೀಮತಿ ರಾಜಮ್ಮನವರಿಗೆ ಭಾವಗರ್ಭಿತವಾದ ಇಂಥ ಉಕ್ತಿ ಎಷ್ಟು ಸಹಜವಾಗಿ ಬರುತ್ತದೆಂಬುದು ಈ ಕಾವ್ಯದಲ್ಲಿ ಉದ್ದಕ್ಕೂ ಸ್ಪಷ್ಟವಾಗುತ್ತದೆ.

ಕಾವ್ಯದೃಷ್ಟಿಯೆಲ್ಲಕ್ಕೂ ಮೂಲ ಎಲ್ಲ ಜೀವಗಳ ಹೃದಯದಲ್ಲಿರುವ ದಿವ್ಯಜ್ಯೋತಿ. ಈ ಜ್ಯೋತಿ ಕೆಲವರಲ್ಲಿ ಹಿರಿದಾಗಿರುತ್ತದೆ; ಕೆಲವರಲ್ಲಿ ಕಿರಿದಾಗಿರುತ್ತದೆ. ಅನೇಕರಲ್ಲಿ ಮಡಿಕೆ ಮಡಿಕೆ ಮಮತೆ ಇದಕ್ಕೆ ತೆರೆಯಾಗಿ ನಿಂತಿರುತ್ತದೆ. ಸಾವಿರಕ್ಕೆ ಲಕ್ಷಕ್ಕೆ ಒಬ್ಬರಲ್ಲಿ ಈ ತೆರೆ ತೆಳ್ಳಗಿರುವುದು. ಕವಿತೆ ಚೆನ್ನಾಗಿರುವುದು ಈ ತೆರೆ ತೆಳ್ಳಗಿದ್ದಾಗ. ತನ್ನ ಜೀವನದ ಭಾವಗಳ ಅಲೆಅಲೆಯನ್ನು ಒಳಗಣ ಬೆಳಕಿನಿಂದ ನೋಡಿ, ಅರಿತು ಆ ಪರಿಶ್ರಮದ ಸಹಾಯದಿಂದ ಇನ್ನೊಂದು ಜೀವನದ ಭಾವದ ಅಲೆಗಳನ್ನು ಕಾಣುವುದೇ ಕವಿಯ ದೃಷ್ಟಿ. ಶ್ರೀಮತಿ ರಾಜಮ್ಮನವರಲ್ಲಿ ಈ ದೃಷ್ಟಿ ಸುಲಕ್ಷಣವಾಗಿದೆ. ಆದುದರಿಂದಲೇ ಅವರು ವರ್ಣಿಸುವ ವಿಷಯ ಅವರು ವರ್ಣಿಸುವ ಹಾಗೆಯೇ ನಡೆದಿರಬೇಕೆಂದು ನಮಗೆ ಭಾಸವಾಗುವುದು. ಅಲ್ಲದೆ ಇವರು ಕಂಡದ್ದನ್ನು ಹೇಳುವುದರಲ್ಲಿ ಎಷ್ಟು ಮಾತು ಅವಶ್ಯಕವೋ ಅಷ್ಟನ್ನು ಮಾತ್ರ ಉಪಯೋಗಿಸಿದ್ದಾರೆ. ಕೇವಲ ಆಕಾರಕ್ಕಾಗಿ, ಗೌರವಕ್ಕಾಗಿ, ನಿಲ್ಲುವ ಮಾತುಗಳಿಗೆ ಈ ಕಾವ್ಯದಲ್ಲಿ ಸ್ಥಳವಿಲ್ಲ. ಇಲ್ಲಿ ಸಹಜವಾದ ಕಾವ್ಯದೃಷ್ಟಿಯೂ ಸರಳವಾದ ಕಾವ್ಯಶಕ್ತಿಯೂ ಸೇರಿ ಸುಂದರವಾದ ಒಂದು ಕಾವ್ಯವನ್ನು ನಿರ್ಮಾಣಮಾಡಿವೆ.

ಈ ಕಾವ್ಯದಲ್ಲಿ ಉಪಯೋಗಿಸಿರುವ ವೃತ್ತ ಬೇರೆ ಕನ್ನಡದಲ್ಲಿ ಈಗ ತಾನೆ ವಾಡಿಕೆಗೆ ಬರುತ್ತಿರುವ ಬಿಡಿವೃತ್ತ. ಕಂಡೂಕಾಣದೆ ಇರುವ ನಿಯಮದಿಂದ ಕೂಡಿ ಗದ್ಯವೋ ಎಂಬಂತೆ ತೋರುವ ಈ ವೃತ್ತವು ಚೆನ್ನಾಗಿ ಬಂದಾಗ ಒಂದೆರಡು ಒಡವೆಗಳನ್ನು ಮಾತ್ರ ತೊಟ್ಟ ಸುದಕ್ಷಿಣೆಯಂತೆ, ಪ್ರಭಾತಕಲ್ಪವಾದ ಶರ್ವರಿಯ ರೀತಿ ಮನೋಜ್ಞವಾಗಿರುವುದು. ನಿಯಮ ಕಡಮೆಯಾದದ್ದರಿಂದ ಇದನ್ನು ಚೆನ್ನಾಗಿ ಬರೆಯುವುದು ಕಷ್ಟ. ಇಂಥ ವೃತ್ತವನ್ನು ಬರೆಯುವುದರಲ್ಲಿ ಶ್ರೀಮತಿ ರಾಜಮ್ಮನವರು ಒಟ್ಟಿನಲ್ಲಿ ಅಸಾಧಾರಣವಾದ ಕುಶಲತೆಯನ್ನು ತೋರಿರುವರು. ಕನ್ನಡದ ಬಿಡಿವೃತ್ತದ ರೂಪು ನಿಯತವಾಗುವುದಕ್ಕೆ ಈ ಕಾವ್ಯದಿಂದ ಬಹಳ ಸಹಾಯವಾಗುವುದೆಂಬ ವಿಷಯದಲ್ಲಿ ಸಂದೇಹವಿಲ್ಲ.

ಈ ಕಾವ್ಯಕ್ಕಾಗಿ ಶ್ರೀಮತಿ ರಾಜಮ್ಮನವರಿಗೆ ವಿದ್ಯಾಭ್ಯಾಸದ ಇಲಾಖೆಯಿಂದ ಬಹುಮತಿಯ ಶುಲ್ಕವೊಂದು ದೊರೆಯಿತು. ಇದು ಎಲ್ಲ ದೃಷ್ಟಿಯಿಂದಲೂ ಸಂತೋಷಕರವಾದ ವಿಷಯ.

ಕನ್ನಡ ಸಾಹಿತ್ಯವು ನಡೆಯುತ್ತಿರುವ ಹೊಸದಾರಿಯನ್ನು ಸ್ವಲ್ಪ ಭಯದಿಂದ, ಸ್ವಲ್ಪ ಆಶೆಯಿಂದ, ನೋಡುತ್ತ ನಿಂತಿರುವವರಿಗೆ ಧೈರ್ಯವನ್ನು ಕೊಡುವ ಸಂದರ್ಭಗಳು ಹಲವು ಈ ಮೊದಲು ಕಂಡಿವೆ. ಕನ್ನಡದ ನುಡಿ ಚೇತನವು ಪರಂಜ್ಯೋತಿಗೆ ಮಾಡುವ ಪ್ರಾರ್ಥನೆಗೆ 'ಕರುಣಾಳು ಬಾ ಬೆಳಕೆ' ಎಂಬ ಮಾತಿನಲ್ಲಿ ರೂಪು ಕೊಟ್ಟಾಗ, 'ಅತಿ ಮೂಕನಾಗಿಹೆನು ಕರಕರೆಯ ಪಡುತಿಹೆನು' ಎಂದು ಕೊರಗಿ ಮಾನವನ ಮೂಗ ಅಳಲನ್ನು ನುಡಿದಾಗ, 'ಎಲ್ಲಿ ಭೂರಮೆ ದೇವ ಸನ್ನಿಧಿ ಬಯಸಿ ಬಿಮ್ಮನೆ ಬಂದಳೋ' ಎಂದು ನಮ್ಮ ನಾಡ ಸೊಗಸನ್ನು ಹೇಳಿ ವಿಜೃಂಭಿಸಿದಾಗ, 'ಅಂದಿನಾ ದೇವರುಗಳೆಲ್ಲ ಮಡಿದ್ಹೋಗಿಹರು' ಎಂದು ದೈವವನ್ನು ಕುರಿತ ಅಲ್ಪ ಭಾವನೆಗಳ ಚರಮ ಗೀತವನ್ನು ವಚಿಸಿದಾಗ, 'ಅಡಿಯಗೆಜ್ಜೆ ನಡುಗೆ ಹೆಜ್ಜೆಯಿಡುತ ಸುಗ್ಗಿ ಬರುತಿದೆ' ಎಂದು ಉಲ್ಲಾಸದಿಂದ ಹಾಡಿದಾಗ, 'ಬುರು ಬುರೂ ಬಸವಣ್ಣನಿದೊ' ಎಂದು ಎಳೆಯ ಮಗುವಿನ ಅವ್ಯಾಜ ಮನೋಹರವಾದ ಮಾತುಗಳನ್ನು ವರ್ಣಿಸಿದಾಗ, 'ಹಕ್ಕಿ ಹಾರುತಿದೆ ನೋಡಿದಿರಾ' ಎಂದು ಕವಿಕಂಡದ್ದನ್ನು ಸಾಮಾನ್ಯದೃಷ್ಟಿಗೆ ಹೃದಯಂಗಮವಾಗಿ ವಿವರಿಸಿದಾಗ, ಅದನ್ನು ನೋಡಿ ಯಾರು ತಾನೆ ಉತ್ಸಾಹ ಪಡದೆ ಇರುವರು? ಹೊಸ ಸಾಹಿತ್ಯದ ಹಿರಿಮೆಯನ್ನು ಸೂಚಿಸುವವೆಂಬ ಕಾರಣದಿಂದ ನಾನು ಈ ವಾಕ್ಯಗಳನ್ನು ಸದಾ ಜ್ಞಾಪಕದಲ್ಲಿಟ್ಟುಕೊಂಡಿದೇನೆ. ಇನ್ನು ಮೇಲೆ ಇವುಗಳ ಜೊತೆಗೆ 'ಮನದಿ ಇಂದೇನು ಉತ್ಸಾಹದಂಕುರವು', ಎಂಬ ಮಾತುಗಳನ್ನು ಸೇರಿಸಿಕೊಳ್ಳುತ್ತೇನೆ. ಈ ಸಂದರ್ಭಗಳಲ್ಲೆಲ್ಲ ಸುಂದರವಾದ ಭಾವ ಸುಂದರವಾದ ಮಾತಿನಲ್ಲಿ ರೂಪುಗೊಂಡಿದೆ. ಇಲ್ಲಿ ಕಾಣುವ ರೀತಿ ಪ್ರಪಂಚದ ಅತ್ಯುತ್ತಮ ಕಾವ್ಯಗಳ ರೀತಿ. ಇದನ್ನು ನೋಡಿದ ಯಾರಿಗಾದರೂ ಸರಸ್ವತಿ ಕನ್ನಡ ನುಡಿಯನ್ನು ಮೇಲಣ ಹಂತಕ್ಕೆ ಕರೆದುಕೊಂಡಳು ಎಂದು ತೋರಬೇಕು. ಇತರ ಭಾಷೆಗಳಲ್ಲಿ ಇಂತಹ ಬರವಣಿಗೆ ಇನ್ನೂ ಹೆಚ್ಚಾಗಿ ಇರಬಹುದು. ನಮ್ಮಲ್ಲಿರುವುದು ಕೊಂಚ. ಆದರೂ ಇದಿಷ್ಟು ಮೇಲಣ ಮೆಟ್ಟಲಿನ ಬರವಣಿಗೆ.

ಈ ಮುನ್ನುಡಿಯನ್ನು ಓದಿ 'ಏನು ಇಷ್ಟು ಉತ್ಸಾಹ' ಎಂದು ಕೆಲವರು ಕೇಳಬಹುದು. ಕಾವ್ಯವನ್ನು ಓದಿದರೆ ಅವರಿಗೆ ಅದರ ಕಾರಣ ತಿಳಿಯುವುದು. ವನವಾಸ ಹೋಗಿದ್ದ ನಮ್ಮ ನಾಡ ದೈವ, ನಮ್ಮ ನುಡಿಯ ಶಕ್ತಿ, ನಮ್ಮ ಜನದ ಜೀವ, ಇಂದು ಮರಳಿ ಬರುತ್ತಿವೆ. ನಮ್ಮ ಬಾಳು ಸಡಗರದಿಂದ ತುಂಬಿದೆ. ನಮ್ಮ ಕಾವ್ಯ ಸರಯೂ ನದಿಯಂತೆ ಹರುಷ ಭರದಿಂದ ಹರಿಯುತ್ತಿದೆ. ಬಹು ಕಾಲ ತಪಸ್ಸು ಮಾಡಿದ ನಮ್ಮ ಮಾತೃಭೂಮಿ ಇಷ್ಟರಲ್ಲೇ ತನ್ನ ತಪಸ್ಸಿನ ಸಿದ್ಧಿಯನ್ನು ಪಡೆಯುತ್ತಾಳೆ. ಈ ಕಾವ್ಯವನ್ನು ಓದಿ ನಮ್ಮ ಜನರ ಜೀವನದಲ್ಲಿ ಅದರ ಅರ್ಥವನ್ನು ಕುರಿತು ಯೋಚಿಸಿದವರಿಗೆಲ್ಲ ಇದು ನಿಜವೆಂದು ತೋರುವುದು. ಇದನ್ನು ರಚಿಸಿದವರು ನಮ್ಮ ಸೋದರಿಯೊಬ್ಬರೆಂದು ನೆನೆದವರಲ್ಲೆಲ್ಲ ಇದೇ ಉತ್ಸಾಹವು ಅಂಕುರಿಸುವುದು.

1927

ಆಸ್ಥಾನ ಮಹಾವಿದ್ವಾನ್ ಶ್ರೀ ಹೊಳವನಹಳ್ಳಿ ಶೇಷಾಚಾರ್ಯರ

# " ಶ್ರೀಮದ್ಭಗವದ್ಗೀತಾ "

ವೇದಮೂರ್ತಿಗಳಾದ ಬ್ರಹ್ಮ ಶ್ರೀ ಮಹಾವಿದ್ವಾನ್ ಹೊಳವನ ಹಳ್ಳಿ ಶೇಷಾಚಾರ್ಯರವರು ನಮ್ಮ ಜನರಿಗಾಗಿ ರಚಿಸಿರುವ ಈ ಗೀತಾ ವ್ಯಾಖ್ಯಾನ ಗ್ರಂಥವು ಕರ್ಣಾಟಕದ ನವಜೀವನದ ಪ್ರಮುಖ ಕೃತಿಗಳ ಮೇಲಣ ಪಂಕ್ತಿಯಲ್ಲಿ ನಿಲ್ಲತಕ್ಕದ್ದಾಗಿದೆ. ಈ ಮಾತು ಆಚಾರ್ಯರ ಪ್ರಶಂಸೆಗಾಗಿ ಹೇಳುವ ಮಾತಲ್ಲ. ಶ್ರೀಮಾನ್ ಶೇಷಾಚಾರ್ಯರವರು ಉದ್ದಾಮ ಪಂಡಿತರು; ಪ್ರತಿಭಾಯುಕ್ತರಾದ ಉಪನ್ಯಾಸಕರು. ಇದು ಬಹುಜನರಿಗೆ ತಿಳಿದ ವಿಷಯ: ಇದನ್ನು ನಾನು ಹೇಳಬೇಕಾಗಿಲ್ಲ. ಆದರೆ ಆಚಾರ್ಯರಂಥ ಪಂಡಿತರು ಜನ ಸಾಮಾನ್ಯದ ಏಳ್ಗೆಯಲ್ಲಿ ತೋರಿಸಿರುವ ಶ್ರದ್ಧೆಯನ್ನು ಕುರಿತು ಎಷ್ಟು ಹೇಳಿದರೂ ಕಡಮೆಯೇ. ಗ್ರಂಥಗಳನ್ನು ಓದಿ ಪಂಡಿತರಾಗುವವರು ಕೆಲವರು; ಓದಿದ್ದನ್ನು ಪಂಡಿತರು ಮೆಚ್ಚಿ ಶ್ಲಾಘಿಸುವಂತೆ ಪಂಡಿತರ ರೀತಿಯಲ್ಲಿ ಹೇಳುವವರು ಕೆಲವರು; ಹೀಗಲ್ಲದೆ ಕಲಿತ ವಿಷಯವನ್ನು ಮನಸ್ಸಿನಲ್ಲಿ ತಿರುವಿಹಾಕಿ ದಿನದ ಜೀವನಕ್ಕೆ ಅನ್ವಯಿಸಿ ಪಂಡಿತರಿಗೆ ಮೆಚ್ಚುವಂತೆ ಪಾಮರರಿಗೆ ಮನ ಮುಟ್ಟುವಂತೆ ಹೇಳುವವರು ವಿರಳ. ಇದಕ್ಕೆ ಬೇಕಾದ ಶಕ್ತಿ ಇರುವುದು ಅಪೂರ್ವ; ಶಕ್ತಿ ಇದ್ದರೂ ಅದು ವ್ಯಕ್ತವಾಗುವುದು ಸಾಮಾನ್ಯ ಜನದಮೇಲೆ ಕನಿಕರವಿದ್ದರೆ ಮಾತ್ರ. ಇಂಥವರು ಹರಿದಾಸರು. ಶ್ರೀಮಾನ್ ಶೇಷಾಚಾರ್ಯರವರಲ್ಲಿ ಹರಿದಾಸರ ರೀತಿಯ ಈ ಕನಿಕರ ತುಂಬಿದೆ. ಆದ್ದರಿಂದಲೇ ಅವರು ಉಪನ್ಯಾಸ ಮಾಡುವಾಗ ಅವರ ಒಂದೊಂದು ಮಾತೂ ಕೇಳುವವರ ಮನಸ್ಸಿನಲ್ಲಿ ಚೆನ್ನಾಗಿ ನಾಟುವುದು. ಆದ್ದರಿಂದಲೇ ಅವರು ಈ ಗ್ರಂಥವನ್ನು ರಚಿಸಿರುವುದು. ಈ ಗ್ರಂಥವು ಈ ಕಾರಣದಿಂದಲೇ ಕನ್ನಡದ ಪ್ರಮುಖ ಗ್ರಂಥಗಳಲ್ಲಿ ಒಂದಾಗಿ ನಿಲ್ಲತಕ್ಕದ್ದಾಗಿರುವುದು.

ಎಲ್ಲರಿಗೂ ಸಿಕ್ಕಬೇಕು, ಎಲ್ಲರಿಗೂ ಉಪಯೋಗವಾಗಬೇಕು, ಎಂದು ಬರೆದಿರುವುದರಿಂದ ಈ ವ್ಯಾಖ್ಯಾನದಲ್ಲಿ ಮಾತುಕಡಮೆಯಾಗಿ

ಭಾವವನ್ನು ತಿಳಿಸುವುದಕ್ಕೆಷ್ಟೋ ಅಷ್ಟರಮಟ್ಟಿಗೆ ಮಾತ್ರ ಇದೆ; ಚರ್ಚೆ ಕಡಮೆಯಾಗಿ ಅದರ ಫಲವಾಗಿ ತಿಳಿಯುವ ವಿಷಯವೇ ಮುಖ್ಯವಾಗಿ ಉಕ್ತವಾಗಿದೆ; ಮತಭೇದಗಳ ಪ್ರಕಟನೆ ಕಡಮೆಯಾಗಿ ಗುರುಮುಖ ದಿಂದ ತಿಳಿದು ಭಕ್ತಿಯಿಂದ ಜೀವನದಲ್ಲಿ ಅನುಷ್ಠಿತವಾದ ತತ್ತ್ವಗ ನಿರೂಪಿತವಾಗಿದೆ. ವ್ಯಾಖ್ಯಾನವು ಸರಳಹೃದಯರೂ ಜ್ಞಾನಿಗಳೂ ಆದ ಹಿರಿಯರೊಬ್ಬರು ಕಿರಿಯರಿಗಾಗಿ ಹೇಳುವ ಉಪದೇಶ ಹೇಗೆ ಇರಬೇಕೋ ಹಾಗೆ ಇದೆ. ಇದರ ಸಹಾಯದಿಂದ ಒಬ್ಬೊಬ್ಬರೂ ಗೀತೆಯ ಅರ್ಥವನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ತಿಳಿದುಕೊಂಡು ಜೀವನವನ್ನು ಒಳ್ಳೆಯ ದಾರಿಗೆ ತಿದ್ದಿಕೊಳ್ಳುವುದಕ್ಕೆ ಯತ್ನಮಾಡಬಹುದಾಗಿದೆ. ನೋಡಹೋದರೆ ಗೀತೆಯ ಮಹಿಮೆಯೇ ಇದು. ಆ ಮಹಾಗ್ರಂಥವು ಜ್ಞಾನವೆಲ್ಲದರ ಮೂಲಸಾದ ಭಗವಂತನು ಸರಳಹೃದಯನಾಗಿ ಕೃಪಾವಿಷ್ಟನಾಗಿ ಕಿರಿಯ ನಾದ ಅರ್ಜುನನ ಬದುಕನ್ನು ತಿದ್ದುವುದಕ್ಕಾಗಿ ನುಡಿದ ಉಪದೇಶ ಈ ಕಾರಣದಿಂದ ಗೀತೆಯಲ್ಲಿ ಮಾತು ಸುಲಭ. ನೋಡ ನೋಡಿದಂತೆ ಭಾವವು ಆಳವಾಗಿ ಕಾಣುವುದು ನಿಜ; ಆದರೂ ಮಾತು ಓದಿದಂತೆ ಅವರವರ ಯೋಗ್ಯತೆಗೆ ತಕ್ಕುದಾದ ಸುಲಭವಾದ ಒಂದು ಅರ್ಥವನ್ನು ಕೊಡುವುದು; ವಿಚಾರದಲ್ಲಿ ಮನಸ್ಸನ್ನು ಪ್ರೇರಿಸುವುದು; ಎಷ್ಟು ಯತ್ನಿಸಿದರೆ ಅಷ್ಟು ತಿಳಿವಿಗೆ ಬರುವುದು. ಆರಂಭದಲ್ಲಿ ಸ್ವಲ್ಪಮಟ್ಟಿಗೆ ಮನಸ್ಸಿಗೆ ಬಂದು ಮೆಲ್ಲನೆ ಅದನ್ನು ಸ್ವಾಧೀನ ಮಾಡಿಕೊಂಡು ಜೀವನದ ಮುಖ್ಯ ಧ್ಯೇಯವಾದ ಶಾಂತಿಯನ್ನು ಸೇರುವ ದಾರಿಯಲ್ಲಿ ಮನುಷ್ಯನನ್ನು ಸ್ಥಿರವಾಗಿ ನಿಲ್ಲಿಸುವುದು.

ಗೀತೆಯ ಒಂದೊಂದು ಮಾತಿನಲ್ಲೂ ಎಂತಹ ಉಜ್ಜೀವಕ ಶಕ್ತಿ ಇದೆ! " ನಹಿ ಕಲ್ಯಾಣ ಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ " ಈ ಮಾತಿನ ಸಂಬೋಧನೆಯಲ್ಲಿ ಎಷ್ಟು ಕನಿಕರ. ಇದರ ಭರವಸೆ ಎಷ್ಟು. " ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ. " " ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿಯತ್ ಯತ್ತ ಪಸ್ಯತಿ ಕೌಂತೇಯ ತತ್ಕುರುಷ್ವ ಮದರ್ಪಣಂ " " ಕರ್ಮಣ್ಯೇವಾಧಿ ಕಾರಸ್ತೇ ಮಾಫಲೇಷು ಕದಾಚನ " " ಸರ್ವ ಧರ್ಮಾನ್ ಪರಿತ್ಯಜ್ಯ

ಮಾಮೇಕಂ ಶರಣಂ ವ್ರಜ" ಈ ಗ್ರಂಥವನ್ನು ಹಿಡಿದೆತ್ತಿ ನೋಡು ವವರಿಗೆ ಕ್ಷಣಕ್ಷಣಕ್ಕೂ ಇಂಥ ರತ್ನಗಳು ಸಿಕ್ಕುವುವು. ಇಂಥ ಮಾತುಗಳು ಸಮಯದಲ್ಲಿ ಬಹು ಆಪ್ಯಾಯಮಾನವಾಗುತ್ತವೆ. ಇದು ಅನುಭವ ದಿಂದ ತಿಳಿಯುವ ವಿಷಯ. ಹಿಂದೆ ಜನರು ಉತ್ತಮ ವಚನಗಳೆಂದು ಮುಕ್ತಾಫಲಗಳೆಂದು ವರ್ಣಿಸಿದ ಮಾತುಗಳೇ ಇವು. ಆದರೆ ಇವುಗಳ ಅರ್ಥವು ಹೃದಯಕ್ಕೆ ಗೋಚರವಾಗಬೇಕಾದರೆ ಅದಕ್ಕೆ ತಕ್ಕ ಸಂದರ್ಭ ಗಳು ಒದಗಬೇಕು. ದಾಹವಿಲ್ಲದವನಿಗೆ ನೀರುಬೇಕಿಲ್ಲ; ನೀರಿನ ಉಜ್ಜೀವಕ ಶಕ್ತಿಯು ತಿಳಿಯಬೇಕಾದರೆ ದಾಹವಾಗಬೇಕು. ಹಾಗೆಯೇ ಈ ಗ್ರಂಥದ ಉಪದೇಶ ಎಷ್ಟು ಮುಖ್ಯವಾದದ್ದು. ಮನುಷ್ಯನಾದವನು ನಿಯತ ವಾದ ಕರ್ಮವನ್ನು ಮಾಡಬೇಕು; ದೋಷ ಸೇರುವುದು ಎಂಬ ಭಯದಿಂದ ಕರ್ಮವನ್ನು ಮಾಡದಿರಲಾಗದು; ಮನುಷ್ಯಮಾತ್ರನಿಗೆ ದೋಷ ಸೇರದ ಕರ್ಮವನ್ನು ಮಾಡುವುದು ಸಾಧ್ಯವಲ್ಲ; ಎಷ್ಟು ಸಾಧ್ಯವೋ ಅಷ್ಟು ಶುದ್ಧವಾಗಿ ಕರ್ಮವನ್ನು ಮಾಡಬೇಕು. ಅಲ್ಲದೆ ಕರ್ಮವೇ ಇಲ್ಲ ದಂತೆ ಸುಮ್ಮನಿರುವುದೂ ಸಾಧ್ಯವಿಲ್ಲ. ಮಾಡುವ ಕರ್ಮವನ್ನು ಅದು ಕರ್ತವ್ಯವೆಂಬ ಭಾವನೆಯಿಂದ ಮಾಡಬೇಕು; ಅದರ ಫಲವನ್ನು ಅಪೇಕ್ಷಿಸಿ ಮಾಡಬಾರದು. ನಾವು ನಿರೀಕ್ಷಿಸುವ ಫಲವು ನಮ್ಮೊಬ್ಬರ ಒಂದು ಕರ್ಮದಿಂದಲೇ ಬರುತ್ತದೆಯೆಂದು ಹೇಗೆ ಹೇಳುವುದು? ಈ ಕಾರ್ಯವನ್ನು ಪ್ರೇರಿಸಿದ ಭಗವಂತನೇ ಅದರ ಫಲವನ್ನು ಕುರಿತು ವಿಧಾಯಕ ನಾಗಿದಾನೆ; ಅವನು ಅದನ್ನು ನೋಡಿಕೊಳ್ಳುತ್ತಾನೆ. ಕಾರ್ಯವನ್ನು ಮಾಡಿ ಭಗವಂತನಲ್ಲಿ ಅರ್ಪಿಸಬೇಕು: ಮುಕ್ತನಿಗೂ ಸಕ್ತನಿಗೂ ಇದೇ ವ್ಯತ್ಯಾಸ. ಇಬ್ಬರೂ ಒಂದೇ ರೀತಿ ನಡೆಯುವರು; ಒಬ್ಬನು ಭಗವಂತನ ನೆನಪಿನಲ್ಲಿ ಕರ್ಮವನ್ನು ಮಾಡುತ್ತಾನೆ, ಶಾಂತಿಯನ್ನು ಪಡೆಯುತ್ತಾನೆ. ಮತ್ತೊಬ್ಬನು ನನ್ನದೆಂದು ಅದೇ ಕರ್ಮವನ್ನು ಮಾಡಿ ಕ್ಲೇಶದಲ್ಲಿರು ತ್ತಾನೆ. ಕರ್ತವ್ಯವೆಂದು ತೋರಿದ ಸಂದರ್ಭದಲ್ಲಿ ಅದನ್ನು ಮಾಡು ವುದಕ್ಕೆ ಹಿಮ್ಮೆಟ್ಟಬಾರದು. ಮಮತೆಯನ್ನು ಬಿಟ್ಟು ಕರ್ತವ್ಯವೆಂಬ ಭಾವದಿಂದ ಕರ್ಮವನ್ನು ಮಾಡಿದರೆ ಅದರಿಂದ ಕೆಟ್ಟದಾಗಲಾರದು. ಒಳ್ಳೆಯದನ್ನು ಮಾಡಿದ ಯಾರೇ ಆಗಲಿ ದುರ್ಗತಿಯನ್ನು ಹೊಂದಲಾರ

ನಲ್ಲವೆ? ಧರ್ಮಕರ್ಮಗಳ ಚರ್ಚೆಯೂ ಅತಿಯಾಗಬಾರದು. ಸದಾ ಭಗವಂತನನ್ನು ನೆನೆಯಬೇಕು; ಅವನನ್ನು ಕುರಿತು ಎಲ್ಲವನ್ನೂ ಮಾಡಬೇಕು. ನನಗೆ ನೀನೇ ಗತಿಯೆಂದು ಅವನನ್ನು ಶರಣುಹೊಂದಬೇಕು. ಆಗ್ಗೆ ಅವನು ನಮ್ಮನ್ನು ಉದ್ಧಾರ ಮಾಡುತ್ತಾನೆ. ಇದಕ್ಕಿಂತ ಹಿರಿಯ ಉಪದೇಶವಾವುದು? ಇಷ್ಟೆಲ್ಲಾ ಉಪದೇಶ ಇಷ್ಟು ಸುಲಭವಾಗಿ ಹೀಗೆ ಇರುವುದು ಇನ್ನೆಲ್ಲಿ?

ಗೀತೆಯು ಈ ಕಾರಣದಿಂದ ಪ್ರಪಂಚದ ಅತ್ಯುತ್ತಮವಾದ ಗ್ರಂಥಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿದೆ. ಪಾಶ್ಚಾತ್ಯ ಪಂಡಿತರನೇಕರು ಈ ಗ್ರಂಥವನ್ನು ಬಹಳವಾಗಿ ಸ್ತೋತ್ರಮಾಡಿದಾರೆ. ಪರದೇಶದವರ ಶ್ಲಾಘನೆಯಿಂದ ಈ ಗ್ರಂಥಕ್ಕೆ ಪ್ರಶಸ್ತಿ ಬರುವುದೆಂದು ಇಲ್ಲಿ ಅಭಿಪ್ರಾಯವಲ್ಲ. ಕೆಲವು ಸಂದರ್ಭಗಳಲ್ಲಿ ನಾವು ಅಂಥ ಶ್ಲಾಘನೆಯಿಂದ ನಮ್ಮ ದೇಶದ ಉತ್ತಮ ವಸ್ತುಗಳಿಗೇ ಒಂದು ಅಂತಸ್ತು ಬಂದಿತೆಂಬಂತೆ ಭ್ರಮಿಸುವುದು ನಿಜ. ಆದರೆ ಸ್ಕ್ಯಾಪೆನ್ ಹಾರ್, ಮ್ಯಾಕ್ಸ್‌ಮುಲರ್, ಡಾಯುಸನ್ ಮೊದಲಾದ ಮಹನೀಯರು ಗೀತೆಯನ್ನಾಗಲಿ ಬೇರೆ ಯಾವ ಗ್ರಂಥವನ್ನಾಗಲಿ ಪ್ರಶಂಸಿಸುವಾಗ ಈ ಭಾವದಿಂದ ಪ್ರಶಂಸಿಸಲಿಲ್ಲ. ನಾವೂ ಅವರ ಮಾತನ್ನು ಹಾಗೆ ಗ್ರಹಿಸಬಾರದು. ನಿಮ್ಮ ಬೀದಿಯ ಸೂರ್ಯ ನಮ್ಮ ಬೀದಿಯ ಸೂರ್ಯನಂತೆಯೇ ಇದಾನೆ; ನಮ್ಮ ಗವಾಕ್ಷದಲ್ಲಿ ಕಾಣುವ ಸೂರ್ಯನಿಗಿಂತ ನಿಮ್ಮ ಗವಾಕ್ಷದಲ್ಲಿ ಕಾಣುವ ಸೂರ್ಯನ ಬೆಳಕು ಕಡಮೆ, ಎಂದು ಒಂದು ಬೀದಿ ಒಂದು ಮನೆಯ ಬಾಲಕರು ಇನ್ನೊಂದು ಬೀದಿ ಇನ್ನೊಂದು ಮನೆಯ ಬಾಲಕರಿಗೆ ಹೇಳಬಹುದು. ಇದನ್ನು ಕೇಳಿದ ಬಾಲಕರು ಅದರಿಂದ ಉಬ್ಬಬಹುದು ಅಥವಾ ತಗ್ಗಬಹುದು. ಬಾಲಕರಲ್ಲಿ ಇದು ಕ್ಷಮ್ಯ. ವಯಸ್ಸಾದವರಲ್ಲಿ ಇಂಥ ಮಾತು ಹಾಸ್ಯಾಸ್ಪದವಾಗುವುದು. ಎಲ್ಲ ಬೆಳಕನ್ನು ಕೊಡುತ್ತಿರುವವನು ಒಬ್ಬನೇ ಸೂರ್ಯ. ಭಗವಂತನ ವಾಣಿಯು ಅನೇಕ ದೇಶಗಳಲ್ಲಿ ಅನೇಕ ಕಾಲಗಳಲ್ಲಿ ಅನೇಕ ರೀತಿಯಲ್ಲಿ ಮಾನವನಿಗೆ ಉಪದೇಶ ಮಾಡಿದೆ. ಭಾಷೆ ಬೇರೆಯಾದರೆ ವಿಷಯ ಬೇರೆಯಲ್ಲ; ನುಡಿದವನು ಬೇರೆಯಾದ ಮಾತ್ರಕ್ಕೆ ಭಾವ ಬೇರೆಯಾಗಲಿಲ್ಲ. ಗುರುವಚನವೆಲ್ಲವೂ

ದಿವ್ಯವಾಣಿ. ಗೀತೆ ಆ ದಿವ್ಯವಾಣಿ ಭಾರತವರ್ಷದಲ್ಲಿ ಧರಿಸಿದ ರೂಪು. ಪಾಶ್ಚಾತ್ಯರು ಅದನ್ನು ಗುರುತಿಸಿದ್ದರಿಂದ ಅದಕ್ಕೆ ಪ್ರಶಸ್ತಿ ಬರುವುದಿಲ್ಲ. ನಮ್ಮ ಬೀದಿಯ ಸೂರ್ಯ ನಮ್ಮ ಗವಾಕ್ಷದ ಸೂರ್ಯ ಎಂಬ ರೀತಿಯ ಮಾತುಗಳನ್ನು ನಾವು ಬಿಡಬೇಕೆಂದು ಮಾತ್ರ ನಾವು ಇದರಿಂದ ತಿಳಿಯಬೇಕು. ಪಾಶ್ಚಾತ್ಯ ವಿದ್ಯೆಯ ಆರಂಭದೆಸೆಯಲ್ಲಿ ನಮ್ಮ ಸೀಮೆಯಲ್ಲಿ ಮಹತ್ತರವಾದ ಅವ್ಯವಸ್ಥೆಯೊಂದುಂಟಾಯಿತು. ಆ ವಿದ್ಯೆಯ ಅಲೆಗಳ ಬಡಿತದಿಂದ ನಮ್ಮವರ ಅರಿವು ಕಾಲುತಪ್ಪಿ ಕೆಳಕ್ಕೆ ಬಿದ್ದಿತು. ಆ ಅಲೆಗಳಿಗೆ ಸಿಕ್ಕದೆಯೇ ನಿಂತ ಮಹನೀಯರ ಮಾತು ಬೇರೆ; ಅವರಿಗೆ ಆ ಸಮುದ್ರದ ಸಮಾಚಾರವೇ ಗೊತ್ತಿಲ್ಲ. ಇಂಗ್ಲಿಷನ್ನು ಕಲಿತವರಲ್ಲಿ ಅನೇಕರು ಆದರ ಲೌಕಿಕ ವಿದ್ಯೆಯ ವಿಸ್ತಾರದಿಂದ ಮುಗ್ಧರಾಗಿ ನಮ್ಮ ಪೈತಾಮಹವಾದ ಆಸ್ತಿಯನ್ನು ಮರೆತೆವು; ಅಥವಾ ಅದರ ವಿಷಯದಲ್ಲಿ ಜುಗುಪ್ಸಿತರಾದೆವು. ಹೀಗಿರುವಲ್ಲಿ ಪಾಶ್ಚಾತ್ಯರೇ ಕೆಲವರು ನಮ್ಮ ಗ್ರಂಥಗಳನ್ನು ಸ್ತುತಿಸುವುದಕ್ಕೆ ಮೊದಲು ಮಾಡಿದರು. ನಮ್ಮದಲ್ಲದ ಯಾವುದನ್ನೂ ಓದದ ಪಂಡಿತರಿಂದ ಸಾಧ್ಯವಲ್ಲದೆ ಇದ್ದ ರೀತಿಯಲ್ಲಿ ಈ ಪಾಶ್ಚಾತ್ಯ ಪಂಡಿತರು ನಮ್ಮ ತಿಳಿವಿನ ಗುಣವನ್ನು ಅಳೆಯುವುದಕ್ಕೆ ಒಂದು ಪ್ರಮಿತಿಯನ್ನು ತಂದರು. ಇದರಿಂದ ನಮ್ಮ ಮನಸ್ಸು ಈ ಕಡೆ ತಿರುಗಿತು. ಹೀಗೆ ಮರಳಿ ಬಂದ ಶ್ರದ್ಧೆಯಿಂದ ಇನ್ನು ಮುಂದೆ ನಮ್ಮ ದೇಶವು ಉದ್ಧಾರವಾಗಬೇಕಾಗಿದೆ.

ಉದ್ಧಾರವಾಗಬೇಕಾದರೆ ನಮಗೆ ಇದಲ್ಲದೆ ಬೇರೆ ಗತಿಯಿಲ್ಲ. ಮನೆಯಲ್ಲಿ ಮೃಷ್ಟಾನ್ನ ಸಿದ್ಧವಾಗಿರಲು ನಾವು ಭಿಕ್ಷಾಪಾತ್ರೆಯನ್ನು ಹಿಡಿದು ಬೀದಿಬೀದಿ ಅಲೆಯುತ್ತಿದ್ದೇವೆ. ಅನ್ನ ಬೇಕಾದಹಾಗಿದೆ, ತಿನ್ನುವ ಪುಣ್ಯವಿಲ್ಲ. ಪಾಶ್ಚಾತ್ಯವಿದ್ಯೆಯನ್ನು ಕಲಿತವರಲ್ಲಿ ಕೂಡ ಸಾಕ್ರಟೀಸ್, ಎಪಿಕ್ಟೇಟಸ್, ಸ್ಪಿನೋಜ, ಸೆಂಟ್‌ಫ್ರಾನ್‌ಸಿಸ್, ಇಂಥವರ ಗ್ರಂಥಗಳನ್ನು ಓದಿ ಸುಖಪಡುವವರ ಸಂಖ್ಯೆ ಬಹಳ ಕಡಮೆ. ಹಾಗೆ ನೋಡುವವರಿಗೆ ಅಲ್ಲಿ ಸಿಕ್ಕುವ ವಿಷಯವೂ ಇದೇ; ಬೇರೆಯಲ್ಲ. ಎಷ್ಟು ಯುಗ ತಪಸ್ಸುಮಾಡಿ ಭಾರತ ವರ್ಷ ಈ ತತ್ತ್ವವನ್ನು ತಿಳಿಯಿತೋ! ಇದನ್ನು ಇನ್ನೂ ಅಶ್ರದ್ಧೆಯಿಂದ ನೋಡೋಣವೆ?

ಇದಕ್ಕೆ ಬ್ರಾಹ್ಮಣರಿಲ್ಲ. ಬ್ರಾಹ್ಮಣೇತರರಿಲ್ಲ. ಹಿಂದೂಗಳಿಲ್ಲ; ಮುಸಲ್ಮಾನರಿಲ್ಲ. ಈ ಧರ್ಮವು ವಿಶ್ವಧರ್ಮ, ಸನಾತನ ಧರ್ಮ. ಇದರ ಪ್ರಭು ಅಚ್ಯುತನು. ಈ ಧರ್ಮವನ್ನೂ ಇದರ ಪ್ರಭುವನ್ನೂ ದೇಶದೇಶದ ಜನರು ಬೇರೆ ಬೇರೆಯ ಹೆಸರಿನಿಂದ ಕರೆಯಬಹುದು: ಆದರೆ ಇದು ಮಾನವವರ್ಗದ ಧರ್ಮ ವಿವೇಚನೆಯೆಲ್ಲದರ ಸಾರತತ್ತ್ವವಾಗಿದೆ. ಇದನ್ನು ನಮ್ಮ ಹಿರಿಯರು ಹಿಂದೆ ಪುರಾಣ ಇತಿಹಾಸ ಹರಿಕಥಾಪ್ರಸಂಗ ಮುಂತಾದ ರೂಪಗಳಲ್ಲಿ ಜನ ಸಾಮಾನ್ಯದಲ್ಲಿ ಪ್ರಚಾರ ಮಾಡಿದರು. ಅದರ ಫಲವು ಎಷ್ಟೇ ಜೀರ್ಣವಾಗಿಯಾದರೂ ಈಗಲೂ ನಮ್ಮ ಜನರ ಬದುಕಿನಲ್ಲಿ ಕಾಣುತ್ತಿದೆ. ನಾವು ಅದನ್ನು ಜನರಲ್ಲಿ ಮತ್ತೆ ತರಬೇಕು. ಜನಾಂಗದ ಜೀವನದ ಎಲ್ಲಾ ಕಾರ್ಪಣ್ಯಕ್ಕೂ ಎಲ್ಲಾ ದೌರ್ಬಲ್ಯಕ್ಕೂ ಇಲ್ಲಿ ಉಪಶಮನವಿದೆ; ಎಲ್ಲ ಅಭ್ಯುದಯಕ್ಕೂ ಶ್ರೇಯಸ್ಸಾಧನೆಗೂ ಇಲ್ಲಿ ಮೂಲ ಮಂತ್ರವಿದೆ. ನಾವು ಇದನ್ನು ವರಿಸಬೇಕು; ಜಾತಿಮತ ಭೇದಗಳ ವಿರಸತೆಯನ್ನು ಬಿಟ್ಟು ಸಾರ್ವಜನಿಕವಾದ ಸುಖದ ಮುಖ್ಯ ಸೂತ್ರವನ್ನು ಹಿಡಿದು ನಡೆಯಬೇಕು.

ಶ್ರೀಮಾನ್ ಶೇಷಾಚಾರ್ಯರವರು ಅಪೇಕ್ಷಿಸಿದಂತೆ ನಾನು ಈ ಗ್ರಂಥವನ್ನು ಮುದ್ರಾಶಾಲೆಗೆ ಸಿದ್ಧಪಡಿಸಿ ಅಚ್ಚಿನ ಕರಡುಗಳನ್ನು ತಿದ್ದಿ ಮುದ್ರಣದ ಕೆಲಸವನ್ನು ನೋಡಿಕೊಂಡೆನು. ಹೀಗೆ ಮಾಡುವುದರಲ್ಲಿ ನನಗೆ ಆಗಾಗ ತೋರಿದ ಒಂದೆರಡು ಮಾತನ್ನು ಮೇಲೆ ಸೂಚಿಸಿದೇನೆ. ಈ ಕೆಲಸ ಮಾಡುವುದರಲ್ಲಿ ನನಗೆ ಒಂದು ರೀತಿಯಲ್ಲಿ ಗೀತೆಯ ಪಾಠ ವಾಯಿತೆಂದು ಹೇಳಬೇಕು. ಆಚಾರ್ಯರವರು ಈಗ ಸುಮಾರು ಆರು ವರ್ಷಗಳ ಹಿಂದೆ ಒಂದು ಸಲ ನನಗೆ ಗೀತೆಯ ವಿಷಯ ಎರಡು ಮಾತು ಹೇಳಿದಾಗ ಇದನ್ನು ತಾವು ನಮ್ಮ ಜನಕ್ಕಾಗಿ ಬರೆದಿಡಬೇಕೆಂಬುದಾಗಿ ನಾನು ಅವರನ್ನು ಬೇಡಿದೆನು. ಆ ಮೊದಲೇ ಅವರು ಈ ವಿಚಾರವಾಗಿ ಒಂದು ಉಪನ್ಯಾಸವನ್ನು ಬರೆದು ಮುಗಿಸಿದ್ದರು. ಆಗ ಬರೆದ ಉಪನ್ಯಾಸವು ಈಗಲೂ ಹಾಗೆಯೇ ಇದೆ. ಉಪನ್ಯಾಸದಿಂದ ಗೀತೆಯ ಪರಿಚಯ ಚೆನ್ನಾಗಿ ಆಗಲಾರದು, ಪದಶಃ ಅರ್ಥವನ್ನು ಬರೆದು ಉಪನ್ಯಾಸದ ವಿಷಯವನ್ನು ಅದರಲ್ಲಿ ಐಕ್ಯಮಾಡಬೇಕು, ಎಂದು ಬೇರೆ ಕೆಲವರು

ಆಚಾರ್ಯರನ್ನು ಪ್ರಾರ್ಥಿಸಿದರು. ಅವರು ಅದಕ್ಕೆ ಒಪ್ಪಿ ತಮ್ಮ ಶ್ರಮವನ್ನು ಲಕ್ಷ್ಯಮಾಡದೆ ಈ ಗ್ರಂಥದಲ್ಲಿ ಕಾಣುವ ರೂಪಿನಲ್ಲಿ ವ್ಯಾಖ್ಯಾನವನ್ನು ಮತ್ತೆ ಬರೆದರು. ಹಿಂದೆ ಇದರ ವಿಷಯದಲ್ಲಿ ನಾನು ಸ್ವಲ್ಪ ಆಸಕ್ತಿಯನ್ನು ತೋರಿಸಿದ್ದ ಕಾರಣದಿಂದ ಆಚಾರ್ಯರು ಇದರ ಕೈಬರಹದ ಪ್ರತಿಯನ್ನು ನೋಡಿ ಅಚ್ಚುಮಾಡಿಸುವ ಕೆಲಸವನ್ನು ನನಗೆ ವಹಿಸಿದರು. ಇಂಥ ಸಂದರ್ಭದಲ್ಲಿ ಹೇಗಾದರೂ ಸ್ವಲ್ಪ ದುಡಿಯುವುದು ಮನುಷ್ಯನಿಗೆ ಒಳ್ಳೆಯದು. ದೇವರ ಉತ್ಸವದಲ್ಲಿ ಚಾಮರ ಬೀಸುವವನಂತೆ ಇಂಥವನಿಂದ ಇನ್ನೇನು ಸೇವೆ ಆದರೂ ಆಗದಿದ್ದರೂ ಅವನ ಕಡೆ ಸ್ವಲ್ಪಗಾಳಿ ಬೀಸಿ ಅವನ ತಾಪ ಸ್ವಲ್ಪ ಕಡಮೆಯಾಗುತ್ತದೆ. ಆಚಾರ್ಯರವರು ನನ್ನನ್ನು ಈ ಕೆಲಸದಲ್ಲಿ ನಿಯೋಜಿಸಿ ನನಗೆ ಗೀತೆಯ ಪರಿಚಯವಾಗುವಂತೆ ಮಾಡಿ ನನ್ನಲ್ಲಿ ತೋರಿಸಿರುವ ವಿಶ್ವಾಸಕ್ಕಾಗಿ ನಾನು ಇವರಿಗೆ ಬಹಳ ಕೃತಜ್ಞನಾಗಿದೇನೆ. ಈ ಗ್ರಂಥಕ್ಕೆ ಒಂದು ಮುನ್ನುಡಿಯನ್ನು ಬರೆಯುವ ಸಾಹಸವನ್ನು ನಾನು ಉದ್ದೇಶಿಸಿರಲಿಲ್ಲ. ಆದರೆ ಆಚಾರ್ಯರು ಇದು ಆವಶ್ಯಕವೆಂದು ಅಪ್ಪಣೆಮಾಡಿದ್ದರಿಂದ ಇದನ್ನು ಬರೆದಿದೇನೆ.

* * * * *

1928

ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರರ

# ಹಳ್ಳಿಯ ಚಿತ್ರಗಳು

ಈಗ ಐದು ತಿಂಗಳ ಹಿಂದೆ ಒಂದು ದಿನ ನಾನು ಕಚೇರಿಯಲ್ಲಿದ್ದಾಗ ನನಗೆ ದಿನದ ಟಪಾಲಿನೊಂದಿಗೆ ಒಂದು ಪತ್ರ ಬಂದಿತು. ಅದನ್ನು ಬರೆದವರು ನನ್ನ ವಿಷಯದಲ್ಲಿ ಬಹಳ ವಿಶ್ವಾಸವನ್ನು ಸೂಚಿಸಿ ತಾವು ಗ್ರಾಮಜೀವನದ ಚಿತ್ರಗಳ ಒಂದು ಪುಸ್ತಕವನ್ನು ಬರೆದಿರುವುದಾಗಿಯೂ, ಅದನ್ನು ನಾನು ಒಂದು ಸಲ ನೋಡಬೇಕೆಂತಲೂ, ಅದಕ್ಕೆ ಒಂದು ಮುನ್ನುಡಿಯನ್ನು ಬರೆದು ಕೊಡಬೇಕೆಂತಲೂ ಕೇಳಿದ್ದರು. ಪತ್ರವನ್ನು ನೋಡಿಯೇ ನನಗೆ ಅದನ್ನು ಬರೆದವರ ವಿಷಯದಲ್ಲಿ ಪ್ರೀತಿ ಹುಟ್ಟಿತು; ಅವರ ಗ್ರಂಥವು ಚೆನ್ನಾಗಿರುವುದೆಂದು ಭಾಸವಾಯಿತು. ಇದಾದ ಐದಾರು ದಿನದ ಮೇಲೆ ಗ್ರಂಥಕರ್ತರು ನನ್ನ ಬಳಿ ಬಂದು ಪುಸ್ತಕದ ಕೆಲವು ಭಾಗಗಳನ್ನು ಓದಿ ಹೇಳಿದರು. ಅವರ ವಿಷಯದಲ್ಲೂ ಅವರ ಗ್ರಂಥದ ವಿಷಯದಲ್ಲಿಯೂ ನನಗೆ ಮೊದಲೇ ಉಂಟಾಗಿದ್ದ ಭಾವವು ಅವರ ಓದನ್ನು ಕೇಳಿ ಸಮರ್ಥವಾಯಿತು. ಆ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವುದಕ್ಕೆ ನಾನು ಅಂದು ಸಂತೋಷದಿಂದ ಒಪ್ಪಿದೆನು; ಇಂದು ಅದನ್ನು ಬಹಳ ಸಂತೋಷದಿಂದ ಬರೆಯುತ್ತಿದ್ದೇನೆ.

ಶ್ರೀಮಾನ್ ಗೊರೂರು ರಾಮಸ್ವಾಮಿ ಐಯ್ಯಂಗಾರ್ರವರ 'ಹಳ್ಳಿಯ ಚಿತ್ರಗಳ'ನ್ನು ನೋಡಿ ನಾನು ಆನಂದ ಪಟ್ಟಿದ್ದೇನೆ. ಇವರು ಸುಲಭವಾಗಿ ಮಾಡುವ ವರ್ಣನೆಗಳು ನಾವು ಕನಸಿನಲ್ಲಿ ಕಂಡು ಮೆಚ್ಚಿ ನಿಜವಾದೀತೇ ಎಂದು ಆಶಿಸುವ ಒಂದು ಪ್ರಪಂಚವನ್ನು ನಮ್ಮ ಎಚ್ಚರದ ದೃಷ್ಟಿಯ ಮುಂದೆ ತಂದು ನಿಲ್ಲಿಸುತ್ತವೆ. ಈ ಊರುಗಳು, ಊರುಗಳ ಈ ಜನಗಳು, ಈ ಹೊಲಗದ್ದೆ ಪೈರುಗಳು, ಹೊಳೆ ಕೆರೆ ದೇವಾಲಯಗಳು, ಸರಳವಾದ ಸುಂದರವಾದ ಈ ನಡೆನುಡಿ, ಈ ಬಾಳು, ಇವೆಲ್ಲ ನಮಗೆ ಹೊಸವಲ್ಲದಿದ್ದರೂ ಹೊಸವಾಗಿ ಕಂಡು ಮನಸ್ಸನ್ನು ಮುಗ್ಧವಾಗಿ

ಮಾಡುತ್ತವೆ. ಗ್ರಂಥಕರ್ತರು ಸುತ್ತಣ ಪ್ರಪಂಚವನ್ನು ಚೆನ್ನಾಗಿ ನೋಡಿ ಅದರ ಅಂದ ಚೆಂದಕ್ಕೆ ಮನಸ್ಸಿನಲ್ಲಿ ಎಡೆಗೊಟ್ಟು ಅದರ ಬದುಕಿನಲ್ಲಿ ತಮ್ಮ ಬದುಕನ್ನು ಬೆರೆಸಿ ತಾವೇ ಅದು ಎಂಬಂತೆ ಅದರೊಂದಿಗೆ ಸೇರಿ ಹೋಗಿದ್ದಾರೆ. ಹೀಗಾದಮೇಲೆ ತಮ್ಮ ಜೀವನವನ್ನು ಮರುಳು ಗೊಳಿಸಿದ ಆ ಪ್ರಪಂಚದ ಅಂದ ಚೆಂದವನ್ನು ಇತರರಿಗೆ ತೋರಿಸೋಣವೆಂದು ತಮಗಾದ ಅನುಭವಗಳನ್ನು ವ್ಯಕ್ತಪಡಿಸಲು ಈ ಚಿತ್ರಗಳನ್ನು ರಚಿಸಿದ್ದಾರೆ. ಈ ಚಿತ್ರಗಳು ನಮಗೆ ಆನಂದವನ್ನುಂಟುಮಾಡುವುವೆಂದು ಹೇಳಿದ ಮೇಲೆ ಗ್ರಂಥಕರ್ತರು ತಮ್ಮ ಉದಾರವಾದ ಕಾರ್ಯದಲ್ಲಿ ಜಯಶೀಲರಾಗಿದ್ದಾರೆ ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

ಸಾಮಾನ್ಯವಾಗಿ ನಾವು ಪ್ರಪಂಚದಲ್ಲಿ ಸಂತೆಗೆ ಬಂದವರಂತೆ ನಡೆದುಕೊಳ್ಳುತ್ತೇವೆ. ಏನೋ ನಮ್ಮ ನಮ್ಮ ಕೆಲಸವೆಂದುಕೊಂಡಿರುವ ಕೆಲಸವನ್ನು ಹೇಗೋ ಮಾಡುವುದು; ನಮ್ಮವರೆಂಬ ಒಬ್ಬಿಬ್ಬರನ್ನು ನಮ್ಮವರಂತೆ ಕಾಣುವುದು; ನಮ್ಮ ದಿನ ಮುಗಿದೊಡನೆ ಈ ಬಾಳನ್ನು ಬಿಟ್ಟು ಕದಲುವುದು; ಅಥವಾ ಕೆಲಸ ಮುಗಿದಮೇಲೂ ಮನೆಯ ನೆನವು ಬರದೆ ಸಂತೆಯ ಮಾಳದಲ್ಲಿರೋಣವೆಂದು ಮರದ ಕೆಳಗೆ ಮಲಗುವ ಮಧ್ಯಪಾಯಿಯಂತೆ ರುಚಿಯುಳಿದ ಬದುಕಿಗೆ ಇನ್ನೂ ತಗುಲಿಕೊಂಡಿರುವುದು: ಇದು ಸಾಮಾನ್ಯ ಜೀವನದ ಕಾರ್ಯಕ್ರಮ. ನಿಜವಾಗಿ ನೋಡಿದರೆ ನಾವು ಬಂದಿರುವುದು ಸಂತೆಗಲ್ಲ; ಒಂದು ಕೇಳೀ ಗೃಹಕ್ಕೆ, ಒಂದು ವಿವಾಹ ಮಂಟಪಕ್ಕೆ, ಒಂದು ದೇವಾಲಯಕ್ಕೆ. ನಾವು ಪ್ರಪಂಚದಲ್ಲಿ ಮಾಡಬೇಕಾಗಿರುವುದು ಬರಿಯ ವ್ಯಾಪಾರವಲ್ಲ. ನಾವು ಇಲ್ಲಿಯ ಆಟದಲ್ಲಿ ಸೇರಬೇಕಾಗಿದೆ; ಇಲ್ಲಿಯ ಉತ್ಸವದಲ್ಲಿ ಭಾಗಿಗಳಾಗಬೇಕಾಗಿದೆ; ಇಲ್ಲಿಯ ಪೂಜೆಯುಲ್ಲಿ ಕಲೆಯುಬೇಕಾಗಿದೆ. ಇದನ್ನು ಅರಿಯದ ಅಥವಾ ಮರೆತ ನಮಗೆ ಇಂಥ ಪುಸ್ತಕಗಳು ಪ್ರಪಂಚದಲ್ಲಿ ನಮ್ಮ ನಿಜವಾದ ಕಾರ್ಯವೇನೆಂದು ಜ್ಞಾಪಕಕೊಡುತ್ತವೆ. ಕೊಳ್ಳುವ ಮಾರುವ ವ್ಯವಹಾರದ ನಿಲುವಿನಿಂದ ನಮ್ಮ ಮನಸ್ಸು ಜನದ ವಿಷಯದಲ್ಲಿ ಪ್ರೇಮದ ನಿಲುವಿಗೆ ತಿರುಗುತ್ತದೆ. ಸರಸದಿಂದ ಒಲಿಸಿ ಮನಸ್ಸನ್ನು ಹೀಗೆ ತಿದ್ದುವ ಗ್ರಂಥಗಳು ಸಿಕ್ಕುವುದು ಓದುವವರ ಪುಣ್ಯ.

ಈ ಕಾರಣದಿಂದ ಮಾತ್ರವಲ್ಲದೆ ನಮಗೆ ಪ್ರಕೃತದಲ್ಲಿ ಗ್ರಾಮಗಳ ವಿಷಯದಲ್ಲಿ ಹುಟ್ಟಿರುವ ಔದಾಸೀನ್ಯವನ್ನು ಕಳೆಯುವುದಕ್ಕೆ ಇಂಥ ಚಿತ್ರಗಳು ಅಗತ್ಯವಾಗಿ ಬೇಕಾಗಿವೆ. ನಮ್ಮ ನಾಗರಿಕತೆ ಗ್ರಾಮಗಳನ್ನು ಅವಲಂಬಿಸಿದ್ದು; ನಮ್ಮ ದೇಶದ ತಪಸ್ಸು ವನಗಳಲ್ಲಿ ಬೆಳೆದದ್ದು. ಆದರೆ ಪಾಶ್ಚಾತ್ಯರ ಸಂಪರ್ಕದಿಂದ ನಮಗೆ ವನವಾಗಲಿ ಗ್ರಾಮವಾಗಲಿ ಮೊದಲಿನಷ್ಟು ಈಗ ಪ್ರಿಯವಾಗಿಲ್ಲ. ವಿಶ್ವಶಿಲ್ಪಿಯು ನಮ್ಮ ನಾಡ ಜೀವನದ ಕಣ್ಣನ್ನು ಗ್ರಾಮಗಳಲ್ಲಿ ಇಟ್ಟನು. ನಾವು ಇದನ್ನು ಮರೆತಿದ್ದೇವೆ; ಈಚೆಗೆ ನಗರಗಳಲ್ಲಿ ಗುಂಪು ಸೇರುತ್ತಿದೇವೆ. ಶಾಂತಿಯಿಂದ ಕೂಡಿದ ಗ್ರಾಮಜೀವನವನ್ನು ಸೌಕರ್ಯಗಳು ಸಾಲವೆಂಬ ಕಾರಣದಿಂದ ಬಿಡುತ್ತಾ ಸಲಕರಣೆಗಳು ಹೆಚ್ಚಾಗಿರುವ ನಗರಗಳ ಅಶಾಂತ ಜೀವನಕ್ಕೆ ಆಶಿಸುತ್ತಿದ್ದೇವೆ. ಅಶಾಂತಿಯಲ್ಲಿ ಸುಖವೆಲ್ಲಿಂದ ಬರಬೇಕು? ಆದರೆ ಇದನ್ನು ನಾವು ತಿಳಿಯುವುದು ತಾನೇ ಹೇಗೆ? ಸಲಕರಣೆಗಳು ಕಡಮೆಯಾದರೂ ಗ್ರಾಮ ಜೀವನದಲ್ಲಿ ಒಂದು ಸೊಗಸು ಒಂದು ಸುಖ ಇದೆಯೆಂಬುದನ್ನು ತೋರಿಸುವುದರಿಂದ ಇದು ನಮಗೆ ಮುಂದಟ್ಟಾಗಬಹುದು. ನಗರಗಳಲ್ಲಿರುವ ಜನರು ಒಂದು ಮನೆಯವರಾದರೂ ಬೇರೆ ಬೇರೆ ಆವರಣಗಳಲ್ಲಿ ಸುಳಿದಾಡುತ್ತಿರುವರು: ಹಳ್ಳಿಯಲ್ಲಿರುವವರು ಬೇರೆ ಬೇರೆ ಮನೆಯವರಾದರೂ ಒಂದು ಸಂಸಾರದವರಂತೆ ನಡೆದುಕೊಳ್ಳುವರು. ನಗರಗಳಲ್ಲಿ ನಾಗರಿಕತೆಯ ಅಭ್ಯಾಸಗಳು ಬಾಳಿಗೆ ಬಾಳಿಗೆ ಮಧ್ಯೆ ಗೋಡೆಗಳಂತೆ ಬೆಳೆಯುತ್ತವೆ: ಹಳ್ಳಿಯಲ್ಲಿ ನಿರಂತರ ಸಹವಾಸದಿಂದ ಜನರು ಒಬ್ಬರಿಗೊಬ್ಬರು ಒಡಹುಟ್ಟುಗಳಂತೆ ಆಗುತ್ತಾರೆ. ತನ್ನ ಮಗು ಚೆನ್ನಾಗಿಲ್ಲವೆಂಬುದನ್ನು ತಿಳಿದೂ ನೆನೆಯದ ತಾಯಂತೆ, ತನ್ನ ಗಂಡ ಮನ್ಮಥನಲ್ಲವೆಂಬುದನ್ನು ಕಂಡೂ ಮರೆಯುವ ಹೆಂಡತಿಯಂತೆ, ಸದಾ ಕಾಲ ಜೊತೆಯಾಗಿರುವುದರಿಂದ ಹಳ್ಳಿಯ ಜನರು ಒಬ್ಬರನ್ನೊಬ್ಬರು ಸಮಾಧಾನದಿಂದ ಪ್ರೀತಿಯಿಂದ ನೋಡುವುದನ್ನು ಕಲಿಯುತ್ತಾರೆ. ಇದು ನಮಗೆ ತಿಳಿಯಬೇಕಾದರೆ ಇಂಥ ಗ್ರಂಥಕರ್ತರ ಸಹಾಯಬೇಕು. ಇವರು ಕಸವನ್ನು ಒಂದು ಬದಿಗಿರಿಸಿ ಮುಖ್ಯವಾದದ್ದು ರಸ ಎಂದು

ತೋರಿಸಿರುವುದರಿಂದ ನಮಗೆ ಜೀವನದ ತಿರುಳು ಯಾವುದು ಎಂದು ಗೋಚರವಾಗುತ್ತದೆ.

ಈ ಗ್ರಂಥದ ಭಾಷೆಯ ರೀತಿಯೂ ಗಮನಕ್ಕೆ ಅರ್ಹವಾದದ್ದು. ವಿಷಯದ ಸೊಗಸಿನಂತೆ ಈ ಭಾಷೆಯ ಸೊಗಸೂ ಜನ ಜೀವನದ ಸಾಮೀಪ್ಯದಿಂದ ಬಂದಿದೆ. ಈ ಗ್ರಂಥದಲ್ಲಿ ಜನರಾಡುವ ಮಾತೇ ಸಾಹಿತ್ಯವೂ ಆಗಿದೆ. ನಿಜವೂ ಇಷ್ಟೇ. ಸಾಹಿತ್ಯದ ಭಾಷೆಯೆಂದರೆ ಬೇರೆ ಯಾವುದೋ ಒಂದು ಭಾಷೆಯೆಂದು ನಮ್ಮಲ್ಲಿ ಅಲ್ಲಲ್ಲಿ ವಾಡಿಕೆಯಾಗಿರುವ ಭಾವನೆ ಅಷ್ಟೇನೂ ಸರಿಯಾದುದಲ್ಲ. ಗ್ರಂಥವೆನ್ನುವುದು ಬಹುಮಟ್ಟಿಗೆ ಬರಹದ ಮೂಲಕ ಮಾಡುವ ಸಂಭಾಷಣೆ. ಸಂಭಾಷಣೆಯ ವಿಷಯ ಬೇರೆ ಬೇರೆಯಾದಾಗ ಅದಕ್ಕೆ ಅನುಗುಣವಾಗಿ ಭಾಷೆಯ ರೀತಿಯು ಸ್ವಲ್ಪವೋ ಹೆಚ್ಚಾಗಿಯೋ ಮಾರ್ಪಡಬಹುದೇ ಹೊರತು ಸಂಭಾಷಣೆಯೇ ಅಲ್ಲದ ಬರಹ ಬಹಳವಿರಲಾರದು. ಜನರ ದಿನ ದಿನದ ಜೀವನವನ್ನು ವರ್ಣಿಸುವುದಕ್ಕೆ ಅವರ ದಿನ ದಿನದ ಭಾಷೆಯೇ ತಕ್ಕದ್ದು. ಇದನ್ನು ಉಪಯೋಗಿಸಿರುವುದರಿಂದ ಈ ಗ್ರಂಥದಲ್ಲಿ ಈ ಜನದ ಬಾಳಿನ ಸರಳತೆ, ಸ್ವಚ್ಛತೆ, ನೋವು, ನಗೆ ಎಲ್ಲವೂ ಸುಲಭವಾಗಿ ವ್ಯಕ್ತವಾಗಿವೆ. ಇಲ್ಲಿ ಬರುವ ಜನರೂ ಅವರ ನಡೆಯೂ ನುಡಿಯೂ ನಿಜವೆಂದು ನಮ್ಮ ಅಂತರ್ಯವು ಒಪ್ಪುತ್ತದೆ. ನಿಜವಲ್ಲ ಎಂದು ಎಲ್ಲಿಯಾದರೂ ಕಾಣುವುದಾದರೆ ಈ ಸೂತ್ರವನ್ನು ಬಿಟ್ಟಕಡೆಯಲ್ಲಿಯೆ. ಉತ್ತಮ ರೀತಿಯ ವಸ್ತುಪ್ರಾಜ್ಞತೆಗೆ ಈ ಬಗೆಯ ಕೌಶಲವೂ ಸೇರಿ ಈ ಗ್ರಂಥದ ಚಿತ್ರಗಳೆಲ್ಲ ಜನದ ಜೀವನದಿಂದ ಎತ್ತಿಟ್ಟವುಗಳಂತೆ ಕಾಣುತ್ತಿವೆ.

ಗ್ರಂಥಕರ್ತರಿಗೆ ನಮ್ಮ ನಾಡ ಮೇಲೆ, ನಮ್ಮ ಜನರ ಮೇಲೆ, ಬಹಳ ಪ್ರೇಮವಿದೆ. ಜಾತಿಮತ ಭೇದಗಳಿಲ್ಲದೆ ಇವರು ಎಲ್ಲವನ್ನೂ ಸಮವಾದ ದೃಷ್ಟಿಯಿಂದ ಏಕರೀತಿಯ ವಿಶ್ವಾಸದಿಂದ ನೋಡಬಲ್ಲರು. ಪ್ರೇಮ ಪೂರಿತವಾದ ಇವರ ಕಣ್ಣು ಈ ನಾಡಿನಲ್ಲಿ ಈ ಜನದಲ್ಲಿ ಇರುವ ಒಳ್ಳೆಯ ಗುಣಗಳನ್ನು ನೋಡಿ ನೋಡಿ ಆನಂದಗೊಂಡಿದೆ. ತಪ್ಪು ಕಂಡಲ್ಲಿ ಇಂಥ ಕಣ್ಣು ಕೋಪದ ಕಿಡಿಯನ್ನು ಉಗುಳುವುದಿಲ್ಲ; ದೊಡ್ಡ

ತಪ್ಪಾದರೆ ಎರಡು ತೊಟ್ಟು ಕಣ್ಣೀರನ್ನು ಹಾಕುತ್ತದೆ; ಸಣ್ಣ ತಪ್ಪಾದರೆ ನಗೆಯನ್ನು ಸೂಸುತ್ತದೆ. ಈ ಗ್ರಂಥದಲ್ಲಿ ಗ್ರಂಥಕರ್ತರು ಜನರ ದೊಡ್ಡ ತಪ್ಪುಗಳನ್ನು ತೋರಿಸಲು ಯತ್ನಿಸಿಲ್ಲ. ಅದನ್ನು ಇತರರು ಮಾಡಬಹುದು; ಇವರೇ ಇನ್ನೊಂದು ಸಂದರ್ಭದಲ್ಲಿ ಮಾಡಬಹುದು. ಈ ಗ್ರಂಥದಲ್ಲಿ ಪ್ರೇಮದಿಂದ ಕಂಡ ಕೆಲವು ಒಳ್ಳೆಯ ಗುಣಗಳು, ಸಣ್ಣ ಪುಟ್ಟ ತಪ್ಪುಗಳು ಇಷ್ಟನ್ನು ಮಾತ್ರ ಇವರು ಸೂಚಿಸಿದ್ದಾರೆ. ಗುಣಗಳ ಚಿತ್ರದಿಂದ ನಮಗೆ ನಮ್ಮ ಜನದ ವಿಷಯದಲ್ಲಿ, ನಮ್ಮ ಗ್ರಾಮಗಳ ಜೀವನದ ವಿಷಯದಲ್ಲಿ, ಪ್ರೀತಿಯುಂಟಾಗುತ್ತದೆ. ಸಣ್ಣ ಪುಟ್ಟ ತಪ್ಪುಗಳ ನೋಟದಿಂದ ನಾವು ಗ್ರಂಥಕರ್ತರೊಂದಿಗೆ ನಗುತ್ತೇವೆ. ಭಾವನೆಯ ಉನ್ನತ ಸ್ಥಾನಗಳಲ್ಲಿ ಕುಳಿತು ಓದುವವರನ್ನು ಜೊತೆಯಲ್ಲಿ ಕರೆದುಕೊಂಡು ಅವರಿಗೆ ಶೀಲದ ಸೌಂದರ್ಯವನ್ನು ತೋರಿಸುವ ಶಕ್ತಿ ಅಪೂರ್ವವಾದದ್ದು. ಈ ಗ್ರಂಥಕರ್ತರಲ್ಲಿ ಈ ಶಕ್ತಿ ಚೆನ್ನಾಗಿದೆ.

ಜನರ ವಿಷಯದಲ್ಲಿ, ನಾಡ ವಿಷಯದಲ್ಲಿ, ತಮಗಿರುವ ಪ್ರೇಮವನ್ನು ಸೂಚಿಸಿ ಅದೇ ಪ್ರೇಮವನ್ನು ಓದುವವರಲ್ಲಿ ಉಂಟು ಮಾಡಲು ಇವರು ಉಪಯೋಗಿಸಿರುವ ಮುಖ್ಯ ಸಾಧನ ಹಾಸ್ಯ. ಈ ಗ್ರಂಥವನ್ನು ಓದುತ್ತಾ ನನಗೆ ಹತ್ತಾರು ಸಲ ಮಿತಿಯಾಗಿಯೋ ಅತಿಯಾಗಿಯೋ ನಗೆ ಬಂದಿದೆ. ಕಾವೇರಿಯ ಪ್ರವಾಹ ಎಷ್ಟು ಎತ್ತರ ಬಂದಿತ್ತು ಎನ್ನುವುದನ್ನು ಆಯಾ ವರ್ಷ ಯಾರ ಮನೆಯ ಬಾಗಿಲಲ್ಲಿ ಸೀರೆ ಒಗೆದರು ಎನ್ನುವುದರಿಂದ ವರ್ಣಿಸುವ ಇವರ ಜನರನ್ನೂ, ಇವರ ಬಸ್ ಪ್ರಯಾಣದ ವರ್ಣನೆಯನ್ನೂ, ಇವರಿಗೆ ದಾರಿಯಲ್ಲಿ ಒಂದೊಂದಾಗಿ ಆದ ತೊಂದರೆಗಳ ಕತೆಯನ್ನೂ, ಕಾವೇರಿಯ ಪ್ರವಾಹಕ್ಕೆ ಹೆದರಿ ಮದುವೆಗಾಗಿ ಆಚೆಯ ತಡಿಗೆ ಹೋಗಲಾರದೆ ಈ ತಡಿಯಿಂದಲೇ ವಧೂವರರಿಗೆ ಆಶೀರ್ವಾದ ಮಾಡುತ್ತೇನೆಂದ ಇವರ ಜೊತೆಯ ಮುದುಕರ ವಿಷಯವನ್ನೂ, ಐಯಂಗ್ಹಾರಿಗಳ ಮೋಹರಮಿನ ವರ್ಣನೆಯನ್ನೂ, ಬಾಲ ವಸ್ತ್ರಾಪಹರಣದ ಕಥೆಯನ್ನೂ, ಜೋಡೀದಾರರ ಬಾಲ್ಯದ ಕಲ್ಯಾಣವತಾರದ ವೈಭವವನ್ನೂ, ಆಮೇಲೆ ಇವರು ರೋಣಗಲ್ಲಿನಂತೆ ಕುದುರೆಯ ವೇಗವನ್ನು ತಡೆದುದೇ ಮೊದಲಾದ ವಿಷಯವನ್ನೂ - ಹನುಮನು

ಹೆಂಡದಿಂದ ಉದ್ಧತನಾದ ಚರಿತ್ರೆಯನ್ನೂ, ಕಿಟ್ಟಿ ನರಹರಿಯ ತಿಂಡಿಯ ಹೂಜಿಯ ಕತೆಯನ್ನೂ ನೋಡಿ ಓದಿ ಕೇಳಿ ಯಾರಾದರೂ ನಗುವರು. ಗ್ರಂಥಕರ್ತರು ಇಲ್ಲಿ ಚಿತ್ರಿಸಿರುವ ರೀತಿಯಿಂದ ಇವರ ಪಾತ್ರಗಳು ಇನ್ನುಮೇಲೆ ಸಾಹಿತ್ಯ ಪ್ರೇಮಿಗಳಿಗೆ ಬಹಳ ಪ್ರಿಯರಾಗುತ್ತಾರೆ. ಜೋಡೀದಾರರಂತೂ ತಮ್ಮ ಜೋಡಿಯ ದೊಡ್ಡಸ್ತಿಕೆಯೊಂದಿಗೆ ಸಾಹಿತ್ಯದ ವ್ಯಕ್ತಿಗಳ ಪಂಕ್ತಿಯಲ್ಲಿ ಮೇಲಣ ಒಂದು ಪೀಠವನ್ನು ಈಗ ಜಹಗೀರಿಯಾಗಿ ಸಂಪಾದಿಸಿದ್ದಾರೆಂದು ಹೇಳಬಹುದು. ಇಂಥ ಜಹಗೀರಿ ಬಹಳ ದೊಡ್ಡ ಗೌರವ; ಇದನ್ನು ಕೊಡುವ ಯೋಗ್ಯತೆ ಲೋಕದ ರಾಜರಿಗಿಲ್ಲ. ಹಾಗೆಯೇ ಭಾವನವರು, ಹನುಮ, ವಾಸ್ಕೋಡಿಗಾಮ; ಹೀಗೆಯೇ ಇನ್ನಿತರರು. ಇವರಲ್ಲಿ ಯಾರನ್ನೂ ಇನ್ನು ನಾವು ನಮ್ಮ ಜ್ಞಾಪಕದಿಂದ ಬಿಟ್ಟು ಕಳುಹಿಸುವುದಿಲ್ಲ.

ಪ್ರಕೃತಿಯ ಸೌಂದರ್ಯವನ್ನು ಇವರು ಅಲ್ಲಲ್ಲಿ ಹೃದಯಂಗಮವಾಗಿ ವರ್ಣಿಸಿದ್ದಾರೆ. ಅಲ್ಲಿ ಭಾಷೆ ಆ ಕೆಲಸಕ್ಕೆ ತಕ್ಕದ್ದಾಗಿ ಸುಂದರವಾಗಿದೆ. ಈ ವರ್ಣನೆಗಳನ್ನು ಓದುವುದರಲ್ಲಿಯೂ ಪಾಠಕರು ಅತಿಶಯವಾದ ಆನಂದವನ್ನು ಅನುಭವಿಸುವರು.

ಬೇನೆಯ ಭಾವ ಒಂದೆರಡನ್ನು ಈ ಗ್ರಂಥದಲ್ಲಿ ಕಾಣಬಹುದು. ಹೃದಯದ ಮಂದ್ರ ತಂತಿಗಳನ್ನು ಮಿಡಿಯುವುದರಲ್ಲಿಯೂ ಈ ಗ್ರಂಥ ಕರ್ತರಿಗೆ ಬಹಳ ಕೌಶಲವಿದೆಯೆಂದು ಗ್ರಂಥದ ಈ ಭಾಗಗಳಿಂದ ವ್ಯಕ್ತವಾಗುತ್ತದೆ.

ಇನ್ನೂ ಹಲವು ಗುಣಗಳನ್ನು ಈ ಸಣ್ಣ ಗ್ರಂಥದಲ್ಲಿ ಕಾಣ ಬಹುದು. ನಮ್ಮ ಜನರು ಈ ಪುಸ್ತಕವನ್ನು ಓದಿ ಅದನ್ನೆಲ್ಲಾ ಕಾಣುವ ರೆಂದು ನನಗೆ ನಂಬಿಕೆಯುಂಟು. ಶ್ರೀಮಾನ್ ಐಯಂಗಾರರು ಇವು ಗಳಂತೆ ಇನ್ನೂ ಅನೇಕ ಚಿತ್ರಗಳನ್ನು ಬರೆದಿದ್ದಾರೆ. ನಮ್ಮ ಜನರು ಈ ಗ್ರಂಥಕ್ಕೆ ತೋರಿಸುವ ಆದರಣೆಯಿಂದ, ಆ ಬೇರೆ ಚಿತ್ರಗಳನು ಅಚ್ಚುಮಾಡಿಸುವುದಕ್ಕೆ ಅವಶ್ಯಕವಾದ ಉತ್ತೇಜನವು ಗ್ರಂಥಕರ್ತರಿಗೆ ದೊರೆಯಲೆಂದು ನಾನು ಹಾರೈಸುತ್ತೇನೆ.

ಶ್ರೀ ದೇವುಡು ನರಸಿಂಹಶಾಸ್ತ್ರಿಗಳವರ

# " ವಿಚಾರಣೆ "

ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿಗಳವರ "ವಿಚಾರಣೆ" ಗ್ರಂಥಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನ ಪೂಜ್ಯ ಮಿತ್ರರಾದ ಶ್ರೀಮಾನ್ ಸೋಸಲೆ ಗರಳಪುರಿ ಶಾಸ್ತ್ರಿಗಳು ಈಗ ಕೆಲವು ತಿಂಗಳ ಹಿಂದೆ ನನಗೆ ಅಪ್ಪಣೆಮಾಡಿದರು. ಲೇಖಕರು ಪ್ರಸಿದ್ಧರು, ಪ್ರತಿಭಾಶಾಲಿಗಳು, ಶಕ್ತರು. ಗ್ರಂಥವು ಉದಾತ್ತ ವಿಚಾರವನ್ನು ಕುರಿತದ್ದು. ಗರಳಪುರಿಯವರ ಇಷ್ಟವು ಸರ್ವಥಾ ಮಾನ್ಯವಾದದ್ದು. ಈ ಕಾರಣಗಳಿಂದ ನಾನು ಶ್ರೀ ದೇವುಡು ಅವರ ಗ್ರಂಥಕ್ಕೆ ಮುನ್ನುಡಿಯನ್ನು ಸಂತೋಷದಿಂದ ಬರೆಯುತ್ತಿದೇನೆ.

ಲೇಖಕರು ತಮ್ಮ ಪ್ರಸ್ತಾವನೆಯಲ್ಲಿ ತಿಳಿಸುವಂತೆ ಈ ಗ್ರಂಥವು ಈಗ ಆಂಗ್ಲಸಾಹಿತ್ಯದಲ್ಲಿ ರಾಜಕವಿಗಳಾಗಿರುವ ಜಾನ್ ಮೇಸ್‌ಫೀಲ್ಡ್ ಕವಿವರರ ಇಂಗ್ಲಿಷ್ ನಾಟಕದ ಪರಿವರ್ತನ. ಇದರಲ್ಲಿ ಕವಿಯು ಕ್ರೀಸ್ತ ಮಹಾಗುರುವಿನ ಜೀವನ ದೃಶ್ಯದ ಕೊನೆಯ ಸನ್ನಿವೇಶವನ್ನು ಕಾವ್ಯ ದೃಷ್ಟಿಯಿಂದ ಚಿತ್ರಿಸಿದಾರೆ. ಈ ಗ್ರಂಥವನ್ನು ಓದಿದವರಿಗೆ ಆ ಮಹಾ ಪುರುಷನ ಹಿರಿಮೆ ಸ್ವಲ್ಪಮಟ್ಟಿಗಾದರೂ ತಿಳಿಯುವುದು ; ಅವನು ಉಪದೇಶಿಸಿದ ಧರ್ಮವು ವಿಶ್ವಧರ್ಮದಲ್ಲಿ ಸೇರಿದ್ದು, ಅದನ್ನು ಎಲ್ಲರೂ ಅನುಷ್ಠಿಸಬೇಕು, ಎಂದು ತೋರುವುದು ; ಅವನ ಮತದ ಹೆಸರನ್ನು ಹೇಳುತ್ತಿರುವ ಜನರು ಎಂಥವರೇ ಆದರೂ ಅದನ್ನು ಹೇಳದಿರುವ ನಾವೂ ಆ ಮಹನೀಯನ ವಿಷಯದಲ್ಲಿ ಭಕ್ತಿಯಿಂದ ನಡೆಯುವುದೇ ಶ್ರೇಯಸ್ಕರವೆಂದು ಕಂಡುಬರುವುದು.

ಒಂದೊಂದು ಮತದ ಜನರೂ ಇತರ ಎಲ್ಲ ಮತಗಳ ಗುರುಗಳ ವಿಷಯದಲ್ಲಿ, ಅವರ ಉಪದೇಶದ ವಿಷಯದಲ್ಲಿ, ಅವರ ಅನುಯಾಯಿಗಳ ವಿಷಯದಲ್ಲಿ, ಸಮಾಧಾನ ಬುದ್ಧಿಯಿಂದ ನಡೆದುಕೊಳ್ಳುವುದು

ಬಹಳ ಆವಶ್ಯಕ. ಹೀಗೆ ನಡೆದುಕೊಳ್ಳದ್ದರಿಂದ ಮಾನವನ ಚರಿತ್ರೆಯಲ್ಲಿ ಈ ಮೊದಲು ಅನೇಕ ಅನರ್ಥಗಳು ಸಂಭವಿಸಿದ್ದುಂಟು; ಈಗಲೂ ಸಂಭವಿಸುತ್ತಿವೆ. ಇನ್ನು ಮೇಲಾದರೂ ಮಾನವ ವರ್ಗವು ಒಂದು ಮುಖವಾಗಿ ಮುಂದರಿಯ ಬೇಕಾದರೆ ಇಂಥ ಸಮಾಧಾನ ಬುದ್ಧಿ ಬಹಳ ಅಗತ್ಯ. ಆದರೆ ಈಗ ನಾವೆಲ್ಲ ಸಾಮಾನ್ಯವಾಗಿ ನಾವು ಯಾವ ಮತದಲ್ಲಿ ಹುಟ್ಟಿದೇವೋ ಆ ಮತ ಇತರ ಎಲ್ಲ ಮತಗಳಿಗಿಂತ ಶ್ರೇಷ್ಠ ವೆಂಬಂತೆ ನಡೆಯುತ್ತೇವೆ. ನಮ್ಮದೆನ್ನುವ ಆ ಮತ ಇತರ ಮತಗಳಿಗಿಂತ ಒಳ್ಳೆಯದೆನ್ನುವುದಕ್ಕೆ ನಿಜವಾದ ಕಾರಣಗಳಿರಬಹುದು: ನಾವು ಅವನ್ನು ತಿಳಿದಿರುವುದಿಲ್ಲ. ಇತರ ಮತ ಹೇಳುವುದೇನು ಎಂದು ನಮಗೆ ಬೇಕಿಲ್ಲ; ಆದರೆ ನಮ್ಮ ಮತ ದೊಡ್ಡದಿರಬೇಕು ಎಂದು ನಮ್ಮ ಭಾವನೆ. ಅದರಲ್ಲಿ ನಾವು ಹುಟ್ಟಿದ್ದರಿಂದ ಅದು ದೊಡ್ಡದು ಎಂಬುದೇ ಪ್ರಾಯಶಃ ನಮ್ಮ ಅಂತರ್ಯದ ನಂಬಿಕೆ ಎಂಬಂತೆ ಕಾಣುತ್ತದೆ. ಹೀಗೆ ನಾವೆಲ್ಲ ನಮ್ಮ ನಮ್ಮ ಮತಗಳಿಗೆ ನಮ್ಮ ಅಭಿಮಾನದ ಗೊಂಗಡಿಯೊಂದನ್ನು ಹಾಕಿ ಸತ್ಯದ ದೇವರಿಗೆ ಕತ್ತಲ ಹಣತೆಯನ್ನು ಹಚ್ಚಿಟ್ಟು ಪೂಜೆ ಮಾಡುತ್ತೇವೆ. ನಾವು ಕಂಡೆವೆಂಬ ದೇವರನ್ನು ನಮ್ಮ ದೇವರು ಮಾತ್ರ ಎಂದು ಭಾವಿಸಿ ನಮ್ಮ ಬೊಮ್ಮ ಉಳಿದ ಜನರಿಗೆಲ್ಲಾ ಗುಮ್ಮನಾಗುವಂತೆ ನಡೆಯುತ್ತೇವೆ. ಅನುಯಾಯಿಗಳೇ ಹೀಗಾದಮೇಲೆ ಆಯಾ ಮತದ ಪ್ರಚಾರಕರ ಮಾತನ್ನು ಹೇಳಬೇಕಾದದ್ದೇ ಇಲ್ಲ. ತನ್ನ ಮಗುವಿನ ತಂದೆ ತನ್ನ ಸವತಿಯ ಮಗುವಿಗೂ ತಂದೆ ಎಂದು ನೆನೆಯದೆ ಅವನ ತೊಡೆಯ ಮೇಲೆ ಕುಳಿತುಕೊಳ್ಳಕೂಡದೆಂದು ಧ್ರುವನನ್ನು ಅಟ್ಟಿದ ಸುರುಚಿಯಂತೆ ಇವರು ತಮ್ಮವರಲ್ಲವೆಂದವರನ್ನು ಲೋಕೇಶ್ವರನ ಸಮಕ್ಷಮಕ್ಕೆ ಬಿಡುವುದಿಲ್ಲ ಎನ್ನುತ್ತಾರೆ.

ನಮ್ಮ ನಮ್ಮ ಮತಗಳನ್ನು ನಾವು ಮತದ ದೃಷ್ಟಿಯಿಂದ ನೋಡಿದರೆ ವಿವಾದ ತಪ್ಪಿದ್ದಲ್ಲ. ಅದರಲ್ಲಿಯೂ ಮಮತೆಯಿಂದ ನೋಡಿದೆವಾದರೆ ಯುದ್ಧವೇ ಸಿದ್ಧ. ನಮ್ಮ ಮತ ಹಿರಿಯದೆನ್ನಬೇಕೆನ್ನುವವರು ನಮ್ಮ ಮತದ ಉತ್ತಮ ಭಾಗವನ್ನೂ ಇತರ ಮತದ ನಿಕೃಷ್ಟ ಭಾಗಗಳನ್ನೂ ತೆಗೆದುಕೊಳ್ಳುತ್ತೇವೆ. ಅವರೂ ಹಾಗೆಯೇ. ಅವರ ಅತ್ಯುತ್ತಮ ತತ್ತ್ವ

ವನ್ನೂ ನಮ್ಮಲ್ಲಿ ಪ್ರಚಾರಕ್ಕೆ ಬಂದಿರುವ ತಪ್ಪುಗಳನ್ನೂ, ತಮ್ಮ ಉಪದೇಶದ ನೀತಿಯನ್ನೂ ನಮ್ಮ ಆಚಾರದ ಕೀಳ್ಮೆಯನ್ನೂ, ಎತ್ತಿ ತೋರಿಸುತ್ತಾರೆ. ಇದು ವ್ಯಷ್ಟಿಯ ದೃಷ್ಟಿ, ತಂಡದ ದೃಷ್ಟಿ, ಖಂಡ ದೃಷ್ಟಿ. ಮಾನವ ವರ್ಗವೆಲ್ಲದರ ದೃಷ್ಟಿ ಈ ಖಂಡ ದೃಷ್ಟಿಯಾಗಲಾರದು. ಮತವೆಂಬ ಹೆಸರು ಒಪ್ಪುವ ಎಲ್ಲ ಮತದಲ್ಲಿಯೂ ಉತ್ತಮವಾದ ನೀತಿಬೋಧೆ ಇದ್ದೇ ಇದೆ. ಅದನ್ನು ಅನುಸರಿಸುವ ಜನರಲ್ಲಿ ಉತ್ತಮ ಜೀವನವೂ ಇದೆ: ನಿಕೃಷ್ಟ ಆಚಾರವೂ ಇದೆ. ಒಟ್ಟಿನ ದೃಷ್ಟಿಯಿಂದ ನೋಡುವವನಿಗೆ ಆಯಾ ಮತದ ಉನ್ನತ ಭಾಗವೇ ಮುಖ್ಯವೆಂದು ಕಾಣುವುದು; ಎಲ್ಲ ಮತಗಳೂ ಮನುಷ್ಯನನ್ನು ಉದ್ಧರಿಸುವ ಹಿರಿಯ ಕೆಲಸದಲ್ಲಿ ತೊಡಗಿರುವುವೆಂದು ತೋರುವುದು. ಈ ಭಾವನೆಯಿಂದ ಮತಗಳ ವಿಚಾರವನ್ನು ಬರೆಯುವವರು ಮಾನವ ವರ್ಗದ ಮೈತ್ರಿಗೆ ಕಾರಣರಾಗಿ ಜನಾಂಗಗಳಿಗೆ ಹಿರಿಯ ಉಪಕಾರವನ್ನೇ ಮಾಡುತ್ತಾರೆ.

ಸಮಷ್ಟಿಯ ಈ ಸಂಪೂರ್ಣ ದೃಷ್ಟಿಯಿಂದ ಈ ಗ್ರಂಥವು ನಮ್ಮ ಸಾಹಿತ್ಯದಲ್ಲಿ ಮಾನ್ಯವಾಗುವುದೆಂದು ನನ್ನ ಭಾವನೆ. ಸನಾತನಧರ್ಮ, ಎಲ್ಲ ದೇವರಿಗೆ ಮಾಡುವ ನಮಸ್ಕಾರಗಳೂ ಕೇಶವನನ್ನು ಸೇರುತ್ತವೆ, ಎಂದು ಹೇಳುತ್ತದೆ; ಭಗವಂತನನ್ನು ಹಲವು ಮತಗಳು ಹಲವು ಹೆಸರಿನಿಂದ ಕರೆಯುವ ತ್ರೈಲೋಕ್ಯನಾಥನು ಎಂದು ವರ್ಣಿಸುತ್ತದೆ; ಕೇಶವನೇನು ಶಿವನೇನು ಎಂದೂ ಇಬ್ಬರಲ್ಲಿ ಭೇದವಿಲ್ಲವೆಂದೂ ಬೋಧಿಸುತ್ತದೆ. ಹೀಗೆ ವಿಶ್ವಧರ್ಮವಾಗಬೇಕೆಂದು ಹೊರಟ ಸನಾತನ ಧರ್ಮಲತೆ ಮಧ್ಯೆ ಎಲ್ಲೋ ಮುರುಟಿಕೊಂಡಿತು ನಿಜ. ಈಗ ಅದು, ಇತರ ಮತಗಳ ಮಾತು ಹಾಗಿರಲಿ, ತನ್ನೊಳಗೆ ತಾನೇ ಜಗಳವನ್ನು ಮಾಡಿಕೊಂಡಿದೆ. ಶಿವನೇನು ವಿಷ್ಣುವೇನು ಎನ್ನುವುದನ್ನು ಮರೆತು ನಾವು ಈಚೆಗೆ ಸರ್ವಾಧಿಕಾರಕ್ಕಾಗಿ ಗುದ್ದಾಡುವುದಕ್ಕಾಗಿ ಶಿವನನ್ನೂ ವಿಷ್ಣುವನ್ನೂ ಕುಸ್ತಿಯ ಕಳಕ್ಕೆ ಬಿಟ್ಟಿದೇವೆ. ಇವನ ಮುಂದೆ ಅವನನ್ನು ಕೈಮುಗಿಸಿ ನಿಲ್ಲಿಸುವುದೂ ಅವನ ಕಾಲಿಗೆ ಇವನಿಂದ ನಮಸ್ಕಾರ ಮಾಡಿಸುವುದೂ ನಮ್ಮ ಜನಕ್ಕೆ ಈಗ ಮಕ್ಕಳ ಆಟದಂತೆ ಸುಲಭವಾಗಿದೆ. ಆದರೆ ಇದು ಸನಾತನ ಧರ್ಮಕ್ಕೆ ಈಚೆಗೆ ಬಂದ ಒಂದು ಅವಸ್ಥೆ ಮಾತ್ರ.

ಇದು ಸದಾಕಾಲವೂ ಇರಲಾರದು. ನಮ್ಮ ಧರ್ಮವನ್ನು ನಾವು ಹೇಗೆ ಸಣ್ಣದು ಮಾಡಿದರೂ ಅದು ಹಿಮಾಲಯದಂತೆ ಶುಭ್ರವಾಗಿ ಅಚಲವಾಗಿ ನಿಂತಿದೆ. ಅದಕ್ಕೆ ಬುದ್ಧ ಧರ್ಮವು ಬೇರೆಯಲ್ಲ: ಕ್ರೀಸ್ತ ಧರ್ಮವು ದೂರವಲ್ಲ: ಮಹಮ್ಮದನ ಧರ್ಮವು ಹಗೆಯಲ್ಲ. ಮರಳಿ ಬುದ್ಧಿ ಬಂದಾಗ್ಯೆ ನಾವು ಅದರ ಹಿರಿಯ ಭಾವಗಳನ್ನು ಅನುಷ್ಠಾನ ಮಾಡುವೆವು. ಆಗ್ಯೆ ಅದರ ಆಚಾರದಲ್ಲಿ ಬುದ್ಧಧರ್ಮದ ಆಚಾರದಲ್ಲಿರುವ ಭಾವ ವೈಶಾಲ್ಯವನ್ನೂ, ಕ್ರೀಸ್ತ ಧರ್ಮದ ಆಚಾರದಲ್ಲಿರುವ ದೀನ ವಾತ್ಸಲ್ಯ ವನ್ನೂ, ಮಹಮ್ಮದನ ಧರ್ಮದ ಆಚಾರದಲ್ಲಿರುವ ಸಮದರ್ಶಿತೆಯನ್ನೂ ಸೇರಿಸಿಕೊಳ್ಳುವೆವು. ಆಗ ಸನಾತನ ಧರ್ಮವು ಹಿಂದೆ ಉದ್ದೇಶಿಸಿದಂತೆ ವಿಶ್ವಧರ್ಮವಾಗುವುದು. ಆ ಧರ್ಮದಲ್ಲಿ ಆಗ್ಯೆ ಹಿಂದೂಗಳೂ, ಕ್ರೀಸ್ತರು, ಮಹಮ್ಮದೀಯರು, ಬೌದ್ಧರು, ಇತರ ಎಲ್ಲ ಮತಗಳ ಜನರು ತಮ್ಮ ತಮ್ಮ ಮತವನ್ನು ಕಾಣುವರು. ಅಂದು ಲೋಕದ ಎಲ್ಲ ಸುಜನರ ಕನಸು ನಿಜವಾಗುವುದು. ಈ ಸಣ್ಣ ಗ್ರಂಥವು ಧರ್ಮಲತೆ ಮುಂದೆ ಹೀಗೆ ಹೂಬಿಡುವಂತೆ ಇಂದು ಇಲ್ಲಿ ಅದಕ್ಕೆ ಒಂದು ಚೊಂಬು ನೀರನ್ನೆರೆಯುತ್ತಿದೆ.

ಕನಸಿನ ಗಿಡಕ್ಕೆ ಮಾತಿನ ನೀರು ಹೊಯ್ದು ಆಕಾಶ ಕುಸುಮವನ್ನು ಪಡೆಯುವ ರೀತಿ ಇದು ಎಂದು ಹಿರಿಯರಾಗಲಿ ಕಿರಿಯರಾಗಲಿ ನಗ ಬಾರದು. ಮನುಷ್ಯನ ಎಲ್ಲ ಭಾವಗಳೂ ಕನಸಲ್ಲದೆ ಬೇರೆಯಲ್ಲ. ಇವಕ್ಕೆ ಅವನು ಬಾಳನ್ನೇ ಧಾರೆಯೆರೆಯುತ್ತಾನೆ. ವಿಶ್ವಧರ್ಮವೆನ್ನುವುದು ಒಂದು ಕನಸೇ ಆದರೆ, ಅದು ಇತರ ಕನಸುಗಳ ಮಧ್ಯೆ ಇರುವ ಅತ್ಯುತ್ತಮವಾದ ಒಂದು ಕನಸು. ಈ ಕನಸನ್ನು ಕಾಣುತ್ತಿರುವವರು ಅದರ ಸ್ವರೂಪವನ್ನು ಬಲ್ಲರು. ಅದರಷ್ಟು ನಿಜವಾದದ್ದು ಬೇರೆ ಏನೂ ಇಲ್ಲವೆಂದೇ ಅವರು ಅದಕ್ಕಾಗಿ ತಮ್ಮ ಕೈಯಲ್ಲಾದಷ್ಟು ಕೆಲಸ ಮಾಡು ವರು. ಹಿಂದೆ ಅನೇಕರು ಈ ಕನಸಿಗಾಗಿ ತಮ್ಮ ಬಾಳನ್ನು ಅರೆದಿದ್ದಾರೆ. ಈ ದೃಶ್ಯದ ನಾಯಕನಾದ ಯೇಸುಕ್ರಿಸ್ತನೂ ಕೂಡ ಇಂಥ ಮಹಾ ಪುರುಷರಲ್ಲಿ ಸೇರಿದವನು. ಯಾರು ನಂಬಲಿ ಯಾರುಬಿಡಲಿ ದೈವದ ಅವತಾರವೆಂಬಂತೆ ಹಿರಿದಾದ ಚೇತನವೊಂದು ಮಾನವ ವರ್ಗದ

ಉದ್ಧಾರಕ್ಕಾಗಿ ನಮ್ಮ ಕಣ್ಣೆದುರಿಗೆ ಕೆಲಸಮಾಡುತ್ತಿರುವುದನ್ನು ದಿನವೂ ನೋಡುತ್ತಿರುವ ನಮ್ಮ ಸೀಮೆಯ ಜನರಂತೂ ಈ ವಿಷಯದಲ್ಲಿ ಸಂದೇಹ ವನ್ನಿಟ್ಟುಕೊಳ್ಳಬೇಕಾದದ್ದಿಲ್ಲ.

ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿಗಳವರು ಈ ಭಾಷಾಂತರ ವನ್ನು ಮಾಡುತ್ತಿರುವಾಗ ಭರತವರ್ಷದಲ್ಲಿ ಮಹಾತ್ಮಾ ಗಾಂಧಿಯವರ ಧರ್ಮಸಂಗ್ರಾಮ ಇನ್ನೂ ನಡೆಯುತ್ತಿತ್ತು. ಕ್ರೈಸ್ತರನೇಕರು ಗಾಂಧೀ ಮಹಾತ್ಮರನ್ನು ಕ್ರೀಸ್ತನಿಗೆ ಹೋಲಿಸಿದಾರೆ: ಆ ಹೋಲಿಕೆ ಇರುವುದೂ ನಿಜ. ಇದನ್ನು ಬಲ್ಲವರಿಗೆ ಈ ಗ್ರಂಥದಲ್ಲಿನ ಹಲಕೆಲವು ಮಾತುಗಳು ಈಗಣ ಸಂದರ್ಭಕ್ಕಾಗಿ ಬರೆದುವೋ ಎಂಬಂತೆ ತೋರಬೇಕು. ಇದೂ ನಿಜವೇ ಸರಿ. ಕ್ರೀಸ್ತನ ಚರಿತ್ರೆ ಸತ್ವವು ಶಕ್ತಿಯೊಂದಿಗೆ ಹೆಣಗಿದ ಒಂದು ಸಂದರ್ಭ. ಇಂಥ ಸಂದರ್ಭ ಇತಿಹಾಸದಲ್ಲಿ ಬರುತ್ತಲೇ ಇದೆ. ಇಂಥ ಸಂದರ್ಭ ಒಂದರಲ್ಲಿ ಆಡಿದ ಮಾತು ಅಂಥದೇ ಇನ್ನೊಂದು ಸಂದರ್ಭಕ್ಕೆ ಅನ್ವಯಿಸುವುದು ಸಹಜ. ಇತಿಹಾಸ ಹಿಂದಿನಂತೆಯೇ ಮುಂದೆಯೂ ಎಂದು ಪಾಶ್ಚಾತ್ಯರಲ್ಲಿ ಒಂದು ನಾಣ್ಣುಡಿ ಯುಂಟು. ಸತ್ಯಾಗ್ರಹದ ಕೊನೆಯೇನೆಂದು ಆಗ ತಿಳಿಯದಿದ್ದ ನಮಗೆ ಮಹಾತ್ಮಾ ಗಾಂಧಿಯವರ ವಿಷಯದಲ್ಲಿ ಶಂಕೆಯಾಗುತ್ತಿತ್ತು. ಈಚೆಗೆ ಆ ಸತ್ತ್ವಸಮರವು ನಿಂತಿದೆ: ಪಾಶ್ಚಾತ್ಯರ ನಾಣ್ಣುಡಿ ಇತಿಹಾಸದ ಒಟ್ಟು ನಡೆಯನ್ನು ಕುರಿತದ್ದು, ಒಂದೊಂದು ಅಂಶವನ್ನೂ ಕುರಿತದ್ದಲ್ಲ ಎಂದು ಕಂಡುಬಂದಿದೆ. ಈ ಸಲ ಇತಿಹಾಸವು ಅಂಶತಃ ಮರಳದೆ ಕ್ರೀಸ್ತನ ದೇಹವು ಸಂಗ್ರಾಮದಲ್ಲಿ ಎಲ್ಲಿ ಉರುಳಿತೋ ಅಲ್ಲಿ ಅವನ ಈಗಣ ಅವತಾರದ ದೇಹವು ಉರುಳದೆ ನಿಂತಿರುವುದು ಕ್ರೀಸ್ತನ ಹೆಸರನ್ನು ಹೇಳುವ, ಮತ್ತು ಅದನ್ನು ಹೇಳುವುದಲ್ಲದೆ ಅವನ ದಾರಿಯಲ್ಲಿ ನಡೆಯುವ, ಮೇಸ್‌ಫೀಲ್ಡರಂತ ಕವಿಗಳ, ಅರ್ವಿನ್‌ರಂತ ರಾಜಪುರುಷರ, ಸೌಜನ್ಯದ ಫಲ. ತನ್ನದೆನ್ನುವುದನ್ನು ಒಳ್ಳೆಯದೆನ್ನುವುದಕ್ಕೆ ತಗ್ಗಿಸಿ ನಡೆಯಬಲ್ಲ ಇಂಥ ಮಹನೀಯರ ಸಂಖ್ಯೆ ಹೆಚ್ಚಲಿ. ಆಂಗ್ಲೇಯ ಭಾರತೀಯರ ಸೌಹಾರ್ದ ನಿಜವಾದ ರೀತಿಯಲ್ಲಿ ಬೆಳೆಯಲಿ. ಈ ಸೌಹಾರ್ದಕ್ಕೆ ಸಾಧಕ ವಾಗಲೆಂದೇ ಶ್ರೀಮಾನ್ ಗರಳಪುರಿ ಶಾಸ್ತ್ರಿಗಳು ಈ ಪರಿವರ್ತನದಲ್ಲಿ

ತೊಡಗುವಂತೆ ದೇವುಡು ಅವರಿಗೆ ಸೂಚನೆಮಾಡಿದರಂತೆ: ಇವರ ಈ ಹಿರಿಯ ಉದ್ದೇಶವು ಫಲಿಸಲಿ.

ಈ ಮುನ್ನುಡಿ ಇಷ್ಟು ವಿಸ್ತಾರವಾದರೂ ಇದರಲ್ಲಿ ನಾನು ಲೇಖಕರ ವಿಷಯ ಬಹಳ ಹೇಳಿಲ್ಲ. ಶ್ರೀವರ್ಮಾ ನರಸಿಂಹಶಾಸ್ತ್ರಿಗಳು ಕನ್ನಡಿಗರಿಗೆ ಈ ಮೊದಲೇ ಪರಿಚಿತರಾಗಿರುವುದೇ ಇದಕ್ಕೆ ಮುಖ್ಯಕಾರಣ. ಇವರು ಧೀರರು, ಉತ್ಸಾಹಶಾಲಿಗಳು, ಅಸಾಧಾರಣವಾದ ಭಾಷಾ ಪರಿಚಯವುಳ್ಳವರು. ಇವರು ಸ್ವತಂತ್ರವಾದ ಅನೇಕ ಗ್ರಂಥಗಳನ್ನು ರಚಿಸಿರುವರು. ಇನ್ನೂ ಇವರಿಂದ ಕನ್ನಡಕ್ಕೆ ಬಹಳ ಸೇವೆ ಆಗಬೇಕಾಗಿದೆ. ಇತರರನ್ನು ಅವಲಂಬಿಸಿದುದನ್ನು ಮಾತ್ರ ಅಲ್ಲದೆ ತಮ್ಮ ಮನಸ್ಸಿನಿಂದ ತೆಗೆದ ಇಂಥ ಉತ್ತಮ ಚಿತ್ರಗಳನೇಕವನ್ನು ಇವರು ಮುಂದೆ ಕನ್ನಡಿಗರಿಗೆ ಅರ್ಪಿಸಲೆಂದು ನಾನು ಹಾರೈಸುತ್ತೇನೆ.

ಈ ಮುನ್ನುಡಿಯನ್ನು ಇಷ್ಟುದೂರ ಯಾರಾದರೂ ಓದಿರುವುದಾದರೆ ಅಂಥವರ ತಾಳ್ಮೆಗೆ ಅವರನ್ನು ಅಭಿನಂದಿಸಿ ಗ್ರಂಥವನ್ನು ಇನ್ನೂ ಅವರು ಓದದೆ ಇರುವುದಾದರೆ ಅದನ್ನು ಓದುವುದರಲ್ಲಿ ಅವರಿಗೆ ಬಹಳ ಆನಂದ ಅನುಭವವಾಗುವುದೆಂದು ಭರವಸೆಯನ್ನು ಕೊಟ್ಟು ಈ ಬಹಳ ಮಾತನ್ನು ಇಲ್ಲಿಗೆ ಮುಗಿಸುತ್ತೇನೆ.

1931

## ಶ್ರೀ ಪು. ತಿ. ನರಸಿಂಹಾಚಾರ್ಯರ

# “ ಹಣತೆ ”

ಶ್ರೀಮಾನ್ ಪುರೋಹಿತ ತಿ. ನರಸಿಂಹಾಚಾರ್ಯರು ತಮ್ಮ ಕವನಗಳ ಈ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆಯ ಬೇಕೆಂದು ನನ್ನನ್ನು ಕೇಳಿದ್ದಾರೆ. ಇಂಥ ಕವನಗಳಿಗೆ ಮುನ್ನುಡಿ ಬರೆಯುವುದಕ್ಕೆ ಯಾರಾದರೂ ಹೆಮ್ಮೆಪಡಬೇಕು. ನಾನು ಈ ಕೆಲಸವನ್ನು ಸಂತೋಷದಿಂದ ಮಾಡುತ್ತಿದ್ದೇನೆ.

ಇಷ್ಟರಾದವರಿಂದ ಮುನ್ನುಡಿಯೊಂದನ್ನು ಬರೆಯಿಸಿ ಪುಸ್ತಕಗಳ ಆರಂಭದಲ್ಲಿಡುವುದು ಈಗ ನಮ್ಮಲ್ಲಿ ಒಂದು ವಾಡಿಕೆಯಾಗಿದೆ. ಇದು ಈಚೆಗೆ ಒಂದು ಶಿಷ್ಟಾಚಾರವೇ ಆಗಿದೆಯೆನ್ನಬಹುದು. ಮುನ್ನುಡಿಗಳನ್ನು ಬಯಸುವರು ಬರೆಯಿಸುವುದು ಹಾಗಿರಲಿ; ಮುನ್ನುಡಿಯನ್ನು ಬರೆಯುವುದು ಏಕೆ ಎಂದು ತಿಳಿಯಲಿಲ್ಲವಲ್ಲ ಎನ್ನುವವರೂ, ಮುನ್ನುಡಿಯಲ್ಲಿ ಏನನ್ನು ಹೇಳಬೇಕೆಂದು ತೋರಲಿಲ್ಲವಲ್ಲ ಎನ್ನುವವರೂ, ಮುನ್ನುಡಿಗಳನ್ನು ಬರೆದಿರುವುದುಂಟು. ಮುನ್ನುಡಿಯೆಂದರೆ ಬೇಸರಗೊಂಡು ಅದನ್ನು ಮುಳ್ನುಡಿ ಎಂದು ಬೈದಿರುವರೊಬ್ಬರು ತಮ್ಮ ಗ್ರಂಥ ಒಂದಕ್ಕೆ ಹಿರಿಯರಾದ ಒಬ್ಬ ‘ಗೃಧ್ರ’ರಿಂದ– ಇದು ಅವರೇ ಉಪಯೋಗಿಸಿರುವ ಮಾತು:– ಮುಳ್ನುಡಿಯನ್ನು ಬರೆಯಿಸುತ್ತೇನೆಂದು ಪತ್ರಿಕೆಯಲ್ಲಿ ಪ್ರಕಟಿಸಿದರು. ಅಂತೂ ನಾವೆಲ್ಲ ಈಗ ಮುನ್ನುಡಿಗಳನ್ನು ಬರೆಯುವುದರಿಂದ ಏನೋ ಪ್ರಯೋಜನವಿದೆಯೆಂದು ತಿಳಿದಿದೇವೆ.

ಈ ಭಾವನೆ ಸರಿಯೆಂದೇ ನನ್ನ ಅಭಿಪ್ರಾಯ. ನಮ್ಮ ಸಾಹಿತ್ಯ ಈಗ ಈಗ ಹೊಸ ದಾರಿಗಳಲ್ಲಿ ಏನಿದೆಯೆಂದು ನೋಡುವುದಕ್ಕೆ ಹೊರಟಿದೆ. ನಮ್ಮ ಕೆಲಸಗಾರರಿಗೆ ನಮ್ಮ ಭಾಷೆಯಲ್ಲಿ ಮೇಲ್ಪಂಕ್ತಿಗಳು ಬೇಕಾದಷ್ಟು ಇಲ್ಲ. ಆದದ್ದರಿಂದ ಒಂದು ತುಂಡು ಒಂದು ತುಣುಕು ಹೊಸದಾದ ಯಾವ ಕೃತಿಯನ್ನು ಬರೆದವನಾದರೂ ಇದರಿಂದ ಜನ ಸುಖಪಡುವರೋ ಇಲ್ಲವೋ ಎಂದು ಸಂದೇಹದಲ್ಲಿರುತ್ತಾನೆ. ಇದರ ಮೇಲೆ ಓದುವವರಿಗೆ

ಇಂಥ ಕೃತಿಗಳ ವಿಷಯದಲ್ಲಿ ರುಚಿ ಹದಕ್ಕೆ ಬಂದಿಲ್ಲ." ಕೇಳು ಜನಮೇಜಯ ಧರಿತ್ರೀ" ಎಂಬ ಮಾತನ್ನು ಕೇಳಿದೊಡನೆ ಒಂದು ರೀತಿಯ ಕಾವ್ಯರಸಕ್ಕೆ ಅನುವಾಗುವ ಮನಸ್ಸು, "ಬಾನ್ ತಿಳಿದಿತ್ತು ಬಿಳಿ ಮುಗಿಲೋಳಿ" ಎಂದು ಓದಿದರೆ ಇದೇನು ವಿಶೇಷವೋ, ಈತನೇನು ಕಲ್ಲನ್ನು ಕಡೆದು ವಿಗ್ರಹನನ್ನು ಮಾಡುತ್ತಾನೋ, ಗಾಳಿಯನ್ನು ಹಿಡಿದು ಜೀವವನ್ನು ಅಲ್ಲುತ್ತಾನೋ, ಎನ್ನುವುದನ್ನು ತಿಳಿಯದೆ ಇರುತ್ತದೆ. ಎಲ್ಲ ಸಾಹಿತ್ಯದಲ್ಲಿಯೂ ಈ ತೊಂದರೆ ಇದ್ದೇ ಇದೆ. ಇದರಿಂದಲೇ ಪೂರ್ವ ಗ್ರಂಥಗಳಿಗೆ ಕೂಡ ಒಂದು ವ್ಯಾಖ್ಯಾನ ಬೇಕಾಗಿರುವುದು. ಅನೇಕ ವೇಳೆ ಇಂಗ್ಲೀಷಿನಲ್ಲಿ ಹಿರಿಯ ಕವಿಗಳ ಕವನ ಸಂಗ್ರಹಗಳಿಗೆ ಅಭಿಮಾನಿ ವಿಮರ್ಶಕರು ಕವಿ ವಿಷಯವಾದ ವಿಮರ್ಶೆಯನ್ನು ಸೇರಿಸುತ್ತಾರೆ; ನಮ್ಮವರು ಬಹು ಸಮಯ ಪದ್ಯ ಓದುವ ಮೊದಲು ನಾಲ್ಕು ಮಾತನ್ನು ಪೀಠಿಕೆಯಾಗಿ ಹೇಳುತ್ತಾರೆ. ಕವಿಯಾದವನು ತನ್ನ ಕಾವ್ಯವನ್ನು ತಾನೇ ವಿವರಿಸುವುದು ತಪ್ಪಲ್ಲವೆಂದು ನಾವು ತಿಳಿದಿದ್ದರೆ ಕವಿಯೇ ಇಂಥ ಮುನ್ನುಡಿಯನ್ನು ಬರೆದು ಸೇರಿಸಬಹುದು; ಆದರೆ ಅನೇಕವೇಳೆ ಕವಿಗೆ ಜನದ ಮುಂದೆ ಬಂದು ನಿಲ್ಲುವಾಗ ತನಗೆ ಬೇಕಾದವರ ಕೈಯನ್ನು ಹಿಡಿದುಬರುವುದು ಸುಖವೆಂದು ಕಾಣುತ್ತದೆ. ಕೃಷ್ಣನನ್ನು ನೋಡ ಹೋದ ರಾಧೆ ಜೊತೆಗೆ ಸಖಿಯನ್ನು ಕರೆದೊಯ್ದಳು. ಆ ಸಖಿ ವಯಸ್ಸಿನಲ್ಲಿ ರಾಧೆಗಿಂತ ಸ್ವಲ್ಪ ಹಿರಿಯಳೆಂದು ನನ್ನ ಊಹೆ. ನಮ್ಮ ಹೊಸ ಕವಿತೆಯ ಸಂಕೋಚವನ್ನು ನಿವಾರಿಸುವುದಕ್ಕೆ ನನ್ನಂಥವನ ಮುನ್ನುಡಿ ಎಂಬ ಇಂಥ ನೆಪ ಒಂದು ಸದ್ಯದಲ್ಲಿ ಅವಶ್ಯಕವಾಗಿದೆ.

ಇದರ ಮೇಲೆ ನಮ್ಮದೊಂದು ದೊಡ್ಡ ಆಸೆ. ಸಾಹಿತ್ಯ ಸೇವಕರಲ್ಲಿ ಪರಸ್ಪರ ಮತ್ಸರವಿರುತ್ತದೆ ಎಂದು ಸಾಮಾನ್ಯವಾದ ನಂಬಿಕೆ. ಬೆಳೆದ ಸಾಹಿತ್ಯಗಳಲ್ಲಿ ಇದರಿಂದ ತೊಂದರೆ ಕಾಣುವುದಿಲ್ಲ: ಸಾವಿರ ಜನ ಬರೆಯುವಲ್ಲಿ ಹತ್ತು ಗುಂಪಾದರೆ ಗುಂಪು ಒಂದಕ್ಕೆ ನೂರು ಜನ ಇರುತ್ತಾರೆ. ಹೊಸದಾಗಿ ತಲೆಯೆತ್ತುತ್ತಿರುವ ಸಾಹಿತ್ಯದಲ್ಲಿ ಉಪಾಸಕರು ಒಬ್ಬರಿಗೆ ಒಬ್ಬರು ನೆರವಾಗಬೇಕು. ಹೀಗಿಲ್ಲದಿದ್ದರೆ ಸಂಪ್ರದಾಯ ಬೆಳೆಯದೆಯೇ ಹೋಗಬಹುದು. ನಮ್ಮ ಈಗಣ ಸ್ಥಿತಿಯಲ್ಲಿ ಕನ್ನಡದ

ಸೇವಕರೆಲ್ಲ ಒಂದು ಮನೆಯವರಂತಿರಬೇಕು ; ನಾವೆಲ್ಲ ಒಂದು ಎಂಬ ಭಾವನೆಯಿಂದ ಬೆಳೆಯ ಬೇಕು. ಈ ಭಾವನೆ ಬೆಳೆಯುವುದಕ್ಕೆ ಮುನ್ನುಡಿಯನ್ನು ಬರೆಯುವುದೂ ಬರೆಯಿಸುವುದೂ ಒಂದು ದಾರಿ. ಇದರಿಂದ ಲೇಖಕರಲ್ಲಿ ನಾವು ಗೆಳೆಯರು ಎಂಬ ಭಾವನೆ ಮುಂದುವರಿಯುವುದು. ಇದೊಂದು ಸ್ನೇಹದ ಕಟ್ಟು, ಪ್ರೇಮದ ಅನುಬಂಧನ. ಉಳಿದ ಕಡೆ ಹೇಗಾದರೂ ಇರಲಿ, ನಮ್ಮಲ್ಲಿ ಮತ್ಸರವಿಲ್ಲ ; ಅಥವಾ ಇಲ್ಲಿ ಅಲ್ಲಿ ಇರುವುದಾದರೂ ಸಾಧ್ಯವಾದಷ್ಟು ಅದನ್ನು ತುಳಿದಿದೇವೆ ; ನಮ್ಮ ತಾಯ ಮುಂದೆ ನಾವು ಜಗಳವಾಡುವುದಿಲ್ಲ : ಎಂಬುದನ್ನು ಕನ್ನಡದ ಸೇವಕರು ಬಾಯಲ್ಲಿ ಹೇಳಬೇಕು, ಮನಸ್ಸಿನಲ್ಲಿ ನೆನೆಯಬೇಕು. ಮುನ್ನುಡಿಕಾರನು ಸ್ನೇಹವನ್ನು ಸೂಚಿಸುವಲ್ಲಿ ಹೊಗಳ ಹೇಳುವ ಮಾತು ಒಂದು ಹೆಚ್ಚಾದರೇನು ? ಅವನು ವಿಶ್ವವಿಮರ್ಶಕನಲ್ಲ ; ಅವನು ಹೊಗಳಿದ ಮಾತ್ರಕ್ಕೆ ಯಾರಿಗೂ ಧ್ರುವ ಪಟ್ಟ ಬರುವುದಿಲ್ಲ. ಆದರೆ ಜೊತೆಯವರಿಗೆ ನೆರವಾಗುವ ಮತ್ತು ಒಳ್ಳೆಯ ಮಾತನಾಡುವ ಸಂಪ್ರದಾಯ ಒಳ್ಳೆಯದು ; ಅದನ್ನು ನಾವು ಬೆಳೆಸಬೇಕು. ನಮ್ಮ ಕವಿತೆ ಮುಂದಣಕಾಲದಲ್ಲಿ ಜನಕ್ಕೆ ಬೇಕಾಗುವುದೋ ಇಲ್ಲವೋ ; ಅದು ಹೇಗಾದರೂ, ಆಗ್ಗೆ ಕಾವ್ಯ ಚರಿತ್ರೆಯನ್ನು ಬರೆಯುವವನು, ಈ ಕವಿಗಳಲ್ಲಿ ಪರಸ್ಪರ ವೈಷಮ್ಯವಿರಲಿಲ್ಲ, ಬಹಳ ಪ್ರೇಮವೇ ಇತ್ತೆಂದು ತೋರುತ್ತದೆ, ಎಂದು ಹೇಳುವಂತೆ ನಾವು ಈಗ ನಡೆದುಕೊಳ್ಳಬೇಕು.

ಈ ಎಲ್ಲ ದೃಷ್ಟಿಯಿಂದಲೂ ಗ್ರಂಥಕರ್ತರಿಗೆ ಸೌಹಾರ್ದ ಅವಶ್ಯಕ. ತನ್ನಲ್ಲಿ ತನಗೆ ನಂಬಿಕೆಯಿಲ್ಲವೆಂದ ಹಿರಿಯ ಕವಿ ಬರಿಯ ವಿನಯದ ನುಡಿಯನ್ನು ನುಡಿಯಲಿಲ್ಲ. ಕವಿಯಾದವನ ಮನಸ್ಸಿನಲ್ಲಿ ತಾನು ಕವಿ ಎಂಬ ತಿಳಿವಿನೊಂದಿಗೆ ಈ ಅಪ್ರತ್ಯಯವೂ ಅವಳಿ ಜವಳಿಯಾಗಿ ಬೆಳೆಯುತ್ತದೆ. ಅವನ ಕವಿತೆಯನ್ನು ಮೆಚ್ಚಿದವರು ಈ ಅವಳಿಯನ್ನು ನೋಡುತ್ತಾರೆ : ಮೆಚ್ಚುವವರಿಗೆ ಕಾಣುವುದು ಈ ಜವಳಿ. ಇಪ್ಪತ್ತು ವರ್ಷದ ಹಿಂದೆ ಕನ್ನಡದ ಕೆಲಸಗಾರರು ಹೊರಕ್ಕೆ ಬರುವುದಕ್ಕೆ ಹಿಂತೆಗೆಯುತ್ತಿದ್ದರು. ಧೈರ್ಯ ಹೇಳುವ ಅಣ್ಣತಮ್ಮಂದಿರನ್ನು ಅವರು ಆಗ ಕಾಣಲಿಲ್ಲ. ಅಣ್ಣತಮ್ಮಂದಿರಿರಲಿಲ್ಲವೆಂದಲ್ಲ ; ಒಬ್ಬರನ್ನೊಬ್ಬರು ಅವರು

ಕಾಣಲಿಲ್ಲ. ಇದರಿಂದ ನಮ್ಮ ಸಾಹಿತ್ಯದ ಮುನ್ನಡೆಯಲ್ಲಿ ಹತ್ತಾರು ವರ್ಷವನ್ನು ವೃಥಾ ಕಳೆದುಕೊಂಡೆವು. ಇನ್ನು, ತನಗೂ ಮೊದಲು ಸಾಹಿತ್ಯದಲ್ಲಿ ಕೆಲಸ ಮಾಡಿರುವವರ ಮೆಚ್ಚಿಕೆಯ ಮಾತು ಗ್ರಂಥ ಕರ್ತನಿಗೆ ಎಷ್ಟು ಸಂತೋಷವನ್ನು ಕೊಡುತ್ತದೆನ್ನುವುದು ಬಹುಜನರ ಅನುಭವದಲ್ಲಿ ಇರುವ ವಿಷಯ. ಈ ಮುನ್ನುಡಿಯನ್ನು ಬರೆಯುವ ನಾನು ಬಹಳ ಸಂಕೋಚಪಡುವವನಲ್ಲ. ಆದರೂ ನಾನು ನನ್ನ ಕೆಲಸ ದಲ್ಲಿ ಮುಂದೆ ನಡೆಯಬೇಕಾದರೆ ನನಗೆ ಹಿರಿಯರ ಧೈರ್ಯದ ಮಾತು, ಕಿರಿಯರ ಪ್ರೇಮದ ಮಾತು, ಬೇಕಾದುವು. ಸಂಕೋಚಪಡದೆ ಇರುವ ವರಿಗೂ ಇಂಥ ನೆರವು ಬೇಕಾಗುತ್ತದೆ: ಇನ್ನು ಸಂಕೋಚಪಡುವ ಲೇಖಕರ ಮಾತೇನು?

ಶ್ರೀಮಾನ್ ನರಸಿಂಹಾಚಾರ್ಯರು ಬಹಳ ಸಂಕೋಚ ಸ್ವಭಾವದ ಕವಿಗಳು. ಜನ ಇವರನ್ನು ಹೊರಕ್ಕೆ ಕರೆಯದೆ ಇದ್ದರೆ ಇವರ ಲೇಖನ ಇವರ ಸ್ನೇಹಿತರಲ್ಲಿ ಸುತ್ತುತ್ತ ಇದ್ದುಬಿಡುವುದು. ಆ ಸ್ನೇಹಿತರು ಅದನ್ನು ಸ್ವಲ್ಪ ಅವಜ್ಞತೆಯಿಂದ ನೋಡಿದರೆ ಅದು ಇವರ ಹಸ್ತ ಪ್ರತಿಯಲ್ಲೇ ನಿಂತುಹೋಗುವುದು. ಇವರ ಸ್ವಭಾವ ಹೀಗಿರುವಲ್ಲಿ ಇವರ ಕಾವ್ಯವೋ ಹೊಸ ಸಾಹಿತ್ಯದ ಅತ್ಯುತ್ತಮ ಕೃತಿಯಲ್ಲಿ ಸೇರತಕ್ಕ ದ್ದಾಗಿದೆ. ಕನ್ನಡದ ಆಧುನಿಕ ಕವಿತೆಯ ಕುಲಪತಿಗಳಾದ ಶ್ರೀಮಾನ್ ಬೆಳ್ಳೂರು ವೈ. ಶ್ರೀಕಂಠಯ್ಯನವರ ಶಿಷ್ಯರು ಅವರಿಗೆ ಅರ್ಪಿಸಿದ 'ಕಿರಿಯ ಕಾಣಿಕೆ' ಯಲ್ಲಿ ಇವರ ಕವಿತೆ ಮೊದಲು ನಮ್ಮ ಕಣ್ಣಿಗೆ ಕಂಡಿತು. ಆಮೇಲೆ ಒಂದೆರಡು ಪದ್ಯ 'ತಳಿರು' ನಲ್ಲಿ ಬಂದವು. ಆ ಕವಿತೆಗಳನ್ನು ನೋಡಿದವರಿಗೆ ಇವರ ಕೃತಿಯಲ್ಲಿ ಹಿರಿದಾದ ಒಂದು ಕಾವ್ಯಶಕ್ತಿ ಇದೆ ಎಂಬ ಸೂಚನೆ ಸ್ಪಷ್ಟವಾಗಿ ಗೋಚರವಾಯಿತು. ಮುದುಕಿಯೊಬ್ಬಳು ಮಲೆಯಮೇಲಿನ ದೇಗುಲದಲ್ಲಿ ಪೂಜಾಮೂರ್ತಿಯ ಮುಂದೆ ರಂಗವಲ್ಲಿ ಯನ್ನು ಹಾಕುತ್ತಿರುವುದನ್ನು ನೋಡಿದ್ದನ್ನು ಹೇಳಿ ಇವರು, ದೇವರು ಇದಾನೋ ಇಲ್ಲವೋ, ಭಕ್ತಿಯಿರುವುದು ನಿಜ, ಎನ್ನುತ್ತಾರೆ. ಒಂದು ನಾಯಿಮರಿಯನ್ನು ಸಾಯಬಿಡಲಾರದೆ ಸಾಕಿದವರು ಅದು ಅಶುಚಿ ಎಂಬ ಕಾರಣದಿಂದ ಅದನ್ನು ಮುಟ್ಟದೆ ಇರುತ್ತಾರೆ. ಮಡಿ ಎಂಬ

ಭಾವದಿಂದ ಕೆಡದ ಒಬ್ಬನು ಅದನ್ನು ಹತ್ತಿರಕ್ಕೆ ಕರೆದುಕೊಳ್ಳುತ್ತಾನೆ. ನಾಯಿ ಅವರನ್ನು ಬಿಡುತ್ತದೆ, ಇವನಿಗೆ ದತ್ತಾಗುತ್ತದೆ. ಕವಿ ಇದನ್ನು ಹೇಳಿ, ಕರುಣೆ ದೊಡ್ಡದೇ ಸರಿ, ಆದರೆ ಒಲುಮೆಗೆ ಸಮನಲ್ಲ, ಎನ್ನುತ್ತಾರೆ. ತೀರಿಹೋದ ಒಬ್ಬ ಸೋದರಿಯನ್ನು ಕುರಿತು ಮನದ ನೋವನ್ನು ಹೊಳೆ ಹರಿಸುವುದು ಇನ್ನೊಂದು ಕವಿತೆ. ಇಲ್ಲೆಲ್ಲ ಒಂದೊಂದು ಭಾವ ನಯವಾಗಿ ಹೊರಬಿದ್ದು ಒಂದು ನಕ್ಷತ್ರದಂತೆ ನಿಂತು ಮಿನುಗುತ್ತದೆ. ಇವರು ಪ್ರಕೃತಿಯ ಸೊಬಗನ್ನು ವಿವರವಾಗಿ ನೋಡಿ ವಿವರವಾಗಿ ನೆನೆಯುತ್ತಾರೆ. ಜೀವನದಲ್ಲಿ ಬಹುವಿಧದ ಜನವನ್ನು ಬಹುರೀತಿಯ ಸನ್ನಿವೇಶವನ್ನು ನೋಡಿದಾರೆ.

ನಯವಾದ ಭಾವಕ್ಕೆ ತಕ್ಕಂತೆ ಇವರ ಉಕ್ತಿ ನಯವಾಗಿದೆ. ತೀರಿಹೋದ ಸೋದರಿ ಹೊಳೆಯಲ್ಲಿ ಜೊತೆಯವರೊಂದಿಗೆ ಸ್ನಾನ ಮಾಡ ಹೋಗಿ ಮುಳುಗಿ ಹೋದಳು. ಆಕೆಯ ಮತ್ತು ಅವಳ ಗೆಳತಿಯರ ಆ ದಿನದ ಸರಸವನ್ನು ಕವಿ, 'ಹೊನಲೊಳಡಗಿದ ಜವನ ಮೊಗದಲಿ ನಗೆಯ ಹರಡುವ ಸರಸ' ಎಂದಿದಾರೆ. ಅಲ್ಲಲ್ಲಿ ಬರುವ ಉಪಮೆಗಳ ಸೊಗಸೂ ಹೀಗೆಯೇ. ಇದು ಕೆಲವು ವೇಳೆ ಕಾಣದೆ ಹೋಗಬಹುದು. ಈ ಸಂಗ್ರಹದಲ್ಲಿರುವ ಒಂದು ಕವಿತೆಯಲ್ಲಿ ದೇಗುಲದ ಮೌನವನ್ನು ಕುರಿತ ಮಾತಿನಲ್ಲಿ ಜೀವ ಈ ಜನ್ಮದಲ್ಲಿ ಬಸಿದು ತಿಳಿಯಿತೇ ಎಂದು ಒಂದು ಪ್ರಶ್ನೆಯಿದೆ. ನಮ್ಮ ಆತ್ಮದ ರಸ ನಿರ್ಮಲವಾಗಿ ದೇವರಿಗೆ ಅನುಭವ ಯೋಗ್ಯವಾಗಬೇಕು. ಅದರಲ್ಲಿ ಸೇರಿರುವ ಕಲ್ಮಶ ಹೋಗುವುದಕ್ಕಾಗಿ ಅದು ಜನ್ಮಗಳಲ್ಲಿ ಹೊಕ್ಕು ಇಳಿಯುತ್ತಿದೆ. ಈ ಬಾಳು ಒಂದು ಶೋಧಿಸುವ ವಸ್ತ್ರದಂತೆ. ಎಷ್ಟೋ ಭಾವ ಇಲ್ಲಿ ಒಂದು ಮಾತಿನಲ್ಲಿ ಅಡಗಿದೆ. ಇಂಥ ಭಾವ, ಇಂಥ ಮಾತು ಇವರ ಕೃತಿಗಳಲ್ಲಿ ಕಾಣುತ್ತಲೇ ಇರುತ್ತವೆ.

ಶ್ರೀಮಾನ್ ನರಸಿಂಹಾಚಾರ್ಯರ ಕಾವ್ಯದೃಷ್ಟಿ ಮೊನೆಯಾದದ್ದು ನೆಲೆಯರಿತದ್ದು. ಇವರ ಜೀವನಾನುಭವ ಕೂರಾದದ್ದು ತೀವ್ರವಾದದ್ದು; ಇವರ ಮಾತು ಮುದ್ದಾದದ್ದು ಬಲವುಳ್ಳದ್ದು. ಈ ಕಾರಣದಿಂದೆಲ್ಲ ಇವರ ಕವಿತೆ ಅತ್ಯುತ್ತಮ ರೀತಿಯದು. ಇವರ ಮನೆತನ ಸಂಸ್ಕೃತ

ಅಭ್ಯಾಸದಲ್ಲಿ ಪಳಗಿದ್ದು ಎಂದು ಕೇಳಿದ್ದೇನೆ. ಇವರು ಇಂಗ್ಲೀಷಿನಲ್ಲಿ ಸಾಕಾದಷ್ಟು ಪಾಠಮಾಡಿದಾರೆ, ಕಾವ್ಯ ಓದಿದಾರೆ. ಇಲ್ಲಿ ಸೇರಿರುವ ಕವಿತೆ ಈ ಎರಡು ಸಂಸ್ಕಾರಗಳೂ ಸಮನ್ವಯವಾಗಿ ಬಂದ ಫಲ. ಇಲ್ಲಿ ಕಾಣುವುದು ಕಾಳಿದಾಸ ವರ್ಡ್ಸ್‌ವರ್ತ್ ಕವಿಗಳು ಜೊತೆಯಾಗಿ ತಿದ್ದಿದ ಕವಿಮನೋಧರ್ಮ. ಕನ್ನಡ ಕವಿತೆ ಈ ಹತ್ತು ವರ್ಷದಲ್ಲಿ ಹಲವು ಮುಖದಲ್ಲಿ ಹಲವು ರೀತಿಯ ಸೊಗಸನ್ನು ತೋರಿದೆ. ಆ ಸೊಗಸುಗಳಲ್ಲಿ ಈ ಕವಿತೆಗಳ ಸೊಗಸು ಒಂದು. ಇಲ್ಲಿ ನಮ್ಮ ನಾಡು ನುಡಿಯುತ್ತಿದೆ; ನಮ್ಮ ಸಂಸ್ಕೃತಿ ರೂಪವನ್ನು ಪಡೆಯುತ್ತಿದೆ; ನಮಗೆ ಇಂಥ ಕವಿತೆ ಬಹಳ ಬೇಕಾಗಿದೆ.

ಈ ಕವಿತೆಗಳನ್ನು ರಚಿಸಿರುವುದಕ್ಕಾಗಿ ನಾನು ಶ್ರೀಮಾನ್ ನರಸಿಂಹಾಚಾರ್ಯರನ್ನು ಅಭಿನಂದಿಸುತ್ತೇನೆ. ಇವರು ಇಂಥ ಕೆಲಸವನ್ನು ಇನ್ನೂ ಹೆಚ್ಚಾಗಿ ಮಾಡುವಂತೆ ನಮ್ಮಲ್ಲಿ ಹಿರಿಯರಾದವರು ಇವರಿಗೆ ಪ್ರೋತ್ಸಾಹ ಕೊಡುವರೆಂದು ನನಗೆ ನಂಬಿಕೆಯಿದೆ. ನಮ್ಮ ಸಾಹಿತ್ಯದ ಅತ್ಯುತ್ತಮ ಕೃತಿ ಇನ್ನು ಕೆಲವನ್ನು ಪ್ರಕಟಿಸುವುದಕ್ಕೆ ನೆರವಾದ ಪೂಜ್ಯ ಮಿತ್ರರ ನೆರವಿನಿಂದಲೇ ಈ ಕೃತಿಯು ಹೊರಕ್ಕೆ ಬರುತ್ತಿದೆ. ನಮ್ಮ ಜನರು ಕೂಡ ಹೊಸ ರೀತಿಯ ಕವಿತೆಯನ್ನು ಈಗಾಗಲೇ ತಕ್ಕಮಟ್ಟಿಗೆ ಒಪ್ಪಿಕೊಂಡಿದಾರೆ. ಅವರು ಈ ಕವಿತೆಯನ್ನೂ ಒಪ್ಪಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಶ್ರೀಮಾನ್ ನರಸಿಂಹಾಚಾರ್ಯರ ಕೃತಿಗಳು ಜನದ ಮೆಚ್ಚಿಕೆಯನ್ನು ಪಡೆದು ದೇಶದಲ್ಲಿ ಕಾವ್ಯಾಭಿರುಚಿಯನ್ನು ಬೆಳೆಸಲೆಂದೂ, ಈ ಕವಿಯು ಇನ್ನೂ ಅನೇಕ ಕೃತಿಗಳನ್ನು ರಚಿಸಿ ತಾಯಿನುಡಿಯ ಸೇವೆಯಿಂದ ತಾವು ಕೀರ್ತಿಪಡೆದು ನಮಗೆ ಆನಂದವನ್ನು ಕೊಡಲೆಂದೂ ನಾನು ಹಾರೈಸುತ್ತೇನೆ.

1933

ಶ್ರೀ "ಆನಂದ"ರ

# "ಮಾಟಗಾತಿ ಮತ್ತು ಇತರ ಕತೆಗಳು"

ಈಗ ಎರಡು ವರ್ಷಗಳ ಹಿಂದೆ ನನ್ನ ಹೊಸ ಪರಿಚಯದ ಗೆಳೆಯರೊಬ್ಬರು ನನ್ನ ಸಣ್ಣಕತೆಗಳ ವಿಷಯವಾಗಿ ಮಾತನಾಡುತ್ತ, ಈ ಕತೆ ಚೆನ್ನಾಗಿದೆ, ಆ ಕತೆ ಚೆನ್ನಾಗಿದೆ, ಇನ್ನೊಂದು ಅಷ್ಟು ಚೆನ್ನಾಗಿಲ್ಲ, ಎಂದು ಹೇಳಿ, "ನೋಡಿ, ನಿಮ್ಮ ಈ ಕತೆಗಳಿಗಿಂತಲೂ ಚೆನ್ನಾಗಿರುವ ಒಂದು ಕತೆ 'ನಾನು ಕೊಂದ ಹುಡುಗಿ'. ನೀವು ಅದನ್ನು ಓದಿದ್ದೀರಾ?" ಎಂದು ಕೇಳಿದರು. ನಾನು ಕಥೆಯನ್ನು ಓದಿದ್ದೇನೆಂದೂ ಲೇಖಕರನ್ನು ಬಲ್ಲೆನೆಂದೂ ಅವರಿಗೆ ತಿಳಿಸಿದೆನು. ಅವರು 'ನಾನು ಕೊಂದ ಹುಡುಗಿ' ಕಥೆಯನ್ನು ಬಾಯಿತುಂಬ ಕೊಂಡಾಡಿದರು; ಕೊನೆಗೆ, ನಿಮ್ಮ ಕಥೆಗಿಂತ ಚೆನ್ನಾಗಿದೆ ಎಂದು ಹೇಳಿದ್ದರಿಂದ ನೀವು ನೊಂದುಕೊಳ್ಳಬಾರದು, ಎಂದರು. ನಾನು ಆ ಮಾತಿನಿಂದ ನೊಂದುಕೊಂಡಿರಲಿಲ್ಲ; ನೊಂದುಕೊಳ್ಳುವುದಕ್ಕೆ ಪ್ರತಿಯಾಗಿ ಸಂತೋಷಪಟ್ಟಿದ್ದೆನು. ಅದನ್ನು ಆ ಮಿತ್ರರಿಗೆ ತಿಳಿಸಿ, ನಾನು ನೊಂದುಕೊಂಡೆನೆಂದು ಚಿಂತಿಸದಂತೆ ಧೈರ್ಯ ಹೇಳಿದೆನು.

ನನ್ನ ಮಿತ್ರರು ಅಷ್ಟು ಶ್ಲಾಘಿಸಿದ ಕಥೆಯನ್ನು ಈವರೆಗೆ ಅನೇಕರು ಓದಿದಾರೆ, ಮೆಚ್ಚಿದಾರೆ. ಅದೂ ಅದರ ಜೊತೆಗೆ ಅದೇ ಗ್ರಂಥಕರ್ತರು ಬರೆದ ಇನ್ನು ನಾಲ್ಕು ಕತೆಗಳೂ ಈ ಪುಸ್ತಕದಲ್ಲಿವೆ. ಈ ಕತೆಗಳನ್ನು ರಚಿಸಿರುವ ಆನಂದರ ಹೆಸರು ಕನ್ನಡ ನಾಡಿನಲ್ಲಿ ಕಥಾಪ್ರೇಮಿಗಳಿಗೆಲ್ಲ ತಿಳಿದಿರುವ ಹೆಸರು. ಈ ಹೆಸರಿನಿಂದ ಕಥೆ ಬರೆಯುತ್ತಿರುವ ಅಜ್ಜಂಪುರದ ಸೀತಾರಾಮರು ಅವರನ್ನು ಬಲ್ಲ ಜನಕ್ಕೆಲ್ಲ ಅವರ ಕಥೆಗಳಂತೆಯೇ ಪ್ರಿಯರಾಗಿದ್ದಾರೆ. ಈ ಮೊದಲೇ ಇವರ ಕಥೆಗಳ ಪುಸ್ತಕವೊಂದು ಪ್ರಕಟವಾಗಿದೆ: ಇದು ಎರಡನೆಯದು. ಸೀತಾರಾಮರು ಅವರ ಮೊದಲನೆಯ ಪುಸ್ತಕದ ಮುನ್ನುಡಿಯಲ್ಲಿ ನನ್ನ ವಿಷಯದಲ್ಲಿ ಬಹಳ ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ: ಅವರ ವಿಷಯದಲ್ಲಿ ನನಗೂ ಬಹು ವಿಶ್ವಾಸವಿದೆ.

ಈಗ ಅವರು ಈ ಪುಸ್ತಕಕ್ಕೆ ಒಂದು ಮುನ್ನುಡಿಯನ್ನು ಬರೆಯಬೇಕೆಂದು ನನ್ನನ್ನು ಕೇಳಿದ್ದಾರೆ; ಇದನ್ನು ನಾನು ಬಹು ಸಂತೋಷದಿಂದ ಬರೆಯು ತ್ತಿದೇನೆ.

ಕಥೆಯೆನ್ನುವುದು ಮೂಲದಲ್ಲಿ ಹೇಳುವ ಮಾತು. ನಿಜವಾಗಿ ನೋಡಿದರೆ ಕಾವ್ಯವನ್ನೂ ನಾವು ಹೀಗೆಯೇ ವರ್ಣಿಸಬಹುದು. ಬರೆದು ಓದುವುದೆನ್ನುವುದು ಸಾಹಿತ್ಯಕ್ಕೆ ಈಚೆಗೆ ಬಂದ ಒಂದು ಸ್ಥಿತಿ. ಸ್ವರೂಪತಃ ಸಾಹಿತ್ಯವು ಹಾಡುವ ವಿಷಯ, ಹೇಳುವ ವಿಷಯ; ಬಲ್ಲವರು ಹಾಡಿದರೆ, ಹೇಳಿದರೆ, ಇತರರು ಕೇಳುವ ವಿಷಯ. ಕಥೆಯೆನ್ನುವುದು ಕಥಿತ ವಸ್ತು; ಅದರ ಮುಖ್ಯ ಲಕ್ಷಣ ಕಥನ; ಅದರ ಹಿರಿಯಗುಣ ಕಥನದಲ್ಲಿ ಕೌಶಲ. ಈ ಕೌಶಲವು ಎರಡು ರೀತಿಯದಾಗಿರುತ್ತದೆ. ಒಂದು ರೀತಿ ನಿಸರ್ಗ ವಾದ ಕಥನದಲ್ಲಿ ಕಾಣುವುದು. ನಾಲ್ಕು ಜನ ಎಲ್ಲಿಯೋ ಒಂದು ಕಡೆ ಎಂದರೆ ಬಾವಿಯ ಬಳಿ, ಹೊಲದಲ್ಲಿ, ಚಾವಡಿಯಲ್ಲಿ, ಕಟ್ಟೆಯ ಮೇಲೆ, ಸೇರಿದಾಗ ಒಬ್ಬರು ಯಾವುದೋ ಸಂಗತಿ ನಡೆಯಿತೆಂದು ಹೇಳತೊಡಗಿ ದರೆ ಅಲ್ಲಿ ಕಥನ ಸಹಜವಾಗಿ ಆರಂಭವಾಗುತ್ತದೆ. ಯಾರಿಗೋ ಮುನೀಶ್ವರ ಕಂಡ; ಯಾರದೋ ದನ ತಪ್ಪಿಸಿಕೊಂಡುಹೋಗಿತ್ತು, ಸಿಕ್ಕಿತು; ಯಾರೋ ಒಬ್ಬಳ ಗಂಡ ಅವಿವೇಕವಾಗಿ ನಡೆದುಕೊಂಡ; ಯಾರೋ ಒಬ್ಬರ ಮಗ ಮನೆ ಬಿಟ್ಟು ದಂಡು ಸೇರಿದ. ಇದನ್ನು ಹೇಳುವಲ್ಲಿ ಹೇಳುವವನು ಸರಿಯಾಗಿ ಹೇಳಿದರೆ ಕೇಳುವವರಿಗೆ ರುಚಿ ಹುಟ್ಟುತ್ತದೆ; ಮಾತು ಹೆಚ್ಚು ಕಡಮೆಯಾದರೆ ಬೇಸರವಾಗುತ್ತದೆ. ಕಥೆಯೆನ್ನುವುದು ಬರಹದಲ್ಲಿ ಬಂದಾಗಲೂ ಸಾಮಾನ್ಯವಾಗಿ ಕಥನದ ಪದ್ಧತಿಯನ್ನು ಅನುಸರಿಸಿದರೆ ಓದುವವರ ಮನಸ್ಸನ್ನು ಹಿಡಿಯುತ್ತದೆ. ಹೇಳುವಾಗಣ ಪದ್ಧತಿಯನ್ನು ಹಾಗೆ ಹಾಗೆಯೇ ಬರಹದಲ್ಲಿ ತರುವುದು ಸಾಧ್ಯವಲ್ಲ. ಅಲ್ಲಿ ಹೇಳುವವನ ಧ್ವನಿಯಿದೆ, ಚರ್ಯೆಯಿದೆ, ಮುಖ ಮುದ್ರೆಯಿದೆ; ಮಧ್ಯೆ ಕೇಳುವವರ ಪ್ರಶ್ನೆಯಿದೆ, ಆಶ್ಚರ್ಯವಿದೆ; ಹೂಂಗುಟ್ಟುವಿಕೆ ಇದೆ. ಬರಹದ ಕಥೆ ಜೀವದ ಈ ಹೊಳಪುಗಳಿಲ್ಲದೆ ತನ್ನ ಕೆಲಸವನ್ನು ಸಾಧಿಸಬೇಕು; ಅದಕ್ಕಾಗಿ ಅದು ಅಲ್ಲಲ್ಲಿ ಎರಡು ಮಾತನ್ನು ಹೆಚ್ಚಾಗಿ ಹಾಕಬೇಕಾಗುತ್ತದೆ. ಆದರೂ ಮಾರ್ಪಾಡು

ಎನ್ನುವುದು ಸಹಜವಾದ ಕಥನ ಪದ್ಧತಿಯನ್ನು ಒಟ್ಟಿನಲ್ಲಿ ಗೌರವಿಸುತ್ತದೆ. ಇದು ಒಂದು ಪದ್ಧತಿ. ಇದನ್ನು ಕತೆ ಹೇಳುವ ಪದ್ಧತಿಯೆನ್ನಬಹುದು.

ಇನ್ನೊಂದು ಪದ್ಧತಿ ಕತೆ ಕಟ್ಟುವ ಪದ್ಧತಿ. ಜನದ ಬದುಕು ಬೆಳೆದ ಹಾಗೆ ಕತೆಯ ವಸ್ತುವಾದ ಈ ನಡೆದ ಸಂಗತಿಯೆನ್ನುವುದು ಭಾವನಾಪ್ರಪಂಚವನ್ನೂ ಒಳಗೊಳ್ಳುವುದು ವಾಡಿಕೆಯಾಗುತ್ತದೆ. ಕತೆಗಾರನು ಜನರ ಭಾವನೆಗಳನ್ನೂ, ಆಸೆಗಳನ್ನೂ, ಊಹೆಗಳನ್ನೂ, ಎಣಿಕೆಗಳನ್ನೂ ನಿಜವಾಗಿ ಗ್ರಹಿಸಿ ಅವುಗಳ ವಿಷಯವನ್ನು ಹೇಳತೊಡಗುತ್ತಾನೆ. ಇಂಥ ವಿವರವನ್ನು ಹೇಳುವುದು ಕಷ್ಟ. ಅದನ್ನು ಯೋಚಿಸಿಕೊಂಡು ಒಂದು ಮೂರ್ತಿಯನ್ನು ಮಾಡಿ ಆಮೇಲೆ ಅದನ್ನು ಹೊರಗೆ ತರಬೇಕಾಗುತ್ತದೆ. ಈ ವೇಳೆಗೆ ಸಾಹಿತ್ಯ ಬರಹದ ವಿಷಯವಾಗಿರುತ್ತದೆ. ಕತೆಗಾರನು ತನ್ನ ಕೊಠಡಿಯಲ್ಲಿ ಕುಳಿತುಕೊಳ್ಳುತ್ತಾನೆ; ಕತೆಯನ್ನು ಮೆಲ್ಲನೆ ಬೆಳಸುತ್ತಾನೆ. ಕಟ್ಟೆಯ ಮೇಲೆಯೋ ಚಾವಡಿಯಲ್ಲಿಯೋ ಹೇಳುವಾಗ ಎದುರಿಗಿರುವ ಜನರನ್ನು ಕಾಯಿಸದೆ, ಇರವಷ್ಟು ಹೊತ್ತಿನಲ್ಲಿ, ಕತೆಗಾರನು ಕತೆಯನ್ನು ಮುಗಿಸಬೇಕು. ಎದುರಿಗೆ ಜನವಿಲ್ಲದೆ, ಹೊತ್ತಿನ ನಿಯಮವಿಲ್ಲದೆ, ಬರೆಯುವುದಕ್ಕೆ ಕುಳಿತಾಗ ಕತೆಯ ವಿವರಗಳನ್ನು ಸಾವಧಾನವಾಗಿ ಬೆಳೆಸಬಹುದು. ಇದು ವಾಡಿಕೆಯಾದರೆ ಹೇಳುವ ವಿವರ ಮಾರ್ಪಟ್ಟಂತೆ ಕತೆಯ ಭಾಷೆಯೂ ಮಾರ್ಪಡುತ್ತದೆ. ಜೊತೆಗೆ ಕತೆಯ ಪದ್ಧತಿಯೂ ಮಾರ್ಪಡುತ್ತದೆ. ಕಥೆಯ ಈ ರೂಪು ಸಾಹಿತ್ಯ ಎನ್ನುವುದು ಬರಹವಾದುದರಿಂದ ಬಂದ ಫಲ. ಹೊಸ ಕಾವ್ಯ ಹೇಗೆ ಬರಹದ ಕಾವ್ಯವಾಗಿದೆಯೋ ಹಾಗೆ ಹೊಸ ಕತೆಯೂ ಬರಹದ ಕತೆಯಾಗಿದೆ. ಆದರೆ ಇಲ್ಲಿಯೂ ಕಥನದಲ್ಲಿ ಕೌಶಲವಿರಬೇಕು. ಹೊರಗೆ ನಡೆದ ಸಂಗತಿಯನ್ನು ತಿಳಿಯುವುದಕ್ಕೆ ನೆನೆಯುವುದಕ್ಕೆ ನುಡಿಯುವುದಕ್ಕೆ ಅದರ ವಿಷಯದಲ್ಲಿ ಎಷ್ಟು ವಿವರವಾದ ಜ್ಞಾನವಿರಬೇಕೋ ಅದೇ ರೀತಿಯ ವಿವರವಾದ ತಿಳಿವು ಇಲ್ಲಿ ಚೇತನದ ಅಂತರ್ಯದ ವಿಷಯದಲ್ಲಿ ಇರಬೇಕು. ಇಲ್ಲಿ ಕತೆಯಲ್ಲಿ ಸಹಜತೆ ಸರಳತೆಗೆ ಪ್ರತಿಯಾಗಿ ನಾಗರಿಕತೆಯ ಫಲವಾದ ಒಂದು ತೆರದ ಬಿತ್ತರ, ಒಂದು ರೀತಿಯ

ಬಿನ್ನಾಣ್ಯ,ಕಾಣುತ್ತವೆ. (ಇಲ್ಲಿ ಈ ಮಾತುಗಳನ್ನು ಒಳ್ಳೆಯ ಅರ್ಥದಲ್ಲಿ ಉಪಯೋಗಿಸಿದೆ.) ಎಂದರೆ ಕತೆಗಾರನು ತಾನು ತೆಗೆದುಕೊಂಡ ವಿಷಯವನ್ನು ಸಾದುತ್ತಾನೆ, ತಿದ್ದುತ್ತಾನೆ, ಒದಗಿಸಿಕೊಳ್ಳುತ್ತಾನೆ. ಇದು ಕತೆಯಲ್ಲಿ ಎರಡನೆಯ ರೀತಿ. ಸಾವಧಾನವಾಗಿ ರಚಿಸಿದ ಕೃತಿಯಾದ್ದರಿಂದ ಇಂಥ ಕತೆಯಲ್ಲಿ ಕಲೆ ಸ್ಪಷ್ಟವಾಗಿರುತ್ತದೆ. ಕತೆಗಾರನು ಕತೆಯನ್ನು ಆರಂಭಿಸುವುದರಲ್ಲಿ, ನಡಸುವುದರಲ್ಲಿ ಬೆಳಸುವುದರಲ್ಲಿ ಉದ್ದಕ್ಕೂ ತನ್ನ ಕೈವಾಡವನ್ನು ತೋರಿಸುತ್ತಿರುತ್ತಾನೆ. ಮಾತಂತೂ ಯೋಚಿಸುತ್ತ ಆರಿಸುತ್ತ ಜೋಕೆಯಿಂದ ಸೇರಿಸಿದ ಮಾತೆನ್ನುವುದು ತೋರುತ್ತದೆ. ಹೀಗೆಂದ ಮಾತ್ರಕ್ಕೆ ಬರೆಯುವವನು ಶ್ರಮಪಟ್ಟಿದ್ದಾನೆಂದಾಗಲಿ ಓದುವವರಿಗೆ ಶ್ರಮವಾಗುತ್ತದೆಂದಾಗಲಿ ಅರ್ಥವಲ್ಲ. ಬರೆಯುವವನು ಈ ರಚನೆಯಲ್ಲಿ ಸುಖವನ್ನೇ ಅನುಭವಿಸಿರುತ್ತಾನೆ; ಅಭಿರುಚಿಯನ್ನರಿತ ತನ್ನ ಕುಶಲ ಕರ್ಮದಿಂದ ಓದುವವನಿಗೆ ಆನಂದವನ್ನುಂಟುಮಾಡುತ್ತಾನೆ. ಇದು ಸಾಹಿತ್ಯದ ಪ್ರೌಢಾವಸ್ಥೆಯ ಪದ್ಧತಿ.

ಆನಂದರ ಕಥನ ಪದ್ಧತಿ ಈ ಎರಡನೆಯ ಪದ್ಧತಿ. ಈ ಪುಸ್ತಕದ ಐದು ಕತೆಗಳಲ್ಲಿಯೂ ನಾವು ಈ ಪದ್ಧತಿಯ ಬಹು ಒಳ್ಳೆಯ ಫಲವನ್ನು ಕಾಣಬಹುದು. ಅದರ ಸ್ವರೂಪ ಇಲ್ಲಿಯ ಕತೆಗಳಲ್ಲಿ ಚೆನ್ನಾಗಿ ಕಾಣುತ್ತದೆ. ಕಲೆಗೆ ಮನಸೋಲುವ ತರುಣನೊಬ್ಬನು ಸುಂದರಿಯೊಬ್ಬಳ ಪಟವನ್ನು ನೋಡುತ್ತಾನೆ. ಚಿತ್ರಕಾರನು ದಕ್ಷನಾದರೆ ಚಿತ್ರವು ಚಿತ್ರವಾಗಿ ಉಳಿಯುವುದಿಲ್ಲ, ಸಜೀವವಾಗುತ್ತದೆ. ಪಟದಮೇಲೆ ಬಣ್ಣ ಹಾಕಲು ಎಂದೋ ಆಡಿಸಿದ ಕೈಬೆರಳುಗಳು ಇಂದು ನಮಗೆ ಮಂತ್ರ ಹಾಕುತ್ತ ಮುಖದ ಬಳಿ ಕೈಯಾಡಿಸುವ ಮಾಂತ್ರಿಕನ ಬೆರಳುಗಳಂತೆ ಮಂಕನ್ನು ಕವಿಸುತ್ತವೆ. ನೋಡುವವನು ತಾನು ಜೀವವಿರುವ ವಸ್ತು, ಪಟ ಜೀವವಿಲ್ಲದ ವಸ್ತು, ಎನ್ನುವುದನ್ನು ಮರೆಯುತ್ತಾನೆ. ಈ ಅನುಭವವು ತೀವ್ರವಾದ ಒಂದು ಕ್ಷಣದಲ್ಲಿ ಇವನು ಪಟದೊಂದಿಗೆ ಪ್ರಪಂಚದ ಸಜೀವ ವ್ಯಕ್ತಿಯೊಂದಿಗೆ ಬೆಳೆಸುವಂಥ ಒಂದು ಸಂಬಂಧವನ್ನು ಬೆಳೆಸುತ್ತಾನೆ; ಎಚ್ಚರಗೊಂಡಾಗ ಭಾವದ ಆ ಉದ್ವೇಗವನ್ನು ನೆನೆದು ಆಶ್ಚರ್ಯಪಡುತ್ತಾನೆ. ಕಲೆಯ ವಿಷಯವಾಗಿ ಈ ಮಾತನ್ನು ಉಪನ್ಯಾಸ

ದಲ್ಲಿ ಹೇಳುವುದು ಒಂದು ರೀತಿ. ಕತೆಗಾರನು ಇದನ್ನು ಒಂದು ಕತೆಯಾಗಿ ಹೇಳುತ್ತಾನೆ. ಇದೇ 'ಮಾಟಗಾತಿ'ಯ ವಿಷಯ. ಈ ವಸ್ತು ಅದರಲ್ಲಿ ಹದಿನೇಳು ಪುಟದಷ್ಟು ಬೆಳೆದಿದೆ; ಯಾವ ಪುಟದಲ್ಲಿಯೂ ಜೊಂಡಾಗಿಲ್ಲ; ಎಲ್ಲಿಯೂ ಬಿಗಿತಪ್ಪಿಲ್ಲ; ಕೊನೆಯವರೆಗೂ ಒಗಟಿ ಏನೆಂದು ತಿಳಿಯುವುದಿಲ್ಲ. 'ಹೆಂಡತಿಯ ಕಾಗದ'ದಲ್ಲಿ ವಿಷಯ ಇದಕ್ಕಿಂತ ಲಘು; ಒಗಟಿ ಇಷ್ಟು ಕಷ್ಟದ್ದೂ ಅಲ್ಲ; ಆದರೆ ಹೇಳುವ ರೀತಿ ಇಷ್ಟೇ ವಿಸ್ತಾರ. ಅಲ್ಲಿಯೂ ಕಥನವು ಇಷ್ಟೇ ಕುಶಲವಾದ ಕರ್ಮ. ಇಲ್ಲಿರುವಂತೆಯೇ ಉಳಿದ ಕತೆಗಳಲ್ಲಿಯೂ ಪ್ರೌಢ ಸಾಹಿತ್ಯದ ಕಥನ ನೈಪುಣ್ಯ ವ್ಯಕ್ತವಾಗುತ್ತದೆ.

ನಮ್ಮಲ್ಲಿ ಹೊಸರೀತಿಯ ಸಣ್ಣಕತೆ ಆರಂಭವಾದದ್ದು ಈಚಿನ ಮಾತು. ಅದನ್ನು ಬರೆಯತೊಡಗುವ ತರುಣರು ಮೊದಮೊದಲಲ್ಲಿ ಎಳೆತನದ ಪ್ರೇಮವನ್ನು ಚಿತ್ರಿಸುವುದೇ ಮುಖ್ಯವಿಷಯವೆಂಬಂತೆ ನಡೆದುಕೊಳ್ಳುವರು. ಇದೇನೂ ತಪ್ಪಲ್ಲ. ಆದರೆ ಇದರಂತೆ ವಿಷಯ ಇನ್ನೂ ಸಾವಿರ ಇವೆ. ನಾನು ಎಂದೊ ಈ ಮಾತನ್ನು ಆನಂದರವರಿಗೆ ಹೇಳಿದೆನಂತೆ. ಅವರು ಅದನ್ನು ನೆನಪಿನಲ್ಲಿ ಇಟ್ಟುಕೊಂಡು ನಾನು ಅವರ ಕತೆಗಳಲ್ಲಿರುವ ತಪ್ಪುಗಳನ್ನು ನಿರ್ದಾಕ್ಷಿಣ್ಯವಾಗಿ ಹೇಳಬೇಕೆಂದು ನನ್ನನ್ನು ಕೇಳಿದ್ದಾರೆ. ನಾನು ತಪ್ಪುಗಳನ್ನು ನೋಡುವವನೇ, ಹೇಳುವವನೇ. ಆದರೆ ನಾವು ಸಾಮಾನ್ಯವಾಗಿ ತಪ್ಪು ಎನ್ನುವುದನ್ನು ನಾನು ಈಗ ಈ ಕೃತಿಯಲ್ಲಿ ತಪ್ಪು ಎಂದು ಕರೆಯುವುದಿಲ್ಲ, ಆ ಸಂಬಂಧದ ಗುಣದ ಅಭಾವ ಎನ್ನುತ್ತೇನೆ. ಹೇಳುವ ವಿಷಯ ಒಂದೇ; ಆದರೆ ವಿಮರ್ಶೆಯ ನಿಲುವು ಬೇರೆಯಾಗಿದೆ. ಸಾಹಿತ್ಯದಲ್ಲಿ ಎಷ್ಟು ಜನರಿದ್ದಾರೋ ಅಷ್ಟು ದಾರಿಯಿದೆ. ಶಕ್ತನಾದ ಲೇಖಕನು ರಚಿಸಿದ ಕೃತಿಯಲ್ಲಿ ಗುಣವನ್ನು ತೆಗೆದುಕೊಳ್ಳುವುದು ವಿಮರ್ಶೆಯಲ್ಲಿ ಹಿರಿಯತನ. ಹಂಸಕ್ಷೀರದ ನ್ಯಾಯವು ಹಳೆಯದೇನೋ ನಿಜ. ಆದರೆ ಅದು ಹಳೆಯ ಬಟ್ಟೆಯಂತೆ ಹಳೆಯದಲ್ಲ; ಸತ್ಯದಂತೆ ಹಳೆಯದು; ಸೂರ್ಯನಂತೆ ಹಳೆಯದು. ಅದಕ್ಕೆ ಸಾಹಿತ್ಯದಲ್ಲಿ ನಿತ್ಯವಾದ ಒಂದು ಸ್ಥಾನವಿದೆ. ಆನಂದರವರಂಥ ಶಕ್ತರಾದ ಲೇಖಕರಿಗೆ ತಮ್ಮತಮ್ಮ ಗ್ರಂಥದ ವ್ಯಾಪ್ತಿ ಎಷ್ಟೆನ್ನುವುದು

ತಾನೇ ತಿಳಿಯುತ್ತದೆ. ಅಭ್ಯಾಸ ಬೆಳೆದಹಾಗೆ, ಅನುಭವ ಹೆಚ್ಚಿದಹಾಗೆ, ಕೃತಿ ರಸವತ್ತಾಗುತ್ತದೆ, ಪುಷ್ಟವಾಗುತ್ತದೆ, ಶಕ್ತವಾಗುತ್ತದೆ. ಇವರ ಹಿಂದಣ ಕತೆಗಳಿಂದ ಈ ಕತೆಗಳಿಗೆ ಇವರು ಎಷ್ಟೋ ದೂರ ಮುಂದೆ ನಡೆದಿದ್ದಾರೆ ಎನ್ನುವುದು ಯಾರಿಗಾದರೂ ತಿಳಿಯುವ ವಿಷಯ. ಅಲ್ಲಿ ಅತ್ಯುತ್ತಮವಾದ ಕಥನ ಶಕ್ತಿ ಮೂಡಿತು; ಅದು ಇಲ್ಲಿ ಬೆಳೆಯುತ್ತಿದೆ. ಜೀವನದ ಆಳವೂ ಹರವೂ ಇವರ ಕಣ್ಣಿಗೆ ಕಂಡ ಕಂಡ ಹಾಗೆಲ್ಲಾ ಕತೆಯ ಕ್ಷೇತ್ರವೂ ವಿಸ್ತಾರವಾಗುತ್ತದೆ; ಕತೆ ಬಾಳುವೆಗೆ ಹತ್ತಿರವಾಗುತ್ತ ಬರುತ್ತದೆ.

ಕನ್ನಡದ ಹೊಸ ಸಾಹಿತ್ಯವು ಪ್ರಪಂಚದ ಸಾಹಿತ್ಯದಲ್ಲಿ ಗಣ್ಯವಾದ ಸ್ಥಾನವನ್ನು ಪಡೆಯಬೇಕು. ಅದನ್ನು ಸಾಧಿಸುವುದಕ್ಕೆ ನಮ್ಮ ಕತೆಗಾರರೂ ಕವಿಗಳೂ ಇತರ ಲೇಖಕರೂ ಹಟದಿಂದ ಕೆಲಸ ಮಾಡಬೇಕು. ಈ ಕೆಲಸ ಶ್ರೇಷ್ಠವಾದದ್ದು; ನಮ್ಮ ಜೀವಿತವನ್ನು ವಿಾಸಲು ಮಾಡಲು ಯೋಗ್ಯವಾದದ್ದು. ಆನಂದರವರು ತಮ್ಮ ಅನುಭವಕ್ಕೆ ಬಂದ ವಿಷಯವನ್ನು ತಮಗೆ ಸುಖವಾಗುವಂತೆ, ಓದುವವರಿಗೆ ರುಚಿಸುವಂತೆ, ವಸ್ತು ಕೆಡದಂತೆ, ಕಲೆ ಬೆಳೆಯುವಂತೆ, ಕತೆಯ ರೂಪದಲ್ಲಿ ಹೇಳುತ್ತಿದ್ದಾರೆ. ನಮ್ಮ ಕತೆ ಬೆಳೆಯುವುದಕ್ಕೆ ಇಂಥ ಕೆಲಸ ಬಹಳ ಬೇಕು. ಇದನ್ನು ಆನಂದರವರೂ ಇಂಥ ಇತರ ತರುಣ ಲೇಖಕರೂ ನಡಸಬೇಕಾಗಿದೆ. ಹಿರಿಯರೆಂದು ನಮ್ಮ ಬಳಿಗೆ ಬರುವ ತೇಜಸ್ವಿಗಳಾದ ತರುಣರಿಗೆ ನಾವು, "ನಿಮ್ಮ ಧ್ಯೇಯ ದೊಡ್ಡದು; ನಿಮಗೆ ಶಕ್ತಿಯಿದೆ; ದೂರದ ಗುರಿಯ ಮೇಲೆ ಕಣ್ಣಿಟ್ಟು ದೊಡ್ಡ ರೀತಿಯಲ್ಲಿ ಮುಂದೆ ನಡೆಯಿರಿ; ನಿಮ್ಮ ಆಸೆ ಕೈಸೇರಲಿ", ಎಂದು ಮಾತ್ರ ಹೇಳಬಹುದು. ನಾನು ಆನಂದರಿಗೆ ಈ ಮಾತನ್ನು ಹೇಳುತ್ತೇನೆ. ಈ ಆಸೆ ಈಡೇರುವುದೆಂದು ನನಗೆ ಧೈರ್ಯವುಂಟು. ಏಕೆಂದರೆ ಅದು ಒಬ್ಬ ಲೇಖಕನ ಮಾತ್ರದ ಆಸೆಯಲ್ಲ. ಅದು ನಮ್ಮ ನಾಡಿನ ಆಸೆ, ನಮ್ಮ ನುಡಿಯ ಆಸೆ. ಅದು ನಮ್ಮ ಜನತೆಯ ಆಸೆ. ಅದಕ್ಕೆ ಸೋಲಿಲ್ಲ.

1933

## ಶ್ರೀ ಅ. ನ. ಕೃಷ್ಣರಾಯರ

## “ ಕಿಡಿ ”

ನನ್ನ ತರುಣ ಮಿತ್ರರಾದ ಶ್ರೀಮಾನ್ ಅ. ನ. ಕೃಷ್ಣರಾಯರ ಈ ಸಣ್ಣ ಕತೆಗಳ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವುದು ನನಗೆ ಬಹಳ ಸಂತೋಷದ ವಿಷಯವಾಗಿದೆ.

ಹೊಸಗನ್ನಡದ ಸ್ವತಂತ್ರ ಸಾಹಿತ್ಯ ಆರಂಭವಾಗಿ ಈಗ ಇನ್ನೂ ಮೂವತ್ತು ವರ್ಷವಾಗಿಲ್ಲ. ಅದನ್ನು ಆರಂಭಿಸಿದವರು ಕನ್ನಡ ಸಾಹಿತ್ಯದ ಅಭಿಮಾನಿದೇವಿ ತಮ್ಮ ಕೈಯನ್ನು ಯಾವ ಕೆಲಸಕ್ಕೆ ಹೂಡಿದಳು ಎಂಬುದನ್ನು ತಾವೇ ತಿಳಿದಿರಲಾರರು. ಈ ಮೂವತ್ತು ವರುಷದಲ್ಲಿ ಸೃಷ್ಟಿಯಾಗಿರುವ ಗ್ರಂಥಸಮುದಾಯದಿಂದ ಈ ಕೆಲಸದ ಸ್ವರೂಪ ಜನರಿಗೆ ಸ್ವಲ್ಪಮಟ್ಟಿಗೆ ವ್ಯಕ್ತವಾಗಿದೆ, ಗ್ರಂಥಕರ್ತರೂ ಅದನ್ನು ಅರಿತು ಕೊಳ್ಳುತ್ತಿದ್ದಾರೆ. ಕನ್ನಡದ ಜನದ ಜೀವನಕ್ಕೆ ಮಾತಿನಲ್ಲಿ ರೂಪು ಕೊಡುವುದು, ಆದರ ಸಹಾಯದಿಂದ ಆ ಜೀವನದ ರೂಪನ್ನು ಹೊಸದು ಮಾಡುವುದು, ಇದು ಈ ಸಾಹಿತ್ಯದ ಉದ್ದೇಶ. ಎಲ್ಲ ಸಾಹಿತ್ಯದ ಉದ್ದೇಶವೂ ಇದೇ; ಆದರೆ ಸಾಹಿತ್ಯ ಸೇವಕನು ಎಲ್ಲ ವೇಳೆಯಲ್ಲಿಯೂ ಈ ಉದ್ದೇಶವನ್ನು ನೆನೆಯುತ್ತ ಕೆಲಸ ಮಾಡುವುದಿಲ್ಲ. ಹಾಗೆ ನೆನೆಯುತ್ತ ಕೆಲಸಮಾಡುವುದು ಸಾಧ್ಯವೂ ಅಲ್ಲ, ಆವಶ್ಯಕವೂ ಅಲ್ಲ. ಸಾಹಿತ್ಯ ಸೇವಕನು ಹಿಂದಿನಿಂದ ಬಂದ ಒಂದು ಪದ್ಧತಿಗಾಗಿ ಬರೆಯದೆ ತನ್ನ ಮನಸ್ಸಿನ ಕಲಕು ಕುಲುಕುಗಳನ್ನೂ, ಸೃಷ್ಟಿಯ ಲೀಲೆಯಲ್ಲಿ ತಾನು ನೋಡಿದ ಚಿತ್ರವನ್ನೂ, ಮಾತಿನಲ್ಲಿ ವಿವರಿಸಿದರೆ ಈ ಉದ್ದೇಶ ಅದರಲ್ಲಿ ತಾನಾಗಿ ಸೇರಿ ಬರುತ್ತದೆ. ತನ್ನ ಭಾಗದ ಕೆಲಸವನ್ನು ತನ್ನಿಂದಾದಷ್ಟು ಚೆನ್ನಾಗಿ ಮಾಡುವ ಜೇನು ಹುಳುವಿನ ಹಾಗೆ ಇವನು ತಾನೇ ಅರಿಯದ ಒಂದು ಹಿರಿಯ ಕಾರ್ಯದ ಸಾಧನೆಯಲ್ಲಿ ನೆರವಾಗುತ್ತಾನೆ. ಇದರಿಂದ ಅವನ ಜನ್ಮ ಸಾರ್ಥಕವಾಗುತ್ತದೆ; ಅವನ ನುಡಿಯ ಸಾಹಿತ್ಯ ಬೆಳೆಯುತ್ತದೆ; ಅವನ ಜನದ ಜೀವನ ಹಸನಾಗುತ್ತದೆ.

ಕನ್ನಡ ಸಾಹಿತ್ಯವು ಹಿಂದಿನಿಂದ ಬಂದ ಪದ್ಧತಿಗಾಗಿ ಬರೆಯದೆ ಈಗಣ ಹೊಸದಾರಿಯಲ್ಲಿ ಅಡಿಯಿಡುವುದಕ್ಕೆ ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕವು ಮುಖ್ಯವಾಗಿ ಕಾರಣವಾಯಿತೆನ್ನುವುದು ನಿರ್ವಿವಾದ ಮಾತು. ನವ್ಯತೆಯ ಸುಖ ದೊರೆಯಲೆಂದು ಗಾಯಕನು ಹಳೆಯ ಹಾಡು ಚೆನ್ನಾಗಿದ್ದರೂ ಹೊಸ ಹಾಡನ್ನು ಹಾಡುವಂತೆ ಅಥವಾ ಹಿಂದೆ ಹಾಡಿದ್ದ ಹಾಡನ್ನೇ ಬೇರೊಂದು ದಾರಿಯಲ್ಲಿ ನುಡಿಯುವಂತೆ, ನಮ್ಮ ಗ್ರಂಥಕರ್ತರು ತಮ್ಮ ಕಾರ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯಗಳ ರೂಪವನ್ನು ಸ್ವೀಕರಿಸಿದರು. ಪಾಶ್ಚಾತ್ಯ ದೇಶಗಳಲ್ಲಿ ಹೊಸಯುಗವು ಆರಂಭವಾಗಿ ಈಗ ಸುಮಾರು ಮುನ್ನೂರು ವರುಷ ಆಗಿದೆ; ಈ ಕಾಲದಲ್ಲಿ ಅಲ್ಲಿಯ ಜನದ ಜೀವನ ಬಹುಮುಖವಾದಂತೆ ಅದರ ಬಿಂಬವಾಗಿ ಅಲ್ಲಿಯ ಸಾಹಿತ್ಯವು ಅನೇಕ ಬಾಹು ಅನೇಕ ಉದರ ಅನೇಕ ವಕ್ತ್ರ ನೇತ್ರಗಳನ್ನು ಅಳವಟ್ಟು ವಿಶ್ವ ರೂಪಿಯಾಗಿದೆ. ನಮ್ಮ ಸಾಹಿತ್ಯದಲ್ಲಿ ನಾವು ಉಪಯೋಗಿಸಿರುವುದು ಅಲ್ಲಿಯ ರೂಪಗಳಲ್ಲಿ ಕೆಲವನ್ನು ಮಾತ್ರ. ಇವು ಒಂದು ದೃಷ್ಟಿಯಿಂದ ಹೊಸವು, ಒಂದು ದೃಷ್ಟಿಯಿಂದ ಹಳೆಯವು. ಬರಹದ ದೇಹ ಹಿಂದಿನದು; ಅದು ವಸ್ತ್ರ ಧರಿಸಿರುವ ರೀತಿ ಬೇರೆ. ಕೆಲವು ವೇಳೆ ವಸ್ತ್ರದ ಬಣ್ಣ ರಚನೆ ಬೇರೆ; ಕೆಲವು ವೇಳೆ ಅದೇ ವಸ್ತ್ರ, ಸೆರಗು ಬಲತೋಳಿನಮೇಲೆ ಬರುವುದಕ್ಕೆ ಬದಲಾಗಿ ಎಡತೋಳಿನ ಮೇಲೆ ಬಂದಿರುತ್ತದೆ. ಹಳೆಯದು ಅಂಗರೇಕು, ಕಸೆ; ಹೊಸದು ಅಂಗಿ, ಗುಂಡಿ.

ಹೀಗೆ ನಮ್ಮ ಹೊಸ ಸಾಹಿತ್ಯದಲ್ಲಿ ಈಗ ಬೆಳೆಯುತ್ತಿರುವ ರೂಪಗಳಲ್ಲಿ ಮುಖ್ಯವಾದುವು ಎರಡು: ಸಣ್ಣಕತೆ ಮತ್ತು ವ್ಯಂಜಕ ಗೀತ. ಪಾಶ್ಚಾತ್ಯ ಸಾಹಿತ್ಯದಲ್ಲಿ ಕೂಡ ಈ ರೂಪಗಳು ಪ್ರಮುಖವಾದುವೇ. ಅಲ್ಲಿ ಇವುಗಳ ಜೊತೆಗೆ ನಾವೆಲು, ನಾಟಕ, ಉಪನ್ಯಾಸ ಇವೂ ಬಹಳ ಬೆಳೆದಿವೆ. ಇಲ್ಲಿ ಇವು ಅಷ್ಟಾಗಿ ಬೆಳೆದಿಲ್ಲ.

ಸಣ್ಣಕತೆ ಗೀತಗಳು ಸಾಹಿತ್ಯದಲ್ಲಿ ಪ್ರಮುಖವಾಗುವುದಕ್ಕೆ ಹಲವು ಕಾರಣ ಇವೆ. ಅವುಗಳಲ್ಲಿ ಮುಖ್ಯವಾದದ್ದು ಏನೆಂದರೆ, ಯಾವ ಒಂದು ಭಾವನೆಗಾಗಲಿ ಈ ರೂಪಗಳಲ್ಲಿ ಶುದ್ಧವಾಗಿ ಆಕಾರಕೊಡುವುದು ಸಾಧ್ಯ. ಬಲ್ಲವನ ಕೈಯಲ್ಲಿ ಇವು, ಹದವಾದ ಉಕ್ಕಿನಂತೆ, ತಿರುಗಿಸಿದ

ಕೆಲಸಕ್ಕೆ ಹವಣಾಗುತ್ತವೆ. ಇವುಗಳನ್ನು ನಡೆಯಿಸುವುದಕ್ಕೆ ಬಹಳ ಸನ್ನಾಹ ಬೇಕಿಲ್ಲ. ಗೊಡ್ಡುಕತೆ, ದೊಡ್ಡಕಾವ್ಯ, ಆನೆಯ ಹಾಗೆ; ಸಣ್ಣಕತೆ ಗೀತಗಳು ಹಾವಿನ ಹಾಗೆ. ಎಂಥ ಮಾವಟಿಗನಾದರೂ ಆನೆಯನ್ನು ತಡೆಯುವುದಕ್ಕೆ ಹೆಚ್ಚು ಯತ್ನ ಮಾಡಬೇಕು; ಹಾವನ್ನು ತಡೆಯುವುದಕ್ಕೆ ಒಂದು ಜೀನಿಯ ಬುರುಡೆ ಸಾಕು. ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಸಣ್ಣಕತೆ ನೂರಾರು ಭಾವವನ್ನು ಚಿತ್ರಿಸುವುದಕ್ಕೆ ಉಪಯೋಗಿಸಲ್ಪಟ್ಟಿದೆ. ಅದರ ಆ ಪ್ರಸಾರವನ್ನು ತಿಳಿಯಬೇಕಾದರೆ ಈ ಸಾಹಿತ್ಯಗಳ ಪರಿಚಯವನ್ನೇ ಮಾಡಿಕೊಳ್ಳಬೇಕು. ಅದು ಅಲ್ಲಿ ಹಬ್ಬಿರುವ ರೀತಿಯನ್ನು ನೋಡಿದವರು ಸಣ್ಣಕತೆಯ ಶಕ್ತಿಗೆ ಮನಸೋತು ನಮ್ಮ ಸಾಹಿತ್ಯದಲ್ಲಿ ಈ ಐಶ್ವರ್ಯವೆಂದಿಗೆ ಬರುವುದೋ ಎಂದು ಹಂಬಲಿಸುವರು.

ಈ ಹಂಬಲು ಬಹುಕಾಲ ಹಂಬಲಾಗಿರತಕ್ಕದ್ದೇ. ಇದು ಬೇಗನೆ ತೀರಲಾರದು. ಈಗ ನಾವು ಮಾಡಿರುವುದು ನೂರರಲ್ಲಿ ಒಂದು ಭಾಗವಿರಬಹುದು. ಮಾಡದೆ ಇರುವುದು ತೊಂಬತ್ತ ಒಂಬತ್ತು. ಈ ಮಧ್ಯೆ ಇದು ಮೊಳಕೆಯಾಗಿ ಇರುವಾಗಲೇ ಇದರ ವಿಷಯದಲ್ಲಿ ನಮ್ಮಲ್ಲಿ ಕೆಲವರಿಗೆ ಜುಗುಪ್ಸೆ. ಬಹಳ ವರ್ಷಗಳ ಹಿಂದೆ ಗಣಿತ ಶಾಸ್ತ್ರದಲ್ಲಿ ಎಂ.ಎ., ಮಾಡಿದವರೊಬ್ಬರು ಕನ್ನಡದಲ್ಲಿ ಮಕ್ಕಳಿಗಾಗಿ ಕೆಲವು ಕತೆಗಳನ್ನು ಬರೆದರಂತೆ. ಆಗ ಊರೆಲ್ಲಾ ಇವರನ್ನು, ಎಂ.ಎ., ಪರೀಕ್ಷೆ ಮಾಡಿ ಕನ್ನಡದಲ್ಲಿ ಕತೆ ಬರೆಯುವುದಕ್ಕೆ ಇವನಿಗೇನು ಬಂತು ತೆವಲು ಎಂದರಂತೆ. ಊರೆಲ್ಲಾ ಎಂದರೆ ಹೀಗೆ ಹೇಳಿದವರೆಲ್ಲಾ. ನಾನು ಸಣ್ಣಕತೆಗಳನ್ನು ಬರೆಯಲಾರಂಭಿಸಿದಾಗಲೂ ಇಂಥ ಮಾತುಗಳನ್ನು ಹೇಳುವರಿದ್ದರು. ಈಗ ಬರೆಯುತ್ತಿರುವವರ ಸಣ್ಣಕತೆಗಳ ವಿಷಯದಲ್ಲಿಯೂ ಅಲ್ಲಲ್ಲಿ ಈ ರೀತಿಯ ಮಾತು ಬರುತ್ತದೆ; ಆದರೆ ಆಗಣಷ್ಟು ಸಾಮಾನ್ಯವಾಗಿ ಬರುವುದಿಲ್ಲ. ಇಂಥ ವಿಮರ್ಶೆಯನ್ನು ಕುರಿತು ನಾವು ಬಹಳ ಚಿಂತಿಸಬೇಕಾದ ಕಾರಣವಿಲ್ಲ. ಬಹಳ ಬೆಳೆದಿರುವುದೆಂಬು ಇಂಗ್ಲೀಷ್ ಸಾಹಿತ್ಯದಲ್ಲಿ ಕೂಡ ಒಬ್ಬೊಬ್ಬ ವಿಮರ್ಶಕನು ಸಣ್ಣಕತೆಯ ವಿಷಯದಲ್ಲಿ ಇಂಥ ಮಾತನ್ನು ಒಮ್ಮೊಮ್ಮೆ ಹೇಳುತ್ತಾನೆ. ಉದ್ದ ಕಡಮೆ ಆದದ್ದರಿಂದ ಇದರ ಯೋಗ್ಯತೆ ಕಡಮೆ ಎಂಬ ಭಾವನೆ ಈ ಜುಗುಪ್ಸೆಯ

ಕಾರಣವೆಂದು ಕಾಣುತ್ತದೆ. ನ್ಯಾಯವಾಗಿ ನೋಡಿದರೆ ಸಣ್ಣಕತೆ ಎನ್ನುವುದು ಸಾಹಿತ್ಯದಲ್ಲಿ ಒಂದು ರೂಪ. ಇತರ ರೂಪಗಳಲ್ಲಿ ಒಳ್ಳೆಯ ಕೃತಿ ಬರುವುದಕ್ಕೆ ಊಹೆ, ಪ್ರತಿಭೆ, ವಿಮರ್ಶೆ, ಬೇಕಾಗುವಂತೆ ಇದರಲ್ಲಿಯೂ ಬೇಕಾಗುತ್ತದೆ. ಸರಿಯಾದ ಸಣ್ಣಕತೆಯಲ್ಲಿ ಸಣ್ಣತನವಿರುವುದು ಹೆಸರಿನಲ್ಲಿ ಮತ್ತು ಆಕಾರದಲ್ಲಿ ಮಾತ್ರ. ಅದರ ಗುಣದಲ್ಲಿ, ಶಕ್ತಿಯಲ್ಲಿ, ಬೆಲೆಯಲ್ಲಿ, ಈ ಕಾರ್ಶ್ಯವಿಲ್ಲ. ಈಗ ಹತ್ತೂಕಡೆ ಅಚ್ಚಾಗುತ್ತಿರುವ ಎಲ್ಲಾ ಕತೆಯೂ ಚೆನ್ನಾಗಿಲ್ಲವಲ್ಲಾ ಎಂದು ಯಾರೂ ಅಸಹನೆ ತೋರಬಾರದು. ಯಾವುದು ಬೆಳೆಯ ಬೇಕಾದರೂ ಅದರ ಪೋಷಕರಲ್ಲಿ ಅಭಿಮಾನವಿರಬೇಕು, ಸಹನೆ ಇರಬೇಕು. ನಮ್ಮ ಹೊಸ ಸಾಹಿತ್ಯದ ಯಾವ ಭಾಗವೇ ಆಗಲಿ ಬೆಳೆಯಬೇಕೆಂದು ನಾವು ಇಚ್ಛೆ ಪಡುವುದಾದರೆ ನಾವು ಅದನ್ನು ತಾಳ್ಮೆಯಿಂದ, ಅಭಿಮಾನದಿಂದ, ನೋಡಬೇಕು. ಈ ಮನೋಧರ್ಮ ನಮ್ಮ ಜನರಲ್ಲಿ ವಾಡಿಕೆಯಾಗಬೇಕಾಗಿದೆ.

ಇದುವರೆಗೆ ನಮ್ಮಲ್ಲಿ ಬಂದಿರುವ ಸಣ್ಣಕತೆಗಳಲ್ಲಿ ಅನೇಕ ನಮ್ಮ ಗೌರವಕ್ಕೆ ಅರ್ಹವಾದುವು ಇವೆ. ಅವುಗಳನ್ನು ಬರೆದವರ ಹೆಸರನ್ನು ನಾನಿಲ್ಲಿ ಹೇಳುವುದಿಲ್ಲ. ಈ ಕತೆಗಳಲ್ಲಿ ಬಡವರ ಬಾಳಿನೊಂದಿಗೆ ಸಹಾನುಭೂತಿ, ಹಳ್ಳಿಯ ಜನದ ಮೇಲೆ ಪ್ರೀತಿ, ಎಲ್ಲ ಜೀವನ್ನವನ್ನೂ ಕುರಿತ ಪ್ರೇಮ, ಕಷ್ಟವನ್ನು ಕುರಿತ ಕನಿಕರ, ಹಿಂದಣ ಹಿರಿಮೆಯನ್ನು ಕುರಿತ ಹೆಮ್ಮೆ, ಮುಂದಣ ದಾರಿಯನ್ನು ಕುರಿತ ವಿಚಾರ ಇವೆಲ್ಲ ಕಂಡಿವೆ. ಒಂದೊಂದರಲ್ಲಿ ಒಂದು ಹೃದಯದ ಭಾವನೆ ಬಹು ಜನದ ಭಾವನೆಯಾಗಲು ಯತ್ನಮಾಡಿದೆ. ಈಗ ಎರಡು ವರ್ಷದ ಈಚೆಗಂತೂ ಬೇರೆ ಬೇರೆ ತರಹದ ಕತೆಗಳು ಪ್ರಕಟವಾಗಿ ನಮ್ಮಲ್ಲಿ ಸಣ್ಣಕತೆಗಳ ವ್ಯಾಪ್ತಿ ವಿಸ್ತಾರವಾಗಿದೆ.

ಹೀಗೆ ನಮ್ಮ ಸಣ್ಣಕತೆಗಳ ವ್ಯಾಪ್ತಿಯನ್ನು ವಿಸ್ತಾರ ಪಡಿಸುವುದರಲ್ಲಿ ಶ್ರೀ ಅ. ನ. ಕೃಷ್ಣರಾಯರು ಶ್ಲಾಘ್ಯವಾದ ಕೆಲಸವನ್ನು ಮಾಡಿದಾರೆ. ಈ ಮೊದಲೇ ಇವರ ಇತರ ಗ್ರಂಥಗಳಿಂದ ನಮ್ಮ ಜನರಿಗೆ ಇವರ ಪರಿಚಯ ಆಗಿದೆ. ಕೃಷ್ಣರಾಯರು ತಮ್ಮ ಸುತ್ತಣ ಬಾಳನ್ನು ಕೌತುಕದಿಂದ ನೋಡುವರು; ಅದರ ಅಂಶಗಳನ್ನು ಕುತೂಹಲರಾಗಿ ಗ್ರಹಿಸ

ಬಲ್ಲವರು; ಅದರಿಂದ ತಮ್ಮ ಮನಸ್ಸಿನಲ್ಲಿ ಹೊಮ್ಮುವ ಭಾವನೆಗೆ ಪ್ರತಿಭೆಯಿಂದ ಆಕಾರ ಕೊಡಬಲ್ಲವರು. ಇವರ ನಾಟಕಗಳಲ್ಲಿ ಬರುವ ಶಾಸ್ತ್ರಿ, ಗಗ್ಗ ಹುಡುಗ, ಸೋದರ ಮಾವ, ಸ್ನೇಹಿತರು, ತರುಣರು, ಗುಮಾಸ್ತರು, ಇವರೆಲ್ಲಾ ನಿಜವಾದ ವ್ಯಕ್ತಿಗಳು. ಜೀವನದ ವ್ಯಕ್ತಿಗಳನ್ನು ಬರಹದಲ್ಲಿ ಹೀಗೆ ತರುವುದು ಹಿರಿಯ ಶಕ್ತಿ. ಇದರೊಂದಿಗೆ ಇವರ ಲೇಖನದಲ್ಲಿ ನೊಂದವರೊಡನೆ ನೋಯುವ ಕನಿಕರ, ಬಾಳಿನ ಅಲ್ಪತನವನ್ನು ಸಹಿಸದ ಔದಾರ್ಯ, ಜೀವನದ ಕೇಡುಗಳನ್ನು ನೋಡುವುದರಲ್ಲಿ ಒಂದು ಕೆಚ್ಚು, ಆಶೆಯಿಂದ ಕೂಡಿದ ಮುನ್ನೋಟ, ಮುಂದರಿಯ ಬೇಕೆಂಬ ಉತ್ಸಾಹ, ಇವು ಕಾಣುತ್ತವೆ. ಇವೆಲ್ಲ ನಮ್ಮ ಸಾಹಿತ್ಯದಲ್ಲಿ ಅವಶ್ಯವಾಗಿ ಪ್ರಕಾಶವಾಗಬೇಕಾದ ಗುಣಗಳು. ಈ ಪುಸ್ತಕದಲ್ಲಿ ಈ ಗುಣಗಳು ಹಲವು ವ್ಯಕ್ತವಾಗಿವೆ: ಒಂದು ಕತೆಯಲ್ಲಿ ಜಾತಿಮತಗಳ ಭೇದವರಿಯದ ಸಹಾನುಭೂತಿ; ಇನ್ನೊಂದರಲ್ಲಿ ಒಬ್ಬ ನಟನ, ಮತ್ತೊಂದರಲ್ಲಿ ಒಬ್ಬ ಗಾಯಕನ, ಹೃದಯದ ಅರಿವು; ಒಂದರಲ್ಲಿ ಕೊಳಚೆಯಲ್ಲಿ ಕಾಲಿಟ್ಟ ಸೋದರನ ವಿಷಯದಲ್ಲಿ ಕರುಣೆ; ಮೊತ್ತದಲ್ಲಿ ವೈಶಾಲ್ಯವನ್ನರಸಿರುವ ಒಂದು ಚಿತ್ತವೃತ್ತಿ. ನಮ್ಮ ಸಾಹಿತ್ಯದ ಬೆಳವಣಿಗೆಯನ್ನು ಆಕಾಂಕ್ಷೆಯಿಂದ ನೋಡುತ್ತಿರುವವರಿಗೆ ಇವರ ಲೇಖನಗಳಿಂದ ಒಂದು ರೀತಿಯಲ್ಲಿ ತೃಪ್ತಿ ಬರುತ್ತದೆ, ಒಂದು ರೀತಿಯಲ್ಲಿ ಆಶೆ ಮೊಳೆಯುತ್ತದೆ.

ಇನ್ನೂ ಈಗ ತಲೆಯೆತ್ತುತ್ತಿರುವ ನಮ್ಮ ಸಾಹಿತ್ಯವು ಮುಂದೆ ನಮ್ಮ ತರುಣರ ಉದ್ಯಮದಿಂದ ಬೆಳೆಯಬೇಕಾಗಿದೆ. ನಾವು ಕೈಕೊಂಡಿರುವ ಕೆಲಸ ದೊಡ್ಡ ಕೆಲಸ; ಬಹಳ ಶ್ರಮದಿಂದ, ಬಹು ಉತ್ಸಾಹದಿಂದ, ವಿಶೇಷ ಉತ್ತೇಜನದಿಂದ, ಮಾತ್ರ ಸಾಧಿಸಬಹುದಾದದ್ದು. ಇದಕ್ಕೆ ಟೊಂಕಕಟ್ಟಿ ನಿಂತಿರುವ ತರುಣರಿಗೆ ಎಲ್ಲ ವಿಧದಲ್ಲಿಯೂ ಪ್ರೋತ್ಸಾಹ ಬೇಕಾಗಿದೆ. ಅದನ್ನು ಕೊಡುವುದು ನಮ್ಮ ಜನರೆಲ್ಲರ ಕೆಲಸ; ಅದರಲ್ಲಿಯೂ ಸ್ವಲ್ಪ ವಯಸ್ಸಾಗಿ ಸಾಹಿತ್ಯದ ವಿಷಯ, ಜನತೆಯ ವಿಷಯವನ್ನು ಸ್ವಲ್ಪವಾದರೂ ಯೋಚನೆಮಾಡಿರುವ ಪ್ರತಿಯೊಬ್ಬರ ಕರ್ತವ್ಯ. ಉತ್ಸಾಹದಿಂದ, ಶ್ರದ್ಧೆಯಿಂದ, ಆಶೆಯಿಂದ, ಭಾಷಾಸೇವೆಯಲ್ಲಿ

ಕೈಹಾಕಿರುವ ಶ್ರೀಮಾನ್ ಅ. ನ. ಕೃಷ್ಣರಾಯರ ವಿಷಯದಲ್ಲಿ ನನ್ನ ಹಾರೈಕೆಯಿದು: ನಮ್ಮ ಭಾಷಾಮಾತೆಯ, ನಮ್ಮ ಜನತೆಯ, ಅದರಲ್ಲಿಯೂ ನಮ್ಮ ಹಿರಿಯರ, ಅನುಗ್ರಹ ; ಇವರಿಗೆ ತುಂಬಾ ಒದಗಲಿ; ಇವರ ಶಕ್ತಿ ಸಾಮರ್ಥ್ಯಗಳು ಅಭಿವೃದ್ಧಿಯಾಗಲಿ. ಇವರಿಗೆ ಬೇಕಾದ ಸೌಕರ್ಯಗಳು ನೆರೆದುಬರಲಿ ; ಇವರ ಭಾಷಾ ಸೇವೆ ಸಾಂಗವಾಗಿ ನಡೆಯಲಿ.

1932

ಶ್ರೀ ಕು. ವೆಂ. ಪುಟ್ಟಪ್ಪನವರ

# "ಸಂನ್ಯಾಸಿ ಮತ್ತು ಇತರ ಕಥೆಗಳು"

ಈ ಪುಸ್ತಕವು ಸಣ್ಣಕತೆಗಳದೊಂದು ಸಂಗ್ರಹ. ಇವನ್ನು ಹೇಳುವವರು ಶ್ರೀಮಾನ್ ಕುಪ್ಪಳ್ಳಿ ಪುಟ್ಟಪ್ಪನವರು. ಇನ್ನು ಇದಕ್ಕೆ ಮುನ್ನುಡಿ ಏಕೆ? ಇದು ನಿಜ. ಆದರೆ ನಾನು ಪುಟ್ಟಪ್ಪನವರ ಸಣ್ಣ ಕತೆಗಳ ಪುಸ್ತಕಕ್ಕೆ ಮುನ್ನುಡಿ ಬರೆಯುವುದೆಂದು ನಮಗೆ ಕೆಲವು ವರ್ಷಗಳ ಹಿಂದೆ ಒಪ್ಪಂದವಾಯಿತು. ಆ ಒಪ್ಪಂದ ಇಂದು ನಡೆಯುವುದರಲ್ಲಿದೆ. ಆದ್ದರಿಂದ ಓದುವವರು ಇದನ್ನು ತಾಳ್ಮೆಯಿಂದ ನೋಡಬೇಕು.

ಪುಟ್ಟಪ್ಪನವರು ಪ್ರಸಿದ್ಧರು. ಅವರ ಪ್ರಸಿದ್ಧಿಗೆ ಮುಖ್ಯವಾಗಿ ಅವರ ಕವನಗಳು ಕಾರಣವೆಂದು ಸಾಮಾನ್ಯವಾದ ಭಾವನೆ. ಅದು ಸರಿಯಾದ ಭಾವನೆಯೂ ಅಹುದು. ಆದರೆ ಅವರ ಕತೆಗಳೂ ಉಪನ್ಯಾಸಗಳೂ ಇತರ ಲೇಖನಗಳೂ ಅವರನ್ನು ಜನರಿಗೆ ಪರಿಚಯ ಮಾಡಿಕೊಡುವುದರಲ್ಲಿ ತಕ್ಕಷ್ಟು ಭಾಗವನ್ನು ವಹಿಸಿವೆ. ಈ ಸಂಗ್ರಹದಲ್ಲಿ ಸೇರಿರುವ ಹಲವು ಕತೆಗಳು ಈ ಮೊದಲೇ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ನಮ್ಮ ಜನ ಅವನ್ನು ಮೆಚ್ಚಿಕೊಂಡಿದ್ದಾರೆ. ಅವುಗಳಲ್ಲಿ ಕಾಣುವ ಶಕ್ತಿ ಪುಟ್ಟಪ್ಪನವರ ಕವಿತೆಗಳಲ್ಲಿ ಕಾಣುವ ಶಕ್ತಿಗಿಂತ ಕಡಮೆಯದಲ್ಲ. ಕವಿಯಾದವನು ಕತೆಗಾರನೂ ಆಗಿದಾನೆಂಬ ಈ ಮಾತಿನಿಂದ ಯಾರೂ ಆಶ್ಚರ್ಯಪಡಬೇಕಾದುದಿಲ್ಲ. ಇದು ಸಾಹಿತ್ಯದಲ್ಲಿ ಸುಪ್ರಸಿದ್ಧ ಸಂಪ್ರದಾಯ. ನಮ್ಮ ಆದಿಕಾವ್ಯ ಒಂದು ಕತೆ, ಪಂಚಮವೇದವೆನಿಸಿಕೊಂಡಿರುವ ನಮ್ಮ ಮಹಾಕಾವ್ಯ ಒಂದು ಕಥಾಸ್ತೋಮ. ಕತೆ ಕವಿತೆಗಳ ಮೂಲದಲ್ಲಿರುವ ದೃಷ್ಟಿ ಶಿಕ್ಷೆ ಉದ್ದೇಶಗಳು ಒಂದೇ ರೀತಿಯವು. ಕವಿಯಾದವನು ಸಾಮಾನ್ಯವಾದ ದೃಷ್ಟಿ ಹಿಡಿಯದ ವಸ್ತುವನ್ನು ವರ್ಣಿಸುತ್ತಾನೆ ಎಂದೂ, ಕತೆಗಾರನು ಸಾಮಾನ್ಯವಾದ ದೃಷ್ಟಿಗೂ ಕಾಣುವ ವಿಷಯವನ್ನು ಹೇಳುತ್ತಾನೆ ಎಂದೂ ನಾವು ಎಣಿಸಬಹುದು. ಆದರೆ ಇಬ್ಬರ ವಸ್ತುವೂ ಸಾಮಾನ್ಯ ದೃಷ್ಟಿಗೆ ಕಾಣದುದೇ. ಆದ್ದರಿಂದಲೇ ರವಿ ಕಾಣದ್ದನ್ನ

ಕವಿ ಕಂಡನೆಂಬ ನಾಣ್ಣುಡಿಗೆ ಸಮನಾಗಿ ಕತೆಗೆ ಕಾಲಿಲ್ಲವೆಂಬ ನಾಣ್ಣುಡಿ ಇರುವುದು. ಸಾಹಿತ್ಯ ಬೆಳೆದ ಕಾಲಗಳಲ್ಲಿ ಲೇಖಕನ ಒಲವಿನಿಂದ ಅವನ ಲೇಖನ ಕೆಲವು ವೇಳೆ ಕವಿತೆ ಮಾತ್ರ ಆಗುವುದು ; ಕೆಲವು ವೇಳೆ ಕತೆ ಮಾತ್ರ ಆಗುವುದು. ಆದರೆ ಅವನಿಗೆ ಇಷ್ಟವಿದ್ದರೆ ಅವನು ಎರಡನ್ನೂ ಸಾಧಿಸಬಹುದು. ಪುಟ್ಟಪ್ಪನವರು ಹೀಗೆ ಕತೆ ಕವಿತೆ ಎರಡನ್ನೂ ಸಾಧಿಸುತ್ತಿದ್ದಾರೆ. ಅವರ. 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಕವಿತೆ ಹೇಗೋ ಹಾಗೆ ಕತೆಯೂ ಅಹುದು. ಅಂದು ಪದ್ಯದ ಕತೆಯಲ್ಲಿ ಕಂಡ ಶಕ್ತಿಯನ್ನು ನಾವು ಇಂದು ಗದ್ಯದ ಕತೆಗಳಲ್ಲಿ ಕಾಣಬಹುದಾಗಿದೆ.

ರವಿ ಕಾಣದ್ದನ್ನ ಕವಿ ಕಂಡನೆನ್ನುವುದೂ ಕತೆಗೆ ಕಾಲಿಲ್ಲವೆನ್ನುವುದೂ ಕವಿ ಕತೆಗಾರರ ಅಗ್ಗಳಿಕೆಯನ್ನಾದರೂ ಸೂಚಿಸಬಹುದು ; ಅವರಿಗೆ ನಾಚಿಕೆಗಾದರೂ ಕಾರಣವಾಗಬಹುದು. ರವಿ ಕಂಡದ್ದನ್ನು ಕಂಡು ಕವಿ ಅದಕ್ಕೆ ಹೆಚ್ಚಿನದನ್ನು ಕಾಣಬೇಕು. ಹಾಗಲ್ಲದೆ ಅವನು ರವಿ ಕಾಣದ್ದನ್ನು ಕಂಡು ರವಿ ಕಂಡದ್ದನ್ನು ಕಾಣದೆ ಇರುವುದಾದರೆ ಇರುಳುಗಣ್ಣನಾಗುತ್ತಾನೆ. ಹಾಗೆಯೇ ಕಾಲಿಲ್ಲವೆನ್ನಿಸಿಕೊಂಡು ಕತೆ ಕುಂಟಾಗಬಾರದು ; ಆಕಾಶದಲ್ಲಿ ಹಾರಬೇಕು. ಆದ್ದರಿಂದ ಎಲ್ಲ ಕವಿ ಕತೆಗಾರರಲ್ಲಿಯೂ ನಾವು ಒಂದು ಲಕ್ಷಣವನ್ನು ಅಪೇಕ್ಷಿಸುತ್ತೇವೆ; ಅವರು ಹೇಳುವ ವಿಷಯ ನಮಗೆ ನಿಜವೆಂದು ಕಾಣಬೇಕು, ಎಂದರೆ ಅದು ನಮಗೆ ತಿಳಿಯುವಂತೆ ನಾವೂ ನೋಡಿರುವ ವಿಷಯವನ್ನು ಒಳಗೊಂಡಿರಬೇಕು. ಒಳ್ಳೆಯವರೆನಿಸಿಕೊಂಡ ಎಲ್ಲ ಕವಿ ಕತೆಗಾರರಲ್ಲಿಯೂ ಈ ಲಕ್ಷಣ ಮೇಲೆದ್ದು ಕಾಣುತ್ತದೆ. ಏನೋ ಹೇಳುತ್ತಿರುವಲ್ಲಿ ಮಧ್ಯೆ ಒಂದು ಮಾತು ಒಂದು ವರ್ಣನೆ ಒಂದು ಸಂಗತಿ ಬರುತ್ತದೆ. ನಾವು, ಆಹಾ ಇದು ನಿಜ, ನೋಡಿದೆಯಾ ಈತನ ಸೂಕ್ಷ್ಮ, ಎನ್ನುತ್ತೇವೆ ; ಆಮೇಲೆ ಅವನು ಹೇಳುವ ಇತರ ವಿಷಯಗಳಲ್ಲಿ ನಮಗೆ ನೆಚ್ಚಿಕೆ ಹೆಚ್ಚುತ್ತದೆ. ಕವಿ ಅಥವಾ ಕತೆಗಾರನು ನಮ್ಮನ್ನು ಮೆಚ್ಚಿಸುವುದಕ್ಕೆ ಕುಳಿತಿದಾನೆ ; ನಾವು ಅವನನ್ನು ಒಪ್ಪುವ ಹಿರಿಯರು, ಎಂದೇ ತಲೆದೂಗುತ್ತ ನಾವು ಅವನ ಗಾರುಡಿಗೆ ಸಿಕ್ಕಿ ಅವನಿಗೆ ನಮ್ಮ ಮನಸ್ಸನ್ನು ಸೆರೆ ಮಾಡುತ್ತೇವೆ. ಕಲೋ

ಪಾಸಕನು ತನ್ನ ಕಾರ್ಯಸಿದ್ಧಿಗೆ ಜನರಲ್ಲಿ ಇಂಥ ನಂಬಿಕೆಯನ್ನು ಹುಟ್ಟಿಸುವುದು ಅವಶ್ಯಕ. ಓದುವವರಿಗೆ ಅಲ್ಲದೆ ಅವನಿಗೂ ಇದರಿಂದ ಪ್ರಯೋಜನವಿದೆ. ತನ್ನ ನೋಟ ಇನ್ನೊಂದು ನೋಟದೊಡನೆ ಬೆರೆತಿದೆ, ತನ್ನ ನುಡಿ ಇನ್ನೊಂದು ಮನಸ್ಸನ್ನು ಮುಟ್ಟಬಲ್ಲುದು, ಎನ್ನುವುದು ಅವನಿಗೆ ಆಗ ನಿರ್ಧರವಾಗುತ್ತದೆ. ಇದರಿಂದಅವನಿಗೆ ಆತ್ಮಪ್ರತ್ಯಯ ಬರುತ್ತದೆ; ಅದು ಅವನ ಬೆಳೆವಣಿಗೆಗೆ ಸಹಾಯವಾಗುತ್ತದೆ.

ಈ ದೃಷ್ಟಿಯಿಂದ ನಾನು ಈ ಕತೆಗಳಿಗೆ ಪುಟ್ಟಪ್ಪನವರ ಸಾಹಿತ್ಯೋಪಾಸನೆಯಲ್ಲಿ ಬಹುಮುಖ್ಯವಾದ ಸ್ಥಾನವನ್ನು ಕೊಡುತ್ತೇನೆ. ಅವರ ಕವಿತೆಗಳಲ್ಲಿ ಕಾಣುವ ಕನಸಿನ ಶಕ್ತಿಗೆ ನಾನು ಮರುಳಾಗಿರುವುದು ನಿಜ. ಆದರೆ ಅವರು ಬರಿಯ ಅಂಥ ಕನಸುಗಳ ಚಿತ್ರಗಳನ್ನು ಮಾತ್ರ ರಚಿಸಿದ್ದರೆ ಅವರ ಸಾಹಿತ್ಯಸೇವೆ ಅಸಮಗ್ರವಾಗಿ ನಿಲ್ಲುತ್ತಿತ್ತು. ಆ ಸೇವೆಗೆ ಅವರ ‘ ಮಲೆನಾಡಿನ ಚಿತ್ರಗಳು ’ ಅದಕ್ಕಿಂತಲೂ ಹೆಚ್ಚಾಗಿ ಈ ಪುಸ್ತಕದ ‘ ದೆವ್ವದ ಕಾಟ ’ದಂಥ ಕಥೆಗಳು ಸಮಗ್ರತೆಯನ್ನು ಕೊಡುತ್ತವೆ. ಈ ಪುಸ್ತಕದಲ್ಲಿ ಬೇರೆ ರೀತಿಯ ಕತೆಗಳೂ ಇವೆ; ಅವೂ ಚೆನ್ನಾಗಿವೆ; ಆದರೆ ಇಲ್ಲಿ ನನಗೆ ಬಹಳ ಸಂತೋಷವನ್ನುಂಟುಮಾಡುವುವು ಇಂಥ ಜನಜೀವನದ ಚಿತ್ರಗಳು. ಈ ‘ ದೆವ್ವದಕಾಟ ’ದ ಕಥೆಯಲ್ಲಿ ಬರುವ ಜನರೆಲ್ಲ ಜೀವನದಿಂದ ಕತೆಗೆ ನಡೆದುಬಂದಂತಿದೆ. ರಾಯರು, ಅವರ ಸೇವಕ; ಮಂತ್ರಹಾಕುವ ಬ್ರಾಹ್ಮಣ, ಕಾವಲು ಕಾಯುವ ಜನ; ದೆವ್ವಕ್ಕೆ ಹೆದರುವ ಪೋಲೀಸಿನವ, ಹೆದರದ ಮುಸಲ್ಮಾನ ಇನಸ್ಪೆಕ್ಟರು; ಇವರು ಬರುವ ಹೋಗುವ ರೀತಿ ಇದೆಲ್ಲ ಒಂದು ನಾಡಿನ ಜೀವನವನ್ನೇ ನಮ್ಮ ಮುಂದೆ ತಂದಿರಿಸುತ್ತದೆ. ಪ್ರಕೃತಿಯ ಸೌಂದರ್ಯದ ಹರಹನ್ನು ಆತುರದಿಂದ ಕಾಣುವ ಈ ಲೇಖಕರ ಕಣ್ಣು ಜನರ ಬಾಳುವೆಯ ಹರಹನ್ನೂ ಅದೇ ಕುತೂಹಲ ಭಾವದಿಂದ ನೋಡಿದೆ. ಈ ವಿಷಯಗಳನ್ನು ಹೇಳುತ್ತ ಕತೆಗಾರರು ಆಗಾಗ ಮಾಡುವ ಟೀಕೆಯಲ್ಲಿ ಅವರ ಅರಿವು ಹಾಸ್ಯ ಆರ್ದ್ರಹೃದಯ ಚೆನ್ನಾಗಿ ಕಾಣುತ್ತವೆ. ಕತೆಗಾರರು ಕವಿಯೂ ಆದ್ದರಿಂದ ಈ ಜೀವನಚಿತ್ರದ ಹೊರ ಆವರಣದ ವರ್ಣನೆಯೂ

ಚೆನ್ನಾಗಿದೆ. ಇಲ್ಲಿ ಕತೆಯ ಹಿಂದೆ ವಿವರವಾದ ಪ್ರಪಂಚಜ್ಞಾನವಿದೆ; ಅದರ ರಸವನ್ನು ಜನದ ಹೃದಯದ ಆಳದಿಂದ ಸೇದಿ ಎತ್ತಿದೆ. ತನ್ನ ಸುತ್ತಣ ಜೀವನವನ್ನು ಈ ರೀತಿ ತಿಳಿದವನು ಅದರ ವಿಷಯವಾಗಿ ಇನ್ನು ಯಾರೂ ಹೇಳಲಾರದ ವಿಷಯಗಳನ್ನು ಹೇಳುತ್ತಾನೆ. ತನ್ನ ಆತ್ಮವನ್ನು ತಿಳಿಯ ಹೊರಟ ಜಿಜ್ಞಾಸು ವಿಶ್ವಾತ್ಮವನ್ನು ಕಾಣುವಂತೆ ಇಂಥ ಲೇಖಕನು ತನ್ನ ಜನವನ್ನು ಕುರಿತ ನೋಟದಿಂದ ಮನುಜ ವರ್ಗವನ್ನು ಕುರಿತ ಮುಖ್ಯ ಸೂತ್ರಗಳನ್ನು ಸಾಧಿಸುತ್ತಾನೆ.

ಕತೆಯ ವಸ್ತು ಹೇಗೋ ಹಾಗೆ ಇಲ್ಲಿ ಕತೆಯನ್ನು ಹೇಳಿರುವ ರೀತಿಯೂ ಜನದ ಬಾಳುವೆಯಿಂದ ಬಂದಿರತಕ್ಕದ್ದು. ಕತೆ ಹೇಳುವುದರಲ್ಲಿ ಎರಡುದಾರಿ ಇದೆಯೆಂದು ನಾನು ಒಂದು ಸಂದರ್ಭದಲ್ಲಿ ಹೇಳಿದೇನೆ. ಒಂದು ದಾರಿ ಜನತೆಯಲ್ಲಿ ಬೆಳೆದಿರುವುದು; ಇನ್ನೊಂದು ದಾರಿ ಸಾಹಿತ್ಯದಲ್ಲಿ ಬೆಳೆದಿರುವುದು. ಮೊದಲನೆಯದರಲ್ಲಿ ಕತೆಯ ಸಂಗತಿಗಳು ತಾವಾಗಿ ನಡೆದ ಯಾವುದೋ ಒಂದು ರೀತಿಯಲ್ಲಿ ವ್ಯಕ್ತವಾಗುತ್ತ ಬರುತ್ತವೆ. ಎರಡನೆಯದರಲ್ಲಿ ಕತೆಗಾರನು ಪ್ರಯತ್ನ ಪೂರ್ವಕವಾಗಿ ಅವಕ್ಕೆ ಸೊಗಸುಕೊಡುವುದಕ್ಕೆ ತೊಡಗಿರುವುದು ಕಾಣುತ್ತದೆ. ಎರಡೂ ಒಳ್ಳೆಯ ದಾರಿಯೇ; ಎರಡೂ ಕಷ್ಟವೇ. ಜೀವನದಿಂದ ಬಂದದ್ದೆಂದ ಮಾತ್ರಕ್ಕೆ ಮೊದಲನೆಯ ದಾರಿ ಬಹುಸುಲಭವೇನೂ ಅಲ್ಲ; ಅದರಲ್ಲಿ ಕಲೆಯೂ ಕಡಮೆಯಲ್ಲ. ಸುಂದರವಾದ ಒಂದು ಉದ್ಯಾನವನ್ನು ರಚಿಸುವುದು ಕಷ್ಟ; ಅದರಂತೆಯೇ ಸುಂದರವಾದ ಒಂದು ಬಯಲನ್ನು ರಚಿಸುವುದೂ ಕಷ್ಟವೇ. ಯಾವುದಕ್ಕಾದರೂ ಕಣ್ಣು ಬೇಕು, ಯಾವುದಕ್ಕಾದರೂ ಕಲೆ ಬೇಕು. ಈ ಪುಸ್ತಕದ 'ದೆವ್ವದ ಕಾಟ', 'ಆರಾಣೆ ಮೂರುಕಾಸು', 'ಯಾರೂ ಅರಿಯದ ವೀರ', 'ಪಾಪ', 'ಎಳಗರು' ಕತೆಗಳಲ್ಲಿ ಕತೆಯ ಸಹಜವಾದ ಕಥನ ಪದ್ಧತಿಯು ಅದಕ್ಕೆ ಅಸಾಧಾರಣವಾದ ಒಂದು ಸೌಂದರ್ಯವನ್ನು ಕೊಟ್ಟಿದೆ.

ನಮ್ಮ ಸಾಹಿತ್ಯದಲ್ಲಿ ಸಣ್ಣಕತೆ ಇದೀಗ ಬೆಳೆಯುತ್ತಿದೆ. ಅದು ಇದುವರೆಗೆ ಬೆಳೆಯುವುದರಲ್ಲಿ ಪುಟ್ಟಪ್ಪನವರಿಂದ ಬಹಳ ಕೆಲಸವಾಗಿದೆ. ಆದರೆ ಅದು ಇನ್ನೂ ಬೆಳೆಯುವುದರಲ್ಲಿ ಅವರಿಂದ ಆಗ ಬೇಕಾದ

ಕೆಲಸವೂ ಬಹಳ ಇದೆ. ಅವರ ಕವನಗಳಿಗೆ ದೊರೆಯುವ ಹೆಚ್ಚಿನ ಮನ್ನಣೆಯಿಂದ ಪುಟ್ಟಪ್ಪನವರು ಕತೆಬರೆಯುವುದನ್ನು ಎಲ್ಲಾದರೂ ಕಡಮೆಮಾಡಿಯಾರು ಎಂದು ನನಗೆ ಒಮ್ಮೊಮ್ಮೆ ಶಂಕೆಯಾಗುವುದುಂಟು. ಅವರು ಹಾಗೆ ಮಾಡಿದರೆ ನಮ್ಮ ಸಾಹಿತ್ಯಕ್ಕೆ ಬಹಳ ನಷ್ಟವಾಗುವುದೆಂದು ನನ್ನ ಅಭಿಪ್ರಾಯ. ಈ ಕಥೆಗಳನ್ನು ಓದುವವರು ಇದನ್ನು ಒಪ್ಪುವರೆಂದು ನನಗೆ ಭರವಸೆಯಿದೆ. ಪುಟ್ಟಪ್ಪನವರು ತಾವು ಇಷ್ಟು ಚೆನ್ನಾಗಿ ನೋಡಿರುವ ತಮ್ಮ ಮಲೆನಾಡಿನ ಜೀವನವನ್ನೂ ಇತರ ಜೀವನವನ್ನೂ ಇದುವರೆಗೆ ತಂದಿರುವುದಕ್ಕಿಂತ ಹೆಚ್ಚಾಗಿ ಕತೆಯ ರೂಪದಲ್ಲಿ ತರಬೇಕಾಗಿದೆ. ಅಂಥ ಕತೆ ಬಹಳ ಬೆಲೆಯ ಸಾಹಿತ್ಯವಾಗುವುದೆಂಬ ವಿಷಯದಲ್ಲಿ ನನಗೇನೂ ಸಂದೇಹವಿಲ್ಲ.

ನಮ್ಮ ಸಾಹಿತ್ಯಕ್ಕೆ ಲೋಕದ ಮನ್ನಣೆ ದೊರೆಯಬೇಕೆಂದು ನಮ್ಮಲ್ಲಿ ಕೆಲವರಿಗೆ ಒಂದು ಆಸೆ. ಆ ಮನ್ನಣೆಯಿಲ್ಲದೆ ನಾವು ಉದ್ಧಾರವಾಗುವುದಿಲ್ಲವೆಂದಲ್ಲ. ಆದರೆ ನಾಡ ಜೀವನದಲ್ಲಿ ಅದರಿಂದಾಗುವ ಪ್ರಯೋಜನ ಬಹಳ. ಇಂಥ ಮನ್ನಣೆಯನ್ನು ಗಳಿಸಬಲ್ಲ ಲೇಖನಗಳು ಈಚೆಗೆ ನಮ್ಮಲ್ಲಿ ಕೆಲವಾದರೂ ಬರುತ್ತಿವೆ; ಅದರಿಂದ ನಮ್ಮ ಆಸೆ ಹೆಚ್ಚುತ್ತಿದೆ. ಇಂಥ ಲೇಖನಗಳು ಹಲವು ನಮ್ಮ ಕತೆಗಾರರವು. ಪುಟ್ಟಪ್ಪನವರು ಪುಣ್ಯವಂತರು. ಚಿಕ್ಕಂದಿನಲ್ಲಿಯೇ ಇವರಿಗೆ ಸಿದ್ಧಿಯ ದಾರಿ ಸಿಕ್ಕಿದೆ. ನಮ್ಮ ಪುಣ್ಯವಾಗಿ ಇವರು ಮಾಡುವ ಉಪಾಸನೆಯೆಲ್ಲ ಫಲಿಸುತ್ತಿದೆ. ಇವರ ಸಾಹಿತ್ಯೋಪಾಸನೆ, ಅದರಲ್ಲಿ ಮುಖ್ಯ ಅಂಗವಾಗಿ ಸಣ್ಣ ಕತೆಗಳ ಉಪಾಸನೆ, ಹೀಗೆಯೇ ಮುಂದುವರಿಯಲೆಂದೂ ಅದರಿಂದ ಅವರು ಈಗಾಗಲೇ ಗಳಿಸಿರುವ ಕೀರ್ತಿ ಹೆಚ್ಚುವುದಲ್ಲದೆ ನಮ್ಮ ನಾಡು ನುಡಿಗಳಿಗೆ ಲೋಕದ ಮನ್ನಣೆ ದೊರೆಯುವಂತಾಗಲೆಂದೂ ನಾನು ಹಾರೈಸುತ್ತೇನೆ.

1933

ಇದುವರೆಗಿನ ಮಾತನ್ನು ಬರೆದುಕೊಟ್ಟು ಎರಡೂವರೆ ವರ್ಷವಾಯಿತು. ಈಚೆಗೆ ಈ ಪುಸ್ತಕದ ಪ್ರಕಟನೆಯ ಕಾರ್ಯ ಶಿವಮೊಗ್ಗೆಯ 'ಕಾವ್ಯಾಲಯ'ದ ಕೈಸೇರಿದೆ. ಆಲಯದ ಚಾಲಕರ ಪರವಾಗಿ ಶ್ರೀ ಕೂಡಲಿ ಚಿದಂಬರಂ ಇವರು ನನ್ನಿಂದ ಎರಡು ಹಾರೈಕೆಯ ಮಾತನ್ನು ಕೇಳಿದ್ದಾರೆ. ಇಂಥ ಸಾಹಿತ್ಯಪೋಷಕ ಸಂಸ್ಥೆ ಲೇಖಕರಿಗೆ ತೌರು ಮನೆಯಂತೆ. ಅದನ್ನು ಕುರಿತು ನಾನು ಹೇಳತಕ್ಕದ್ದೇನಿದೆ? ಹಳ್ಳಿಯ ಹೆಣ್ಣುಮಗಳ ಮಾತಿನಿಂದ ಅದರ ಏಳ್ಗೆಯನ್ನು ಬಯಸುತ್ತೇನೆ; ಹಳ್ಳದ ದಡದ ಬಳ್ಳಿಯಂತೆ ಅದು ಬಾಡದೆ ಬೆಳೆಯಲಿ, ತುಂಬ ಹೂ ಕೊಡಲಿ, ತುಂಬ ಹಣ್ಣು ಬಿಡಲಿ.

1936

ಶ್ರೀ ಮೈಸೂರು ನರಸಿಂಗರಾಯರ

# "ಮೋಹಿನೀ" ನಾಟಕ

ಈ ಗ್ರಂಥದ ಕರ್ತರಾದ ಶ್ರೀಮಾನ್ ಮೈಸೂರ ನರಸಿಂಗರಾಯರು ಎರಡುವರ್ಷದ ಹಿಂದೆ ನನಗೆ ತಾವು ಕೆಲವು ಮಹಾರಾಷ್ಟ್ರ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸಿರುವುದನ್ನು ತಿಳಿಸಿ ಅವುಗಳಲ್ಲಿ ಮೊದಲು ಅಚ್ಚಾಗುವುದಕ್ಕೆ ನಾನು ಒಂದು ಮುನ್ನುಡಿಯನ್ನು ಬರೆಯಬೇಕೆಂದು ಕೇಳಿದರು. ಗ್ರಂಥಕರ್ತರು ನನಗೆ ಹಿರಿಯ ತಲಮಾರಿನವರು. ಅವರು ಕೈಗೊಂಡಿರುವ ಈ ಕಾರ್ಯವು ಕನ್ನಡದಲ್ಲಿ ಅವಶ್ಯವಾಗಿ ಆಗಬೇಕಾಗಿರತಕ್ಕದ್ದು. ಆದದ್ದರಿಂದ ಈ ಕೆಲಸದಲ್ಲಿ ಯಾವರೀತಿಯಿಂದಲಾದರೂ ಜೊತೆಗೆ ನಿಲ್ಲುವುದು ಉಚಿತವೆಂದು ನನಗೆ ತೋರಿತು. ಅವರ ಮಾತಿಗೆ ನಾನು ಒಡನೆಯೇ ಸಂತೋಷದಿಂದ ಸಮ್ಮತಿಸಿದೆನು. ಆ ಸಮ್ಮತಿಯನ್ನು ಅನುಸರಿಸಿ ಈಗ ಮುನ್ನುಡಿಯನ್ನು ಬರೆಯುತ್ತಿದೇನೆ.

ನಮ್ಮ ದೇಶದ ಇತರ ಭಾಷೆಗಳ ವಿಷಯವನ್ನು ಬಲ್ಲವರು ಮಹಾರಾಷ್ಟ್ರದೇಶದಲ್ಲಿ ನಾಟಕ ಬಹಳ ಮುಂದುವರಿದಿದೆಯೆಂದು ಹೇಳುವುದನ್ನು ನಾವೆಲ್ಲ ಕೇಳಿದೇವೆ. ಬಾಲಗಂಧರ್ವ ಎಂಬ ಪ್ರಸಿದ್ಧ ನಟರ ಹೆಸರು ನಮಗೆಲ್ಲ ತಿಳಿದದ್ದು. ಇತಿಹಾಸದ ಸಂಗತಿಗಳನ್ನೂ ಸಮಾಜದ ಪ್ರಕೃತಸ್ಥಿತಿಯನ್ನೂ ವಸ್ತುವಾಗಿ ಉಳ್ಳ ಗದ್ಯನಾಟಕಗಳು ಮಹಾರಾಷ್ಟ್ರದ ನಾಟಕರಂಗದಲ್ಲಿ ಯಶಸ್ಸನ್ನು ಪಡೆದು ನಾಟಕ ಸಂಘಗಳ ಚಾಲಕರಿಗೆ ಹಣವನ್ನು ತಂದಿವೆಯಂತೆ. ರಂಗದಲ್ಲಿ ಹೆಸರುವಾಸಿ ಆಗುವುದಲ್ಲದೆ ಆ ಭಾಷೆಯ ನಾಟಕಗಳು ಪುಸ್ತಕದ ರೂಪದಲ್ಲಿಯೂ ತುಂಬ ಪ್ರಚಾರವಾಗಿವೆಯೆಂದು ಕಾಣುತ್ತದೆ. ಕಳೆದವರ್ಷ ರಂಗಕ್ಕೆ ಹೊಸದಾಗಿ ಬಂದ ನಾಟಕವೊಂದು ಮೂರನೆಯ ದಿವಸವೇ ಎರಡುಸಾವಿರ ಪ್ರತಿಯಷ್ಟು ವ್ಯಾಪಾರವಾಯಿತಂತೆ. ನಾಟಕ ಕಲೆಯನ್ನು ಇಷ್ಟು ಮುಂದಕ್ಕೆ ಬೆಳೆಸಿಕೊಂಡಿರುವ ಭಾಷೆಯಿಂದ ಹೊಸನಾಟಕದ ದಾರಿಯಲ್ಲಿ ಈಗತಾನೇ ಹೆಜ್ಜೆ ಇಡುತ್ತಿರುವ ಕರ್ಣಾಟಕ ರಂಗವು ತಿಳಿದುಕೊಳ್ಳಬೇಕಾದ ವಿಷಯ

ಬಹಳ ಇದೆ. ಆದದ್ದರಿಂದ ಮಹಾರಾಷ್ಟ್ರ ನಾಟಕಗಳನ್ನು ಕನ್ನಡ ಭಾಷೆಗೆ ಪರಿವರ್ತಿಸುವುದು ಬಹು ಆವಶ್ಯಕ.

ಮೋಹಿನಿಯೆಂಬ ಹೆಸರಿನ ಈ ನಾಟಕ ಮಹಾರಾಷ್ಟ್ರದ ನಾಟಕ ರಂಗದಲ್ಲಿ ಹೆಸರುವಾಸಿಯಾಗಿರುವ ನಾಟಕಗಳಲ್ಲಿ ಒಂದು. ಇದನ್ನು ಪರಿವರ್ತಿಸುವುದರಲ್ಲಿ ಶ್ರೀವರ್ಾ ನರಸಿಂಗರಾಯರು ಕೆಲವು ಮಾರ್ಪಾಡು ಗಳನ್ನು ಮಾಡಿಕೊಂಡಿದಾರೆ. ಪೂನಾ ನಗರಕ್ಕೆ ಪ್ರತಿಯಾಗಿ ಕತೆಯನ್ನು ಬೆಂಗಳೂರಿನಲ್ಲಿ ನಡೆದಂತೆ ಹೇಳಿರುವುದು ಮಾರ್ಪಾಡುಗಳಲ್ಲಿ ಒಂದು. ಮಹಾರಾಷ್ಟ್ರದಲ್ಲಿ ದುಃಖಾಂತವಾದ ಕತೆಯನ್ನು ಇಲ್ಲಿ ಸುಖಾಂತವಾಗಿ ಮಾಡುವುದಕ್ಕೆ ತಂದಿರುವ ಮಾರ್ಪಾಡೂ ಕೆಲವು ಇವೆಯೆಂದು ರಾಯರು ಹೇಳಿದ್ದಾರೆ. ಆದರೆ ಮೊತ್ತದಲ್ಲಿ ಪರಿವರ್ತನ ಮೂಲವನ್ನು ಅನು ಸರಿಸಿಯೇ ಇದೆ. ಅದರಿಂದಲೇ ನಾಟಕದಲ್ಲಿಯ ಸಾಹುಕಾರರು ಇಪ್ಪತ್ತು ಮೂವತ್ತು ಲಕ್ಷದ ಹಣವಂತರಾಗಿರುವುದು; ನಾಲ್ಕುಜನ ಐದುಜನ ಕಲಬೆರಕೆಯ ಸ್ನೇಹಿತರಿಗಾಗಿ ನಾಗೇಶರಾಯನಂಥ ಪಟಿಂಗನು ನೂರಾರು ರೂಪಾಯನ್ನು ಕೊಟ್ಟು ಹಾಡುವುದಕ್ಕೆ ಗಾಯಕಿ ಮೋಹಿನಿ ಯನ್ನು ಕರೆಸುವುದು; ದಿವಾರ್ ಬಹದ್ದೂರ್ ಪದವಿ ಬರುವುದಕ್ಕೆ ಏನು ಮಾಡಬೇಕೆನ್ನುವುದನ್ನು ಒಂದು ಪಾತ್ರ ವಿವರಿಸುವ ಮಾತು ಸ್ವಲ್ಪ ಕ್ರೂರವಾಗಿ ತೋರುವುದು. ಈ ವಿವರಗಳು ಮಹಾರಾಷ್ಟ್ರದ ಜೀವನ ವನ್ನು ಕುರಿತವು ಮೂಲದಲ್ಲಿ ಇರುವಂತೆ ಬಂದಿವೆ. ಬೆಂಗಳೂರಿನ ಜೀವನಕ್ಕೆ ಇವು ಹೊಂದುವುವೇ ಬಿಡುವುವೇ ಎನ್ನುವುದು ಅಷ್ಟು ಮುಖ್ಯವಲ್ಲ. ಪೂನಾ ನಗರದ ಜೀವನಕ್ಕೆ ಹೊಂದುವುವೆಂದು ಮೂಲದ ಗ್ರಂಥಕರ್ತನ ಅಭಿಪ್ರಾಯ. ನಾಟಕದ ಸಂಗತಿಗಳನ್ನು ನೋಡುವಲ್ಲಿ ನಾವು ಈ ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಲಕ್ಷ ಲಕ್ಷದ ಹಣಗಾರಿಕೆ ಮುಂತಾದ ಕೆಲವು ವಿವರಗಳಲ್ಲಿ ಈ ಕೃತಿ ಚಿತ್ರಿಸುವ ಜೀವನಕ್ಕೆ ಬೆಂಗಳೂರಿನ ಜೀವನದಲ್ಲಿ ಸಮಾನ ಸನ್ನಿವೇಶ ದೊರೆಯದಿದ್ದರೂ ನಾಟಕದ ಉಳಿದ ವಿಷಯ ಪೂನಾ ನಗರ, ಬೆಂಗಳೂರು, ಕಲ್ಕತ್ತ, ಲಂಡರ್ ಎಲ್ಲಿ ಹೋದರೂ ಸುಮಾರು ಇದರಂತೆ ಇರುವುದೆನ್ನುವು ದರಲ್ಲಿ ಸಂದೇಹವಿಲ್ಲ. ನಾಗೇಶರಾಯನಷ್ಟು ಹಣವಿಲ್ಲದಿದ್ದರೂ ಅವನಂತೆ

ದುರಾಚಾರಿಗಳಾದವರು, ಜವಾಹಿರಿ ಹೇಳಿಕೊಳ್ಳುವಂತೆ ತಮ್ಮನ್ನು ತಾವೇ ವರ್ಣಿಸಿಕೊಳ್ಳದಿದ್ದರೂ ಅವನಂತೆ ನಡೆಯುವ ಮಾರ್ವಾಡಿಗಳು, ಮನೆಯಲ್ಲಿ ಒಳ್ಳೆಯ ಹೆಂಡತಿ ಇದ್ದರೂ ಹೊರಗೆ ಅಸಭ್ಯವಾಗಿ ವರ್ತಿಸುವ ಮನ್ಮಥನಂತಹ ವಿದ್ಯಾವಂತರು, ಒಳ್ಳೆಯದಾರಿಯಲ್ಲಿ ಜೀವನ ಸಾಗದ ಕಾರಣ ದುಷ್ಟರಿಗೆ ಅವರ ಕಾರ್ಯವನ್ನು ಮಾಡಿಕೊಟ್ಟು ಊಟವನ್ನು ಸಂಪಾದಿಸುವ ನ್ಯಾಯವಿಜ್ಞರು, ಇವರು ಎಲ್ಲಾ ಸಮಾಜದಲ್ಲೂ ಇರುವರು. ಇದರಂತೆಯೇ ಪತಿಗಾಗಿ ಏನನ್ನು ಬೇಕಾದರೂ ಮಾಡಲು ಸಮ್ಮತಿಸುವ ಇಂದುಮತಿಯಂತಹ ಸತಿ, ದುಷ್ಟ ಆವರಣದಲ್ಲಿ ಸಿಕ್ಕಿಕೊಂಡಿದ್ದರೂ ಸಚ್ಚರಿತ್ರವನ್ನು ಉಳಿಸಿಕೊಳ್ಳುವ ಮೋಹಿನಿಯಂಥ ತರುಣಿ, ಬದುಕು ತನಗೆ ನಿರ್ದಯವಾಗಿದ್ದರೂ ಇತರರ ಬಾಳು ಚೆನ್ನಾಗಲೆಂದು ಹಂಬಲಿಸುವ ಪ್ರಕಾಶಚಂದ್ರನಂಥ ದಯಾವಂತನು, ಇವರೂ ಎಲ್ಲಾ ಕಡೆಯೂ ಇರತಕ್ಕ ವ್ಯಕ್ತಿಗಳು. ಈ ವ್ಯಕ್ತಿಗಳನ್ನು ತೆಗೆದುಕೊಂಡು ಈ ನಾಟಕವು ರಂಗದಲ್ಲಿ ಶೋಭಿಸತಕ್ಕ ಒಂದು ಕತೆಯನ್ನು ಕಟ್ಟಿದೆ. ಇಂದುಮತಿಯ ಸೌಜನ್ಯವೂ, ಮೋಹಿನಿಯ ಧೈರ್ಯವೂ, ಮಾಲತಿಯ ಪಶ್ಚಾತ್ತಾಪವೂ, ಪ್ರಕಾಶಚಂದ್ರನ ಸಮಾಧಾನವೂ ಸ್ವಲ್ಪ ಹೆಚ್ಚು ಎಂದು ಕಾಣುವುದು ನಿಜ. ಇದು ರಂಗದ ನಾಟಕದಲ್ಲಿ ಇರಬೇಕಾದ ಹೆಚ್ಚಿಗೆ. ನಾಟಕಮಂದಿರದ ಪ್ರೇಕ್ಷಕವರ್ಗದ ಬಹುಭಾಗಕ್ಕೆ ಒಳ್ಳೆಯದು ಕೆಟ್ಟದರ ಭಾವ ಸ್ಪಷ್ಟವಾಗಬೇಕಾದರೆ ಅದು ಹೀಗೆ ಅತಿಶಯಿತವಾಗಿಯೇ ಇರಬೇಕು. ನಾಟಕಮಂದಿರದ ಪರದೆಗಳಿಗೆ ಹಚ್ಚುವ ಬಣ್ಣ, ಪೂಜೆಗೆ ಇರಿಸಿಕೊಂಡಿರುವ ಪಟದ ಬಣ್ಣದಂತೆ ಮಿತವೂ ನಯವೂ ಆದರೆ ಪ್ರಯೋಜನವಿಲ್ಲ. ದೀಪದ ಬೆಳಕಿನಲ್ಲಿ ರಂಜಿಸುವುದಕ್ಕಾಗಿಯೂ ಪರದೆಯ ಬಣ್ಣ ತುಂಬ ಇರಬೇಕು. ಅದನ್ನು ಹಗಲಲ್ಲಿ ಹತ್ತಿರದಿಂದ ನೋಡಿ ಬಣ್ಣ ಹೆಚ್ಚಾಯಿತೆಂದು ದೂರಿ ಫಲವಿಲ್ಲ. ಪರದೆಯ ಬಣ್ಣದಂತೆ ಪಾತ್ರಗಳ ನಡತೆಯಲ್ಲಿ ವಾಸ್ತವಿಕವನ್ನು ಸ್ವಲ್ಪ ಅತಿಶಯಿಸುವುದಲ್ಲದೆ ರಂಗದಲ್ಲಿ ಸೊಗಸುವ ನಾಟಕ ಒಂದೆರಡು ಅಸಂಭವವೆಂದು ಕಾಣುವ ವಿವರಗಳನ್ನೂ ಜೋಡಿಸಿಕೊಳ್ಳುತ್ತದೆ. ತರುಣಿಯೊಬ್ಬಳು ಪಿಸ್ತೂಲನ್ನು ಹಿಡಿದು ದುಷ್ಟನನ್ನು ಹೆದರಿಸಿ ದೂರ

ನಿಲ್ಲಿಸೋಣ, ಪಾಪಿಯಾದವನು ಕ್ಷಣಮಾತ್ರದಲ್ಲಿ ಒಳ್ಳೆಯವನಾಗಿ ಮೂವತ್ತೈದು ಲಕ್ಷ ಹಣವನ್ನು ಒಳ್ಳೆಯವರಿಗೆ ಮತ್ತು ಒಳ್ಳೆಯ ಕಾರ್ಯಕ್ಕೆ ಹಂಚಿಬಿಡೋಣ, ಪಿಸ್ತೂಲಿನಿಂದ ಏಟುತಿಂದವರು ಅದರಿಂದ ತೊಂದರೆ ಯಾಗದೆ ಸುಖವಾಗಿರೋಣ, ಗಲ್ಲಿಗೆ ಏರುವುದರಲ್ಲಿದ್ದ ಪತಿವ್ರತೆ ಅದರಿಂದ ಅನಿರೀಕ್ಷಿತವಾಗಿ ಪಾರಾಗೋಣ, ಇವೂ ಕೂಡ ನಾಟಕವನ್ನು ಜನಕ್ಕೆ ಪ್ರಿಯವಾಗುವಂತೆ ಮಾಡುತ್ತವೆ. ಕೇವಲ ಸಾಹಿತ್ಯದ ದೃಷ್ಟಿಯಿಂದ ಇವು ಕುಂದುಗಳೆಂದು ಕಾಣಬಹುದು. ಆದರೆ ರಂಗದ ನಾಟಕ ಕೇವಲ ಸಾಹಿತ್ಯವಲ್ಲ, ರಂಗದಲ್ಲಿ ಶೋಭಿಸಬೇಕಾದ ಸಾಹಿತ್ಯ. ಆದರ ಸಂದರ್ಭಕ್ಕೆ ತಕ್ಕ ಸಲಕರಣೆಯನ್ನು ಅದು ಉಪಯೋಗಿಸಬೇಕಾಗುತ್ತದೆ.

ಮಹಾರಾಷ್ಟ್ರದ ರಂಗದಲ್ಲಿ ಹೆಸರು ಪಡೆದಿರುವವೆಂಬ ಸಮಾಜದ ಜೀವನವನ್ನು ವಸ್ತುವಾಗಿ ಉಳ್ಳ ನಾಟಕಗಳು ರಂಗದಲ್ಲಿ ಸೊಗಸಬೇಕಾದರೆ ಏನುಮಾಡಿವೆ ಎನ್ನುವುದನ್ನು ಈ ಪರಿವರ್ತನ ನಮಗೆ ಸೂಚಿಸಿ ಕೊಡುತ್ತದೆ. ರಂಗದಲ್ಲಿ ಸೊಗಯಿಸುವ ಈ ಗುಣಗಳೊಂದಿಗೆ ಕೃತಿಯನ್ನು ಸಾಹಿತ್ಯವಾಗಿ ಮಾಡಬಲ್ಲ ಗುಣಗಳೂ ಸೇರಿದರೆ ಷೇಕ್ಸ್‌ಪಿಯರ್ ಅಥವಾ ಕಾಳಿದಾಸನ ನಾಟಕವು ಆಗುವುದು. ಆ ನಾಟಕ ಬರಬೇಕಾದರೆ ಇಂಥ ನಾಟಕ ರಂಗದಲ್ಲಿ ನಡೆಯುತ್ತಿರಬೇಕು; ಜನತೆಯ ಅಭಿಮಾನವನ್ನು ಸಜೀವವಾಗಿ ಇರಿಸುತ್ತಿರಬೇಕು; ನಾಟಕ ಬರೆಯುವ ಕೆಲಸಕ್ಕೆ ಶಕ್ತರಾದವರನ್ನು ಸೆಳೆಯುತ್ತಿರಬೇಕು. ಒಂದೊಂದು ದೇಶವೂ ಅದರ ಯೋಗ್ಯತೆಗೆ ತಕ್ಕ ಆಡಳಿತವನ್ನು ಪಡೆಯುತ್ತದೆ ಎಂದು ಇಂಗ್ಲೀಷಿನಲ್ಲಿ ಒಂದು ರಾಜಕೀಯ ಸೂತ್ರವುಂಟು. ಇದನ್ನು ನಾಟಕಕ್ಕೂ ಹೇಳಬಹುದು. ಜನತೆಯ ರುಚಿಯನ್ನು ಅನುಸರಿಸಿ ಲೇಖಕನು ನಾಟಕವನ್ನು ಸೃಷ್ಟಿಸುತ್ತಾನೆ. ಅವನ ಸೃಷ್ಟಿಗೆ ಮನಸ್ಸನ್ನು ಕೊಟ್ಟು ಜನತೆಯೂ ರುಚಿ ಶುದ್ಧಿಯನ್ನು ಕಲಿಯುತ್ತದೆ. ಹೀಗೆ ಕ್ರಮೇಣ ಪ್ರೇಕ್ಷಕರು ವಿದುಷರಾಗುತ್ತಾರೆ; ನಾಟಕಕಾರನು ಕವಿಯಾಗುತ್ತಾನೆ.

ಕನ್ನಡದಲ್ಲಿ ಅವಶ್ಯಕವಾಗಿದ್ದ ಈ ಕೆಲಸವನ್ನು ಕೈಗೊಂಡದ್ದಕ್ಕಾಗಿ ನಾನು ಶ್ರೀಮಾನ್ ಮೈಸೂರ ನರಸಿಂಗರಾಯರನ್ನು ಅಭಿನಂದಿಸುತ್ತೇನೆ, ಹಾಗೆಯೇ ವಂದಿಸುತ್ತೇನೆ. ಶ್ರೀಮಾನ್ ನರಸಿಂಗರಾಯರು ಪ್ರಬುದ್ಧ

ರಾದಂದು ಮೊದಲು ಅನೇಕ ವರ್ಷ ಕರ್ಣಾಟಕದ ಹೊರಗಡೆಯೇ ಇದ್ದರು. ಬ್ರಿಟಿಷ್ ಸರ್ಕಾರದಲ್ಲಿ, ಭೂಪಾಳದೇಶದಲ್ಲಿ, ಅಧಿಕಾರದಲ್ಲಿದ್ದು ಕೀರ್ತಿವಂತರಾಗಿ ಸರ್ಕಾರದವರಿಂದ Member of the Most Excellent Order of the British Empire ಎಂಬ ಉನ್ನತ ಗೌರವವನ್ನು ಸಂಪಾದಿಸಿದರು. ವಿಶ್ರಾಂತರಾದಮೇಲೆ ಇವರು ಸಾಹಿತ್ಯ ಸೇವೆ ಮಾಡದಿದ್ದರೆ ಯಾರೂ ಇವರನ್ನು ದೂರುವಂತೆ ಇರಲಿಲ್ಲ. ಆದರೆ ಇಂಥ ಕೆಲಸವನ್ನು ಮಾಡುವವರು, ಪ್ರಾಯಶಃ ಎಂಥ ಕೆಲಸವನ್ನಾಗಲಿ ನಿಜವಾಗಿ ಮಾಡುವವರು, ಅದರ ಮೇಲಣ ಪ್ರೇಮದಿಂದಲೇ ಮಾಡುತ್ತಾರೆ ರಾಯರ ಸಾಹಿತ್ಯಪ್ರೇಮವು ಸಹಜವಾದದ್ದು, ತೀವ್ರವಾದದ್ದು. ಅವರ ಮಾತೃಭೂಮಿಮಾತೃಭಾಷಾಪ್ರೇಮವೂ ಹೀಗೆಯೇ ಸಹಜ ಮತ್ತು ತೀವ್ರ. ಇದು ಈ ಗ್ರಂಥದಲ್ಲಿ ಇವರೇ ಹಾಕಿರುವ ಮಾತುಗಳಲ್ಲಿ ಮುಖವಿಟ್ಟಿದೆ. ಇವರಲ್ಲಿ ಇನ್ನೂ ಹಲವು ನಾಟಕ ಅಚ್ಚಿಗೆ ಸಿದ್ಧವಾಗಿವೆ. ಮೇಲೆ ಇವರು ಇತರ ನಾಟಕಗಳನ್ನು ಪರಿವರ್ತಿಸುತ್ತಲೂ ಇದ್ದಾರೆ. ಮಹಾರಾಷ್ಟ್ರದಿಂದ ಹೇಗೋ ಹಾಗೆ ಬಂಗಾಳಿಯಿಂದ, ಗುಜರಾತಿಯಿಂದ, ಹಿಂದಿಯಿಂದ, ನಮ್ಮದೇಶದ ಇತರ ಭಾಷೆಗಳಿಂದ, ನಮಗೆ ಪರಿವರ್ತನಗಳು ಬೇಕಾಗಿವೆ. ಈ ಭಾಷೆಗಳನ್ನು ಬಲ್ಲ ನಮ್ಮ ಸೋದರರು ಅವುಗಳ ನಾಟಕಗಳನ್ನು ಕನ್ನಡಿಸುವಂತೆ ರಾಯರ ಈ ಪ್ರಯತ್ನ ಅವರನ್ನು ಪ್ರೇರಿಸಲಿ ಎಂದು ನನ್ನ ಕೋರಿಕೆ. ಈ ದೃಷ್ಟಿಯಿಂದ ಶ್ರೀಮಾನ್ ನರಸಿಂಗರಾಯರು ಕರ್ಣಾಟಕದ ಹೊರಗೆ ಇರುವ ನಮ್ಮ ಬಂಧುಗಳಿಗೆ ಆದರ್ಶರಾಗಿದ್ದಾರೆ. ರಾಯರ ಸಾಹಿತ್ಯ ಸೇವೆ ಚೆನ್ನಾಗಿ ಮುಂದುವರಿಯಲಿ ಎಂದೂ ಇವರ ಆದರ್ಶದಿಂದ ಇತರರು ತಾವು ಬಲ್ಲ ಭಾಷೆಗಳ ಉತ್ತಮ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸುವಂತಾಗಲೆಂದೂ ನಾನು ಆಶಿಸುತ್ತೇನೆ. ಈ ಗ್ರಂಥವನ್ನು ನಮ್ಮ ಜನರು ಆದರದಿಂದ ಸ್ವೀಕರಿಸುವರೆಂದು ನಂಬಿದೇನೆ.

1936

ಲೇಖಕಿ ಸೋದರಿಯರ

# " ರಂಗವಲ್ಲಿ "

ಕನ್ನಡ ನಾಡಿನ ಹೆಣ್ಣು ಮಕ್ಕಳು ರಚಿಸಿರುವ ಸಣ್ಣಕತೆಗಳ ಈ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ಬರೆದು ಕೊಡಬೇಕೆಂದು ಮನೋಹರ ಗ್ರಂಥ ಭಾಂಡಾರದ ಮಿತ್ರರು ನನ್ನನ್ನು ಕೇಳಿದಾರೆ. ಮುನ್ನುಡಿ ಎಂಬುದನ್ನು ಬರೆಯುವಲ್ಲಿ ನನ್ನ ಉದ್ದೇಶವೇನಿರುತ್ತದೆಂಬುದಾಗಿ ನಾನು ಬೇರೆ ಒಂದು ಸಂದರ್ಭದಲ್ಲಿ ಹೇಳಿದೇನೆ. ಕೆಲ ದಿನದ ಬರಹಗಾರರು ಹೊಸ ಬರಹಗಾರರೊಂದಿಗೆ ನಿಂತು ನಾವೆಲ್ಲ ತೊಡಗಿರುವುದು ಒಂದೇ ಕೆಲಸದಲ್ಲಿ ಎಂದು ತೋರಿಸುವುದು ನಮ್ಮ ಸಾಹಿತ್ಯದಲ್ಲಿ ಈಗ ಆವಶ್ಯಕ. ಮುನ್ನುಡಿ ಬರೆಯುವುದು ಇದಕ್ಕೆ ಅವಕಾಶವನ್ನು ಕಲ್ಪಿಸುತ್ತದೆ. ಸಾಹಿತ್ಯ ಸೇವೆಗೆ ಕೈಯಿಟ್ಟಿರುವ ಸೋದರಿಯರಿಗೆ ಇಂಥ ಮಾತನ್ನು ಹೇಳಿ ಸ್ವಾಗತವನ್ನು ಬಯಸುವುದು ನನಗೆ ಬಹು ಸಂತೋಷದ ಕೆಲಸ. ಆದಕಾರಣ ನಾನು ಈ ಮುನ್ನುಡಿಯನ್ನು ಬಹು ಸಂತೋಷದಿಂದ ಬರೆಯುತ್ತಿದೇನೆ.

ಸಾಹಿತ್ಯಸೇವೆಯ ಗುಟ್ಟನ್ನು ಸ್ವಲ್ಪವಾದರೂ ಬಲ್ಲವನು ಎಲ್ಲಾ ಲೇಖಕರಿಗೂ ಸ್ವಾಗತವನ್ನೇ ಬಯಸುತ್ತಾನೆ. ತನ್ನ ಅಭಿಪ್ರಾಯವನ್ನು, ತನ್ನ ಪಕ್ಷವನ್ನು, ತನ್ನದೆನ್ನುವುದನ್ನು ಪೋಷಿಸುವ ಲೇಖನಕ್ಕೆ ಮಾತ್ರವಲ್ಲ; ತನ್ನದಲ್ಲದ, ತನ್ನ ಪಕ್ಷಕ್ಕೆ ಪ್ರತಿಕೂಲವಾದ, ತನಗೆ ವಿರೋಧವೆಂದೇ ಕಾಣುವ ಅಭಿಪ್ರಾಯದ, ಲೇಖನಕ್ಕೂ ಅವನ ಪ್ರಕೃತಿ ಸ್ವಾಗತವನ್ನು ಕೊಡುವುದು. ಹೀಗಿರುವಲ್ಲಿ ಈ ಪುಸ್ತಕಕ್ಕೆ ಆದೇ ಕೆಲಸವಾಗಿ ಸ್ವಾಗತವನ್ನು ಹೇಳತಕ್ಕದ್ದೇನು ಎಂದು ಯಾರಿಗಾದರೂ ತೋರಬಹುದು. ಇದು ನಿಜ: ಆದರೆ ಹೆಣ್ಣು ಮಕ್ಕಳು ಬರೆಯುತ್ತಿದಾರೆ ಎಂಬ ಕಾರಣದಿಂದ ಈ ಪುಸ್ತಕವನ್ನು ನಮ್ಮ ಜನರು ಹೆಚ್ಚು ಆದರದಿಂದ ಬರಮಾಡಿಕೊಳ್ಳಬೇಕೆಂದು ನನ್ನ ಅಭಿಪ್ರಾಯ. ಹೀಗೆ ಹೇಳುವುದಕ್ಕಾದರೂ ಕಾರಣ, ಬರೆಯುವವರು ಹೆಣ್ಣುಮಕ್ಕಳು ಎಂಬುದಲ್ಲ, ವಿಷಯ ಅವರು ಬರೆದಿರುವುದು ಎಂಬುದು. ಈ ಎರಡಕ್ಕೂ ಏನು ವ್ಯತ್ಯಾಸ ಎಂದು ಒಡನೆಯೇ

ಸ್ಪಷ್ಟವಾಗದಿರಬಹುದು. ಆದ್ದರಿಂದ ಇದನ್ನು ವ್ಯಕ್ತಪಡಿಸುವುದು ಅಪ್ರಕೃತವಾಗಲಾರದು.

ಈಗ ನಡೆಯುತ್ತಿರುವ ಕಾಲ ಪ್ರಪಂಚದಇತಿಹಾಸದಲ್ಲಿ ಪ್ರಬಲವಾದ ಮಾರ್ಪಾಡುಗಳನ್ನು ತರುತ್ತಿದೆಯೆಂದು ಬಲ್ಲವರು ಹೇಳುತ್ತಿದಾರೆ. ಮಾನವ ಕುಲದ ಪುರೋಭಿವೃದ್ಧಿಗೆ ಈ ಮಾರ್ಪಾಡುಗಳು ಆವಶ್ಯಕವೆಂದು ಜನರಿಗೆ ತೋರುತ್ತಿದೆ. ಕೃತಯುಗದಲ್ಲಿ ವನವಾಸಿಯಾಗಿದ್ದ ಮನುಜಕುಲ ಕಲಿಯುಗದ ಇಂದಿನ ನಾಗರಿಕ ಸಮಾಜವಾಗಬೇಕಾದರೆ ಬಹುಕಾಲ, ಬಹುದೇಶ, ಬಹು ಅವಸ್ಥೆಗಳ ಉಳಿಯ ಪೆಟ್ಟು ಅದರ ಬಾಳಿಗೆ ತಾಕಬೇಕಾಯಿತು. ಈ ಬಾಳಿನಲ್ಲಿ ಏರ್ಪಟ್ಟ ನೀತಿನಿಯಮಗಳು ಅನುಭವ ಬಂದಂತೆ ಸ್ವಲ್ಪ ಸ್ವಲ್ಪ ಮಾರ್ಪಡುತ್ತ ಇಂದು ಸಮಾಜದಲ್ಲಿ ಕಾಣುವ ಸಂಸ್ಥೆ ವ್ಯವಸ್ಥೆಗಳಲ್ಲಿ ರೂಪು ಪಡೆದಿವೆ. ಇವುಗಳಿಂದ ಮನುಷ್ಯನಿಗೆ ತೃಪ್ತಿಯಾಗಿಲ್ಲ. ಸ್ವಾರ್ಥವೆನ್ನುವುದು ಮುಖ್ಯವಾಗಿದ್ದ ಸರಳ ಮನೋಧರ್ಮದಲ್ಲಿ ಬಾಳನ್ನು ಮೊದಲು ಮಾಡಿ ಮನುಜಕುಲವು ಕೆಲವು ಕಾಲ ಕಳೆದ ಮೇಲೆ 'ಸರ್ವೇಜನಾಃಸುಖಿನೋ ಭವಂತು', ಎಂದು ಹೇಳಿತು. ಆದರೆ ಈ ಸರ್ವಜನದ ಸೌಖ್ಯವನ್ನು ಹೇಗೆ ಸಾಧಿಸುವುದು ಎಂದು ಅದು ಇನ್ನೂ ಕಂಡಿಲ್ಲ; ಅದನ್ನು ಕಾಣುವವರೆಗೆ ಸುಮ್ಮನಿರುವಂತೆಯೂ ಇಲ್ಲ. ಈ ಕಾರಣದಿಂದ ಸಮಾಜದ ನೀತಿ ನಿಯಮಗಳು ಇನ್ನೂ ಹೆಚ್ಚು ಹೆಚ್ಚಿನ ಜನರ ಸೌಖ್ಯವನ್ನು ಸಾಧಿಸುವಂತೆ ಮಾರ್ಪಡಬೇಕಾಗಿದೆ. ಅದನ್ನು ಯಾವ ರೀತಿ ಮಾರ್ಪಡಿಸುವುದು ಎನ್ನುವುದಾದರೂ ಸದಾ ವಿಚಾರದಲ್ಲಿರತಕ್ಕ ವಿಷಯ; ಈಗ ಅದು ಎಂದಿಗಿಂತ ವಿಶೇಷವಾಗಿ ತೀವ್ರವಾದ ವಿಚಾರಕ್ಕೆ ಬಂದಿದೆ.

ಸಮಾಜದ ಈಗಣ ನೀತಿನಿಯಮಗಳು ನಮಗೆ ತೃಪ್ತಿಕೊಡದೆ ಇರುವುದಕ್ಕೆ ಮುಖ್ಯಕಾರಣ ಅವು ಸಮಾಜದ ಎಲ್ಲ ಅಂಗಗಳ ದೃಷ್ಟಿಗಳನ್ನೂ ಗಣನೆಗೆ ತೆಗೆದುಕೊಳ್ಳದೆ ಏರ್ಪಟ್ಟವೆನ್ನುವುದು. ಆ ನೀತಿ ನಿಯಮಗಳನ್ನು ತಿದ್ದುವುದಕ್ಕೆ ಎಲ್ಲ ದೃಷ್ಟಿಯ ಅಭಿಪ್ರಾಯಗಳೂ ನಮಗೆ ದೊರೆಯಬೇಕು. ಸಮಾಜದ ಒಂದರ್ಧವೇ ಹೆಣ್ಣು. ನಮ್ಮ ಸಮಾಜದಂಥ ಸ್ವಲ್ಪ ಹಳೆಯ ವ್ಯವಸ್ಥೆಯ ಸಮಾಜಕ್ಕಂತೂ ಈಗಿನ ಕಾಲದ

ದೃಷ್ಟಿಯಿಂದ ಅನೇಕ ಪ್ರಶ್ನೆಗಳು ತಲೆದೋರುತ್ತವೆ. ಹೆಣ್ಣು ಎನ್ನುವುದು ಮುಖ್ಯವಾಗಿ ಮನೆಯಲ್ಲಿರುತ್ತ ತಾಯಾಗಿ ಲೋಕವನ್ನು ಬೆಳೆಸುವುದೇ, ಇಲ್ಲ ಗಂಡಿನಂತೆ ಅನ್ನವನ್ನು ಗಳಿಸುವುದಕ್ಕೆ ಹೊರಡುವುದೇ, ಗಂಡ ಹೆಂಡಿರು ಅರುಂಧತಿ–ವಸಿಷ್ಠರಂತೆ ನಿತ್ಯದಂಪತಿಗಳೇ, ಎರಡು ಹಕ್ಕಿ ಒಂದು ಗೂಡನ್ನು ಮಾಡಿಕೊಂಡಂತೆ ಮನೆ ಎಂಬ ಗೂಡನ್ನು ನಡೆಯಿಸುವ ಕೆಲಕಾಲದ ಜೊತೆಯ ಎರಡು ಬಾಳೇ, ಒಂದು ಗಂಡು ಹಲವು ಹೆಣ್ಣನ್ನು ಹೆಂಡಿರೆನ್ನಬಹುದೇ, ಗಂಡಸಿಗೆ ಹೇಗೋ ಹಾಗೆ ಅಥವಾ ಹಲಕೆಲವು ಸಂದರ್ಭಗಳಲ್ಲಿ ಒಂದು ಗಂಡನ್ನು ಬಿಟ್ಟು ಅಥವಾ ಕಳೆದುಕೊಂಡ ಹೆಣ್ಣು ಮತ್ತೊಂದು ಗಂಡಿಗೆ ಜೊತೆಯಾಗಬಹುದೇ, ಹೆಣ್ಣಿಗೆ ಮದುವೆಯೆನ್ನುವುದು ಆವಶ್ಯಕವೇ, ಆವಶ್ಯಕವಾದರೆ ಅದು ಯಾವ ವಯಸ್ಸಿಗೆ ಆವಶ್ಯಕ, ಅದನ್ನು ಮುಂದಾಗಿ ಮಾಡುವುದರ ಅಥವಾ ಕಾಲಕಳೆದು ಮಾಡುವುದರ ಸಾಧಕ ಬಾಧಕಗಳೇನು, ಇತ್ಯಾದಿ, ಇತ್ಯಾದಿ, ಸ್ತ್ರೀಯರ ಬಾಳನ್ನು ಕುರಿತು ಸಮಾಜವು ಇಂದು ಉತ್ತರ ಕೊಡಬೇಕಾಗಿರುವ ನೂರು ಪ್ರಶ್ನೆಗಳನ್ನು ಸುಲಭವಾಗಿ ಪ್ರತಿಪಾದಿಸಬಹುದು. ಮಗಳಿಗೆ ವಯಸ್ಸಾಯಿತು ಮದುವೆ ಮಾಡಬೇಕು, ಎಂದು ಹೇಳುವ ತಾಯಿ ತನ್ನ ಒಂದು ಅನುಭವದಿಂದ ಸಮಾಜಕ್ಕೆ ಒಂದು ಸೂಚನೆಯನ್ನು ಕೊಡುತ್ತಾಳೆ. ಈ ಸೂಚನೆಯನ್ನು ಹೆಣ್ಣಲ್ಲದೆ ಗಂಡು ಕೊಡುವಂತಿಲ್ಲ; ಅದಕ್ಕೆ ಅವನಿಗೆ ಅಧಿಕಾರವೂ ಇಲ್ಲ. ಹೀಗೆಯೇ ಹೆಣ್ಣಿನ ಬಾಳನ್ನು ಕುರಿತ ಉಳಿದೆಲ್ಲ ವಿಷಯಗಳಲ್ಲಿಯೂ ಹೆಣ್ಣಿನ ಅನುಭವದಿಂದ ಮಾತ್ರ ಹೇಳಬಹುದಾದ ಅಭಿಪ್ರಾಯವಿರುತ್ತದೆ; ಹೆಣ್ಣಿನ ದೃಷ್ಟಿಯ ಆ ಅಭಿಪ್ರಾಯವನ್ನು ಸಮಾಜವು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುವುದು ನಮ್ಮ ಸ್ತ್ರೀ ಲೇಖಕರು ಕೈಗೊಳ್ಳಬೇಕಾದ ಕೆಲಸವಾಗಿದೆ.

ಈ ಕಾರಣದಿಂದ ನಾನು ನಮ್ಮ ಸೋದರಿಯರು ಬರೆದಿರುವ ಈ ಕತೆಗಳಿಗೆ ಸಾಹಿತ್ಯದಲ್ಲಿ ಬಹುಮುಖ್ಯವಾದ ಒಂದು ಸ್ಥಾನವನ್ನು ಕೊಡುತ್ತೇನೆ. "ಇದೇನು? ಸಾಹಿತ್ಯ ಅಭಿಪ್ರಾಯಗಳನ್ನು ಪ್ರಕಟಿಸಲು ಹೊರಡಬೇಕೆ? ಕಲೆಗಾಗಿ ಕಲೆ, ಸಾಹಿತ್ಯಕ್ಕಾಗಿಯೇ ಸಾಹಿತ್ಯ,

Art for Art's sake, ಎಂಬ ಉನ್ನತ ಧ್ಯೇಯ ನಮಗೆ ಬೇಡವೆ?" ಎಂದು ಕಲೋಪಾಸಕರು ಕೇಳಬಹುದು. ಸ್ತ್ರೀಯ ದೃಷ್ಟಿಯಿಂದ ಯಾವುದು ಅಪೇಕ್ಷಣೀಯ ಎಂದು ಸೂಚಿಸುವುದು ಸಾಹಿತ್ಯದ ಕಾರ್ಯ ಎಂಬ ಮಾತು ಕಲೆಗಾಗಿ ಕಲೆ ಎಂಬ ಮಾತಿಗೆ ವಿರೋಧಿಯಾಗುವುದಿಲ್ಲ ಎನ್ನುವುದು ಈ ಆಕ್ಷೇಪಕ್ಕೆ ಉತ್ತರ. ಸಾಹಿತ್ಯವೆನ್ನುವುದು ಅಪ್ಪನ ಹೆಣ ಬಾಗಿಲಲ್ಲಿ ಬಿದ್ದಿದ್ದರೂ ಒಳಗೆ ನಿಶ್ಚಿಂತೆಯಿಂದ ಆಡುವ ಗಂಜೀಫು ಆಟವಲ್ಲ; ಅದು ಬಾಳಿಗೆ ಸಂಬಂಧಿಸಿಯೇ ಇರುತ್ತದೆ. ಯಾವ ಕೃತಿಯೇ ಆಗಲಿ ಉನ್ನತವಾಗಬೇಕಾದರೆ ಕಲೆಯಾಗಬೇಕೆಂದೇ ಹೊರಡಬೇಕು. ಹಾಗೆ ಹೊರಟು ಅದು ತನ್ನ ಗುರಿಯನ್ನು ಸಾಧಿಸಿದಾಗ ಉತ್ತಮ ಕಲೆಯಾಗಿರುವುದಲ್ಲದೆ, ಲೇಖಕನ ಅನುಭವವನ್ನೂ ಅದರ ಫಲವಾದ ಅಭಿಪ್ರಾಯವನ್ನೂ ವ್ಯಕ್ತಪಡಿಸುತ್ತದೆ. ರಸವಾಗಬೇಕೆಂದು ಹೊರಟ ದ್ರಾಕ್ಷೆ ಆಹಾರವೂ ಆಗುವಂತೆ, ಸುಂದರವಾಗಬೇಕೆಂದು ಹೊರಟ ಕಲೆ ಸತ್ಯವನ್ನೂ ಸಾರುತ್ತದೆ. ಸತ್ಯವಾದ ವಿಷಯವನ್ನು ಸುಂದರವಾಗಿ ಹೇಳುವೆನೆನ್ನುವುದೇ ಲೇಖಕನ ಧ್ಯೇಯ. ಜನದ ಏಳಿಗೆಗೆ ಸಾಧಕವಾಗುವ ತಿಳಿವಳಿಕೆಯನ್ನು ಒದಗಿಸುವುದೆಂದ ಮಾತ್ರಕ್ಕೆ ಯಾವ ಲೇಖನವೂ ಕಲೆ ಎಂಬ ಪಟ್ಟದ ಬಾಸಿಂಗವನ್ನು ಕಳೆದುಕೊಳ್ಳ ಬೇಕಾದದ್ದಿಲ್ಲ.

ಈ ಪುಸ್ತಕದಲ್ಲಿರುವ ಕತೆಗಳು ಈ ಮಾತಿಗೆ ನಿದರ್ಶನವನ್ನು ಒದಗಿಸುತ್ತವೆ. ನಾನು ಈ ಕತೆಗಳನ್ನು ಮೊದಲಿನಿಂದ ಕೊನೆಯ ವರೆಗೂ ಓದಿದ್ದೇನೆ; ಓದಿ ಸಂತೋಷಪಟ್ಟಿದ್ದೇನೆ; ಹಾಗೆಯೇ ನಮ್ಮ ಹೆಣ್ಣುಮಕ್ಕಳ ಬಾಳುವೆಯನ್ನು ಕುರಿತ ನಾಲ್ಕಾರು ವಿಷಯವನ್ನು ಗ್ರಹಿಸಿ ದೇನೆ, ಅಥವಾ ನೆನೆದುಕೊಂಡಿದೇನೆ. ಈ ಕತೆಗಳಲ್ಲಿ, ವೇಶ್ಯೆ ಎಂದ ಮಾತ್ರಕ್ಕೆ ಒಂದು ಜೀವ ಹೆಣ್ಣಲ್ಲದೆ ಹೋಗುವುದಿಲ್ಲ ಎನ್ನುವುದು ಎರಡು ಕತೆಗಳಲ್ಲಿ ಬರುತ್ತದೆ. ಹೊರಟು ಹೋಗಿದ್ದ ಗಂಡನು ಹಿಂದಕ್ಕೆ ಬರುವುದು ಎರಡು ಕತೆಯಲ್ಲಿ; ಹಾಗೆ ಹೊರಟು ಹೋಗಿದ್ದ ಒಬ್ಬನನ್ನು ಕುರಿತ ಟೀಕೆ ಇನ್ನೊಂದರಲ್ಲಿ; ಒಡವೆಯ ಆಸೆ ಸೀರೆಯ ಆಸೆಯಿಂದ ಬರುವ ತೊಡಕು ಎರಡು ಕತೆಯಲ್ಲಿ; ಮದುವೆಯಾದ ಅಥವಾ ಆಗದ

ಪುರುಷನನ್ನು ಕಳೆದುಕೊಳ್ಳುವ ದಾರುಣ ಯಾತನೆ ಎರಡು ಕತೆಯಲ್ಲಿ ; ಜೊತೆಯ ಹುಡುಗಿಗಾಗಿ ಆಕೆಯ ಸಂಗಾತಿ ಮಾಡಿದ ತ್ಯಾಗ, ದೂರ ದೇಶದಲ್ಲಿರುತ್ತ ನಾಡನ್ನು ನೆನೆಯುವ ದೇಶಪ್ರೇಮ, ಇನ್ನೆರಡು ಕತೆಯ ವಿಷಯ. ಹೀಗೆ ಇಲ್ಲಿ ನಮ್ಮ ನಾಡಿನ ಹೆಣ್ಣುಮಕ್ಕಳ ಮನಸ್ಸು ಯಾವ ವಿಷಯಗಳನ್ನು ಕುರಿತು ಯಾವ ರೀತಿಯಲ್ಲಿ ಹರಿಯುತ್ತಿದೆ ಎನ್ನುವುದು ಕಾಣುತ್ತದೆ. ಒಡವೆ ದೊಡ್ಡದಲ್ಲ, ವಸ್ತ್ರ ದೊಡ್ಡದಲ್ಲ, ನಡತೆ ದೊಡ್ಡದು ಎನ್ನುವುದು ; ಹೆಣ್ಣಾದ ಜೀವ ಕೆಲವಕ್ಕೆ ಎಷ್ಟಿದ್ದರೆ ಅಷ್ಟನ್ನು ಊಟಮಾಡುತ್ತ ಗಂಡನೊಬ್ಬನನ್ನು ನೋಡಿಕೊಳ್ಳುವುದು ಮನೆಯೊಂದನ್ನು ನೋಡಿಕೊಳ್ಳುವುದು ಇದು ಬೇಕಾಗುತ್ತದೆ ಎನ್ನುವುದು; ಪರೀಕ್ಷೆಗೆ ಕುಳಿತು ಆಗುವ ಪ್ಯಾಸಿಗಿಂತ ಪರೀಕ್ಷೆಗೆ ಹೋಗದೆ ಆಗುವ ದೊಡ್ಡದೊಂದು ಪ್ಯಾಸು ಜೀವನದಲ್ಲಿದೆ ಎನ್ನುವುದು ; ಸಮಾಜವು ಸ್ತ್ರೀಯ ದೃಷ್ಟಿಯಿಂದ ಈಗಿನ ವ್ಯವಸ್ಥೆ ಹಲವನ್ನು ಸರಿಪಡಿಸಬೇಕಾಗಿದೆ ಎನ್ನುವುದು ; ಈ ಎಲ್ಲ ವಿಷಯ ಈ ಕತೆಗಳಲ್ಲಿ ಕಾಣುತ್ತವೆ. ಈ ಅಭಿಪ್ರಾಯಗಳಾದರೂ ಅಭಿಪ್ರಾಯಗಳೆಂದು ಒಂದು ಉಪನ್ಯಾಸದಲ್ಲಿ ಬಂದಿದ್ದರೆ ನಮ್ಮ ಮನಸ್ಸನ್ನು ಮುಟ್ಟುತ್ತಿದ್ದದಕ್ಕಿಂತ ಚೆನ್ನಾದ ಒಂದು ರೀತಿಯಲ್ಲಿ ನಮಗೆ ಇಲ್ಲಿ ಮುಂದಟ್ಟಾಗುತ್ತವೆ. ಉಪನ್ಯಾಸಕರಾದರೆ ಅವರ ತಿಳಿವಳಿಕೆ ಎಷ್ಟು ಎಂದು ಕೇಳಿ ಅವರ ಶಕ್ತಿಯ ವಿಷಯದಲ್ಲಿ ಸಂದೇಹ ಪಡಬಹುದಾಗಿದ್ದವರು ಕೂಡ ಈ ಕತೆಗಳನ್ನು ಓದುತ್ತ ಅವು ಜೀವನವನ್ನು ಸರಿಯಾಗಿ ಚಿತ್ರಿಸಿವೆ ಎಂಬುದನ್ನು ಕಂಡು ಅವುಗಳ ಭಾವವನ್ನು ನಿರಾಂತಕವಾಗಿ ಒಪ್ಪಿಕೊಳ್ಳುತ್ತಾರೆ. ಹೇಳುವವರಿಗಾದರೂ ಇದರಲ್ಲಿ ಒಂದು ಸೌಕರ್ಯ. ನನಗೆ ಹೀಗಾಯಿತು ಅಥವಾ ನಾನು ಕಂಡ ಒಬ್ಬರಿಗೆ ಹೀಗಾಯಿತು ಎಂಬಲ್ಲಿ ಯಾರಿಗಾದರೂ ಸಂಕೋಚವಿರುತ್ತದೆ. ಯಾರದೋ ಕತೆ ಬರೆಯುತ್ತ ಅವರಿಗೆ ಹೀಗಾಯಿತು ಎಂದೂ ಅದನ್ನು ಯಾರೋ ನೋಡಿದರು ಎಂದೂ ಬರೆಯುವುದಕ್ಕೆ ಯಾರೂ ಸಂಕೋಚ ಪಡಬೇಕಾದದ್ದಿಲ್ಲ. ಅಲ್ಲದೆ ಲೇಖಕನು ತನ್ನ ತಿಳಿವಳಿಕೆಯೇನೆಂದು ಹೇಳುವುದಕ್ಕಿಂತ ಇರುವ ವಿಷಯ ಇದು ಎಂದು ಹೇಳಿ ಅದರಿಂದ ತಿಳಿಯ ಬೇಕಾದದ್ದನ್ನು ಓದುವವರಿಗೆ ಬಿಟ್ಟರೆ ಪ್ರಯೋಜನ ಹೆಚ್ಚು.

ಈ ಕತೆಗಳು ಈ ದಾರಿಯಿಂದ ನಮ್ಮ ಸಮಾಜದ ಏಳ್ಗೆಗೆ ಸಹಾಯ ಮಾಡತಕ್ಕವಾಗಿವೆ.

ಇವುಗಳ ಕಲೆಯನ್ನಾದರೂ ನಾನು ಮೆಚ್ಚಿದೇನೆ. ಮುಖ್ಯವಾಗಿ ಇಲ್ಲಿಯ ಕಲೆಗಾರಿಕೆ ಕತೆ ಹೇಳುವವರ ಮನಸ್ಸಿನ ಸರಳತೆಯಿಂದ ಬಂದಿರ ತಕ್ಕದ್ದು. ಗ್ರಂಥ ಬರೆಯುವುದೆಂದರೆ ಮಾತುಗಳನ್ನು ಗಂಟುಹಾಕು ವುದು ಎನ್ನುವುದು ಒಂದು ರೀತಿಯ ಸಾಹಿತ್ಯ ವಿಜ್ಞಾನ. ಎಂದಿದ್ದರೂ ಅದು ತಪ್ಪು ತಿಳಿವಳಿಕೆಯೇ. ಸರಸ್ವತಿಯ ಕೃಪೆಯಿಂದ ಅದು ಈಗಿನ ಕಾಲಕ್ಕೆ ತೀರ ತಪ್ಪಿದೆಯೆಂದು ಹೇಳಬಹುದು. ಹೇಳುವ ವಿಷಯವನ್ನು ಆದಷ್ಟು ಸಹಜವಾಗಿ, ಹಾಗೆಯೇ ಚೆನ್ನಾಗಿ, ಹೇಳುವುದು ಸಾಹಿತ್ಯದ ರಾಜಮಾರ್ಗ ಎಂಬ ಭಾವನೆ ಈಗ ವಾಡಿಕೆಗೆ ಬಂದಿದೆ. ಈ ಪುಸ್ತಕದ ಕತೆಗಾತಿ ಸೋದರಿಯರು ಎಲ್ಲರೂ ಈ ರಾಜಮಾರ್ಗದಲ್ಲಿ ನಡೆದಿದಾರೆ. ಪೂರ್ವದಿಂದ ಕತೆಹೇಳುವುದರಲ್ಲಿ ಪ್ರಸಿದ್ಧರಾದವರು ಪ್ರಾಯಶಃ ಇದೇ ದಾರಿಯನ್ನು ಹಿಡಿದರು. ನೈಮಿಶಾರಣ್ಯದ ತಪಸ್ವಿ ಜನರು ಉಳಿದ ಕೆಲಸಗಳನ್ನು ಬೇಗ ಮುಗಿಸಿಕೊಂಡು ಬಂದು ಕೇಳುವಂತೆ ಕತೆ ಹೇಳಿದ ಸೂತ ಪೌರಾಣಿಕನು ತನ್ನ ಕಥನದಲ್ಲಿ ಅನುಸರಿಸಿದ್ದು ಈ ದಾರಿ. ವಾಲ್ಮೀಕಿ ಮೊದಲಾದವರು ಆ ಮೊದಲು ನಡೆದು ತೋರಿಸಿ ಅದು ಸೂತನ ಕಾಲಕ್ಕೆ ರಾಜಮಾರ್ಗವಾಗಿತ್ತು. ಹೆಣ್ಣು ಮಕ್ಕಳಲ್ಲೂ ಈ ದಾರಿಯಲ್ಲಿ ನಡೆದು ಹೆಸರುಪಡೆದವರು ಉಂಟು. ಹಟಮಾರಿ ಸುಲ್ತಾನನಿಗೆ ಮೂರು ವರ್ಷ ಕತೆ ಹೇಳಿ ಜೀವನವನ್ನು ಉಳಿಸಿಕೊಂಡು ರಾಣಿಯಾದ ಷಹರಜಾದೆ ತನ್ನ ಸಾವಿರ ದಿನದ ಕತೆಯ ಮಾಲೆಯಲ್ಲಿ ಅನುಸರಿಸಿದ್ದು ಈ ದಾರಿ ಯನ್ನೇ. ಹೆಣ್ಣಾಗಲಿ ಗಂಡಾಗಲಿ ಈ ದಾರಿಯಾವುದೆಂದು ಬೇರೆ ಕೇಳಬೇಕಾದದ್ದಿಲ್ಲ. ಮೊಮ್ಮಕ್ಕಳು ಹೂಂಗುಟ್ಟುತ್ತ ನಿದ್ದೆ ಬಿಟ್ಟು ಕೇಳು ವಂತೆ ಕತೆ ಹೇಳಿದ ಅಜ್ಜಿಯಿಂದ ನಾವೆಲ್ಲ ಇದರ ಜಾಡನ್ನು ಎಳೆತನ ದಲ್ಲೇ ತಿಳಿಯುತ್ತೇವೆ. ಇದಕ್ಕೆ ಮೂರು ಅಂಗ; ವಿಷಯ ಏನೆಂದು ತಿಳಿಯುವುದು, ಅದರಲ್ಲಿ ರಸ ಎಲ್ಲಿದೆ ಎಂದು ಗ್ರಹಿಸುವುದು, ಅದನ್ನು ಇನ್ನೊಂದು ಮನಸ್ಸಿಗೆ ಮುಟ್ಟುವಂತೆ ಸುಮ್ಮನೆ ಹೇಳುವುದು. ಈ ಪುಸ್ತಕದಲ್ಲಿಯ ಕತೆ ಸ್ವತಂತ್ರವಾದ ಎಲ್ಲದರಲ್ಲಿಯೂ ಆಯಾ ಕತೆಗಾತಿ

ಕಂಡ ಒಂದು ವಿಷಯ ಈ ರೀತಿಯಲ್ಲಿ ಪ್ರತಿಪಾದಿತವಾಗಿದೆ. ಅದರಲ್ಲಿ ಕೆಲವು ಭಾಗ ಅವರವರೇ ಕಂಡ ವಿಷಯ. ಅದು ನನಗೆ ತಿಳಿಯುತ್ತಿರುವುದು ಈಗಲೇ ಮೊದಲ ಸಲ. ಅದು ಯಾವುದು ಎಂದು ಹೇಳುತ್ತ ನಾನು ಈ ಮುನ್ನುಡಿಯನ್ನು ಲಂಬಿಸುವುದಿಲ್ಲ. ಓದುವವರಿಗೆ ಇದು ಯಾವುದೆಂದು ತಾನೇ ತಿಳಿಯುತ್ತದೆ. ಭಾಷಾಂತರದ ಕತೆಗಳಲ್ಲೂ ಮೂಲದ ವಿಷಯವನ್ನು ಕನ್ನಡಕ್ಕೆ ಹೊಂದಿಸಿ ಕೊಂಡಿರುವುದರಲ್ಲಿ ಕೌಶಲ್ಯ ಕಾಣುತ್ತದೆ.

ಈ ಎಲ್ಲ ಕಾರಣಗಳಿಂದ ನಾನು ಈ ಕತೆಗಳನ್ನು ಸಂತೋಷದಿಂದ ಬರಮಾಡಿಕೊಂಡಿದೇನೆ ಎಂದು ನಾನು ಪುನಃ ಹೇಳುತ್ತೇನೆ. ಕತೆಗಾತಿಯರಲ್ಲಿ ಹಲವರ ವಿಷಯ ಸ್ವಲ್ಪವನ್ನು ನಾನು ಬಲ್ಲೆ. ಕೆಲವರು ನನ್ನ ತಾಯ ತೌರೂರಿನವರು. ನಾನು ಮಗುವಾಗಿದ್ದಾಗ ತಾಯಿ ಹೇಳಿದ ಕತೆಯನ್ನು ಕೇಳಿ ನಲಿದೆನು; ಈ ಮಧ್ಯವಯಸ್ಸಿನಲ್ಲಿ ಅದೇ ಊರಿನ ಈ ಹೆಣ್ಣು ಮಕ್ಕಳು ಹೇಳುತ್ತಿರುವ ಕತೆಗಳನ್ನು ಓದಿ ನಲಿದಿದೇನೆ, ಮನ ಮರುಗಿದೇನೆ. ಕೆಲವರು ನನ್ನ ಮಿತ್ರರ ಕುಮಾರ್ತಿಯರು, ಗೃಹಣಿಯರು; ಅವರು ಈ ಕಾರ್ಯದಲ್ಲಿ ತೊಡಗಿರುವುದರಿಂದ ಹೆಮ್ಮೆ ಪಟ್ಟಿದೇನೆ. ಎಲ್ಲರೂ ನನ್ನ ತಾಯ್ನಾಡಿನ ಪವಿತ್ರಗರ್ಭದ ಮಕ್ಕಳು, ನನ್ನ ಸೋದರಿಯರು; ಇದನ್ನು ನೆನೆದು ಆನಂದಿಸಿದೇನೆ. ಇವರು ಹೀಗೆಯೇ ತಮ್ಮ ಕೆಲಸದಲ್ಲಿ ಮುಂದುವರಿಯಲೆಂದೂ ನಮ್ಮ ನಾಡು ನಮ್ಮ ಯುಗ ಹಿಂದಿನ ಕಾಲದಂತೆ ಬೇರೆಯ ದೇಶಗಳಂತೆ ಗಾರ್ಗಿ, ಮೈತ್ರೇಯಿಯರನ್ನು, ಷಹಿರಜಾದೆ ಜಾರ್ಜ್ ಎಲಿಯಟರನ್ನು, ಅವ್ವೆ ಕಂತಿಯರನ್ನು ಇವರಲ್ಲಿ ಕಾಣಲೆಂದೂ ಹಾರೈಸುತ್ತೇನೆ. ಈ ನನ್ನ ಸೋದರಿಯರ ಧ್ಯೇಯ ಹಿರಿದಾಗುತ್ತಲೇ ಇರಲಿ; ಅದನ್ನು ಸಾಧಿಸುವುದರಲ್ಲಿ ಇವರು ಸೋತೆವೆನ್ನದೆ ನಡೆಯಲಿ; ಇವರು ಹಚ್ಚಿರುವ ಈ ರಂಗವಲ್ಲಿ ಸರಸ್ವತಿಯ ಭದ್ರಗೇಹದ ಕೈಸಾಲೆಯನ್ನು ಬರುವ ಎಲ್ಲ ಕಾಲಕ್ಕೂ ಬೆಳಗುತ್ತ ನಿಲ್ಲಲಿ.

1937

ಶ್ರೀ ದ. ರಾ. ಬೇಂದ್ರೆಯವರ

# “ನಾದಲೀಲೆ”

ಶಿವಮುಗ್ಗಿಯ ಕರ್ಣಾಟಕ ಸಂಘದ ನನ್ನ ಮಿತ್ರರು ತಾವು ಪ್ರಕಟಿಸ ಲಿರುವ ಶ್ರೀ ಬೇಂದ್ರೆಯವರ ಈ ಕವನ ಸಂಗ್ರಹಕ್ಕೆ ಒಂದು ಮುನ್ನುಡಿ ಯನ್ನು ಬರೆಯಬೇಕೆಂದು ನನ್ನನ್ನು ಕೇಳಿದಾರೆ. ನನ್ನ ಪ್ರಿಯಮಿತ್ರರಾದ ಕವಿ ಈ ವಿಷಯದಲ್ಲಿ ತಮ್ಮ ಸಮ್ಮತಿಯನ್ನು ತಿಳಿಸಿದಾರೆ. ಈ ಕಾರ್ಯ ಬಹು ಗೌರವವನ್ನು ತರತಕ್ಕದ್ದೆಂದು ನಾನು ಬಲ್ಲೆನು. ಹಾಗೆಯೇ ಅದು ಸುಖವನ್ನು ತರತಕ್ಕದ್ದೂ ಆಗಿದೆ. ಆದ್ದರಿಂದ ನಾನು ಇದಕ್ಕೆ ಬಹು ಸಂತೋಷದಿಂದ ಒಪ್ಪಿದೇನೆ.

ಈ ಸಂದರ್ಭದಲ್ಲಿ ಮೊದಲು ಹೇಳಬೇಕಾದ ಮಾತು ಬೇಂದ್ರೆ ಯವರು ನಿಜವಾಗಿ ಕವಿ ಎನ್ನುವುದು: ಎಂದರೆ ಒಬ್ಬನ ಕೃತಿಯನ್ನು ಕಾವ್ಯವೆಂದು ಮಾಡುವ ಗುಣಗಳಲ್ಲಿ ಮುಖ್ಯ ಗುಣ ಅಥವಾ ಜೀವಗುಣ ಯಾವುದೋ ಅದು ಇವರ ಕೃತಿಯಲ್ಲಿದೆ ಎನ್ನುವುದು. ಒಂದು ಕೃತಿ ಯನ್ನು ಕಾವ್ಯವೆನಿಸುವ ಲಕ್ಷಣಗಳು ಹಲವು. ಕೆಲವು ವೇಳೆ ಅವು ಭಾವದ ಸೊಗಸೆಂದು, ಕೆಲವು ವೇಳೆ ಮಾತಿನ ಸೊಗಸೆಂದು, ಕೆಲವು ವೇಳೆ ರೀತಿಯ ಸೊಗಸೆಂದು ಕಾಣುತ್ತವೆ. ಕಾವ್ಯಲಕ್ಷಣಗಳೆಲ್ಲ ಈ ಮೂರು ಬಗೆಯಲ್ಲಿ ಅಡಕವಾಗುತ್ತವೆ. ಆದರೆ ಈ ಮೂರು ಬಗೆಯ ಸೊಗಸೂ ಒಂದುಗೂಡಿ ಮೊತ್ತವಾಗಿ ಕಾಣುವುದು ಕಾವ್ಯದ ಜೀವಗುಣ ಇರುವಲ್ಲಿ ಮಾತ್ರ. ಕವಿಯ ಮನೋಧರ್ಮ ಎಷ್ಟು ತೀವ್ರವಾಗಿ ಕಾವ್ಯ ಜಾತಿಯ ದಾದರೆ ಕಾವ್ಯ ಅಷ್ಟು ಸ್ಪಷ್ಟವಾಗಿ ಈ ಲಕ್ಷಣಗಳನ್ನು ತೋರಿಸುತ್ತದೆ.

ಆಡುವ ಮಾತನ್ನೆಲ್ಲ ಕಾವ್ಯಮಾಡುವ ಮನೋಧರ್ಮ ಶ್ರೀ ಬೇಂದ್ರೆ ಯವರಲ್ಲಿದೆ; ಅದು ಸಹಜವೂ ತೀವ್ರವೂ ಬಹುಮುಖವೂ ಆಗಿದೆ. ನಾನು ಬೇಂದ್ರೆಯವರ ಕೃತಿ ಒಂದಕ್ಕೆ ಮನಸೋತದ್ದು ಈಗ್ಗೆ ಬಹು ವರ್ಷದ ಹಿಂದಿನ ಮಾತು. ಆಗ್ಗೆ ನಾನು ಇವರನ್ನು ನೋಡಿರಲಿಲ್ಲ.

ಧಾರವಾಡದ "ಸ್ವಧರ್ಮ" ಪತ್ರಿಕೆಯಲ್ಲಿ ಪ್ರಕಟವಾದ ಆ ಪದ್ಯ "ಮೂಡಲ ಮನೆಯಾ ಮುತ್ತಿನ ನೀರಿನ ಎರಕsವ ಹೊಯ್ದಾ" ಎಂದು ಆರಂಭವಾಗಿ ಒಂದು ಉದಯವನ್ನು ವರ್ಣಿಸುತ್ತಿತ್ತು. ಅದರಲ್ಲಿ ಕಂಡ ಊಹೆ ವಿಲಕ್ಷಣವಾಗಿತ್ತು. ಎಷ್ಟೋ ಕವಿಗಳು ಈ ಮೊದಲೇ ಮಾಡಿರುವ ವರ್ಣನೆಯಲ್ಲಿ ಈ ಕವಿ ಒಂದು ಚೆಲುವನ್ನು ತಂದಿದ್ದನು. ಕೊನೆಗೆ ಇದ್ದ ಮುದ್ರಿಕೆಯಿಂದ ಕವಿಯ ಪರಿಚಯ ವ್ಯಕ್ತವಾಗಲಿಲ್ಲ. ಆದರೆ ಈ ಕವಿಯ ದೃಷ್ಟಿಯೇ ಬೇರೆಯೆನ್ನುವುದು ಆ ಪದ್ಯದಲ್ಲಿ ಕಾಣುತ್ತಿತ್ತು. ಉದಯದಲ್ಲಿ ಹಕ್ಕಿಗಳು ಹಾಡುವುದನ್ನು "ಗಿಡಗೆಂಟೆಯ ಕೊರಳಿನಿಂದ ಸ್ವರ ಹೊರಟಿದೆ" ಎಂದು ಇವರು ವರ್ಣಿಸಿದ್ದರು. ಹಾಡುವ ಹಕ್ಕಿ ಗಿಡಗೆಂಟೆಯ ಕೊರಳು. ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರ ಇಲ್ಲ, ಪ್ರಕೃತಿಯನ್ನು ಕುರಿತ ವಿಲಕ್ಷಣ ಭಾವನೆಯಿದೆ. ವರ್ಣನೆಯ ಚಾತುರ್ಯವೆಂದು ಕಾಣುವ ಉಕ್ತಿಯ ಈ ಭಂಗಿ ಭಾವನೆಯ ಫಲ. ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದ ಬೇರು. ಇದಾದ ಕೆಲವು ವರ್ಷದ ಮೇಲೆ ಆ ಮುದ್ರಿಕೆಯ ಕವಿ ಶ್ರೀ ಬೇಂದ್ರೆಯವರು ಎಂದು ನನಗೆ ತಿಳಿಯಿತು. ಆ ತರುಣದಲ್ಲಿ ಅವರನ್ನು ಕಂಡಾಗ ನಾನು ಆ ಪದ್ಯವನ್ನು ಹೊಗಳಿ ಅವರಿಗೆ ನನ್ನ ಸಂತೋಷವನ್ನು ಸೂಚಿಸಿದೆನು. ಆಮೇಲೆ ಒಂದೆರಡು ವರ್ಷದಲ್ಲಿ ಇವರನ್ನು ಬೆಳಗಾವಿಯ ಸಾಹಿತ್ಯ ಸಮ್ಮೇಳನದಲ್ಲಿ ಮತ್ತೆ ಕಂಡೆನು. ಆ ಸಮ್ಮೇಳನದಲ್ಲಿ ಬೇಂದ್ರೆಯವರು "ಹಕ್ಕಿ ಹಾರುತಿದೆ ನೋಡಿದಿರಾ" ಎಂಬ ತಮ್ಮ ಕವನವನ್ನು ಓದಿದರು. ಅದನ್ನು ಕೇಳಿದ ಜನ ಎಂಥ ಆನಂದವನ್ನು ಅನುಭವಿಸಿದರೆಂದು ಈಗ ಹೇಳುವುದು ಸಾಧ್ಯವಲ್ಲ. ಆ ಕವಿತೆಯ ಎಲ್ಲ ಅರ್ಥವನ್ನೂ ಅರಿಯುವುದಕ್ಕೆ ಆ ಒಂದು ಓದು ಸಾಕಲ್ಲವೇ ಅಲ್ಲ; ಆದರೆ ಆ ಒಂದು ಓದಿನಿಂದ ಕಂಡಷ್ಟು ಕಾವ್ಯ ಗುಣದಿಂದಲೇ ಸಾವಿರ ಜನದ ಸಭೆ ಚಕಿತವಾಯಿತು. ಕಾವ್ಯ ಪ್ರಪಂಚದಲ್ಲಿ ಬಳಕೆಯುಳ್ಳವರು ಈ ಕವಿಯ ಶಕ್ತಿ ಇವನದೇ ಆದ ಹೊಸ ಒಂದು ಶಕ್ತಿ ಎಂದು ಮನಗಂಡರು. ಮಾರನೆಯ ವರ್ಷ

ಮೈಸೂರಿನಲ್ಲಿ ನಡೆದ ಸಮ್ಮೇಳನಕ್ಕೆ ಬಂದ ಸಂದರ್ಭದಲ್ಲಿ ಬೇಂದ್ರೆ ಯವರು ಮೈಸೂರು, ಬೆಂಗಳೂರು ಮತ್ತು ಮೈಸೂರಿನ ಬೇರೆಬೇರೆ ದೊಡ್ಡ ಊರುಗಳಲ್ಲಿ ತಮ್ಮ ಕೃತಿಗಳಿಂದ ಜನರನ್ನು ಮುಗ್ಧರನ್ನಾಗಿ ಮಾಡಿದರು. ಈಚೆಗೆ ಇವರ ಕೀರ್ತಿ ಹೇಗೆ ಬೆಳೆದಿದೆಯೆಂದು ನಾಡೆಲ್ಲ ಬಲ್ಲದು. ಇವರ ಕೃತಿಗಳಲ್ಲಿ ಅನೇಕ ನಮ್ಮ ಜನರಿಗೆ ನಿತ್ಯದ ಬಳಕೆಯ ಕವಿತೆಗಳಾಗಿವೆ. ಈ ಕಾವ್ಯಲತೆ ಇನ್ನೂ ಬೆಳೆಯುತ್ತಿದೆ. ಇದರಿಂದ ಇನ್ನೆಷ್ಟೆಷ್ಟು ಕವಿತೆ ಬರಲೆಂದು ಆದರ ದೇವರು ಕರುಣಿಸಿರುವನೋ ಅದು ನಮಗೆ ತಿಳಿಯದು. ಆದರೆ ಈಗ ಆಗಿರುವಷ್ಟು ಕಾರ್ಯದಿಂದಲೇ ಶ್ರೀ ಬೇಂದ್ರೆಯವರು ಕನ್ನಡದ ಕಾವ್ಯಸಮುದಾಯಕ್ಕೆ ಅನೇಕ ಅತ್ಯುತ್ತಮ ಕವಿತೆಗಳನ್ನು ಸೇರಿಸಿದಾರೆ. ಹೀಗೆ ಮಾಡುವುದರಲ್ಲಿ ಇವರು ಪ್ರಪಂಚದ ಕಾವ ಸಂಪತ್ತನ್ನೇ ಬೆಳೆಸಿದಾರೆ.

ಈ ಕೃತಿಗಳ ವಿಷಯ ಬಹುವಿಧವಾದುದು. 'ಮೂಡಲ ಮನೆಯಾ ಮುತ್ತಿನ ನೀರನ ಎರಕಸವಹೊಯ್ದಾ' ಎಂಬ ರೀತಿಯ ಪ್ರಕೃತಿ ವರ್ಣನೆಯ ಕವಿತೆ; 'ಮುಗಿಲ ಮೋರೆಗೆ ರಾಗರತಿಯ ರಂಗು ಮೂಡಿತ್ತು' ಎಂಬ ರೀತಿಯ ಹೆಣ್ಣು ಗಂಡಿನ ಒಲವನ್ನು ಕುರಿತವು; 'ಮೂವತ್ತು ಮೂರು ಕೋಟಿ' ಮುಂತಾದ ದೇಶ ಪ್ರೇಮದ ಗೀತಗಳು; 'ಚಿಂತೆ', 'ಹೂ', 'ಚಳಿಯಾಕೆ' ಈ ರೀತಿಯ ಊಹೆಯ ವಿಲಾಸದಿಂದ ಉದ್ಭವಿಸಿರುವ ಪದ್ಯಗಳು; 'ನರಬಲಿ', 'ಹೆಣದ ಹಿಂದೆ' ಮುಂತಾಗಿ ಸಮಾಜದ ಸ್ಥಿತಿಗತಿಯನ್ನು ನೋಡಿ ಕವಿಗೆ ತೋರುವ ಭಾವನೆಯನ್ನು ಕುರಿತವು; 'ಮಲ್ಲಾಡದ ಗಿಣಿ' ಮುಂತಾಗಿ ಕವಿ ತನ್ನ ಬಾಳುವೆಯನ್ನು ಕುರಿತು ಮಾಡುವ ಯೋಚನೆಗೆ ಅನ್ಯಾಪದೇಶದ ಆಕಾರವನ್ನು ಕೊಡುವ ಸಾಮತಿಗಳು; 'ಮನದನ್ನೆ' ಮುಂತಾಗಿ ಸಂಸಾರದ ಸರ್ವಸಾಮಾನ್ಯವಾದ ಅನುಭವಗಳಿಗೆ ಆಕಾರವನ್ನು ಕೊಡುವ ಗೀತಗಳು; ಒಂದು ಭಾವನೆಯನ್ನು ಹಿಡಿದು ಬಗೆಬಗೆಯಾಗಿ ಎಳೆ ಎಳೆಯುವ 'ಕುಣಿಯೋಣ ಬಾರ' ಎಂಬಂಥ ಗೀತಗಳು; 'ಹಕ್ಕಿಹಾರುತಿದೆ', 'ಭೃಂಗದಬೆನ್ನೇರಿಬಂತು' 'ಸಚ್ಚಿದಾನಂದ' ಮುಂತಾಗಿ ಬುದ್ಧಿಯ ಅಥವಾ ಆತ್ಮದ ಅರಿವಿಗೆ ಮಾತನ್ನು ಕೊಡುವ ಗೀತ; ಅವರ್ಣನೀಯ ಅರ್ವಾಚೀನ ಸೌಂದರ್ಯ'

'ಕರಿಮರಿ ನಾಯಿ' ಎಂಬಂಥ ವಿಕಲ್ಪವಾಗಿ ಬರುವ ವಿಡಂಬನ ಕಾವ್ಯಗಳು; ಹೀಗೆ ಬಹುವಿಧವಾದ ಕೃತಿ ಇವರಲ್ಲಿ ಇವೆ. ಈ ಬಗೆ ಬಗೆಯ ಕೃತಿಯಲ್ಲಿ ಕವಿ ಅನುಸರಿಸಿರುವ ಪದ್ಧತಿ ಅನನ್ಯ ಸಾಧಾರಣವಾದದ್ದು. ಉದಯದ ವರ್ಣನೆಯ 'ಗಿಡಗೆಂಟೆಯ ಕೊರಳು' ಎಂಬ ಮಾತಿನಿಂದಲೇ ಇದನ್ನು ಉದಾಹರಿಸಬಹುದು. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ, ಇವು ಬೇರೆ ಬೇರೆ ಎಂದು ತಿಳಿದವನು ಅವನ್ನು ಬಿಡಿಸಿ ಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕು ಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ ತಿಳಿಯುವವನು ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೈಯನ್ನು ಅರಿತವನು ಬೇಂದ್ರೆಯವರು ಹೇಳಿರುವಂತೆ 'ಗಿಡಗೆಂಟೆಯ ಕೊರಳು' ಆನಂದದಿಂದ ಹಾಡಿತು ಎನ್ನುತ್ತಾನೆ. ಬಾಳೆಲ್ಲ ಒಂದು ಎನ್ನುವುದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಇದು ಬರುವ ರೀತಿಯಲ್ಲಿ ಕವಿಗೆ ತನ್ನ ಮಾತು ಎಂಥ ಸಿದ್ಧಿಯ ಮಾತು ಎಂದು ತಿಳಿದಿದೆಯೇ ಇಲ್ಲವೇ ಎನ್ನುವಂಥ ಸಹಜತೆ ಇರುತ್ತದೆ. ಒಲುಮೆಯನ್ನು ಕುರಿತ ಗೀತೆಗಳಲ್ಲಿ ಬೇಂದ್ರೆಯವರು ತರುವ ರಸ ಹೀಗೆಯೇ ವಿಲಕ್ಷಣವಾದುದು. ಉದಯದ ವ್ಯಾಪಾರಗಳನ್ನು ಕಣ್ಣುತೆರೆದು, ಮನಸ್ಸು ತೆರೆದು, ನೋಡಿರುವಂತೆ ಇವರು ಜನದ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು ಮನಸ್ಸುತೆರೆದು ನೋಡಿದ್ದಾರೆ. ಅದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ, ಮನಸ್ಸನ್ನು ಮುಟ್ಟುತ್ತದೆ, ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ. ದೇಶಪ್ರೇಮದ ಗೀತೆಗಳಾದರೂ ಇಂಥದೇ ಒಂದು ತೀವ್ರವಾದ ಅನುಭವದಿಂದ ಬಂದಿರತಕ್ಕವು. ಹೀಗೆಯೇ ಸಮಾಜದ ಸ್ಥಿತಿಗತಿಯನ್ನು ಕುರಿತ ಗೀತಗಳು. ಇಲ್ಲಿಯು ತೀವ್ರ ಅನುಭವ, ವಿಪುಲಭಾವ, ಕವಿತೆಯಲ್ಲಿ ಸಾಗರದ ಅಲೆಯ ಮಾಲೆಯಂತೆ ಮೇಲೆ ಮೇಲೆ ಉರುಬಿ ಬರುತ್ತವೆ. ಇಲ್ಲಿ ಕಾಣುವುದು ದೊಡ್ಡ ಕಲ್ಲುಗಳನ್ನು ಮೇಲೆ ಮೇಲೆ ಹೇರಿ ಕಟ್ಟಿದ ಒಂದು ಹರ್ಮ್ಯ

ಪ್ರಾಕಾರದ ಕಟ್ಟಡದ ರೀತಿ. 'ಚಿಂತೆ' ಅಥವಾ 'ಹೂ' ಗೀತಗಳಲ್ಲಿ ಇದರಿಂದ ಸ್ವಲ್ಪ ಬೇರೆಯಾದ ಕ್ರಮವೊಂದು ಕಾಣುತ್ತದೆ. ಭಾವ ಸೂಚಿಸುವ ಒಂದು ಸಾಮ್ಯ ಅಥವಾ ರೂಪಕವನ್ನು ಊಹೆ ತೆಗೆದು ಕೊಂಡು ಬಳ್ಳಿಬಳ್ಳಿಯಾಗಿ ಬೆಳೆಸಿ, ರಂಗವಲ್ಲಿಯು ಒಂದು ಚಿತ್ರದಂತೆ ಹರಹುತ್ತದೆ. ಇದೇ ಕ್ರಮವೇ ಪ್ರತಿಭೆಯ ಮಟ್ಟವನ್ನು ಮುಟ್ಟಬರುವ ಪದ್ಯಗಳಲ್ಲಿ ಅಂತರಾತ್ಮದ ಅತಿನಿಕಟ ಅನುಭವವು ಹೆಪ್ಪುಗಟ್ಟಿ ಕಣ್ಣಿಗೆ ಕಾಣುತ್ತದೆ. ಉಳಿದಲ್ಲಿ ಎರಡು ಮಾತನ್ನು ಬಿಟ್ಟರೆ ನಷ್ಟವಿಲ್ಲ; ಚಿತ್ರ ಹಾಗೂ ಚೆನ್ನಾಗಿಯೇ ಇರುತ್ತದೆ. ಇಲ್ಲಿ ಯಾವ ಮಾತನ್ನು ಬಿಟ್ಟರೆ ಭಾವವು ಮುಕ್ಕಾದೀತೋ ಎಂಬ ಭಯ ಹುಟ್ಟುತ್ತದೆ. ಈ ಕೃತಿಗಳಲ್ಲಿ ಯಾವುದರಲ್ಲಿಯಾದರೂ ವಿಷಯ ಬಹು ಜನರು ಕಂಡದ್ದು; ವಿವರ ಕವಿಯ ಮನಸ್ಸಿಗೆ ಮಾತ್ರ ಕಂಡದ್ದು. ಅದನ್ನು ಹೇಳುವ ರೀತಿ ಇವರ ಲ್ಲಲ್ಲದೆ ಇನ್ನೆಲ್ಲಿಯೂ ಇರಲಾರದೆಂಬಷ್ಟು ವೈಯಕ್ತಿಕವಾಗಿದೆ. ಕವಿತೆ ಉತ್ತಮವಾಗಬೇಕಾದರೆ ಅದು ಬಾಳ ಆಳದಿಂದ ಬರಬೇಕು. ಹಾಗೆ ಬಂದ ಕವಿತೆ ಈ ರೀತಿಯಲ್ಲಿ ಕವಿಯ ಟಂಕೆಯಿಂದ ತಾನೇ ಒಂದು ಜಾತಿಯದಾಗಿ ಕಾಣುತ್ತದೆ. ಬೇಂದ್ರೆಯವರ ಕೃತಿಯಲ್ಲಿ ಅವರ ಟಂಕೆ ಸ್ಪಷ್ಟವಾಗಿ ಬಿದ್ದಿರುತ್ತದೆ.

ಇಷ್ಟು ತೀವ್ರವಾದ ರಸಾನುಭವವುಳ್ಳ ಕವಿಗೆ ವಿಚಾರಶಕ್ತಿ ಇಲ್ಲದೆ ಹೋಗಬಹುದು. ಆದರೆ ಬೇಂದ್ರೆಯವರಿಗೆ ಅನುಭವದ ತೀವ್ರತೆಗೆ ಸಮನಾಗಿ ನಿಶಿತವಾದ ವಿಚಾರಶಕ್ತಿ ಇದೆ. ಇವರು ತಮ್ಮ ಅನುಭವ ವನ್ನೂ ಇತರರ ಅನುಭವವನ್ನೂ ಎಳೆಎಳೆಯಾಗಿ ಬಿಡಿಸಬಲ್ಲರು, ತೋರಿಸಬಲ್ಲರು. ನಿಶಿತವಾಗಿರುವ ಈ ವಿಚಾರದಕ್ಷೇತ್ರವೂ ವಿಸ್ತಾರವಾ ಗಿದೆ. ಎಷ್ಟು ಅನುಭವಿಗಳೋ ಅಷ್ಟು ವಿಚಾರಿಗಳೂ ಆಗಿರುವುದರಿಂದ ಇವರ ಕೃತಿಯಲ್ಲಿ ರಾಗದಭಾಗದ ಬದಿಗೆ ಬುದ್ಧಿಯಭಾಗ ಸಮಸಮ ನಾಗಿ ನಡೆಯುತ್ತದೆ. ಎಲ್ಲಿಯೇ ಆಗಲಿ ಕವಿ ತತ್ತ್ವವನ್ನು ಬಿಟ್ಟು ಮಾತನಾಡಿದನೋ ಎಂದು ಶಂಕೆ ಬರುವುದಿಲ್ಲ.

ತಮ್ಮ ಕಾವ್ಯದ ಈ ಸಂಪತ್ತಿನಿಂದ ಕವಿ ನಮ್ಮ ಜನದ ಮನಸ್ಸನ್ನು ಸೂರೆ ಮಾಡಿದ್ದಾರೆ. ಇವರು ಪದ್ಯಗಳನ್ನೋದುವಾಗ ಕೇಳುತ್ತ ನಾನು

ಅವುಗಳ ಸೊಗಸಿಗೆ ಮರುಳಾಗಿದೇನೆ. ಮರುಳು ಎಂದರೆ ಜನರು ಅರ್ಥ ಮಾಡಿಕೊಳ್ಳುವರೋ ಇಲ್ಲವೋ ನನಗೆ ಸಂದೇಹ. ಆದರೆ ಆ ಸಂದರ್ಭ ದಲ್ಲಿ ನನ್ನಂತೆ ಅನೇಕರಿಗೆ ಒದಗುವ ಸ್ಥಿತಿ ಆನಂದದಿಂದ ಉಂಟಾಗುವ ಮರುಳು ಎಂದೇ ಹೇಳಬೇಕು. ಬೇಂದ್ರೆಯವರು ಬೆಳಗಾವಿಯಲ್ಲಿ 'ಹಕ್ಕಿಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಓದುವಾಗ ತಲೆಗೆ ಹಿಂದುಸ್ಥಾನದ ಪಗಡಿಯೊಂದನ್ನು ಸುತ್ತಿ ನಿಂತಿದ್ದರು. ಇವರ ಆಗಿನ ನಿಲುವು ನನ್ನ ಕಣ್ಣಿಗೆ ಗಾರುಡಿಗನೊಬ್ಬನ ನಿಲುವಂತೆ ಕಂಡಿತು. ಈಗಲೂ ನನಗೆ ಬೇಂದ್ರೆಯವರ ಸಹಜವಾದ ನಿಲುವು ಆ ಗಾರುಡಿಗನ ನಿಲುವೆಂದು ಕಾಣುತ್ತದೆ. ಅವರನ್ನು ಕುರಿತು ನಾನು ಬರೆದ ಒಂದು ಅಷ್ಟಷಟ್ಪದಿಯಲ್ಲಿ ಈ ಅಭಿಪ್ರಾಯಕ್ಕೆ ರೂಪು ಕೊಟ್ಟೆನು. ಮರುಳು ಮಾಡು, ಗಾರುಡಿಗ, ಎಂಬ ಮಾತುಗಳಲ್ಲಿ ಈಗ ನಮಗೆ ಅಲ್ಪ ಕಲ್ಪನೆ ಗಳು ಕಾಣುತ್ತವೆ. ಅವುಗಳ ಮೂಲ ಅರ್ಥದಲ್ಲಿ ಶಕ್ತಿ, ಶಾಂತಿ, ಓಜಸ್ಸು ಮಾತ್ರ ಸೂಚಿತವಾಗುತ್ತವೆ. ಅಷ್ಟನ್ನು ಮಾತ್ರ ನಾನು ಇಲ್ಲಿ ಉದ್ದೇಶಿಸಿದೇನೆ. ಬೇಂದ್ರೆಯವರ ಕವಿತೆಯ ವಿಶೇಷ ಲಕ್ಷಣ ಈ ಶಕ್ತಿ, ಈ ಕಾಂತಿ, ಈ ಓಜಸ್ಸು. ಇವರ ಕವಿತೆಯನ್ನು ಅರಿಯುವ ಜನರಿಗೆ ಮನ ತಗ್ಗಿಸದೆ ನಿಲುಗಡೆ ಇಲ್ಲ.

ಬೇಂದ್ರೆಯವರ ಕೃತಿ ಈ ಗುಣಗಳನ್ನು ಪಡೆಯುವುದಕ್ಕೆ ಒಂದು ಹಿರಿಯ ಕಾರಣ ಅವರು ಜನದ ಬಾಳುವೆಯಲ್ಲಿ ಸೇರಿ ಬೆಳೆದಿರುವುದು. ಇವರು ಜನದ ಬಾಳನ್ನು ಚೆನ್ನಾಗಿ ನೋಡಿದಾರೆ; ಜನಪದಸಾಹಿತ್ಯಕ್ಕೆ ಮನಸ್ಸನ್ನು ತೆತ್ತಿದಾರೆ. ಹಲವು ಓದನ್ನು ಓದಿ ಹಲವು ಕವಿಗಳ ಕೃತಿ ಗಳನ್ನು ನೋಡಿ ಪ್ರಚೋದಿತವಾಗುವ ಪಾಂಡಿತ್ಯದ ಕಾವ್ಯ ಒಂದುರೀತಿ. ಇದು ಬಹು ಚೆನ್ನಾಗಿರಬಹುದು. ಆದರೆ ಜನದ ಬಾಳಿನಿಂದ, ಜನದ ನಡೆಯಿಂದ, ಜನದ ನುಡಿಯಿಂದ, ಪ್ರಚೋದಿತವಾಗುವ ಕಾವ್ಯ ಅದರಿಂದ ನೂರುಮಡಿ ಹೆಚ್ಚು ಜೀವಂತವಾಗುತ್ತದೆ. ಕನ್ನಡದ ಜನತೆಯ ಕಾವ್ಯ ಎಷ್ಟು ಉತ್ತಮವಾದುದೆಂದು ಹೇಳುವುದಕ್ಕೆ ಈಗ ಹತ್ತು ವರ್ಷದಿಂದ ನಮಗೆ ತುಂಬ ಸಾಮಗ್ರಿ ದೊರೆತಿದೆ. ಈ ಸಾಹಿತ್ಯದಲ್ಲಿ ಕಾಣುವ ಭಾವದ ಊಟೆ, ಮಾತಿನ ಔಚಿತ್ಯ, ಚಿತ್ರಕರ್ಮದ ಕಲೆ, ಪ್ರಪಂಚದ ಅತ್ಯುತ್ತಮ

ಸಾಹಿತ್ಯದ ಮಟ್ಟವನ್ನು ಮುಟ್ಟುತ್ತವೆ. ಬೇಂದ್ರೆಯವರು ಇಷ್ಟು ಉತ್ತಮವಾದ ರೀತಿಯ ಜನಪದ ಸಾಹಿತ್ಯವನ್ನು ಪ್ರೇಮದಿಂದ ಉಪಾಸಿಸಿದಾರೆ. ಆ ಉಪಾಸನೆಯ ಕಾರಣವೂ ಜನತೆಯ ಪ್ರೇಮ; ಅದರಿಂದ ಬರುವ ಫಲವೂ ಜನತೆಯ ಪ್ರೇಮ. ಸಹಜವಾದ ಜನತೆಯ ಪ್ರೇಮ ಸಾಹಿತ್ಯದ ಪರಿಚಯದಿಂದ ಬೆಳೆದು ಸಹಜವಾದ ಕವನಶಕ್ತಿ ಇದೇ ಪರಿಚಯದಿಂದ ಮಸೆದು ಹಸನಾಗಿ, ಇವರ ಕವಿತೆಯಲ್ಲಿ ಭಾವಕ್ಕೆ ಮಾತಿಗೆ ಅರ್ಥವನ್ನೂ ಸಿದ್ಧಿಯನ್ನೂ ತಂದಿವೆ. ಇವರ ಒಲುಮೆಯ ಗೀತಗಳಲ್ಲಿ ಕಾಣುವ ನಿಲುವು ಜನದ ಬಾಳುವೆಯ, ಜನದ ಸಾಹಿತ್ಯದ, ಒಲುಮೆಯ ನಿಲುವು. ಇವರ ಅನೇಕ ಪದ್ಯಗಳಲ್ಲಿ ಕಾಣುವ ಮಾತುಗಳ ಸರಳತೆ ಜನದ ನಾಲಗೆಯ, ಜನದ ಕವಿತೆಯ, ಮಾತಿನಲ್ಲಿ ದೊರೆಯುವ ಸರಳತೆ. 'ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸ' ಎಂಬ ಕಡೆಮುಖವನ್ನು ಬಿಟ್ಟು ಬೇಕಾದ ಒಂದು ಅಂಶವನ್ನು ತೆಗೆದುಕೊಳ್ಳುವ ಕ್ರಮ, 'ಮೂಗಿನಾಗೆ ಮೂಗುತಿ ನಕ್ಕರೆ ಕರಿಹಲ್ಲು' ಎಂದು ಹಲಸಂಗಿ ಜಕ್ಕವ್ವನನ್ನು ಹೊಗಳುವ ಪದದ ಚಾತುರ್ಯ, 'ಸಚ್ಚಿದಾನಂದ' ಕವಿತೆಯ ಮಾಯೆ, ಕಿನ್ನರಿ ಹಿಡಿದು ಭಾವದ ಗೀತೆಗಳನ್ನು ಹಾಡುವ ಜಂಗಮನ ಅಥವಾ ಹರಿದಾಸನ ಹಾಡಿನ ಕ್ರಮ ಚಾತುರ್ಯ ಮಾಯೆ. ತಾನು ಪಂಡಿತನು ಎಂಬ ಕವಿ ಈ ಚಾತುರ್ಯ ಈ ಮಾಯೆಯನ್ನು ಲಕ್ಷಣಶಾಸ್ತ್ರವನ್ನನುಸರಿಸಿ ಬರೆಯದ ಕವಿತೆಯಲ್ಲಿ ಕಾಣುವುದಿಲ್ಲ; ಕಂಡರೂ ಅದು ಒಂದು ಮಾಯೆ, ಒಂದು ಚಾತುರ್ಯ, ಎಂದು ಗುರುತಿಸುವುದಿಲ್ಲ; ಹಾಗೆ ಅದನ್ನು ಗುರುತಿಸಿದರೂ ಅದನ್ನು ತನ್ನ ಕವಿತೆಯಲ್ಲಿ ತರುವುದು ತನ್ನ ಮರ್ಯಾದೆಗೆ ಕಡಮೆ ಎಂದು ತಿಳಿಯುವನು. ಜನ್ಮತಃ ಕವಿಯಾದವನಿಗೆ ಈ ಚಾತುರ್ಯ ಈ ಮಾಯೆಯೇ ಕಾವ್ಯದ ಜೀವಾಳ, ಇದು ಎಲ್ಲಿ ಕಂಡರೂ ಒಂದೇ, ಎಂದು ತೋರುತ್ತದೆ. ಅದರ ಮೂಲ ಕಾವ್ಯದೇವತೆಯ ಚಳಕ, ಹಾಸ, ಎಂದು ಅವನ ಮನಸ್ಸಿಗೆ ದೃಢವಾಗಿರುತ್ತದೆ. ಅದು ತನ್ನನ್ನು ಬಳಸುವುದೇ ತನಗೆ ಗೌರವವೆಂದು ಅವನು ತಿಳಿದಿರುತ್ತಾನೆ; ದೇವರನ್ನು ಸಖನೆಂದ ಅರ್ಜುನನಂತೆ ಒಂದೊಂದು ವೇಳೆ ಅದನ್ನು ತಾನು ಬಳಸುತ್ತಾನೆ. ಪಂಡಿತನಾದರೂ ಸಹಜ ಕವಿ ಈ

ಗುಣವನ್ನು ತನ್ನ ಕಾವ್ಯದಲ್ಲಿ ತರಬಹುದು. ಇದಕ್ಕೆ ಬೇಂದ್ರೆಯವರೇ ನಿದರ್ಶನ. ಅವರ ಕವಿತೆಯ ಭದ್ರತೆಗೆ ಅವರು ಜನತೆಯಹೃದಯವನ್ನು ಜನತೆಯ ಕವಿತೆಯನ್ನು ಅರಿತಿರುವುದೇ ಕಾರಣ.

ಈಗ ಎರಡು ವರ್ಷದ ಹಿಂದೆ ನಮ್ಮ ಮಿತ್ರರೊಬ್ಬರು ಮದರಾಸಿನ ಒಂದು ಇಂಗ್ಲೀಷು ಪತ್ರಿಕೆಯಲ್ಲಿ ಬೇಂದ್ರೆಯವರನ್ನು ಕುರಿತು ಪ್ರಕಟಿಸಿದ ಒಂದು ಲೇಖನದಲ್ಲಿ ಬೇಂದ್ರೆಯವರ ಕೃತಿ promising, ಎಂದರೆ ಮುಂದೆ ಫಲಿಸತಕ್ಕದ್ದು, ಎಂದು ಹೇಳಿದರು. Promise ಎನ್ನುವುದಕ್ಕೆ ಅರ್ಥದಲ್ಲಿ ಪ್ರತಿ fulfilment ಎಂದರೆ ಫಲಿಸುವುದು ಅಥವಾ ಸಿದ್ಧಿ. ಕವಿಯ ಸಮೀಪ ಮಿತ್ರರಾದುದುದರಿಂದ ಆ ಲೇಖಕರು ಹೆಚ್ಚಿನ ಪ್ರಶಂಸೆ ಹೇಳುವುದು ಅನುಚಿತವಾಗಬಹುದೆಂದು ಭಯಪಟ್ಟರು. ಮಿತ್ರರಿಗೆ ಸಂಕೋಚ; ಇತರರಿಗೆ ತೋರುವುದಿಲ್ಲ. ಎಲ್ಲ ಒಳ್ಳೆಯದಕ್ಕೂ ದಾರಿದ್ರ್ಯ ಅಡಸಿರುವ ನಮ್ಮ ಈಗಿನ ಸ್ಥಿತಿಯಲ್ಲಿ ಹೀಗೆ ಒಳ್ಳೆಯ ಮಾತಿಗೂ ಸ್ವಲ್ಪ ಬರವೇ ಬಂದಿದೆ. ಯಾರಾದರೂ ಅದನ್ನು ಹೆಚ್ಚಾಗಿ ಹೇಳಿದರೆ ಬಡತನದಲ್ಲಿ ದುಂದು ಮಾಡುವವನ ವಿಷಯ ಹೇಗೆ ಬೇಸರ ಹುಟ್ಟಬಹುದೊ ಹಾಗೆ ನಮ್ಮ ಜನಕ್ಕೆ ಬೇಸರವೂ ಹುಟ್ಟುತ್ತದೆ. ಆದರೆ ಒಳ್ಳೆಯ ಮಾತು, ಕೊಟ್ಟರೆ ವೆಚ್ಚವಾಗುವ ಜೋಳವಲ್ಲ ರಾಗಿಯಲ್ಲ; ಅದು ನಿಜವಾದಲ್ಲಿ ಅದನ್ನು ಹೇಳುವುದಕ್ಕೆ ಸಂಕೋಚಪಡಬೇಕಾದದ್ದಿಲ್ಲ. ನಾನು ಸಂಕೋಚವಿಲ್ಲದೆ ಬೇಂದ್ರೆಯವರ ವಿಷಯವಾಗಿ ಇದನ್ನು ಹೇಳುತ್ತೇನೆ. ಅವರ ಕಾವ್ಯ promising ಮಾತ್ರವಲ್ಲ; ಅದರಲ್ಲಿ fulfilment ಎನ್ನುವುದು ಕಂಡಿದೆ. ಅಥವಾ ಇದನ್ನು ಯಾರಾದರೂ promising ಎಂದೇ ಹೇಳಬೇಕೆಂದು ಅಪೇಕ್ಷಿಸಿದರೆ ಈ ಕವಿತೆ ಹುಟ್ಟಿಸುವ ಆಸೆ ಸರ್ಕಾರಬನೋಟು ಇಷ್ಟು ರೂಪಾಯಿ ಕೊಡುತ್ತೇನೆ ಎಂದು ಮಾಡುವ promise ನ ರೀತಿಯದು. ಅದು ಆಕಾರದಲ್ಲಿ "ಪ್ರಾಮಿಸ್"; ನಿಜವಾಗಿ ಸಿದ್ಧಿ.

ಬೇಂದ್ರೆಯವರ ಕವಿತೆ ಕಾವ್ಯ ಮಾಡಬೇಕಾದ ಕೆಲಸವನ್ನು ಮಾಡಿದೆ ಎಂದ ಮಾತ್ರಕ್ಕೆ ಇದು ಮತ್ತೇನೂ ಮಾಡಬೇಕಾದದ್ದಿಲ್ಲ ಎಂದು ಅರ್ಥವಲ್ಲ. ಕಾವ್ಯ ಭೂಲೋಕದಲ್ಲಿ ನಂದನ ವನ. ಈ ಕವಿಯ

ಬಾಳು ಅಲ್ಲಿ ಹೂ ಬಿಡಲು ತೊಡಗಿರುವ ಒಂದು ಮಂದಾರ. ಈಗಾಗಲೇ ಹೂ ಬಿಟ್ಟಿರುವ ಈ ತರು ಮತ್ತೆ ಮತ್ತೆ ಹೂ ಬಿಡುತ್ತದೆ. ಈಗ ಯಾವ ಸೊಗಸನ್ನು ನಮ್ಮ ಬಾಳಿಗೆ ಒದಗಿಸಿ ತಂದಿದೆಯೋ ಅದನ್ನು ಮತ್ತೆ ಮತ್ತೆ ತರುತ್ತಿರುತ್ತದೆ. ಕನ್ನಡದ ಜನತೆ ತನ್ನ ಒಂದು ವೈಶಿಷ್ಟ್ಯವನ್ನು ತೋರುವುದು ಇಂಥ ಕವಿತೆಯಿಂದ; ಪ್ರಪಂಚದ ಸಾಹಿತ್ಯದಲ್ಲಿ ಸ್ಥಾನವನ್ನು ಪಡೆಯಬಹುದಾದ ಕೃತಿಗಳು ನಮ್ಮ ಸಾಹಿತ್ಯದಲ್ಲಿ ಒದಗುವುದು ಹೀಗೆ; ಇಂಥ ಕಾವ್ಯದ ಪರಿಚಯಕ್ಕಾಗಿಯೇ ಬೇರೆ ದೇಶದ ಜನರು ಆಸೆ ಪಡುವುದು. ಬೇರೆ ನಾಡಿನ ಜನರು ಅರಿತರೆ ಅರಿಯಲಿ, ಅರಿಯದಿದ್ದರೆ ಬಿಡಲಿ, ಅವರು ಅರಿಯಬೇಕಾದ ಮಟ್ಟಕ್ಕೆ ನಮ್ಮ ಕವಿತೆ ಮುಟ್ಟಲಿ, ಎನ್ನುವುದು ನಮ್ಮೆಲ್ಲರಿಗೂ ಇರುವ ಆಸೆ. ಈ ಮಟ್ಟವನ್ನು ಮುಟ್ಟಿರುವ ಕೆಲವು ಕವಿತೆಯ ಹೆಸರನ್ನು ನಾನು ಹಿಂದೆ ಒಂದು ಸಂದರ್ಭದಲ್ಲಿ ಹೇಳಿದೆನು; ಅವುಗಳಲ್ಲಿ ಒಂದು ಬೇಂದ್ರೆಯವರದು. ಆಗಲೇ ಅವರ ಕೃತಿ ಇನ್ನು ಕೆಲವನ್ನು ಆ ಗುಂಪಿನಲ್ಲಿ ಸೇರಿಸಬಹುದಾಗಿತ್ತು; ಈಗ ಮತ್ತಷ್ಟು ಕೃತಿಗಳನ್ನು ಆ ಪಂಕ್ತಿಯಲ್ಲಿ ಸೇರಿಸಬಹುದು. ಇಂಥ ಕವಿತೆಯಿಂದ ಕನ್ನಡಕ್ಕೆ ಸೇವೆ ಮಾಡುತ್ತಿರುವ ಕವಿ ತಾನು ಧನ್ಯನು; ನಾಡನ್ನೂ ಅವನು ಧನ್ಯವಾಗಿ ಮಾಡುತ್ತಾನೆ. ಭಾಷೆ ಇದರಿಂದ ಒಂದು ಹಿರಿಮೆಯನ್ನು ಪಡೆಯುತ್ತದೆ. ಈ ಹಿರಿಮೆಯನ್ನು ಇನ್ನೂ ಹೆಚ್ಚಿಸುತ್ತ ತಮ್ಮ ಕೀರ್ತಿಯನ್ನು ಮತ್ತಷ್ಟು ಹರಹುತ್ತ ಜನದ ಆನಂದವನ್ನು ಮರಳಿ ಮರಳಿ ಅರಳಿಸುತ್ತ ಶ್ರೀಮಾನ್ ಬೇಂದ್ರೆಯವರು ತಾಯ್ನುಡಿಯ ಸೇವೆಗೆ ಬಹುಕಾಲ ನಿಲ್ಲಲಿ ಎಂದು ನಾನು ನಾಡಿನ ಸೌಭಾಗ್ಯ ದೇವತೆಯ ಸನ್ನಿಧಿಯಲ್ಲಿ ಪ್ರಾರ್ಥನೆ ಮಾಡುತ್ತೇನೆ. ಶಿವಮೊಗ್ಗೆಯ ಕರ್ಣಾಟಕ ಸಂಘದ ಮಿತ್ರರು ಕೈಗೊಂಡಿರುವ ಪ್ರಕಟನ ಕಾರ್ಯ ಶ್ಲಾಘ್ಯವಾದದ್ದು. ಅದರಲ್ಲಿ ಅವರಿಗೆ ಸಿದ್ಧಿ ದೊರೆಯಲೆಂದೂ ನಾನು ಹಾರೈಸುತ್ತೇನೆ.

1938

ಶ್ರೀ ನಾರಾಯಣರಾವ್, ರಾಮನಾಥಯ್ಯ ಇವರ

## "ಜೀವದ ಉತ್ಪತ್ತಿ ಮತ್ತು ಪರಿವರ್ತನೆ"

ಲೋಕದ ಇತಿಹಾಸದಲ್ಲಿ ಸ್ವಲ್ಪವನ್ನಾದರೂ ತಿಳಿದವರಿಗೆ ಮಾನವ ಕುಲ ಒಟ್ಟಿನಲ್ಲಿ ಮುಂದುವರಿಯುತ್ತಿದೆ ಎಂದು ಹೇಳಬೇಕೆನ್ನಿಸುತ್ತದೆ. ಹೀಗೆ ಎನ್ನಿಸುವುದು ಆ ಇತಿಹಾಸದ ಸ್ವಲ್ಪವನ್ನು ತಿಳಿದವರಿಗೆ ಮಾತ್ರ ಎಂದು ಅಭಿಪ್ರಾಯಪಡುವವರೂ ಉಂಟು. ಅದರಲ್ಲೂ ಈಗ ನಡೆಯುತ್ತಿರುವ ಘೋರ ಸಂಗ್ರಾಮದಂಥ ಅವಿವೇಕ ವರ್ತನೆಯ ಹೊತ್ತಿನಲ್ಲಿ, ಹಗೆಗಳು ನಡಸುತ್ತಿರುವರೆಂದು ಸುದ್ದಿಯಲ್ಲಿ ವರ್ಣಿಸುವ ಅಮಾನುಷ ಅಕೃತ್ಯಗಳ ದುಷ್ಟಕಾಲದಲ್ಲಿ, ಮನುಜಕುಲ ಮುಂದುವರಿಯುತ್ತಿಲ್ಲ, ಯಾವುದೋ ಒಂದು ಪಾಪ ಚಕ್ರದಲ್ಲಿ ಸಿಲುಕಿ ಸುತ್ತುತ್ತಿದೆ, ಎಂದು ತೋಚುವುದು ಸಹಜ. ಆದರೆ ಇದು ಒಂದು ಸಂಜೆಯ ಹೊತ್ತು, ಒಂದು ದುಷ್ಕಾಲ. ದಿನಬೆಳಗೂ ಹೀಗೆ ಇರುವುದಿಲ್ಲ. ಇಂಥ ಒಂದು ವೇಳೆ ಮನುಷ್ಯನು ಹಿಂದಿರುಗಿದಂತೆಯೇ ಕಂಡರೂ, ಅವನು ಮತ್ತೆ ಮುಂದಣ ದಾರಿಯನ್ನು ಹಿಡಿಯಲು ತಿರುಗುತ್ತಾನೆ ಎಂದು ನಂಬಲು ಕಾರಣಗಳಿವೆ. ಒಬ್ಬೊಬ್ಬ ಮಾನವನ ಹೃದಯದಲ್ಲೂ ನಿಂತಿರುವ ಶುಭಾಕಾಂಕ್ಷೆಯೇ ಈ ಕಾರಣಗಳಲ್ಲಿ ಮುಖ್ಯವಾದದ್ದು. ಮಾನವನ ಪ್ರಯತ್ನವೆಲ್ಲ ಮುಂದುವರಿಯುವುದರಲ್ಲಿ ತೊಡಗಿದೆ. ಕಳ್ಳನೇ ಆದರೂ ತನ್ನ ಹೊಟ್ಟೆಗೆ ಮಾತ್ರವಲ್ಲ, ತನ್ನ ಮಡದಿ ಮಕ್ಕಳ ಹೊಟ್ಟೆಗಾಗಿ, ದುಡಿಯುವಂತೆ ಪರರಾಷ್ಟ್ರನಾಶಕರೂ ಕೂಡ ತಮ್ಮ ರಾಷ್ಟ್ರದ, ಎಂದರೆ ತಮಗೆ ತಿಳಿದಮಟ್ಟಿಗೆ ನಿಜವಾದ ಮಾನವ ವರ್ಗದ, ಒಳ್ಳೆಯದಕ್ಕಾಗಿ ಹೆಣಗುತ್ತಿರುತ್ತಾರೆ. ಇದಾದಮೇಲೆ ಈ ನಂಬಿಕೆಗೆ ಮುಖ್ಯ ಕಾರಣ ಮನುಜ ವರ್ಗ ಹಿಂದೆ ಬೆಳೆದಿರುವ ರೀತಿ. ಒಬ್ಬೊಬ್ಬನಲ್ಲಿ ಶುಭಾಕಾಂಕ್ಷೆ ಇರುವಂತೆ ಒಟ್ಟು ಜನತೆಗಳಲ್ಲಿ ಶುಭಾಕಾಂಕ್ಷೆ ಇದ್ದಿದೆ. ಒಮ್ಮೊಮ್ಮೆ ಎಷ್ಟೇ ಕುಗ್ಗಿದರೂ ಅದು ಮುತ್ತೆ ಮತ್ತೆ ಎದ್ದಿದೆ. ಆಗಾಗ ಅದು ಏನೋ ಸೋತಂತೆ ಕಂಡರೂ ಮತ್ತೆ ಬೂದಿಯಡಿಯ

ಕೆಂಡ ಉಸಿರು ಬಂದಾಗ ಪ್ರಜ್ವಲಿಸುವಂತೆ ಕಾಲದಲ್ಲಿ ಪ್ರಜ್ವಲಿಸಿ ಬೆಳಗಿದೆ. ನಾಲ್ಕುಸಾವಿರ ವರ್ಷಕ್ಕೆ ಈಗ್ಗಿ ಮಾನವನ ಬಾಳ್ವೆಯಲ್ಲಿ ಪರಿಷ್ಕಾರ ಕಂಡಿದೆ, ಸೌಂದರ್ಯ ಬೆಳೆದಿದೆ. ಹತ್ತು ವರುಷ ನೂರು ವರುಷದ ಇತಿಹಾಸವನ್ನು ನೋಡಿದಲ್ಲಿ ಇದು ನಿಜವೇ ಎಂದು ಸಂದೇಹ ತೋರಬಹುದು: ಸಾವಿರ ವರುಷದ ಇತಿಹಾಸವನ್ನು ನೋಡಿದರೆ ಈ ಸಂದೇಹ ತೋರದು.

ಇಪ್ಪತ್ತೈದು ವರುಷದ ಹಿಂದೆ ಇದರಂಥ ಘೋರ ಯುದ್ಧ ಮಾನವ ವರ್ಗವನ್ನು ಮುಸುಕಿದ ಸಮಯದಲ್ಲಿ ಆಂಗ್ಲ ಲೇಖಕರೊಬ್ಬರಿಗೆ ಈ ನಂಬಿಕೆಗೆ ರೂಪುಕೊಡಬೇಕು, ಇದರ ಪ್ರಮಾಣಗಳನ್ನು ಗುರುತಿಸ ಬೇಕು, ಮನುಜನ ಗುರಿಯನ್ನು ನಿರ್ದೇಶಿಸಬೇಕು, ಎಂದು ಕಂಡಿತು. ವೆಲ್ಸ್ ಮಹನೀಯರು ಆ ಉದ್ದೇಶದಿಂದ ಮೂರು ಅಮೂಲ್ಯ ಗ್ರಂಥ ಗಳನ್ನು ರಚಿಸಿ ಪ್ರಕಟಿಸಿದರು. ಪಾಶ್ಚಾತ್ಯ ಜನಾಂಗಗಳಿಗೆ ಆಂದು ಬೇಕೆನಿಸಿದಂತೆ ಇಂದು ನಮ್ಮ ಜನರಿಗೆ ಇಂಥ ಒಂದು ವಿವರಣೆ ಬೇಕಾಗಿದೆ. ನಮ್ಮ ದೇಶವೂ ಹೊಸ ಕಾಲದ ಬಾಳುವೆಯಲ್ಲಿ ಅಡಿಯ ನ್ನಿಡುತ್ತಿದೆ; ಹೊಸ ಜನತೆಗಳ ಮಾತನ್ನು ತಾನೂ ಆಡುತ್ತಿದೆ. ಅದರ ಗುರಿಯನ್ನು ಈಗ ನೇರಮಾಡಬೇಕು; ಅದರ ನಂಬಿಕೆಗೆ ಈಗ ನೆಲೆ ಯನ್ನೊದಗಿಸಬೇಕು; ಅದರ ಪೂಜಾಮೂರ್ತಿಗೆ ಈಗ ದೃಷ್ಟಿಯಿಡ ಬೇಕು. ಇದು ಇಂದು ನಡೆಯಬೇಕಾದ ಬಹು ಮುಖ್ಯ ಕಾರ್ಯ. ಅಂದು ಪಾಶ್ಚಾತ್ಯರಲ್ಲಿ ವೆಲ್ಸರ ಗ್ರಂಥವು ಮಾಡಿದ ಕಾರ್ಯವನ್ನು ಇಂದು ನಮ್ಮಲ್ಲಿ ಈ ಗ್ರಂಥವು ಮಾಡುವುದಕ್ಕೆ ತೊಡಗಿದೆ.

ಲೋಕ ಸೃಷ್ಟಿಯಿಂದ ಎಷ್ಟು ಕಾಲಕ್ಕೊ ಭೂಮಿ ಸೃಷ್ಟಿಯಾದದ್ದು. ಭೂಮಿ ಸೃಷ್ಟಿಯಾದ ಎಷ್ಟು ಕಾಲಕ್ಕೋ ಜೀವ ಸೃಷ್ಟಿಯಾದದ್ದು. ಸೃಷ್ಟಿ ಯಾದ ಜೀವ ಎಷ್ಟು ಕಾಲಕ್ಕೋ ಅಣುವಾಗಿದ್ದದ್ದು ಕ್ರಿಮಿಯಾಗಿ, ಕ್ರಿಮಿಯಾಗಿದ್ದದ್ದು ಕೀಟವಾಗಿ, ಒಂದು ರೂಪವನ್ನು ಬಿಟ್ಟು ಮತ್ತೊಂದು ರೂಪವನ್ನು ಧರಿಸಿ ಮಾನವನಾದದ್ದು. ಮಾನವ ನಿರ್ಮಾಣವಾದ ಎಷ್ಟು ಕಾಲದ ಮೇಲೆಯೋ ನಾಗರಿಕತೆಯೆಂಬ ಒಂದು ಭಾವ ಆಳವಟ್ಟದ್ದು; ನಾನು ಎನ್ನುವುದು ನನ್ನದು ಎನ್ನುವಲ್ಲಿಗೆ ಹರಿದು, ನನ್ನದು ಎನ್ನುವುದು

ಎಲ್ಲವನ್ನೂ ಒಳಗೊಂಡಿದೆ ಎಂದು ಧ್ಯೇಯವನ್ನು ಕಂಡಿರುವುದು. ಒಂದೊಂದು ಸ್ಥಿತಿಯಲ್ಲೂ ಅದರ ಮುಂದಣ ಸ್ಥಿತಿ ಧ್ಯೇಯವಾಗಿ ಕಂಡಿತು; ಕೆಲವು ಕಾಲ ಅಸಾಧ್ಯವೆಂದೇ ತೋರಿತು; ಆಮೇಲೆ ಸಾಧ ವೆನ್ನಿಸಿತು; ಆಮೇಲೆ ಸಿದ್ಧವಾಯಿತು. ಇಂದಿನ ಧ್ಯೇಯವೂ ಹಾಗೆಯೇ! ಇಂದು ಅಸಾಧ್ಯವೆಂದು ಕಾಣಬೇಕು; ಆಮೇಲೆ ಕೆಲವು ಕಾಲ ಕಳೆಯಲು ಸಿದ್ಧವಾಗಬೇಕು. ಇದು ಆಶಾವಾದವೆಂದು ಯಾರೂ ಇದನ್ನು ಕಡೆ ಗಣಿಸಬಾರದು ಈ ವಾದಕ್ಕೆ ಪ್ರತಿಯಾದ ಯಾವ ವಾದವೇ ಆದರೂ ಇದರ ನಂಬಿಕೆಯನ್ನು ಬಿಟ್ಟು ಬೇರೆ ಏನನ್ನು ನಂಬಬಹುದು? ಈ ವಾದದ ಆಶೆಯನ್ನು ಬಿಟ್ಟು ಬೇರೆ ಏನನ್ನು ಆಶಿಸಬಹುದು? ಇದು ನಿಯಮಿಸುವ ಕಾರ್ಯಕ್ರಮವಲ್ಲದೆ ಬೇರೆ ಯಾವುದನ್ನು ಕೈಗೊಳ್ಳಬಹುದು? ನಿರಾಶಾವಾದಿ ಲೋಕದ ಸ್ಥಿತಿ ಚೆನ್ನಾಗಿಲ್ಲ ಎನ್ನುತ್ತಾನೆ; ಆಶಾವಾದಿ ಅದು ಚೆನ್ನಾಗಬಲ್ಲುದು ಎನ್ನುತಾನೆ. ಇಲ್ಲಿ ನಿಲುವಿನಲ್ಲಿ ಭೇದ ಇದೆ, ಗುರಿಯಲ್ಲಿ ಭೇದ ಇಲ್ಲ. ಈ ಗ್ರಂಥದಲ್ಲಿ ಅಡಗಿರುವ ಚರಿತ್ರೆ ನಂದಿದಂತೆ ಕಾಣುವ ಆಶೆಗೆ ಮತ್ತೆ ಜೀವವನ್ನು ಕೊಡತಕ್ಕದು; ನಂದದಿರುವ ಆಶೆ ಯನ್ನು ಬೆಳಗಿಸತಕ್ಕದ್ದು.

ಇಲ್ಲಿ ಚಿತ್ರಿತವಾಗಿರುವ ಜೀವನದ ಇತಿಹಾಸವು ಪಾಶ್ಚಾತ್ಯವೆಂಬ ಕಾರಣದಿಂದಲಾದರೂ ಯಾರೂ ಅದನ್ನು ಕಡೆಗಣಿಸಲಾಗದು. ಈ ಚಿತ್ರದ ರೀತಿ ಪಾಶ್ಚಾತ್ಯರದಿರಬಹುದು. ಇದರ ತತ್ವಕ್ಕೆ ಪೂರ್ವ–ಪಶ್ಚಿಮ ಭೇದವಿಲ್ಲ. ಸೃಷ್ಟಿಯ ಇತಿಹಾಸ ಕೋಟ್ಯಂತರ ವರ್ಷಗಳ ಕಲ್ಪಾಂತರಗಳ ಕಾಲದ್ದು ಎಂಬ ಭಾವನೆ ಲೋಕದ ಜನಗಳಲ್ಲಿ ಒಬ್ಬರಲ್ಲಿ ಮಾತ್ರ ಕಂಡಿತು ಎಂದು ವೆಲ್ಸರು ಹೇಳಿದ್ದಾರೆ. ಆ ಜನ ಹಿಂದೂಗಳು. ಬ್ರಹ್ಮ ಒಂದೇ ಇದ್ದಿತು, ಅನೇಕವಾಗುತ್ತೇನೆಂದಿತು, ಇದೆಲ್ಲವೂ ಆಯಿತು, ಎಂದ ಉಪನಿಷತ್ತಿನ ಋಷಿ ಇದೇ ಇತಿಹಾಸವನ್ನೇ ತನ್ನ ರೀತಿಯಿಂದ ತಿಳಿದಿದ್ದನು; ಶಂಕೆಯಿಲ್ಲದೆ ಸಾರಿದನು. ಮಗನನ್ನು ಪ್ರೀತಿಸುವುದು ಅವನ ಸಲುವಾಗಲ್ಲ, ತನ್ನ ಸಲುವಾಗಿ, ಯಾರನ್ನಾದರೂ ಪ್ರೀತಿಸುವುದು ಅವರ ಸಲುವಾಗಲ್ಲ, ಆತ್ಮದ ಸಲುವಾಗಿ, ಎಂದ ಋಷಿ ಲೋಕದ ಸೇವೆ ಮಾಡುವುದು ಅದರ ಕಲ್ಯಾಣಕ್ಕಲ್ಲ, ತನ್ನ ಕಲ್ಯಾಣಕ್ಕಾಗಿ, ಎಂದೇ ಹೇಳಿ

ದನು. ಯಾರದಾದರೂ ಸ್ವತ್ತನ್ನು ಆಕ್ರಮಿಸಬಾರದು ಎಂದ ಋಷಿ ಭಾರತೀಯರಿಗೆ ಮಾತ್ರ ಆದನ್ನು ಹೇಳಲಿಲ್ಲ; ಪಾಶ್ಚಾತ್ಯರಿಗೂ ಆದನ್ನು ಹೇಳಿದನು; ಗೃಧ್ರವೃಕವ್ಯಾಘ್ರಗಳನೀತಿ ಮನುಜನಿಗಲ್ಲವೆಂದು ನಿಷೇಧಿಸಿದನು. ಪೂರ್ವಕ್ಕೆ ಪಶ್ಚಿಮಕ್ಕೆ ಒಂದೇ ಸತ್ಯ. ಬಾಳುವೆವೆನ್ನುವವರು ಇದನ್ನರಿಯಬೇಕು; ಉಳಿದವರಿಗೆ ನಮ್ಮಂಥವರು ಏನೂ ಹೇಳುವಂತಿಲ್ಲ.

ಈ ಪುಸ್ತಕವನ್ನು ಬರೆಯುವುದಕ್ಕೆ ನಮ್ಮ ಮಿತ್ರರು ಬಹು ಶ್ರಮ ತೆಗೆದುಕೊಂಡಿದ್ದಾರೆ. ಇವರಿಬ್ಬರ ವಯಸ್ಸಿನಲ್ಲಿ ತಕ್ಕಮಟ್ಟಿನ ಒಂದು ಅಂತರವಿದ್ದರೂ ಕನ್ನಡ ಸೇವೆಯಲ್ಲಿ ಈ ಎರಡು ಬಾಳು ಒಂದಾಗಿರುವುದು ಸ್ತೋತ್ರಾರ್ಹವಾಗಿದೆ. ವಯಸ್ಸಿನಲ್ಲಿ ಇವರಿಬ್ಬರ ಮಧ್ಯದಲ್ಲಿ ನಿಂತ ನನ್ನನ್ನೂ ಒಂದು ನೆಪದಿಂದ ಕೆಲಸಕ್ಕೆ ಕರೆದುಕೊಂಡು ಇವರು ಕನ್ನಡದ ಮಕ್ಕಳ ಮೂರು ತಲೆಮಾರಿನ ಆಸೆ ಒಂದು ಎಂದು ತೋರಿದಾರೆ. ಹೀಗೆ ನನ್ನನ್ನು ಸೇರಿಸಿಕೊಂಡದಕ್ಕಾಗಿ ನಾನು ಇವರಿಗೆ ಕೃತಜ್ಞನಾಗಿದ್ದೇನೆ. ಕನ್ನಡದಲ್ಲಿ ಪದ್ಯಗಳು ಕತೆಗಳು ಹೆಚ್ಚಾದುವು, ವಿಚಾರಮುಖ್ಯವಾದ ಲೇಖನ ಸಾಕಾದಷ್ಟು ಬರಲಿಲ್ಲ, ಎಂದು ಭಾಷಾಭಿಮಾನಿಗಳೂ ಇತರರೂ ಈಚೆಗೆ ಹೇಳುತ್ತಿದ್ದಾರೆ: ಇಂಥ ಗ್ರಂಥಗಳಿಂದ ಈ ಕೊರತೆ ನಿವಾರಣೆಯಾಗಬೇಕಾಗಿದೆ. ಈ ಕೆಲಸದಲ್ಲಿ ತೊಡಗಿರುವ ಬಗ್ಗೆ ಶ್ರೀ ನಾರಾಯಣ ರಾಯರನ್ನೂ ಶ್ರೀ ರಾಮನಾಥಯ್ಯನವರನ್ನೂ ಅಭಿನಂದಿಸುತ್ತೇನೆ. ವಿಷಯ ಮುಖ್ಯವಾಗಿರುವುದಲ್ಲದೆ ಸ್ವಾರಸ್ಯವಾಗಿಯೂ ಇದೆ; ಗ್ರಂಥದ ಲೇಖನ ಪದ್ಧತಿ ಸುಂದರವಾಗಿದೆ. ಆದಕಾರಣ ಈ ಗ್ರಂಥ ನಮ್ಮ ಜನದ ಮೆಚ್ಚುಗೆಯನ್ನು ಪಡೆಯುವುದೆಂದು ನಾನು ನಂಬಿದೇನೆ. ಇಂಥ ಬರೆವಣಿಗೆ ಬೆಳೆಯಬೇಕು. ಅದು ಬೆಳೆಯುವುದಕ್ಕೆ ಜನ ಪ್ರೋತ್ಸಾಹ ಕೊಡಬೇಕು. ಆ ಪ್ರೋತ್ಸಾಹ ಈ ಗ್ರಂಥಕ್ಕೆ ದೊರೆಯಲೆಂದೂ ಆ ಮೂಲಕ ಈ ಲೇಖಕರೂ ಇತರ ಲೇಖಕಖರೂ ಇನ್ನೂ ಹೆಚ್ಚು ಹೆಚ್ಚಾಗಿ ಕನ್ನಡ ಸೇವೆಯನ್ನು ಮಾಡುವಂತಾಗಲೆಂದೂ ನಾನು ಹಾರೈಸುತ್ತೇನೆ.

1939

ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರವರ

# " ಪರ್ಣಕುಟಿ "

ಶ್ರೀಮಾನ್ ಸಿದ್ದವನಹಳ್ಳಿ ಕೃಷ್ಣಶರ್ಮರು ತಮ್ಮ ಈ ಗ್ರಂಥಕ್ಕೆ ನನ್ನದೊಂದು ಮುನ್ನುಡಿ ಇರಬೇಕೆಂದು ಅಪೇಕ್ಷಿಸಿದ್ದಾರೆ. ಶ್ರೀ ಕೃಷ್ಣ ಶರ್ಮರು ನನಗೆ ಬಹಳ ಪ್ರಿಯರಾದ ತರುಣ ಮಿತ್ರರು. ಗ್ರಂಥವು ಲೋಕ ವಿಖ್ಯಾತರಾಗಿ ಭಾರತೀಯ ಗುರು ವರ್ಗದಲ್ಲಿ ಸೇರಿರುವ ಮಹಾತ್ಮರನ್ನು ಕುರಿತದ್ದು. ಈ ಎರಡು ಕಾರಣದಿಂದ ಈ ಪುಸ್ತಕ ದೊಂದಿಗೆ ನನ್ನ ನಾಲ್ಕು ಮಾತನ್ನು ಸೇರಿಸುವುದರಲ್ಲಿ ನನಗೆ ತುಂಬ ಸಂತೋಷ ಮತ್ತು ಹೆಮ್ಮೆ.

ಮಹಾತ್ಮಾ ಗಾಂಧಿಯವರು ಲೋಕವಿಖ್ಯಾತರು. ಲೋಕವಿಖ್ಯಾತ ರಾಗಿ ಎಲ್ಲಾ ಕಾಲದಲ್ಲೂ ಕೆಲವು ಜನ ಇರುತ್ತಾರೆ. ಒಂದೊಂದು ಕಾಲಕ್ಕೆ ಒಂದೊಂದು ದೇಶಕ್ಕೆ ಲೋಕ ಎನ್ನುವುದು ಒಂದೊಂದು ಪರಿಮಿತಿಯದಾಗಿ ರುತ್ತದೆ. ಹಿಂದೆ ಯಾವ ಕಾಲದಲ್ಲಿ ಇದ್ದುದಕ್ಕಿಂತಲೂ ಇಂದು ಎಲ್ಲ ದೇಶ ದಲ್ಲಿಯೂ ' ಲೋಕ ' ಹೆಚ್ಚು ವಿಸ್ತಾರವಾಗಿದೆ. ಲೋಕವಿಖ್ಯಾತಿಗೆ ಕೆಲವು ಜನಾಂಗಗಳಲ್ಲಿ ಸೌಕರ್ಯ ಹೆಚ್ಚು. ಪದವಿಯಲ್ಲಿರುವ ಪಾಶ್ಚಾತ್ಯ ಜನಾಂಗಗಳು ವಿಖ್ಯಾತಿಯ ಸಾಧನಗಳನ್ನು ಉಪಯೋಗಿಸುವ ಸ್ಥಿತಿ ಯಲ್ಲಿರುವುದರಿಂದ ಅವುಗಳ ಪ್ರಮುಖರಿಗೆ ಖ್ಯಾತಿ ಸುಲಭ. ಪೂರ್ವ ದೇಶಗಳ, ಅದರಲ್ಲಿಯೂ ಬಡತನದಿಂದಿರುವ, ಅದರಲ್ಲಿಯೂ ಪರಾಧೀನ ವಾಗಿರುವ, ಭಾರತವರ್ಷದಂಥ ದೇಶದ ಪ್ರಮುಖರು ಲೋಕ ವಿಖ್ಯಾತ ರಾಗುವುದಕ್ಕೆ ಸೌಕರ್ಯ ಕಡಮೆ. ಇಂಥ ಪ್ರತಿಕೂಲ ಸನ್ನಿವೇಶ ದಲ್ಲಿದ್ದರೂ ಲೋಕ ವಿಖ್ಯಾತಿಯನ್ನು ಪಡೆದವರು ನಮ್ಮ ದೇಶದಲ್ಲಿ ಇರುವುದೇ ಅದು ಸಜೀವವಾಗಿರುವುದಕ್ಕೆ ಸಾಕ್ಷಿ. ಇವರಲ್ಲೆಲ್ಲ ಹೆಚ್ಚಿನ ಹೆಸರುವಾಸಿ ಮಹಾತ್ಮಾ ಗಾಂಧಿಯವರದು. ಲೋಕದ ಯಾವ ಖ್ಯಾತಿ ವಂತರೊಂದಿಗಾದರೂ ಇವರನ್ನು ತೂಗಬಹುದು. ಇವರು ಆ ಯಾರಿಗೂ ಕಡಮೆಯೆಂದು ಕಾಣುವುದಿಲ್ಲ.

ಆದರೆ ನಮಗೆ ಇಷ್ಟು ಸಾಲದು. ಒಂದು ದೇಶದ ಬೆಲೆ, ಒಂದು ನಡತೆಯ ಬೆಲೆ, ಮತ್ತೆಲ್ಲದರ ಬೆಲೆಯನ್ನು ಅವಲಂಬಿಸಿರಬಾರದು. ಪುಣ್ಯಕರ್ಮದ ಪ್ರಶಂಸೆ ಭೂಮಿಯನ್ನೂ ಸ್ವರ್ಗವನ್ನೂ ಮುಟ್ಟುತ್ತದೆ, ಹಾಗೆ ಅದು ಮುಟ್ಟಿದಾಗ ಅದನ್ನು ಮಾಡಿದವನು ಪುರುಷನಾಗುತ್ತಾನೆ, ಎಂದು ಯುಧಿಷ್ಠಿರ ಯಕ್ಷರ ಸಂಭಾಷಣೆಯಲ್ಲಿ ಹೇಳಿದೆ. ಒಳ್ಳೆಯತನ ಭೂಮಿಯಷ್ಟನ್ನು ಒಪ್ಪಿಸಿದರೆ ಸಾಲದು. ಅದು ಸ್ವರ್ಗವನ್ನೂ ಒಪ್ಪಿಸ ಬೇಕು. ಈ ಸ್ವರ್ಗವೆನ್ನುವುದು ಇನ್ನೊಬ್ಬರ ಸಲುವಾಗಿ ಅಲ್ಲದೆ, ಸ್ವಾಂತದ ಸಲುವಾಗಿ ನಮ್ಮ ಅಂತರ್ಯ, ಬಯಸುವ ಶ್ರೇಷ್ಠತೆ. ಈ ಶ್ರೇಷ್ಠತೆಯನ್ನು ಸ್ವಪ್ನದಲ್ಲಾದರೂ ಕಂಡ ಜೀವ ತಾನು ಮತ್ತೊಂದರಷ್ಟು ಚೆನ್ನಾಗಿದ್ದೇನೆಂದು ಹೇಳಿ ತೃಪ್ತಿಪಡಲಾರದು; ನನ್ನಿಂದ ಸಾಧ್ಯ ವಾದಷ್ಟೂ ಒಳ್ಳೆಯವನಾದೇನು ಎನ್ನುವುದರಲ್ಲಿ ತೊಡಗುತ್ತದೆ. ನಡೆದು ನಡೆದಂತೆ ಇದರ ದಿಗಂತ ದೂರ ದೂರ ಸಾರುತ್ತದೆ. ನಾನು ಎನ್ನು ವುದು ಅಡಗಿ ಯಾವ ಹೊತ್ತಿನಲ್ಲಿ ವಿಶ್ವ ಎನ್ನುವುದು ಮಾತ್ರ ಮನುಷ್ಯನ ಗುರಿಯಾಗಿ ನಿಲ್ಲುತ್ತದೋ ಅಂದು ಮನುಷ್ಯ ತಾನಿರುವ ಸ್ಥಳದಲ್ಲಿ ದಿಗಂತ ವನ್ನು ಸಾಧಿಸಿಕೊಳ್ಳುತ್ತಾನೆ; 'ಯೋಽಸಾವಸೌ ಪುರುಷಃ ಸೋಽಹಮಸ್ಮಿ' ಎನ್ನುವ ಧೈರ್ಯವನ್ನು ಪಡೆಯುತ್ತಾನೆ. ನಾನುಂಟೋ ಮೂರು ಲೋಕವುಂಟೋ ಎನ್ನುವುದು ಸಾಮಾನ್ಯ ಸ್ಥಿತಿ; ಮೂರು ಲೋಕದ ಯಾವ ಒಂದು ಕಣವುಂಟೋ ನಾನುಂಟು, ಎನ್ನುವುದು ಇಂಥ ಸಿದ್ಧ ಜೀವನದ ಸ್ಥಿತಿ. ಮಾನವನ ಮುಂಬರಿವಿನ ಎಲ್ಲೆ ಇದು. ಇದನ್ನು ಬಿಟ್ಟು ಮನುಜ ವರ್ಗಕ್ಕೆ ತಕ್ಕ ಧ್ಯೇಯವಿಲ್ಲ. ಇದನ್ನು ಮುಟ್ಟದೆ ಉನ್ನತ ಜೀವಿಗಳಿಗೆ ತೃಪ್ತಿಯಿಲ್ಲ.

ಈ ಯುಗಕ್ಕೆ ಈ ಧ್ಯೇಯವನ್ನು ಒಂದು ಗುರಿಯೆಂದು ತೋರಿಸಿ ಕೊಡುವ ಪುಣ್ಯ ಮಹಾತ್ಮಾ ಗಾಂಧಿಯವರದಾಯಿತು. ಮಾನವ ಕುಲ ಮೊದಲಲ್ಲಿ ಸಣ್ಣ ಸಣ್ಣ ಗುಂಪಾಗಿದ್ದು ಆಮೇಲೆ ದೊಡ್ಡ ದೊಡ್ಡ ಗುಂಪಾ ಗಿರುವುದನ್ನು ಕಲಿತು, ಒಂದು ದೇಶದ ಮಕ್ಕಳೆಂದು, ಒಂದು ಬಣ್ಣದ ಜನರೆಂದು, ಒಂದು ಮತದ ಮಕ್ಕಳೆಂದು, ಒಂದು ಸಂಸ್ಕೃತಿಯ ಅನುಯಾಯಿಗಳೆಂದು, ಮತ್ತಷ್ಟು ದೊಡ್ಡ ಸಮೂಹಗಳೊಡನೆ ಮೈತ್ರಿ

ಯಿಂದಿರುವುದನ್ನು ಅಭ್ಯಾಸಮಾಡುತ್ತಿದೆ. ಆದರೆ ಮನುಜರು ಪ್ರಪಂಚದ ಶಾಲೆಯಲ್ಲಿ ಕಲಿಯ ಬೇಕಾದ ಪಾಠ ಇಷ್ಟಕ್ಕೆ ಮುಗಿಯುವುದಿಲ್ಲ. ಪಾಠ ಮುಂದರಿದು, ಎಲ್ಲ ಬಣ್ಣವೂ ಒಂದು ಬಣ್ಣದ ಭೇದಗಳು, ಎಲ್ಲ ದೇಶವೂ ಒಂದು ಭೂಮಿಯ ಅಂಗಾಂಗ ಭಾಗಗಳು, ಎಲ್ಲ ಸಂಸ್ಕೃತಿಯೂ ಒಂದು ಸಂಸ್ಕೃತಿಯ ಸಾಧನೆಯಲ್ಲಿ ಸಿದ್ಧಿಸಿರುವ ಅದರ ಅಂಶಗಳು, ಎಲ್ಲ ಮತವೂ ಒಂದು ಮತವನ್ನು ಅರಿಯುವ ಯತ್ನದಲ್ಲಿ ಕಂಡ ಶಾಖೆಗಳು, ಎನ್ನುವುದು ಈ ಕುಲಕ್ಕೆಲ್ಲ ತಿಳಿಯ ಬೇಕು.

ಮಾನವ ಕುಲದ ಇತಿಹಾಸ ಈ ಮುಖವಾಗಿ ಹೊರಟಿದೆ. ಒಂದೊಂದು ಹೊತ್ತು ಇದು ಹೌದೋ ಅಲ್ಲವೋ ಎಂಬ ಶಂಕೆ ಹುಟ್ಟು ವಂತೆ ಜನಾಂಗಗಳು ನಡೆದುಕೊಳ್ಳುತ್ತವೆ. ಆದರೆ ಅದೇ ಜನಾಂಗಗಳ ಬೆಳವಣಿಗೆಯನ್ನು ಒಟ್ಟಿನಲ್ಲಿ ನೋಡಿದರೆ ಅವುಕೂಡ ಈ ಮುಖದಲ್ಲಿ ಬೆಳೆದಿರುವುದು ಕಾಣುತ್ತದೆ. ಲೋಕವೇ ಒಂದು ಎನ್ನುವ ಸೂತ್ರ ಮನುಜಕುಲದ ಸತ್ಯಸೂತ್ರ, ಮಂಗಳ ಸೂತ್ರ. ಇಧನ್ನು ಬಹು ಪೂರ್ವ ದಿಂದ ನಮ್ಮ ದೇಶ ಜಪಿಸಿದೆ, ತಕ್ಕಮಟ್ಟಿಗೆ ಅನುಷ್ಠಾನ ಮಾಡಿದೆ. ಅವನತಿಯ ದೆಸೆಯಲ್ಲಿ ನಮ್ಮ ಜನತೆ ಅದನ್ನು ಮರೆತಂತಿತ್ತು ; ಅನ್ನದ ಬಡತನ ಧರ್ಮದ ಬಡತನ ಎಂದು ತಿಳಿದಂತಿತ್ತು. ಇದನ್ನು ಸರಿಪಡಿ ಸುವುದಕ್ಕೆ ಸ್ವಾಮಿ ವಿವೇಕಾನಂದರು ಮೊದಲು ಮಾಡಿದರು. ಅವರು ಆರಂಭಿಸಿದ ಕಾರ್ಯವನ್ನು ಇನ್ನೊಂದು ದಾರಿಯಲ್ಲಿ ಬೆಳೆಸಿ ಮಹಾತ್ಮರು ಭರತವರ್ಷದ ಧ್ಯೇಯ ಲೋಕದ ಧ್ಯೇಯ ಎಂದು ತೋರಿಸಿಕೊಟ್ಟು ತಾವು ಧನ್ಯರಾದರು ; ದೇಶಕ್ಕೆ ಕೀರ್ತಿ ತಂದರು ; ಮನುಜ ವರ್ಗಕ್ಕೇ ಮಹಾ ಮಹಿಮರೆಂದು ಪ್ರಖ್ಯಾತರಾದರು

ಇಂಥ ಮಹನೀಯರ ಒಂದು ಚಿತ್ರವನ್ನು ಶ್ರೀಮಾನ್ ಕೃಷ್ಣಶರ್ಮ ರವರು ಇಲ್ಲಿ ರಚಿಸಿದ್ದಾರೆ. ಹಿರಿಯ ಒಂದು ಜೀವನವನ್ನು ಅರಿಯುವ ಅಧಿಕಾರದ ಮುಖ್ಯ ಅಂಶ ಅದನ್ನು ಕುರಿತ ಗೌರವ ; ಜೊತೆಗೆ ಹಿರಿಯ ಜೀವನ ಯಾವ ಗುಣಗಳಿಂದ ಕೂಡಿದೆ ಎಂದು ಗ್ರಹಿಸಬಲ್ಲ ಸೂಕ್ಷ್ಮ ಬುದ್ಧಿ ಇರಬೇಕು. ಇದರಮೇಲೆ ಲೋಕಾನುಭವ ಅವಶ್ಯಕ. ವಿಷಯ ಸಂಗ್ರಹವಂತೂ ಅವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ. ಶ್ರೀಮಾನ್

ಕೃಷ್ಣಶರ್ಮರವರಿಗೆ ಈ ಅಧಿಕಾರ ಸಂಪತ್ತು ಎಲ್ಲ ಇದೆ. ಇವರು ನಮ್ಮ ಜನತೆಯನ್ನು ಬಲ್ಲವರಾಗಿರುತ್ತ ದೇಶಪ್ರೇಮ ಭಾಷಾಪ್ರೇಮ ದಿಂದ ಪ್ರೇರಿತರಾಗಿ ದೇಶಸೇವೆ, ಭಾಷಾಸೇವೆಯಲ್ಲಿ ನಿರತರಾಗಿದ್ದಾರೆ. ಕಷ್ಟನಿಷ್ಠುರದಲ್ಲಿ ಜೀವನವನ್ನು ನಡಸಬೇಕಾಗಿ ಬಂದು ಇವರು ಕ್ಷಮಾ ಶೀಲರೂ ಪ್ರಸನ್ನ ಮಾನಸರೂ ಆಗಿದ್ದಾರೆ. ಗಾಂಧೀಜಿಯವರ ಸಾಮಿಾ ಪ್ಯದಲ್ಲಿದ್ದು ನಡೆದು ನುಡಿದು ಅವರ ನಡೆನುಡಿಗಳನ್ನು ನೋಡಿ ಕೇಳಿ ಅವರ ಬಾಳನ್ನು ವರ್ಣಿಸಲು ಆವಶ್ಯಕವಾದ ವಿಷಯ ಸಂಗ್ರಹವನ್ನೂ ಮಾಡಿದ್ದಾರೆ. ಈ ಕಾರಣದಿಂದ ಇವರ ಈ ಗ್ರಂಥ ಮಹಾತ್ಮರ ಅಂತಸ್ಸತ್ವವನ್ನೇ ತಿಳಿಸಿಕೊಡಬಲ್ಲುದಾಗಿದೆ.

ಕೇವಲ ವಿಷಯದ ದೃಷ್ಟಿಯಿಂದಲೇ ಅಮೂಲ್ಯವಾಗಿ ಇರಬಹು ದಾಗಿದ್ದ ಈ ಗ್ರಂಥ ಶ್ರೀ ಕೃಷ್ಣಶರ್ಮರ ಸಾಹಿತ್ಯ ಕೌಶಲದಿಂದ ಮತ್ತಷ್ಟು ಶ್ರೇಷ್ಠತೆಯನ್ನು ಪಡೆದಿದೆ. ಯಾವ ಸಾಹಿತ್ಯದಲ್ಲಿಯೂ ಗದ್ಯ ಅಥವಾ ವಚನ ಸಾಹಿತ್ಯ ಸಾವಕಾಶವಾಗಿಯೇ ಬರುತ್ತದೆ. ನಮ್ಮ ಸಾಹಿತ್ಯದಲ್ಲಿ ಗದ್ಯ ರಚನೆ ಚಂಪೂಗ್ರಂಥಗಳ ಕಾಲದಿಂದಲೂ ವಾಡಿಕೆಯಲ್ಲಿ ಇದ್ದಿದೆ ಯಾದರೂ ಅದು ಬಹುಮುಖವಾದದ್ದು ಈಚೆಗೆ. ಬಹುಮುಖವಾದ ಕಾರಣದಿಂದ ನಮ್ಮ ಈಗಣ ಗದ್ಯಲೇಖನ ಬಹುವಿಧದ ಸೌಂದರ್ಯ ವನ್ನು ಬೆಳಸಿಕೊಂಡಿದೆ. ಶ್ರೀ ಕೃಷ್ಣಶರ್ಮರ ಈ ಗ್ರಂಥದ ಲೇಖನದಲ್ಲಿ ಅದು ವಿಚಿತ್ರವಾದ ಒಂದು ಸೌಂದರ್ಯವನ್ನು ಪಡೆದಿದೆಯೆಂದು ನನಗೆ ಕಾಣುತ್ತಿದೆ. ಶ್ರೀ ಶರ್ಮರವರು ಕಥನ ವರ್ಣನ ಟೀಕೆ ಇವನ್ನು ಯಾವುದೂ ಅತಿಯಾಗದಂತೆ ಒಂದು ಹದದಲ್ಲಿ ಬೆರೆಸಿ ಬರೆದಿರುವ ಈ ಗ್ರಂಥದ ರೀತಿ ಇಂಥ ಕೃತಿಗೆ ಚೆನ್ನಾಗಿ ಒಪ್ಪುವ ಅತ್ಯುತ್ತಮ ರೀತಿ. ಈ ವಿಷಯವನ್ನು ಕುರಿತು ಇಷ್ಟು ಉತ್ಕೃಷ್ಟ ರೀತಿಯ ಈ ಗ್ರಂಥವನ್ನು ರಚಿಸಿದ ಬಗ್ಗೆ ನಾನು ಶ್ರೀ ಕೃಷ್ಣಶರ್ಮರವರನ್ನು ಅಭಿನಂದಿಸುತ್ತೇನೆ.

ದೇಶದ ಅಭ್ಯುದಯಕ್ಕೂ ಭಾಷೆಯ ಅಭ್ಯುದಯಕ್ಕೂ ಮಹನೀಯ ರನ್ನು ಕುರಿತ ಇದೇ ರೀತಿಯ ಅನೇಕ ಗ್ರಂಥಗಳು ಆವಶ್ಯಕ. ಈ ಗ್ರಂಥದ ಲೇಖಕರೂ ಇವರಂಥ ಇತರ ಮಿತ್ರರೂ ಈ ಕೆಲಸವನ್ನು

ಮಾಡಬೇಕಾದರೆ ನಮ್ಮ ಜನರಿಂದ ಪ್ರೋತ್ಸಾಹ ದೊರೆಯಬೇಕು. ‘ಪರ್ಣಕುಟಿ.’ಗೆ ನಮ್ಮ ಜನ ತೋರಿಸುವ ಆದರಣೆ ಈ ಪ್ರೋತ್ಸಾಹದ ಸೂಚನೆ ಆಗಲಿ, ಮುಂಗಡವಾಗಲಿ, ಎಂದು ನಾನು ಹಾರೈಸುತ್ತೇನೆ.

1940

ಶ್ರೀ ಎಚ್. ಎಸ್. ಕಾಮತ್‌ರವರ

# "ಅಂದಿನ ಆವೂರು"

ಶ್ರೀಮಾನ್ ಕಾಮತರ ಕೆಲವು ಲೇಖನಗಳನ್ನೊಳಗೊಂಡ ಈ ಪುಸ್ತಕಕ್ಕೆ ನಾನೊಂದು ಮುನ್ನುಡಿ ಬರೆಯಬೇಕೆಂದು ನನ್ನ ಪ್ರಿಯ ಮಿತ್ರರಾದ ಶ್ರೀಮಾನ್ ಜೋಡುಮಠದ ವಾಮನಭಟ್ಟರು ಕೇಳಿದಾರೆ. ನನ್ನ ಮತ್ತು ಶ್ರೀ ಕಾಮತರ ಪರಿಚಯ ಬಹಳ ದಿನದ್ದಲ್ಲ: ಆದರೆ ಪರಿಚಯವಾದ ಕೊಂಚ ದಿನದಲ್ಲೇ ನಾವಿಬ್ಬರೂ ಮನಸಾ ಬಹಳ ಹತ್ತಿರ ಬಂದಿದ್ದೆವು. ಶ್ರೀ ಕಾಮತರು ತೀರಿಕೊಂಡಾಗ ನಮಗೆ ಎಂಥ ನಷ್ಟ ಆಯಿತೆಂದು ಮನಗಾಣುವುದು ನನಗೆ ಈ ಕಾರಣದಿಂದ ಸಾಧ್ಯವಾಯಿತು. ಅವರ ನೆನವಾಗಿ ಪ್ರಕಟವಾಗುತ್ತಿರುವ ಈ ಗ್ರಂಥಕ್ಕೆ ಒಂದು ಮುನ್ನುಡಿಯನ್ನು ಬರೆದು ದಿವಂಗತರಾದ ಆ ನನ್ನ ಮಿತ್ರರ ವಿಷಯದಲ್ಲಿ ನನಗಿರುವ ಆತ್ಮೀಯತೆ ಮತ್ತು ಗೌರವದ ಭಾವಕ್ಕೆ ರೂಪುಗೊಡುವುದು ನನಗೆ ಬಹು ಸಮ್ಮತ. ಆದಕಾರಣ ನಾನು ಈ ಕೆಲಸಕ್ಕೆ ಒಪ್ಪಿ ಈ ನಾಲ್ಕು ಮಾತನ್ನು ಬರೆಯುತ್ತಿದೇನೆ.

ಕನ್ನಡದ ಹೊಸ ಸಾಹಿತ್ಯ ಎಂಬಲ್ಲಿ ನಾವೆಲ್ಲ ಈಗ ಮೂವತ್ತು ವರ್ಷದಿಂದ ಇಂದಿನವರೆಗಿನ ಮಾತನ್ನು ಆಡುತ್ತೇವೆ. ನಾವು ಆಧುನಿಕ ಎಂದ ಕರೆಯುವ ನಮ್ಮ ಸಾಹಿತ್ಯಕ್ಕೆ ಕ್ರಿಸ್ತ ಶಕ ೧೯೦೫ ರಿಂದ ೧೯೧೫ರ ವರೆಗಿನ ಕಾಲ ಆರಂಭದಕಾಲ. ಸ್ಕೂಲು ಕಾಲೇಜನ್ನು ಮುಗಿಸಿ ಕೆಲಸಗಳಲ್ಲಿ ಇದ್ದವರು ಕೆಲವರು, ಸ್ಕೂಲು ಕಾಲೇಜನ್ನು ಮುಗಿಸುವ ಸೌಕರ್ಯವಿರದೆ ಹಾಗೆಯೇ ಅನ್ನಬಟ್ಟೆಗಾಗಿ ದುಡಿಯಲು ತೊಡಗಿದ್ದ ಕೆಲವರು, ಸ್ಕೂಲು ಕಾಲೇಜಿನಲ್ಲಿ ಓದುತ್ತ ಲೋಕವನ್ನು ಚೆನ್ನಾಗಿ ಮಾಡುವ ಕನಸನ್ನು ಕಾಣುತ್ತಿದ್ದ ಇನ್ನು ಕೆಲವರು: ಇವರು ಈ ಹೊಸ ಸಾಹಿತ್ಯದ ಕೆಲಸಗಾರರು. ಪೂರ್ವದೇಶಗಳಿಗೆ ಬಂದ ಹೊಸ ಬೆಳಕಿನಲ್ಲಿ ಕಣ್ತೆರೆದ ಭಾರತವರ್ಷದಲ್ಲಿ ಕನ್ನಡನಾಡು ಆಗ ಕಣ್ತೆರೆಯುತ್ತ ಇತ್ತು. ತನ್ನ ಬಾಲ್ಯದಲ್ಲಿ ಎಚ್ಚರಗೊಳ್ಳುತ್ತಿದ್ದ ದೇಶದ ಸ್ಥಿತಿಯನ್ನು ನೆನೆದು ಆಂಗ್ಲ

ಕವಿ ವರ್ಡ್ಸ್‌ವರ್ತ್ 'Bliss was it in that dawn to be alive, but to be young was very heaven' ಎಂದು ಹೇಳಿದನು. ಪ್ರಾಯಶಃ ನಮ್ಮ ಆ ಹತ್ತು ವರ್ಷವನ್ನು ನೆನೆಯುವ ನನ್ನ ಜೊತೆಯವರೂ ಹಿರಿಯರೂ ಇದೇ ಮಾತನ್ನು ಹೇಳುತ್ತೇವೆ. ಎಚ್ಚರಗೊಳ್ಳುತ್ತ ಇದ್ದ ದೇಶದ ಸ್ಥಿತಿಯನ್ನು ನೋಡಿ ಜನತೆ ಸುಖಪಟ್ಟಿತು; ಆದರಲ್ಲಿ ತರುಣ ರಾಗಿದ್ದವರು ಸ್ವರ್ಗ ಸುಖ ಅನುಭವಿಸಿದರು. ಸ್ವರ್ಗ, ಪ್ರಾಪ್ತಿಯಲ್ಲಿ ಅಲ್ಲ, ನಿರೀಕ್ಷೆಯಲ್ಲಿ ಇದೆ; ಹೊರಗಿನ ವಸ್ತುವಿನಲ್ಲಿಲ್ಲ, ಒಳಗಿನ ಸ್ಥಿತಿ ಯಲ್ಲಿದೆ. ಇಂಥ ಉತ್ಸಾಹದ ದಿನದಲ್ಲಿ ನಾನು ನಮ್ಮ ನಾಡಿನ ಭಾಷಾ ಸೇವಕರ ಹೆಸರುಗಳಲ್ಲಿ ಒಂದು ಎಂದು ಶ್ರೀ ಎಮ್. ಎನ್. ಕಾಮತರ ಹೆಸರನ್ನು ಕೇಳಿದೆನು. ನನಗೆ ಅವರ ಕೆಲಸದ ಪರಿಚಯ ಇರಲಿಲ್ಲ; ವ್ಯಕ್ತಿ ಪರಿಚಯವಂತೂ ಆಮೇಲೆ ಇಪ್ಪತ್ತೊಂಭತ್ತು ವರ್ಷಕ್ಕೆ ಆದದ್ದು. ಆದರೂ ನಾವು ಶ್ರೀ ಬೆನಗಲ್ ರಾಮರಾವ್, ಶ್ರೀ ಪಂಜೆ ಮಂಗೇಶರಾವ್ ಶ್ರೀ ರಾಜಗೋಪಾಲ ಕೃಷ್ಣರಾವ್, ಶ್ರೀ ಗೋವಿಂದ ಪೈ ಇವರ ಹೆಸ ರೊಂದಿಗೆ ಕನ್ನಡದ ಲೇಖಕರಲ್ಲಿ ಒಬ್ಬರೆಂದು ಕಾಮತರ ಹೆಸರನ್ನು ಹೇಳುತ್ತಿದ್ದೆವು.

ಕಾಮತರದು ಎಂಥ ವ್ಯಕ್ತಿತ್ವ ಎನ್ನುವುದನ್ನು ಅವರನ್ನು ನೋಡಿಯೇ ತಿಳಿಯ ಬೇಕಾಗಿತ್ತು. ಕಾಮತರು ಸಾಹಿತ್ಯ ಸೇವೆ ಮಾಡಿದ ಪ್ರತಿಕೂಲ ಸ್ಥಿತಿಗತಿಯಲ್ಲಿ ಅವರ ಲೇಖನಗಳು ಗ್ರಂಥಗಳಾಗಿ ಹೊರಗೆ ಬರುವುದು ಸಾಧ್ಯವಾಗಲಿಲ್ಲ. ಆದರೆ ಸ್ಥಿತಿಗತಿ ಅನುಕೂಲ ವಾಗಿದ್ದು ಕಾಮತರ ಲೇಖನಗಳು ಒಟ್ಟುಗೂಡಿ ಹತ್ತಾರು ಪುಸ್ತಕವಾಗಿ ಬಂದಿದ್ದರೂ ಅವುಗಳನ್ನು ಓದುವಷ್ಟರಿಂದ ಯಾರೂ ಕಾಮತರನ್ನು ತಿಳಿದಂತೆ ಆಗುತ್ತಿರಲಿಲ್ಲವೆಂದು ಹೇಳಬೇಕು. ನಾನು ಹೀಗೆನ್ನು ವುದಕ್ಕೆ ಕಾರಣ ಈಗ ಒಂದು ವರ್ಷದ ಹಿಂದೆ ಅವರು ಬೆಂಗಳೂರಿಗೆ ಬಂದಾಗ ಅವರನ್ನು ನೋಡಿ ನನಗೆ ಆದ ಆನಂದ ಮತ್ತು ಆಶ್ಚರ್ಯ. ಇಂಥ ಲೇಖಕರೊಬ್ಬರಿದ್ದು, ಇಂಥ ವ್ಯಕ್ತಿ ಒಬ್ಬರಿದ್ದು, ನಾನು ಬರೆಯುವ ಕಾಲದಲ್ಲಿ ಕನ್ನಡದಲ್ಲಿ ತಾನೂ ಬರೆಯುತ್ತಿರಲಾಗಿ, ನಾನು ಇವರನ್ನು ಕಾಣದೆ ಇಷ್ಟುದಿನ ಕಳೆದುಕೊಂಡೆನೇ ಎಂದು ನಾನು ವ್ಯಥೆ

ಪಟ್ಟೆನು. ನನ್ನ ಬದುಕಿನಲ್ಲಿ ನನ್ನ ಜೊತೆಯ ಜನರಿಂದ ನನಗಾಗಿರುವ ಲಾಭ ಒಂದು ಸಾವಿರದ ರೀತಿಯದು. ನನಗಿಂತ ವಯಸ್ಸಾದವರ ಜೊತೆಯಲ್ಲಿರುತ್ತ, ನನ್ನ ಜೊತೆಯವರ ಜೊತೆಯಲ್ಲಿರುತ್ತ, ನನಗೆ ಕಿರಿಯವರ ಜೊತೆಯಲ್ಲಿರುತ್ತ, ನಾನು ಜೀವನದ ದೇವತೆಯನ್ನು ದರ್ಶನ ಮಾಡುತ್ತ ಇದ್ದಿದೇನೆ. ಒಬ್ಬೊಬ್ಬರೂ ಆ ದರ್ಶನಕ್ಕೆ ತಾವು ಮಾತ್ರ ಕೊಡಬಲ್ಲ ಒಂದು ಕಳೆಯನ್ನು ಕೊಟ್ಟಿದ್ದಾರೆ. ಶ್ರೀ ಎಮ್. ಎಸ್. ಕಾಮತರು ನನ್ನ ಜೊತೆಯಲ್ಲಿದ್ದ ಆ ಎರಡು ದಿನದಲ್ಲಿ ಎಷ್ಟೋ ವರ್ಷದಿಂದ ಬರಿದಾಗಿ ನಿಂತಿದ್ದ ಒಂದು ಗೂಡಿನಲ್ಲಿ ಪ್ರತಿಷ್ಠಿತರಾದರು. ಇಷ್ಟು ದಿವಸ ಇವರನ್ನು ಕಾಣದೆ ಇದ್ದದ್ದು ನನಗೆ ನಾಚಿಕೆಯ ಮಾತು ಎಂದು ನಾನು ಮಿತ್ರರಲ್ಲಿ ಹೇಳಿದೆನು, ಕಾಮತರಿಗೂ ತಿಳಿಸಿದೆನು: ಕಾಮತರ ವ್ಯಕ್ತಿತ್ವ ಅಂತಹುದು.

ಬಾಳಿನಲ್ಲಿ ಮುಖ್ಯತತ್ವ ಬೆಳಕು. ಯಾವುದು ಕಣ್ಣಿಗೆ ಬೆಳಕೋ ಅದೇ ದೇಹದಲ್ಲಿ ಜೀವ, ಮನಸ್ಸಿನಲ್ಲಿ ಅರಿವು, ಆತ್ಮದಲ್ಲಿ ಆನಂದ. ಪುಣ್ಯವಂತರು ಎಲ್ಲಿದ್ದರೂ ಎಂತಿದ್ದರೂ, ಬೆಳಕಾಗಿ, ಜೀವವಾಗಿ, ಅರಿವಾಗಿ, ಆನಂದವಾಗಿ ಇರುತ್ತಾರೆ. ಅವರು ತಾವೂ ಇದನ್ನು ಅನುಭವಿಸುವರು, ಇತರರಿಗೆ ಇದನ್ನು ಕೊಡುವರು. ಇದು ಹೆಚ್ಚಾದಷ್ಟೂ ಒಬ್ಬ ವ್ಯಕ್ತಿಯ ಪ್ರಭಾವ ಹೆಚ್ಚುತ್ತದೆ. ಅವನಿಗೂ ತಿಳಿಯದೆ ಇತರರಿಗೂ ತಿಳಿಯದೆ ಅವನು ಒಳ್ಳೆಯ ಬಾಳಿನ ಕಾಂತಿಯುತವಾದ ಖಂಡ ಒಂದಾಗುತ್ತಾನೆ. ಕಾಮತರು ಇಂಥ ಒಬ್ಬ ವ್ಯಕ್ತಿ. ಕಾಮತರ ಬಾಳುವೆ ಎಷ್ಟು ಕಷ್ಟದ ದಾರಿಯಲ್ಲಿ ನಡೆಯಿತೆನ್ನುವುದನ್ನು ನಮ್ಮ ಮಿತ್ರರು ಬರೆದಿರುವ ಇಲ್ಲಿಯ ಲೇಖನಗಳಿಂದ ಕಾಣಬಹುದು. ಆದರೆ ಎಲ್ಲ ಕಷ್ಟವೂ ಕಾಮತರ ಧೃತಿಯ ಎದುರಿಗೆ ತಗ್ಗಿತು ಹೊರತಾಗಿ ಕಷ್ಟದ ಎದುರಿಗೆ ಕಾಮತರ ತಲೆ ತಗ್ಗಲಿಲ್ಲ. ಆಂಗ್ಲ ಕವಿ ಒಬ್ಬನು ಹೇಳಿದಂತೆ "In the fell clutch of circumstance he never winced nor cried aloud. Under the bludgeonings of chance his head was bloody but unbowed" ಸ್ಥಿತಿಗತಿ ಸರಿಯಾಗಿಲ್ಲವಷ್ಟೆ, ಸ್ಥಿತಿಗತಿಗೆ ಪುಣ್ಯವಿಲ್ಲ: ಕಾಮತರ ಜೀವ ಇದರಿಂದ ಕೃಪಣವಾಗಲಿಲ್ಲ,

ಕೂಗಿಕೊಳ್ಳಲಿಲ್ಲ. ದುರ್ದೈವ ತಲೆಯ ಮೇಲೆ ಪೆಟ್ಟುಗಳನ್ನಿಕ್ಕಿತು: ಕಾಮತರ ಮಂಡೆ ಗಾಯವಾಯಿತು ಹೊರತು ಬಗ್ಗಲಿಲ್ಲ. ಕತ್ತಲು ಕವಿಯಿತೆಂದು ಭಯಪಟ್ಟು ಕಣ್ಣುಮುಚ್ಚಿಕೊಳ್ಳುವ ಜನರಲ್ಲಿ ಕಾಮತರು ಸೇರಿರಲಿಲ್ಲ: ಕವಿಯುವ ಕತ್ತಲನ್ನು ಜಯಿಸುವ ದೀಪವಾದರು ಅವರು. ಸುಖದುಃಖವನ್ನು ಸಮವಾಗಿ ಕಾಣುವ ಪ್ರಜ್ಞೆ ಕಾಮತರದು. "A man that fortune's buffets and rewards hath ta'en with equal chance" ಎಂದು ಷೇಕ್ಸ್‌ಪಿಯರ್ ಹೇಳಿದ ಸಮಬುದ್ಧಿಯನ್ನು ಇವರು ಬೆಳೆಸಿಕೊಂಡಿದ್ದರು.

ಸಮ್ಮೇಳನದಲ್ಲಿ ಕಾಮತರು ಮಾಡಿದ ಭಾಷಣ ಅವರ ಈ ಸ್ವಭಾವವನ್ನು ನಮಗೆ ತೋರಿಸಿತು. ಹಾಗೆಯೇ ಅವರ ಅನುಭವದ ಆಳ, ಅವರ ದೃಷ್ಟಿಯ ವೈಶಾಲ್ಯ, ಇವನ್ನು ಸ್ಪಷ್ಟಗೊಳಿಸಿತು. ತಾವು ಬಾಲ್ಯದಲ್ಲಿ ಕನ್ನಡ ಕಲಿತ ರೀತಿ ಆಮೇಲೆ ಕನ್ನಡ ಬೆಳೆದ ರೀತಿ, ಈಚೆಗೆ ತಾವು ಪಾಠ ಹೇಳುವುದರಲ್ಲಿ ಪಡೆದ ಅನುಭವ, ಭರತಖಂಡದ ಇತರ ಪ್ರಾಂತಗಳಲ್ಲಿ ಭಾಷೆಗಳು ಬೆಳೆಯುತ್ತಿರುವ ರೀತಿ, ನಮ್ಮ ಭಾಷೆ ಮುಂದುವರಿಯಬೇಕಾದರೆ ನಾವು ಕೈಕೊಳ್ಳಬೇಕಾದ ಕಾರ್ಯಕ್ರಮ, ಈ ವಿಷಯಗಳನ್ನು ಕುರಿತು ಕಾಮತರು ಸುಮಾರು ಒಂದೂವರೆ ಗಂಟೆಯ ಕಾಲ ತಮ್ಮದೇ ಆದ ಒಂದು ಮಾರ್ಗವನ್ನನುಸರಿಸಿ ಭಾಷಣ ಮಾಡಿದರು. ವಿಷಯ ಸ್ಥೂಲವಾಗಿ ಯಾರು ಬೇಕಾದರೂ ಹೇಳುವಂಥದು. ಆದರೆ ಕಾಮತರ ಭಾಷಣದಲ್ಲಿ ಅವರ ರೀತಿಯನ್ನು ಬಿಟ್ಟು ವಿಷಯ ಯಾವುದು ಎಂದು ತೋರಿಸುವಂತಿರಲಿಲ್ಲ. ಆರೀತಿಯೂ ಆ ವಿಷಯವೂ ಹಾಗೆ ಸಂಪೃಕ್ತವಾಗಿದ್ದುವು. ಇದಕ್ಕೆ ಕಾರಣವೆಂದರೆ ಅವರು ಹೇಳಿದ್ದೆಲ್ಲ ಅವರಿಗೆ ಅನುಭವದಿಂದ ಸಿದ್ಧಿಸಿದ್ದ ವಿಷಯ. ಅನುಭವದಿಂದ ಸಿದ್ಧಿಸಿದ್ದ ಎಷ್ಟೇ ಸಣ್ಣ ವಿಷಯವನ್ನು ಹೇಳುವವನೂ ದಾರ್ಶನಿಕ ಪಂಗಡಕ್ಕೆ ಸೇರುತ್ತಾನೆ. ಅವನು ಹೇಳುವ ಮಾತು ಇನ್ನೊಬ್ಬರು ಹೇಳುವ ವಿಷಯವನ್ನೇ ಹೇಳಿದರೂ ಅವನ ಅನುಭವದ ಮುದ್ರೆಯಿಂದ ಬೆಲೆಯನ್ನು ಪಡೆಯುತ್ತದೆ. ಕಾಮತರ ಭಾಷಣವನ್ನು ಕೇಳುತ್ತ ಸಭೆ ಹತ್ತಾರು ಸಲ ನಗೆಯಿಂದ ತೂಗಿತು; ಕುಳಿತಷ್ಟು ಹೊತ್ತೂ ಒಂದು ಪಾಠವನ್ನು ಕಲಿಯಿತು; ಪಾಠ

ವನ್ನು ಕಲಿಯುತ್ತೇನೆಂದು ತಿಳಿಯದೆ ಆನಂದದಲ್ಲಿ ತೇಲಿತು. ಕಾಮತರ ಭಾಷಣ ಒಂದು ಕವಿತೆಯಂತಿತ್ತು; ಕಾಮತರು ಅದನ್ನು ಮಾಡುವುದರಲ್ಲಿ ತಮ್ಮ ಕವಿ ಮನೋಧರ್ಮವನ್ನು ವ್ಯವಹರಿಸಿ ಸಭೆಯನ್ನು ಒಮ್ಮೆಗೇ ತಮ್ಮ ಅನುಭವದ ಎತ್ತರಕ್ಕೆ ಸೆಳೆದುಕೊಂಡರು.

ಕಾಮತರು ಸ್ವಭಾವದಿಂದ ಕವಿಗಳಾದದ್ದರಿಂದ ಇದು ಸಾಧ್ಯವಾಯಿತು. ಸಾಮಾನ್ಯ ಮನುಷ್ಯರಿಗೆ ಲೋಕವು ವಸ್ತುಗಳ ಒಂದು ಕಟ್ಟಾಗಿ ಕಾಣುತ್ತದೆ. ವಿಚಾರವಂತರಿಗೆ ಅದು ತತ್ವಗಳ ಮೂಟೆಯೆಂದು ತೋರುತ್ತದೆ. ಕವಿಯಾದವನಿಗೆ ಈ ಎರಡು ಭಾವನೆಗಳ ಮಿಲನದ ಒಂದು ದೃಷ್ಟಿ ದೊರೆಕೊಂಡಿರುತ್ತದೆ. ಒಬ್ಬನಿಗೆ ಒಂದು ಕಣ್ಣಿನ ಕಣ್ಣೀರು ಆ ವ್ಯಕ್ತಿಯ ಕಣ್ಣೀರಾಗಿ ಕಾಣುತ್ತದೆ; ಉಳಿದ ಲೋಕ ನೊಂದಂತೆ ಆದರಿಂದ ಅವನಿಗೆ ತೋರುವುದಿಲ್ಲ. ಮತ್ತೊಬ್ಬನಿಗೆ ಒಬ್ಬವ್ಯಕ್ತಿಯ ಕಣ್ಣೀರು ಎಲ್ಲ ಲೋಕ ಅನುಭವಿಸುತ್ತಿರುವ ನೋವಿನ ಚಿಹ್ನೆಯಾಗುತ್ತದೆ. ಬದುಕೇ ಹೀಗೆ, ಇದಕ್ಕೆ ಪರಿಹಾರವೇನು? ಎಂದು ಅವನು ಶಾಂತಿಯನ್ನನುಸರಿಸುತ್ತಾನೆ. ಕವಿ ಯಾವ ಒಂದು ಜೀವನದ ನೋವಿನಲ್ಲೂ ನೋಯುತ್ತಾನೆ; ಈ ಸಹಾನುಭೂತಿಯಿಂದ ಅದನ್ನು ಎಲ್ಲ ಬಾಳ ನೋವನ್ನಾಗಿ ಮಾಡಿಕೊಂಡು ಅನುಕಂಪಿಸುತ್ತಾನೆ. ಹತ್ತು ಜನ ಅಳುತ್ತ, ಹತ್ತು ಜನ ನಗುತ್ತ, ಸಾವಿರ ಜನ ಗಾಣದ ಎತ್ತುಗಳಂತೆ ಎರಡೂ ಇಲ್ಲದ ದಿನದ ಬದುಕಿನಲ್ಲಿ ಸುತ್ತುತ್ತ ಇರುವ ರೀತಿಯನ್ನು ನೋಡಿ ಇವನು ಏಕಕ್ಷಣದಲ್ಲಿ ನಗೆಯಿಂದ ನೋವಿಂದ ಕಣ್ಣಲ್ಲಿ ನೀರನ್ನು ತುಂಬಿಕೊಳ್ಳುತ್ತಾನೆ. ರಕ್ತ ಹೀಗೆ ನೀರಾದರೂ ಅವನು ಎದೆ ಕುಗ್ಗುವುದಿಲ್ಲ: ಆ ನೀರನ್ನು ರಸ ಮಾಡಿಕೊಂಡು ಮಾತಲ್ಲಿ ಬೆರಸುತ್ತಾನೆ. ಇಂಥವನು ಆಡುವ ಮಾತೆಲ್ಲ ಕವಿತೆಯೇ ಆಗುತ್ತದೆ. ಅನುಭವ ನಿಜವಾದಷ್ಟೂ ಈ ಮಾತು ನೆಲದ ಮೇಲೆ ನಿಂತಿರುತ್ತದೆ; ತೀವ್ರವಾದಷ್ಟೂ ಮುಗಿಲನ್ನು ಮುಟ್ಟುತ್ತದೆ. ಕಾಮತರ ಮಾತಲ್ಲಿ ಈ ಎರಡು ಗುಣವೂ ಕಾಣುತ್ತಿತ್ತು. ಅವರು ನಮ್ಮ ಜನರ ವಿಷಯದಲ್ಲಿ, ಭಾಷೆಯ ವಿಷಯದಲ್ಲಿ, ತುಂಬ ತಿಳಿದ ಒಂದು ಕನಿಕರದಿಂದ ಮಾತನಾಡಿದರು; ನಮ್ಮ ಭವಿಷ್ಯವನ್ನು ಕುರಿತು ಆಸೆಯಿಂದ ತುಂಬಿದ ಧ್ಯೇಯ ಒಂದನ್ನು ಹುರಿದುಂಬಿ ಹೊಗಳಿದರು;

ಜೊತೆಗೆ ಕಾಮತರು ಕತೆಗಾರರು. ಆ ಒಂದು ಭಾಷಣದಲ್ಲಿ ಅವರು ಎಲ್ಲಾದರೂ ಇಪ್ಪತ್ತು ಕತೆ ಹೇಳಿರಬೇಕು. ಒಂದೊಂದು ಸಲವೂ ಸಭೆ, ಇಲ್ಲ ನಗಬೇಕು, ಇಲ್ಲ ಅಯ್ಯೋ ಎನ್ನಬೇಕು, ಇಲ್ಲ ಹೀಗುಂಟೆ ಎನ್ನಬೇಕು, ಇಲ್ಲ ಚಮತ್ಕೃತವಾಗಬೇಕು. ಒಂದೊಂದು ಇಂಥ ಕತೆಯನ್ನು ಹೇಳುವುದರಲ್ಲಿಯೂ ಕಾಮತರ ಜಾಣ್ಮೆ ಚೆನ್ನಾಗಿ ಕಾಣುತ್ತಿತ್ತು. ಮಾತು ಸಾಮಾನ್ಯವಾಗಿ ಆರಂಭವಾಗಿ ಒಂದರ್ಧ ನಿಮಿಷದಲ್ಲಿ ಒಂದು ಸನ್ನಿವೇಶದ ಚಿತ್ರ ಆಗಿ ಕೊನೆಗೆ ಇದು ನಡೆಯಿ ತೆಂದು ಅವರು ಹೇಳಿದಾಗ ಕೇಳಿದವರ ಮನಸ್ಸು ತಟ್ಟನೆ ಸೋಲುವುದು. ಇದಾಯಿತೆಂದು ಹೇಳುವುದಕ್ಕೆ ಮೊದಲು ಕಾಮತರು ಜನರ ಮನಸ್ಸನ್ನು ಹವಣಿಸಿಕೊಳ್ಳುತ್ತಿದ್ದುದೇ ಒಂದು ಕುಶಲ ಕರ್ಮ. ಸಹಜವಾದ ಕತೆಗಾರಿಕೆ ಅಭ್ಯಾಸದಿಂದ ಹದಗೊಳ್ಳದೆ ಈ ರೀತಿಯ ಜಾಣ್ಮೆ ಸಾಧ್ಯ ವಲ್ಲ.

ಇದಲ್ಲದೆ ಕಾಮತರು ಸಹಜವಾಗಿ ಬೋಧಕರು. ಮಾತನಾಡು ವುದಕ್ಕೆ ನಿಲ್ಲುವವರೆಗೆ ಅವರಿಗೆ ಸಭೆಯಲ್ಲಿ ದೊಡ್ಡವರು ಚಿಕ್ಕವರು, ಬಲ್ಲವರು ಅಲ್ಲದವರು, ಉಂಟು. ಮಾತನಾಡುವುದಕ್ಕೆ ನಿಂತಮೇಲೆ ಅವರಿಗೆ ಎಲ್ಲರೂ ಸಣ್ಣವರೇ. ಕೆಲಬೋಧಕರಿಗೆ ಇಂಥ ವೇಳೆಯಲ್ಲಿ ತಾವು ಹಿರಿಯರೆಂಬ ಒಂದು ಭಾವನೆ ಮನಸ್ಸಿನಲ್ಲಿ ನಿಂತಿರುತ್ತದೆ. ಕಾಮತರಿಗಾದರೆ ಬೋಧಿಸುವ ತಾನೂ ಸಭೆಯೊಂದಿಗೆ ಸಣ್ಣ ವಯಸ್ಸಿಗೆ ಇಳಿಯುವ ಸತ್ವವಿತ್ತು. ಇದರಿಂದ ಅವರು ಬೋಧಿಸುತ್ತಿದ್ದರೂ ಉಪದೇಶಿಸುತ್ತಿದ್ದಂತೆ ಕಾಣುತ್ತಿರಲಿಲ್ಲ. ಇದರಿಂದ ಅವರು ಭಯಪಡದೆ ನಗುವುದು ಸಾಧ್ಯವಾಯಿತು. ಇದರಿಂದಲೇ ಸಭೆಗೆ ಅವರನ್ನು ಪ್ರೇಮ ದಿಂದ ಕಾಣುವುದು ಅವಶ್ಯವೂ ಅನಿವಾರ್ಯವೂ ಆಗಿತ್ತು. ಈ ಕಾರಣ ದಿಂದಲೇ ಭಾಷಣಕಾರನ ಮತ್ತು ಶ್ರೋತೃಗಳ ಬೇರೆಬೇರೆ ಮನಸ್ಸು ಒಂದಾಗಿ ಒಂದೇ ಭಾವದ ಅಲೆಯಲ್ಲಿ ಏರಿ ಇಳಿಯುವುದು ಸುಲಭ ವಾಯಿತು. ಕಾಮತರು ಒಂದು ಮಾತನ್ನು ಹೇಳಿ ಶ್ರೋತೃಗಳು ಇದು ಹೌದೇ ಎಂದು ಯೋಚಿಸಿ ಒಪ್ಪುವುದೆಂಬ ಪ್ರಸಂಗ ಅಲ್ಲಿ ಬರಲೇ ಇಲ್ಲ. ಕಾಮತರು ಒಂದು ಕ್ಷಣದ ಮೇಲೆ ಏನುಹೇಳುವರೆಂಬ ಮಾತನ್ನು

ಸಭೆಯಲ್ಲಿ ಯಾರಾದರೂ ಊಹಿಸಬಹುದೆನ್ನುವಷ್ಟುಮಟ್ಟಿಗೆ ಅಲ್ಲಿ ಸಮರಸವಿತ್ತು. ಇಂಗ್ಲೆಂಡಿಗೆ ರಾಜಧಾನಿ ಎಂದು ಬೋಧಕನು ಹೇಳಿದರೆ ತರಗತಿಯಲ್ಲಿ ಯಾವ ಹುಡುಗನಾದರೂ " ಲಂಡನ್ " ಎಂದು ಮಾತನ್ನು ತುಂಬ ಬಹುದಾದಂತೆ ಸಭೆಯ ಮನಸ್ಸು ಕಾಮತರ ಮನಸ್ಸಿನೊಂದಿಗೆ ಸಮತಾಲದಲ್ಲಿ ಹರಿಯುತ್ತಿತ್ತು.

ಆ ಮೂರುದಿನ ನನ್ನ ಮತ್ತು ಕಾಮತರ ಸ್ನೇಹ ಬೆಳೆದು ಒಂದು ಸ್ಪಷ್ಟವಾದ ರೂಪುತಾಳಿತು. ಕಾಮತರು ತಮ್ಮ ಅನುಭವವನ್ನು ಕುರಿತು ಒಂದು ಪುಸ್ತಕವನ್ನು ಬರೆಯಬೇಕೆಂದು ನಾನು ಅವರನ್ನು ಬೇಡಿದೆನು; ಅವರು ಒಪ್ಪಿಕೊಂಡರು. ಆದರೆ ಯಾವ ಕೆಲಸ ಮಾಡುವುದಕ್ಕೂ ದಿನದ ಬಾಳುವೆಯ ಸುತ್ತನ್ನು ಬಿಟ್ಟು ಬೇರೆ ಕಡೆ ಕೆಲವು ದಿನ ಇರಬೇಕು ಎಂದು ಅವರು ಹೇಳಿದರು. ಅವರು ಬೆಂಗಳೂರಿಗೆ ಬಂದು ನನ್ನ ಜೊತೆಯಲ್ಲಿ ಕೆಲವು ದಿನ ಇರಬೇಕೆಂದೂ ಆಗ ಈ ಕೆಲಸವನ್ನು ಮಾಡಬೇಕೆಂದೂ ನಾನು ಆಹ್ವಾನಕೊಟ್ಟೆನು: ಅವರು ಅದಕ್ಕೂ ಒಪ್ಪಿಕೊಂಡರು. ಆ ಮುಂದಣ ಬೇಸಿಗೆಯಲ್ಲಿ ಅವರು ನನ್ನ ಜೊತೆಗೆ ಕೆಲವು ವಾರ ಇರತಕ್ಕದ್ದೆಂದು ನಾವು ನಿರ್ಣಯಿಸಿಕೊಂಡೆವು; ಆದರೆ ಇದು ಮಾನವರ ನಿರ್ಣಯವಾಯಿತು, ದೈವ ಬೇರೆ ಎಣಿಸಿತು. ಅಷ್ಟರಲ್ಲೇ ನಾನು ಮಂಗಳೂರಿನ ಕಡೆ ಸ್ವಲ್ಪ ದೇಶಯಾತ್ರೆ ಮಾಡಿದೆನು. ಮಂಗಳೂರಿನ ಸಂಸ್ಕೃತಿ ವಿಹಾರದ ಮಿತ್ರರು ನಾನು ಒಂದು ಭಾಷಣ ಮಾಡುವಂತೆ ಏರ್ಪಡಿಸಿದ ವೇಳೆ ಕಾಮತರು ಅಧ್ಯಕ್ಷರಾಗಿ ನನ್ನ ಪಕ್ಕದಲ್ಲಿ ಕುಳಿತು ಬೆಂಗಳೂರಿನಲ್ಲಿ ಆರಂಭವಾಗಿದ್ದ ಪ್ರೇಮವನ್ನು ಮಂಗಳೂರಿನಲ್ಲಿ ಮಾಗಿಸಿದರು. ಅದೇ ಪ್ರೇಮದ ಮಾತು, ಅದೇ ಸರಸ, ಅದೇ ಹಾಸ್ಯ, ಆದೇ ಮ್ಲಾನವದನ, ಆದೇ ಕೆಚ್ಚು. ಅಂದಿನ ರಾತ್ರಿ ನಾನು ಅವರ ಮನೆಗೆ ಐದು ನಿಮಿಷವಾದರೂ ಹೋಗಿಬರಬೇಕೆಂದು ಉದ್ದೇಶಿಸಿದ್ದೆ; ರಾತ್ರಿಯ ಕಾರ್ಯಕ್ರಮ ಇದಕ್ಕೆ ಅವಕಾಶ ಕೊಡಲಿಲ್ಲ. ಮತ್ತೆ ಕಾಣುತ್ತೇವಲ್ಲ ಎಂದು ಮಾರನೆಯ ದಿನ ಹಾಗೆಯೇ ಹೊರಟದ್ದಾಯಿತು; ಮತ್ತೆ ಕಾಮತರನ್ನು ನಾನು ನೋಡಲಿಲ್ಲ. ಮಾನ್ಯಮಿತ್ರರಾದ ಶ್ರೀ ಶ್ರೀನಿವಾಸ ಪೈಗಳವರು ಕಾಮತರು ತೀರಿ

ಕೊಂಡರೆಂಬ ಮಾತನ್ನು ಒಂದು ಕಾಗದದಿಂದ ತಿಳಿಸಿದರು. ಕಾಮತರನ್ನು ಜೊತೆಯಲ್ಲಿ ಇರಿಸಿಕೊಂಡು ಕೆಲವು ದಿನ ಹರುಷವಾಗಿರಬೇಕು ಎಂದು ನಾನು ಕಟ್ಟಿದ್ದ ಕನಸಿನಗುಡಿ ಹೀಗೆ ಮುಗಿಯಿತು.

ಕಾಮತರ ಸಹವಾಸ ನನಗೆ ಲಭಿಸದೆ ಹೋದರೂ ನಾವಿಬ್ಬರೂ ಉದ್ದೇಶಿಸಿದಂತೆ ಅವರ ಲೇಖನ ಕೆಲವನ್ನು ಸಂಗ್ರಹಿಸಿ ಅಚ್ಚುಹಾಕಬೇಕೆಂದು ಅವರು ತೀರಿಕೊಂಡ ಸುದ್ದಿ ಬಂದಾಗಲೇ ನಾನು ಅಪೇಕ್ಷಿಸಿದೆನು. ಆ ಕೆಲಸವನ್ನು ಮತ್ತಾರಾದರೂ ಮಾಡುವುದಾದರೆ ಹಾಗೂ ಆಗಬಹುದು. ಹೀಗೆಂದಿರುವಲ್ಲಿ ಮಂಗಳೂರಿನ ನಮ್ಮ ಮಿತ್ರರು ಈ ಕೆಲಸವನ್ನು ಆರಂಭ ಮಾಡುವುದು ತಿಳಿಯಿತು. ಕಾಮತರು ಶ್ರೇಷ್ಠ ಸಾಹಿತಿಗಳೆನ್ನುವುದು ಇಲ್ಲಿ ಸೇರಿರುವಷ್ಟು ಲೇಖನಗಳಿಂದಲೇ ಕಾಣುತ್ತದೆ.* ಈ ಒಂದು ಹಿಡಿಯ ಪುಟದ ಬರವಣಿಗೆಯಿಂದಲೇ ಅವರು ತಮ್ಮ ಪ್ರಾಂತದ ಒಂದು ಊರಿನ ಚಿತ್ರವನ್ನು ಎಷ್ಟೋ ಸುಂದರವಾಗಿ, ಎಷ್ಟೋ ಸ್ಪಷ್ಟವಾಗಿ, ಕಲ್ಪಿಸಿದಾರೆ. ಈ ಬರಹ ಅತ್ಯುತ್ತಮ ವರ್ಗದ್ದು. ಇದರ ತಳಹದಿ ಲೋಕವನ್ನು ಕಣ್ತೆರೆದು ನೋಡುವ ನೋಟ, ಮನವೊಪ್ಪಿ ಅಪ್ಪಿಕೊಳ್ಳುವ ಔದಾರ್ಯ; ಇದರ ಸಾಧನ ವಿವರವನ್ನು ಆಯ್ದು ಹೇಳುವ ಜಾಣ್ಮೆ, ಕೋದು ತೋರುವ ಚಳಕ. ಭೂಲೋಕದ ಮಗು ಸ್ವರ್ಗಲೋಕ ಎಂಬುದನ್ನು ಊಹಿಸತೊಡಗಿ ಭೂಮಿಯ ಚೆಲುವನ್ನು ಮರೆಯುವುದರಿಂದ ಒಂದು ರೀತಿಯ ಸಾಹಿತ್ಯ ಬರುತ್ತದೆ. (ಆ ಸ್ವರ್ಗವನ್ನು ಕಟ್ಟುವುದಕ್ಕೂ ಭೂಮಿಯ ಮಗು ಭೂಮಿಯ ಚೆಲುವಿನ ಪರಿಕರವನ್ನೇ ಉಪಯೋಗಿಸುತ್ತದೆ. ಆದರ ಊಹೆಗೆ ಕಾರಣವಾಗುವ ಭಾವದ ಅಫೀಮು ಕೂಡ ಭೂಮಿಯುದೇ ಎಂದು ತೋರುತ್ತದೆ. ಭೂಮಿಯ ಮಗು ಭೂಮಿಯದನ್ನಲ್ಲದೆ ಮತ್ತೇನನ್ನು ಬಲ್ಲದು?) ಕಾಮತರದು ಇಂಥ ಸಾಹಿತ್ಯ ಅಲ್ಲ. ಕಂಡ ಸೃಷ್ಟಿಯನ್ನು ಒಪ್ಪಿಕೊಂಡು, ಹೊಡೆದರೂ ತಾಯನ್ನು ಬಿಡದೆ ಕಾಲಿಗೆ ಸುತ್ತುವ ಮಗುವಿನಂತೆ, ಕಠಿನವಾದರೂ ಜೀವನದಲ್ಲಿ ಬೇಸರಪಡದೆ ಅವರು ಅದನ್ನು ಹಿಡಿದರು; ಹೆದರಿ ಹಿಡಿದರೆ ಚುಚ್ಚುವ ಮುಳ್ಳು ಇವರ ಕೈಯ ಹಿಡಿತದಲ್ಲಿ ಅಡಗಿ ನಿಂತಿತು. ನಗೆ, ಕಣ್ಣೀರು, ಕನಿಕರ, ಅರಿವು ಇವುಗಳಿಂದ ಕೂಡಿರುವ ಈ ಚಿತ್ರಗಳನ್ನು ಅವರು ರಚಿಸಿ ತಮ

ಅನುಭವಕ್ಕೆ ರೂಪುಕೊಟ್ಟರು; ಜೊತೆಯ ಜನಕ್ಕೆ ಹರ್ಷವನ್ನೂ ತಿಳಿವನ್ನೂ ನೀಡಿದರು; ಸಾಹಿತ್ಯಕ್ಕೆ ರತ್ನಗಳನ್ನು ಸೇರಿಸಿದರು.

ಅಲ್ಲದೆ ಶ್ರೀ ಕಾಮತರನ್ನು ಕುರಿತು ನಮ್ಮ ಮಿತ್ರರು ಬರೆದು ಇಲ್ಲಿ ಸೇರಿಸಿರುವ ಲೇಖನಗಳಿಂದ ಮಂಗಳೂರಿನ ಪ್ರಾಂತದ ಸಾಹಿತ್ಯ ಸ್ಫೂರ್ತಿ ಎಷ್ಟು ಶ್ರೇಷ್ಠವಾದದ್ದೆನ್ನುವುದು ಕಾಣುತ್ತದೆ. ಕಾಮತರ ಬರವಣಿಗೆಯಂತೆಯೇ ಈ ಬರಹಗಳೂ ಕಣ್ಣಿಗೆ ಒತ್ತಿಕೊಳ್ಳುವಂತಿವೆ. ಕಾಮತರ ಲೇಖನಗಳೊಂದಿಗೆ ಅವರ ನೆನವಿನ ಕಾಣಿಕೆಗಳಾದ ಈ ಲೇಖನಗಳನ್ನು ಸೇರಿಸುವ ಯೋಜನೆಯ ಬಗ್ಗೆ ನಾನು ಈ ಗ್ರಂಥದ ಸಂಪಾದಕರಾದ ಶ್ರೀ ವಾಮನ ಭಟ್ಟರನ್ನೂ ಲೇಖನಗಳ ಅಂದದ ಬಗ್ಗೆ ಅವುಗಳ ಲೇಖಕರನ್ನೂ ಅಭಿನಂದಿಸುತ್ತೇನೆ. ಕನ್ನಡದ ಬರಹ ಈ ಮಟ್ಟದಲ್ಲಿ ಬೆಳೆಯುವುದೇ ಶ್ರೀ ಕಾಮತರಂಥ ಲೇಖಕರಿಗೆ ಸ್ಮೃತಿ ಸ್ತಂಭ.

ಕಾಮತರನ್ನು ಕಳೆದುಕೊಂಡು ಕನ್ನಡ ನಾಡು ಬಹಳ ನಷ್ಟಪಟ್ಟಿದೆ. ಇತರ ಕೆಲ ಹಿರಿಯರನ್ನು ಕಿರಿಯರನ್ನು ಕಳೆದುಕೊಂಡು ಬಹುದಿನವಾಗಲಿಲ್ಲ; ಅವರ ಜೊತೆಗೆ ಇವರೂ ಮರೆಯಾದರು. ನಮ್ಮ ಇತಿಹಾಸದ ದುರ್ದೈವದಿಂದ, ನಿಜದಲ್ಲಿ ಒಂದಾದರೂ ತೋರಿಕೆಯಲ್ಲಿ ನಾಲ್ಕಾರಾಗಿರುವ ಕನ್ನಡನಾಡು ತಾನು ಒಂದೆನ್ನುವುದನ್ನು ಅರಿಯುವುದಕ್ಕೆ ಕಾಮತರಿಂದ ಆಗಬೇಕಾದ ಕೆಲಸ ಇತ್ತು. ಅವರನ್ನು ಹಿರಿಯರೆಂದು, ಗೆಳೆಯರೆಂದು ಪ್ರೀತಿಯಿಂದ ನೆನೆಯುವ ಜನರು ಅವರ ಆ ಧ್ಯೇಯವನ್ನು ಸಾಧಿಸುವುದರಲ್ಲಿ ತೊಡಗಬೇಕು. ಕರ್ಣಾಟಕದ ಎಲ್ಲ ಪ್ರಾಂತದ ಜನ ಈ ಕೆಲಸದಲ್ಲಿ ಬದ್ಧಕಂಕಣರಾಗಲಿ. ಮಧ್ಯೆ ಎಲ್ಲಾದರೂ ದೀಕ್ಷೆ ಕೆಡುವ ಸಂದರ್ಭ ಕಂಡಾಗ ಪಂಜೆ, ಪೇಜಾವರ, ಗೌರಮ್ಮ, ವೆಂಕಣ್ಣಯ್ಯ, ರೊದ್ದ, ಸಾಂತಕವಿ, ಸಾಸನೂರು ಎಂಬ ಹೆಸರುಗಳೊಂದಿಗೆ ಕಾಮತ ಎಂಬ ಹೆಸರನ್ನೂ ನೆನೆಯಲಿ. ಕಂಕಣ ಭದ್ರವಾಗುವುದು, ದೀಕ್ಷೆ ಸಲ್ಲುವುದು. ಚೂರಾದಂತೆ ಕಾಣುತ್ತಿರುವ ಕನ್ನಡದ ಕನ್ನಡಿ ಒಂದು ಎಂದು ತೋರಬಲ್ಲ ಶಕ್ತಿ ಆ ಹೆಸರುಗಳಲ್ಲಿದೆ. ಸತ್ಯವಂತರ ಹೆಸರು ಸತ್ವವಂತ ಹೆಸರು. ಆ ಸತ್ವದಿಂದ ಆ ಹೆಸರುಗಳಿಗೆ ಮಂತ್ರದ ಶಕ್ತಿ ಅಳವಟ್ಟಿರುತ್ತದೆ. ಅವುಗಳನ್ನು ಉಪಯೋಗಿಸಿ ನಾವು ಆ ದೇಶಪ್ರೇಮಿಗಳ ಆಸೆ

ಯನ್ನು ಈಡೇರಿಸಬೇಕು. ಒಂದು ನಾಡಿನ ಮಕ್ಕಳು ಒಬ್ಬರನ್ನು ಕುರಿತು ಒಬ್ಬರು ಛಲದ ಮಾತನ್ನಾಡುವುದು ಸಲ್ಲದು ; ಸ್ಪರ್ಧೆ ಇರಲಿ, ಆದರೆ ಸೇವೆಮಾಡುವುದರಲ್ಲಿರಲಿ, ಮರ್ಯಾದೆಗಾಗಿ ಕಾದುವುದರಲ್ಲಿ ಬೇಡ; ಸೋದರರಲ್ಲಿ ವಿವಾದ ಸಲ್ಲದು, ವಿವಾದ ಬಂದದ್ದೇ ಆದರೆ ಅಲ್ಲಿ ಸೋಲಲ್ಲಿಗೆಲ್ಲವಿದೆ, ಇದೇ ಬದುಕುವದಾರಿ: ಹೀಗೆಂದು ಕಾಮತರ ನೆನವು ಈಗಲೂ ನಮಗೆ ತಿಳಿಸುತ್ತಿದೆ. ನಾನ್ಯಃಪಂಥಾ ಅಯನಾಯ ವಿದ್ಯತೇ. ಅವರ ಧ್ವನಿ ನಮ್ಮ ಜನದ ಮನಸ್ಸನ್ನು ಮುಟ್ಟಲಿ. ಕನ್ನಡದ ಬಾಳು ಒಂದಾಗಿ ಬೆಳೆಯಲಿ.

1940

ಶ್ರೀ ಹುನಗುಂದ ಪದ್ಮರಾಜರ

# "ತಾರಾಮಂಡಲ"

ನನ್ನ ತರುಣಮಿತ್ರರಾದ ಶ್ರೀಮಾನ್ ಹುನಗುಂದ ಪದ್ಮರಾಜರವರು ಮಹಾಕವಿ ರವೀಂದ್ರರ ಕೃತಿಗಳಿಂದ ತಾವು ಮಾಡಿರುವ ಭಾಷಾಂತರಗಳ ಈ ಸಂಗ್ರಹಕ್ಕೆ ನನ್ನಿಂದ ಒಂದು ಮುನ್ನುಡಿಯನ್ನು ಅಪೇಕ್ಷಿಸಿದ್ದಾರೆ. ಕವೀಂದ್ರ ರವೀಂದ್ರರ ಕೃತಿಗಳು ನಮ್ಮ ಭಾಷೆಗೆ ಪರಿವರ್ತನವಾಗಬೇಕೆಂದು ನನಗೆ ಬಹುವರ್ಷದಿಂದ ತೀವ್ರವಾದ ಆಸೆ ಇದ್ದಿದೆ. ಇಂಥ ಮುಖ್ಯವಾದ ಕೆಲಸವನ್ನು ಕೈಗೊಂಡಿರುವ ಶ್ರೀ ಪದ್ಮರಾಜರೊಂದಿಗೆ ಸಹಾನುಭೂತಿಯಿಂದ ವರ್ತಿಸುವುದರಲ್ಲಿ ನನಗೆ ತುಂಬ ಸಂತೋಷ. ಆದುದರಿಂದ ಈ ನಾಲ್ಕು ಮಾತನ್ನು ಅಂತಃಕರಣ ಪೂರ್ವಕವಾಗಿ ಬರೆಯುತ್ತಿದೇನೆ.

ಶ್ರೀಯುತ ಪದ್ಮರಾಜರು ಈ ಪರಿವರ್ತನೆಗಳನ್ನು ಮಾಡಿದ ಇತ್ತೀಚೆಗೆ ಕವೀಂದ್ರರು ದಿವಂಗತರಾದರು. ಆಗ ಲೋಕದ ಜನ ವ್ಯಕ್ತಪಡಿಸಿದ ವ್ಯಥೆಯಿಂದ ಈ ಮಹಾಕವಿ ಪ್ರಪಂಚದಲ್ಲಿ ಎಂಥ ಸ್ಥಾನವನ್ನು ಗಳಿಸಿದ್ದರೆನ್ನುವುದು ಚೆನ್ನಾಗಿ ಸ್ಪಷ್ಟವಾಯಿತು. ಇಂಥ ಪ್ರಸಿದ್ಧಿಗೆ ಈಗಿನ ಕಾಲದಲ್ಲಿ ಸೌಕರ್ಯಗಳು ಹೆಚ್ಚು: ಯೋಗ್ಯತೆ ಇದ್ದರೆ. ರವೀಂದ್ರರಿಗೆ ಈ ಯೋಗ್ಯತೆ ಇದ್ದ ಮಾತು ಈಗ ಇತಿಹಾಸ ಪ್ರಸಿದ್ಧವಾದದ್ದು. ರವೀಂದ್ರರ ಕೃತಿಯನ್ನು ಕಾಣದ ರಾಷ್ಟ್ರವಿಲ್ಲ ಎನ್ನುವಂತೆ ಅವರ ಗ್ರಂಥಗಳು ಎಲ್ಲ ದೇಶಗಳಲ್ಲೂ ಹರಡಿದುವು. ಎಲ್ಲ ದೇಶಗಳಲ್ಲೂ ಅವರ ಮಾತಿಗೆ ಗಮನಕೊಡುವ ಮಹನೀಯ ಜನರು ಹತ್ತಾರು ಮಂದಿ ಇದ್ದರು. ಕವಿಗಳು ವಂಗದೇಶಕ್ಕೆ ಭರತವರ್ಷಕ್ಕೆ ಸೇರಿದಂತೆ, ಸೇವೆ ಸಲ್ಲಿಸಿದಂತೆ ಇಡೀ ಭೂಮಂಡಲಕ್ಕೇ ಸೇರಿದರು; ಸೇವೆ ಸಲ್ಲಿಸಿದರು. ಇದು ಅವರ ಪುಣ್ಯ ಎನ್ನುವುದೇನೋ ಸ್ಪಷ್ಟ: ಅಷ್ಟೇ ಸ್ಪಷ್ಟವಾಗಿ ಅದು ನಮ್ಮ ದೇಶದ ಪುಣ್ಯ; ಇಡೀ ಭೂಮಿಯ ಪುಣ್ಯ. ಇದು ಇಂದು ನಾವೆಲ್ಲ ತಿಳಿಯಬೇಕಾದ ಮಾತು.

ಪುಣ್ಯವಂತರ ಮನೆಯಲ್ಲಿ ಸುಖದ ಮಧ್ಯೆ ಬೆಳೆದು ರವೀಂದ್ರನಾಥ ಠಾಕೂರರು ತಮ್ಮ ಕವಿಮನೋಧರ್ಮಕ್ಕೆ ಅನನ್ಯಸಾಧಾರಣವಾದ ಆಶ್ರಯವನ್ನು ಹೊಂದಿದರು. ಭರತವರ್ಷದ ರಾಜನಗರವಾದ ಕಲ್ಕತೆಯಲ್ಲಿ, ವಿಚಾರಪರತೆಯೇ ಧ್ಯೇಯವಾದ ಬ್ರಾಹ್ಮಸಮಾಜದಲ್ಲಿ ಧನವಿದ್ದರೂ ವಿವೇಕವನ್ನು ಬಿಡದೆ ಇದ್ದ ಸಂಸಾರದಲ್ಲಿ, ಮಹರ್ಷಿಯೆಂಬ ಹೆಸರನ್ನು ಗಳಿಸುವಂತೆ ಬಾಳಿದ್ದ ಮಹನೀಯರ ಮಗನಾಗಿ ಇವರು ಜನ್ಮವೆತ್ತಿದರು ಆ ತಂದೆ ಮನೆಯನ್ನು ಆಳುತ್ತ ಇರಲಾಗಿ ಮಕ್ಕಳು ದೇಶಸೇವೆ ಭಾಷಾಸೇವೆಯಲ್ಲಿ ಹತ್ತಾರು ಮುಖವಾಗಿ ದುಡಿಯುತ್ತ ಹೆಸರಾಂತರು. ಹುಟ್ಟಿದೊಡನೆ ರವೀಂದ್ರರು ಈ ಎಲ್ಲ ಭಾಗ್ಯದಲ್ಲಿ ಭಾಗಧೇಯರಾದರು. ತಪಸ್ಸಿನಲ್ಲಿ ಭಂಗಬಂದ ಪುಣ್ಯಶಾಲಿ ಯೋಗಿಗಳಲ್ಲಿ ಜನ್ಮವೆತ್ತುವನೆಂದು ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಿದಾನೆ. ಹಿಂದಣ ಜನ್ಮಗಳಲ್ಲಿ ತಪಮಾಡಿ ಭಂಗಪಡೆದೇ ರವೀಂದ್ರರು ಈ ಜನ್ಮದಲ್ಲಿ ಸಿದ್ಧಿಯನ್ನು ಪಡೆಯುವುದಕ್ಕಾಗಿ ಈ ಘನೆತನದಲ್ಲಿ ಹುಟ್ಟಿದರೆಂದರೆ ಮಾತು ಅತಿಯಾಗಲಾರದು. ಭರತವರ್ಷದ ನಾಲ್ಕು ಆರು ಸಾವಿರ ವರ್ಷಗಳ ತಪಸ್ಸು ದೇವೆಂದ್ರನಾಥರಲ್ಲಿ ಹೂವಾಗುತ್ತಿತ್ತು. ಆ ಹೂವಿನ ಹಣ್ಣಾಗಿ ಆವರ ಕಿರಿಯ ಮಗನೆಂದು ರವೀಂದ್ರನಾಥರು ಇಹ ಜೀವನದಲ್ಲಿ 'ಅಡಿಯಿಟ್ಟರು.

ತಮ್ಮ ಮನಸ್ಸು ಅರಳಿದ ಮೊದಲ ಸಂದರ್ಭವನ್ನು ಕುರಿತು ರವೀಂದ್ರರು "ನಿರ್ಝರಿಯ ಸ್ವಪ್ನಭಂಗ"ವೆಂಬ "ಕೃತಿಯಲ್ಲಿ "ನನ್ನ ಕಥೆಯೆಷ್ಟು, ನನ್ನ ಕಾವ್ಯವೆಷ್ಟು!" ಎಂದು ಉತ್ಸಾಹದಿಂದ ಹಾಡಿದರು. ತಾರುಣ್ಯದ ಆ ಮಾತನ್ನು ಅವರು ಮೃತ್ಯು ಸಮ್ಮುಖದಲ್ಲಿ ಜೀವನದ ಲೆಕ್ಕ ಕೊಡುತ್ತ ಹೇಳಿದರೆ ತಗುತ್ತಿತ್ತು. ಆ ಲೇಖಕನಿಗೆ ದೊರೆತ ಖನಿಯೆಷ್ಟು! ಮನಸ್ವಿನಿಯಾದ ಅವರ ಕಾವ್ಯ ದೇವಿಯ ನೃತ್ಯವೆಷ್ಟು, ವಿಲಾಸವೆಷ್ಟು! ಆ ದೇವಿಯ ಉಪಾಸನೆಯಿಂದಲೇ ಅವರು ಸಾಧಿಸಿ ತತ್ತ್ವವೆಷ್ಟು, ಧರ್ಮವೆಷ್ಟು! ಶ್ರೀ ಪದ್ಮರಾಜರ ಪರಿವರ್ತನೆಗಳಿಂದ ಈ ಮಹಾಕವಿಯ ಕಾವ್ಯ ಸಂಪತ್ತು ತಕ್ಕಮಟ್ಟಿಗೆ ಗೋಚರಕ್ಕೆ ಬರುತ್ತದೆ. ಪರಿವರ್ತಕರು ತಮ್ಮ ಕಾರ್ಯವನ್ನು ಶ್ರದ್ಧೆಯಿಂದ ಮಾಡಿದಾರೆ. ಶೈಲಿಯಲ್ಲಿ ಒಂದು ರೀತಿಯ

ಪ್ರಯೋಗ ಕಾಣುತ್ತಿದೆ. ರವೀಂದ್ರನಾಥರ ಮಹದೈಶ್ವರ್ಯದ ಕುರುಹಾಗುವಂತೆ ಈ ಸಂಗ್ರಹವನ್ನು ರಚಿಸಿದ ಬಗೆಗೆ ನಾನು ಶ್ರೀ ಪದ್ಮರಾಜರನ್ನು ಅಭಿನಂದಿಸುತ್ತೇನೆ.

ಕವಿವರ ರವೀಂದ್ರನಾಥರು ತಮ್ಮ ಕಾವ್ಯದಲ್ಲಿ ತಮ್ಮ ವೈಯಕ್ತಿಕ ಸಂಸ್ಕೃತಿಗೆ ರೂಪುಗೊಟ್ಟರು. ಈ ಭಾಗದಲ್ಲಿ ಇವರು ಉಳಿದೆಲ್ಲ ಕವಿಗಳಂತೆ ಕವಿ. ಹೀಗೆ ಮಾಡುತ್ತ ಈ ಕವಿ ಭರತವರ್ಷದ ಸಂಸ್ಕೃತಿಗೇ ಒಂದು ನವೀನ ರೂಪವನ್ನು ಕೊಟ್ಟರು. ಇದು ಇವರ ಅಪೂರ್ವ ಸುಯೋಗ. ಮಾತೃಭೂಮಿಗೆ ಕೀರ್ತಿತರುತ್ತ ಇವರು ದೇಶಪ್ರೇಮಿಗಳಾದ ತರುಣರಿಗೆ ಆಚಾರ್ಯರಾಗಿ ನವೀನ ಭಾರತವರ್ಷದ ಆಸೆ ಅಭಿಲಾಷೆಗಳಿಗೆ ಕಹಳೆಯಾಗಿ ಮೊಳಗಿದರು. ಇವರ ಹೃದಯದ ವೈಶಾಲ್ಯದಿಂದ ಈ ಮೊಳಗು ಒಂದು ದೇಶಕ್ಕೆ ಮಾತ್ರ ಸಂಬಂಧಿಸದೆ ಸಮಸ್ತ ಪ್ರಪಂಚದ ಆಸೆ ಅಭಿಲಾಷೆಗಳಿಗೂ ಮೊಳಗಾಗಿ ಪರಿಣಮಿಸಿತು. ಹೀಗೆ ಹಿಂದಣ ಇತಿಹಾಸದ ಸತ್ಫಲವಾಗಿ, ಮುಂದಣ ಇತಿಹಾಸದ ಶಕುನವಾಗಿ, ಮಂಗಳವಾಗಿ ಮೊದಲಿಟ್ಟು ಮಂಗಳವಾಗಿ ಬೆಳೆದು ಮಂಗಳವಾಗಿ ಮುಗಿದ ಕವಿವರರ ಬಾಳುವೆ ನಮ್ಮ ಜನದ ಮನಸ್ಸಿನಲ್ಲಿ ಶಾಶ್ವತವಾಗಿ ನಿಲ್ಲಲಿ. ಅದಕ್ಕೆ ಈ ಕೃತಿಯಿಂದ ಸಹಾಯವಾಗಲಿ.

1941

ಶ್ರೀ ಟಿ. ಪಿ. ಕೈಲಾಸಂರವರ

# "ಹುತ್ತದಲ್ಲಿ ಹುತ್ತ"

ಈಗ ಎರಡು ವರ್ಷದ ಹಿಂದೆ ಶ್ರೀ ಕೈಲಾಸಂಶವರೂ ನಾನೂ ಬೆಳಗಾಮಲ್ಲಿ ಸಾಹಿತ್ಯ ಸಮ್ಮೇಳನದ ವೇಳೆ ಸೇರಿದ್ದಾಗ ಅವರು ತಮ್ಮ ಒಂದು ಪುಸ್ತಕಕ್ಕೆ ಮುನ್ನುಡಿ ಬರೆದು ಕೊಡಬೇಕೆಂದು ನನ್ನನ್ನು ಕೇಳಿದರು. ಕೈಲಾಸಂರವರ ಪುಸ್ತಕಕ್ಕೆ ಮುನ್ನುಡಿ ಬರೆಯುವುದು ಯಾರಿಗಾದರೂ ಹಿರಿಯ ಗೌರವ. ಹೀಗೆಂದೇ ಅವರಿಗೆ ಹೇಳಿ, ನಾನು ಅವರ ಮಾತಿಗೆ ಸಮ್ಮತಿಸಿದೆನು. ಅವರು ಅಂದು ಸೂಚಿಸಿದ ಪುಸ್ತಕಕ್ಕೆ ಮುನ್ನುಡಿ ಬರೆಯುವ ಸಂದರ್ಭ ಒದಗಲಿಲ್ಲ. ಅವರ ಇನ್ನೊಂದು ಕೃತಿಯಾದ ಈ ಪುಸ್ತಕದ ವಿಷಯದಲ್ಲಿ ಅಂದು ಕೈಕೊಂಡ ಕರ್ತವ್ಯವನ್ನು ನಾನು ಬಹು ಸಂತೋಷದಿಂದ ನೆರವೇರಿಸುತ್ತಿದ್ದೇನೆ.

ನಾನು ಕೈಲಾಸಂರವರನ್ನು ಈಗ ಸುಮಾರು ಇಪ್ಪತ್ತು ವರ್ಷದಿಂದ ಬಲ್ಲೆ. ಅವರನ್ನು ಮೊದಲು ನೋಡಿದಾಗ ಅವರ ಮುಖ್ಯ ಲಕ್ಷಣವೆಂದು ನನಗೆ ಕಂಡದ್ದು ಅವರ ಬುದ್ಧಿಯ ಚುರುಕು: ಯಾವ ವಿಷಯವನ್ನಾದರೂ ಆ ಬುದ್ಧಿ ವೇಗದಿಂದ ಗ್ರಹಿಸುವುದು. ಅವರ ಭಾವನೆಯೂ ಹೀಗೆಯೇ ವೇಗವಾದದ್ದು; ಅನುಭವ, ಉಕ್ತಿ, ಹೀಗೆಯೇ ವೇಗ. ಆಮೇಲೆ ಅವರನ್ನು ಕಂಡಾಗ ಇವರ ಬುದ್ಧಿ ವೇಗವಾಗಿರುವಂತೆ ಹೃದಯ ಆರ್ದ್ರವಾಗಿದೆ ಎನ್ನುವುದೂ ನನಗೆ ತಿಳಿಯಿತು. ತೀಕ್ಷ್ಣವಾದ ಬುದ್ಧಿಯಿಂದ, ಆರ್ದ್ರವಾದ ಹೃದಯದಿಂದ, ಇವರು ಲೋಕದ ಬಾಳುವೆಯನ್ನು ನೋಡಿ ಮೆದುವಾಗಿದ್ದರು. ಇಂಥ ಜೀವಕ್ಕೆ ಜೊತೆಯ ಬಾಳನ್ನು ಕುರಿತು ಕೊರಗುವುದು ತಪ್ಪಿದ್ದಲ್ಲ. ಕೈಲಾಸಂರವರ ಮಾತಿನಲ್ಲಿ ಈ ಕೊರಗು ಕಾಣುವುದು. ಬಾಳನ್ನು ವಿವರವಾಗಿ ನೋಡುವ ತೆರೆದ ಕಣ್ಣೊಂದಿಗೆ ಇವರಿಗೆ ತಕ್ಕಷ್ಟು ಶಾಸ್ತ್ರ ಪರಿಚಯವೂ ಇದ್ದದ್ದು ಕಾಣುವುದು. ಈ ಪರಿಚಯದ ಮುಖ್ಯ ಲಕ್ಷಣ ಕೂಡ ಹರಹಿಗಿಂತ ಹೆಚ್ಚಾಗಿ ಕೂರ್ಮೆ, ಆಳ. ಜೊತೆಗೆ ಬೀದಿಯಲ್ಲಿ ಕಂಡರೆ

ಬೀದಿಯಲ್ಲಿ, ಅಂಗಡಿಯಲ್ಲಿ ಕಂಡರೆ ಅಂಗಡಿಯಲ್ಲಿ, ಎಲ್ಲಿ ಕಂಡರೆ ಅಲ್ಲಿ, ಗೆಳೆಯನನ್ನು ನಿಲ್ಲಿಸಿಕೊಂಡು ತನ್ನ ಇಷ್ಟದ ಮಾತನ್ನು ಹೊತ್ತಿಷ್ಟಾಯಿತೆಂದು ಸಂಕೋಚಪಡದೆ ಹೇಳುವ ಸರಳತೆ. ದಿನ ದಿನಕ್ಕೆ ಇವರನ್ನು ಕಂಡಹಾಗೆ ಈ ಚಿತ್ರವೇ ಮತ್ತಷ್ಟು ವಿವರದೊಡನೆ ಸ್ಪಷ್ಟವಾಗುತ್ತದೆ. ತನ್ನ ಕೃತಿಯನ್ನು ಕುರಿತು ಅದು ಇನ್ನೊಬ್ಬರದೋ ಎಂಬಂತೆ ನಿಸ್ಪೃಹವಾದ ವಿಶ್ವಾಸ, ಇನ್ನೊಬ್ಬರದೋ ಎಂಬಂತೆ ಅನಹಂಕೃತಿ. ಸರಳತೆಯೊಂದಿಗೆ ಗೆಳೆತನದ ಕಲ್ಮಷರಹಿತವಾದ ಸ್ನೇಹ, ಮೆಚ್ಚಿಗೆ, ನಿಸ್ಸಂಕೋಚ, ಅಪ್ಪುಗೆ. ನನ್ನ ಅನುಭವದಲ್ಲಿ ಬೆಳೆದಿರುವ ಕೈಲಾಸಂರ ಮೂರ್ತಿಯ ಮುಖ್ಯ ರೇಖೆ ಹೀಗೆ.

ಈ ಸ್ವಭಾವದ ನಮ್ಮ ಈ ಮಿತ್ರರು “ಟೊಳ್ಳುಗಟ್ಟಿ” ಎಂದು ನಮ್ಮಲ್ಲಿ ಹೆಸರುವಾಸಿಯಾಗಿರುವ ಸಣ್ಣ ದೃಶ್ಯವನ್ನು ಈಗ ಸುಮಾರು ಇಪ್ಪತ್ತು ವರ್ಷದ ಹಿಂದೆ ರಚಿಸಿ ಕನ್ನಡದ ನಾಟಕದ ಸೇವಕರಾಗಿ ಅಡಿಯಿಟ್ಟರು. “ಟೊಳ್ಳುಗಟ್ಟಿ” ನಿಜವಾಗಿಯೂ ಸಣ್ಣ ಕೃತಿಯೇ ಸರಿ. ಅದರ ಉದ್ದ ಮುನ್ನುಡಿ ಮುಂತಾದುವನ್ನೆಲ್ಲ ಸೇರಿಸಿಕೊಂಡು ಒಟ್ಟು ೪೮ ಪುಟ. ಆದರೆ ಆ ಸಣ್ಣದೃಶ್ಯ ನಾಟಕರಂಗದಲ್ಲಿ ಕ್ರಾಂತಿಯೊಂದನ್ನು ಮೊದಲು ಮಾಡಿತು. ಆಗ ನಮ್ಮ ದೇಶದಲ್ಲಿ ವಿದ್ಯಾಭ್ಯಾಸದ ಶಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀ ಕಟ್ಟಮಂಚಿ ರಾಮಲಿಂಗಾ ರೆಡ್ಡಿಯವರು ಅದನ್ನು ನೋಡಿ ಆನಂದ ಆಶ್ಚರ್ಯದಿಂದ ಅದರ ಕರ್ತೃವನ್ನು ಬಾಯಿ ತುಂಬ ಕೊಂಡಾಡಿದರು. ಶ್ರೀ ರೆಡ್ಡಿಯವರು ಆಂಗ್ಲ ಸಾಹಿತ್ಯವನ್ನು ಚೆನ್ನಾಗಿ ಕಂಡವರು. ಆಂಗ್ಲರ ದೇಶದಲ್ಲಿ ಇದ್ದು ಅವರ ಆಧುನಿಕ ರಂಗದ ಅದ್ಭುತವಾದ ಅಭಿವರ್ಧನವನ್ನು ನೋಡಿ ಸಂತೋಷಪಟ್ಟಿದ್ದವರು. ಆದರೂ, ಅಥವಾ ಪ್ರಾಯಶಃ ಇದೇ ಕಾರಣದಿಂದ, ಇವರು ಕೈಲಾಸಂರವರ ಸಣ್ಣ ಕೃತಿಯನ್ನು ನೋಡಿ ಮುಗ್ಧರಾದರು. ನಮ್ಮ ಜನರ ಪೂರ್ವದ ಕಾದಂಬರಿಗಳಲ್ಲಿ ರಾಜಕುಮಾರನು ದೇಶಾಟನೆ ಮಾಡುತ್ತಾ ಪುಷ್ಕರಣಿಯಲ್ಲಿ ಕಂಡ ಕೂದಲ ಎಳೆಯಿಂದ ಸ್ನಾನ ಮಾಡಿದ ಹೆಣ್ಣಿನ ಚೆಲುವನ್ನು ಊಹಿಸಿ ಮರುಳಾದನೆಂದು ಹೇಳುವುದುಂಟು. ಚೆಲುವನ್ನು ಬಲ್ಲವರಿಗೆ ಇಂಥ ದೃಷ್ಟಿ ಬಂದಿರುತ್ತದೆ.

ಶ್ರೀ ರೆಡ್ಡಿಯವರು ಕೈಲಾಸಂರನ್ನು Genius ಎಂದರು, Jewel ಎಂದರು. ಎರಡೂ ಲೇಖಕರನ್ನು ಕುರಿತು ಒಪ್ಪುವಂಥ ಮಾತು. ಕೈಲಾಸಂ ಆಮೇಲೆ ರಚಿಸಿದ ಕೃತಿಗಳಿಂದ ಇದು ಎಷ್ಟು ನಿಜ ಎನ್ನುವುದು ಸ್ಪಷ್ಟವಾಗುತ್ತ ಬಂದಿದೆ.

ಕನ್ನಡದ ಹೊಸ ಸಾಹಿತ್ಯದ ಇತರ ಕವಲುಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ನಮಗೆ ಪಾಶ್ಚಾತ್ಯ ಸಾಹಿತ್ಯ ಹೊಸದಾರಿಯನ್ನು ತೋರಿಸಿತು. ನಾಟಕ ಎಂಬ ಕೃತಿ ಸಮಾಜದ ಚಿತ್ರವನ್ನು ಕೊಡುವುದೂ ಸಮಾಜದ ಸ್ಥಿತಿಯನ್ನು ಕುರಿತು ಟೀಕಿಸುವುದೂ ಹಳೆಯ ಸಂಪ್ರದಾಯ. ಹೊಸ ನಾಟಕದ ವಿಶೇಷ ಗುಣ: ಸಮಾಜದ ಸಮಸ್ಯೆಯನ್ನು ಎತ್ತಿಕೊಂಡು ಚರ್ಚಿಸುವುದು. ಪಾಶ್ಚಾತ್ಯ ಸಾಹಿತ್ಯದಲ್ಲಿ ಈ ಪದ್ಧತಿಯನ್ನು ಮೊದಲು ಮಾಡಿದವನು ನಾರ್ವೆಯ ಇಬ್ಸನ್ ಕವಿ. ಈ ಮಹನೀಯನ "ದಿ ಡಾಲ್ಸ್ ಹೌಸ್" ಎಂಬ ಪ್ರಸಿದ್ಧ ನಾಟಕವನ್ನು ನನ್ನ ಮಿತ್ರರಾದ ಶ್ರೀಮಾನ್ ಸೋಸಲೆ ಗರಳಪುರಿ ಶಾಸ್ತ್ರಿಗಳು ಕೆಲವು ವರ್ಷಗಳ ಹಿಂದೆ ಕನ್ನಡಿಸಿದರು. ಆ ನಾಟಕದ ನೋರಾ ತಾನು ಹೆಂಡತಿಯಾಗಿ ಬಾಳಿದ ರೀತಿಯಲ್ಲಿ ಬೇಸರಗೊಂಡು ಮನೆಯನ್ನು ತೊರೆದು ಹೋಗುತ್ತ ಬಾಗಿಲು ಹಾಕಿದ ಶಬ್ದ ಯೂರೋಪಿನಲ್ಲೆಲ್ಲ ಮೊಳಗಿತು, ಎಂದು ವಿಮರ್ಶಕರು ಆ ನಾಟಕದ ಮಹಿಮೆಯನ್ನು ಚಮತ್ಕಾರವಾಗಿ ಹೊಗಳಿದ್ದಾರೆ. ಈ ನಾಟಕದ ತೆರನ ಹತ್ತಾರು ನಾಟಕವನ್ನು ರಚಿಸಿ ಇಬ್ಸನ್ ತಾನು ಆರಂಭಿಸಿದ ಸಂಪ್ರದಾಯವನ್ನು ಸ್ಥಿರವಾಗಿ ನಿಲ್ಲಿಸಿದನು. ಅವನ ಪದ್ಧತಿಯನ್ನನುಸರಿಸಿ ಇಂಗ್ಲೆಂಡಿನಲ್ಲಿ ಅನೇಕರು ಕೃತಿಗಳನ್ನು ರಚಿಸಿದರು. ಅವರಲ್ಲೆಲ್ಲ ಮೊದಲಿಗನೆಂದರೆ ಬರ್ನಾರ್ಡ್ ಷಾ ಮಹನೀಯನು. ಕೈಲಾಸಂರವರು ತಮ್ಮ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿನಲ್ಲಿ ಇದ್ದ ಕಾಲದಲ್ಲಿ ಈ ಹೊಸ ನಾಟಕ ಉಚ್ಛ್ರಾಯ ಸ್ಥಿತಿಗೆ ಬರುತ್ತಿತ್ತು. ಕೈಲಾಸಂರಂಥ ಉತ್ಸಾಹಿ ತರುಣರಿಗೆ ಇದು ಮನ ಮೋಹಕವಾದದ್ದು ಆಶ್ಚರ್ಯವೇನೂ ಅಲ್ಲ. ಅವರು ನಮ್ಮ ದೇಶಕ್ಕೆ ಹಿಂದಿರುಗಿ ಬಂದು ಸಾಹಿತ್ಯದಲ್ಲಿ ಕೆಲಸಮಾಡಬೇಕೆಂದು ಹೊರಟಾಗ ಅವರ ಬುದ್ಧಿ ಸಹಜವಾಗಿ ಇಬ್ಸನ್, ಬರ್ನಾರ್ಡ್ ಷಾ, ಇವರ ದಾರಿಯನ್ನು ಅನುಸರಿಸಿತು.

ಎಂದ ಮಾತ್ರಕ್ಕೆ ಅದರಲ್ಲಿ ಸ್ವಾತಂತ್ರ್ಯ ಇರಲಿಲ್ಲವೆಂದು ಗ್ರಹಿಸಬಾರದು. ಕೈಲಾಸಂರ ಸ್ವಭಾವ ದಾರಿ ಮಾಡತಕ್ಕ ಸ್ವಭಾವ, ದಾರಿ ಹಿಡಿಯತಕ್ಕದ್ದಲ್ಲ. ಇಬ್ಸನ್ನನಲ್ಲಿ ಕಾಣುವ ಒಂದು ಸಂಪೂರ್ಣ ವಾಸ್ತವತೆ ಇವರ ಕೃತಿಯಲ್ಲಿ ಕಾಣುವುದಿಲ್ಲ: ಇವರು ಆ ದಾರಿಯನ್ನು ಮೆಚ್ಚಿದರೂ ತುಳಿಯಲಾರರು ಎಂದು ಕಾಣುತ್ತದೆ. ಹಾಗೆಯೇ ಇವರಲ್ಲಿ ಬರ್ನಾರ್ಡ್ ಷಾ ಮಹನೀಯನ ಕೃತಿಗಳಲ್ಲಿ ಕಾಣುವ ಅವಾಸ್ತವತೆಯೂ ಇಲ್ಲ. ಇಬ್ಸನ್ ಕವಿಯಲ್ಲಿ ನಗೆ ದೊರೆಯುವುದಿಲ್ಲ: ಬರ್ನಾರ್ಡ್ ಷಾ ನಗುವುದರಲ್ಲಿ ನಿಪುಣ. ಕೈಲಾಸಂ ವಾಸ್ತವತೆಯಲ್ಲಿ ಇಬ್ಸನ್ ಕಡೆಗೆ ಒಲಿಯುವಂತೆ ನಗೆಯಲ್ಲಿ ಷಾ ಕಡೆಗೆ ಒಲಿಯುತ್ತಾರೆ. ಮೊತ್ತದಲ್ಲಿ ಇವರು ನಡೆಯುವ ದಾರಿ ಇವರದೇ. ನಮ್ಮ ಜನದ ಇಂದಿನ ಜೀವನದ ಅನೇಕ ಸಮಸ್ಯೆಗಳನ್ನು ಎತ್ತಿಕೊಂಡು ಇವರು ತಮ್ಮ ಹಲವು ನಾಟಕಗಳಲ್ಲಿ ಅವುಗಳನ್ನು ಕುರಿತು ಯೋಚನೆ ಮಾಡುವಂತೆ ನಮ್ಮ ಜನವನ್ನು ಚುಚ್ಚಿ ಎಬ್ಬಿಸಿದ್ದಾರೆ.

ಈ ಕೆಲಸದಲ್ಲಿ ಕೈಲಾಸಂರ ಮುಖ್ಯ ಸಾಧನ ನಗೆ: ಅದರಲ್ಲಿಯೂ ಒಂದು ಬಗೆಯ ನಗೆ. ಆ ಬಗೆ ಎಂಥದೆಂದು ನಿಷ್ಕರ್ಷೆಯಿಂದ ತೋರಿಸಬೇಕಾದರೆ ನಗೆಯ ಇತರ ಬಗೆಗಳನ್ನೂ ವರ್ಣಿಸಬೇಕಾಗುತ್ತದೆ. ಇಲ್ಲಿ ಈ ಕೆಲಸಕ್ಕೆ ನಾನು ಕೈಹಾಕುವುದಿಲ್ಲ. ಕೈಲಾಸಂರ ನಗೆಯ ಮುಖ್ಯ ಲಕ್ಷಣಗಳನ್ನು ಮಾತ್ರ ಇಲ್ಲಿ ಸೂಚಿಸಬಹುದು. ಮನುಷ್ಯನ ನಡತೆ ಸಾಮಾನ್ಯ ದೃಷ್ಟಿಯಿಂದ ಸಾಮಾನ್ಯವಾಗಿ ಕಾಣುತ್ತದೆ. ದಿಟ್ಟಿಸಿನೋಡಿದರೆ ಕೆಲವು ಭಾಗ ವಿಕಾರವಾಗಿ ಕಾಣುತ್ತದೆ; ದಿಟ್ಟಿಸಿ ನೋಡದಯೆ ಕೆಲವು ಭಾಗ ನಗುವಂತೆ ಮಾಡುತ್ತದೆ. ಕೈಲಾಸಂ ಮನುಷ್ಯನ ನಡತೆಯನ್ನು ದಿಟ್ಟಿಸಿ ನೋಡಿ ತಪ್ಪು ಹುಡುಕಿ ನಗುವುದಿಲ್ಲ. ಬಾಳನ್ನು ನೋಡುತ್ತ ನಗುವಂತೆ ಆಗುವ ಸಂದರ್ಭವನ್ನು ಎತ್ತಿಕೊಂಡು ನಗುತ್ತಾರೆ. ಅವರಿಗೆ ಕಾಣುವಷ್ಟೇ ಗಾತ್ರದಲ್ಲಿ ರೂಪಿಸಿದರೆ ವಸ್ತು ಇತರರಿಗೆ ಕಾಣದೆ ಹೋಗಬಹುದು, ನಗೆಯನ್ನು ಉಂಟುಮಾಡದೆ ಇರಬಹುದು. ಆದ್ದರಿಂದ ಲೇಖಕರು ಅದನ್ನು ಸ್ವಲ್ಪ ಅತಿಮಾಡಿ ತೋರಿಸುತ್ತಾರೆ.

ಎಂಥ ಸ್ಥೂಲ ಬುದ್ಧಿಗೂ ಅದು ಆಗ ಕಂಡೇ ಕಾಣುತ್ತದೆ. ನೈಜದ ಸೊಗಸಿನಿಂದ ಇದು ಬೇರೆಯಾಗಿರುವುದು ಕಂಡು ನಮಗೆ ನಗು ಬರುತ್ತದೆ. ನಾವು ಯಾವುದನ್ನು ಕುರಿತು ನಗುತ್ತೇವೆಯೋ ಅದು ಯಾವುದೋ ಒಂದು ಅವಿವೇಕದಲ್ಲಿ ಬೇರು ಕಂಡಿರುತ್ತದೆ. ಆ ಅವಿವೇಕವನ್ನು ಕುರಿತು ಆಗ ನಮಗೆ ತಾನಾಗಿ ಬೇಸರ ಹುಟ್ಟುತ್ತದೆ. ನಮ್ಮನ್ನೇ ಅರಿಯದೆ ನಾವು ಆ ವಿಷಯದಲ್ಲಿ ಹೆಚ್ಚಾಗಿಯೋ ಸ್ವಲ್ಪವಾಗಿಯೋ ತಿದ್ದಿಕೊಳ್ಳುತ್ತೇವೆ. ಇದರಲ್ಲಿ ಕವಿಯ ಕೆಲಸ, ದೋಷವಿದ್ದಲ್ಲಿ ಒಂದು ಭೂತಗನ್ನಡಿ ಹಿಡಿದು ತೋರಿಸಿದಂತೆ. ಕವಿಯ ಹೃದಯ ಆರ್ದ್ರವಲ್ಲ ದಿದ್ದರೆ ಇಂಥಕಾರ್ಯ ಅತಿಹಾಸ್ಯ, ಅಟ್ಟಹಾಸ, ಅಪಹಾಸ್ಯ ಆಗುವ ಸಂಭವವಿದೆ. ಬಾಳನ್ನು ಕಂಡು ಮರುಗುವವನ ಕೃತಿಯಲ್ಲಿ ಇದು ಕನಿಕರವನ್ನು ಉಂಟುಮಾಡುವ ಮೃದು ಹಾಸ್ಯವಾಗುತ್ತದೆ. ಕೈಲಾಸಂ ರವರ ಹಾಸ್ಯ ಇಂಥ ಹಾಸ್ಯ. ನಗುವ ತುಟಿಯೊಂದಿಗೆ ಇಲ್ಲಿ ತೊಯ್ದ ಕಣ್ಣೂ ಕಾಣುತ್ತಿರುತ್ತದೆ. ತುಟಿಯ ಮೇಲಣ ನಗೆಗಿಂತ ಇಲ್ಲಿ ಕಣ್ಣಿನ ತೇವವೇ ಹೆಚ್ಚು. ಅನೇಕವೇಳೆ ಆ ತೇವ ಹನಿಗೂಡಿ ಹಳ್ಳ ವಾಗದಿರಲೆಂದೇ ಭಾವ ನಗೆಯಾಗಿ ಹೊರಳಿದೆ ಎಂದು ಹೇಳಬೇಕು. ಕೈಲಾಸಂರವರ ನಗೆಯ ಉದ್ದೇಶ ದೋಷೋದ್ಘಾಟನವಲ್ಲ, ಮನಸ್ಸನ್ನು ಕರಗಿಸುವುದು. ಅವರ ಹೃದಯದಲ್ಲಿ ಜನರ ಲೋಪವನ್ನು ಕುರಿತು ರೋಷವಿಲ್ಲ, ದೋಷದಿಂದ ಜನದ ಬಾಳು ಕೆಟ್ಟಿತೇ ಎಂದು ಖೇದವಿದೆ. ಇದರ ಗುರಿ ಯಾರನ್ನಾದರೂ ನೋಯಿಸಬೇಕೆನ್ನುವುದಲ್ಲ, ಲೇಖಕನ ಎದೆಯನ್ನು ನೋವು ಹಾಕಿದ ಪಟ್ಟಿನಿಂದ ಬಿಡಿಸುವುದು.

ಎಲ್ಲ ರಸದ ನಿತ್ಯವಾದ ಧ್ಯೇಯ ಇದೇ. ಶ್ರದ್ಧೆ, ದಾನ, ತಪಸ್ಸು, ಇವುಗಳಲ್ಲಿ ಸಾತ್ವಿಕ ರಾಜಸ ತಾಮಸ ಇರುವಂತೆ ಶೃಂಗಾರ, ವೀರ ಕರುಣೆ. ಹಾಸ್ಯಗಳಲ್ಲಿ ಸಾತ್ವಿಕ, ರಾಜಸ, ತಾಮಸ ಉಂಟು. ಶುದ್ಧ ವಾದ ಆನಂದವನ್ನು ಬಯಸುವ ಲೇಖಕನು ಶುದ್ಧವಾದ ದೃಷ್ಟಿಯಿಂದ ಜೀವನವನ್ನು ನೋಡಿ ಶುದ್ಧವಾದ ಭಾವನೆಗೆ ರೂಪುಕೊಟ್ಟಾಗ ನಿರ್ಮಲ ವಾದ ರಸವನ್ನು ಒಸರುವ ಶ್ರೇಷ್ಠ ಸಾಹಿತ್ಯ ಆಗುತ್ತದೆ. ರಸ ನಿರ್ಮಲ ವಾದಷ್ಟೂ ಅದರ ಪರಿಣಾಮ ತೀವ್ರವಾಗುತ್ತದೆ. ಪರಿಣಾಮಕಾರಿ

ಯಾದ ಶೃಂಗಾರ, ವೀರ, ಕರುಣೆ, ನಗೆ, ಇನ್ನೆಲ್ಲ ರಸವೂ ಮನುಷ್ಯ ನನ್ನು ಒಳಮುಟ್ಟಿದ ಕ್ಷಣದಲ್ಲಿ ನಾನೆಂಬ ತೊಡಕಿನಿಂದ ಬಿಡಿಸುತ್ತದೆ. ಈ ಬಿಡುಗಡೆ ಅವುಗಳ ನೈರ್ಮಲ್ಯಕ್ಕೆ, ಆವೇಗಕ್ಕೆ, ಮತ್ತು ಅವುಗಳ ಸ್ವಭಾವಕ್ಕೆ ಸಿಕ್ಕಿದ ಜೀವದ ಸಹೃದಯತೆಗೆ ಅನುಸಾರವಾಗಿರುತ್ತದೆ. ನಾನು ಎನ್ನುವುದು ಮಣಿಗಂಟಾಗಿರುವ ಮನುಷ್ಯನಿಗೆ ಈ ಬಿಡುಗಡೆ ಸುಲಭವಾಗಿ ದೊರೆಯುವುದಿಲ್ಲ. ಅಂಥವನಿಗಾದರೂ ಹತ್ತಾರು ಸಲ ರಸ ತೀವ್ರವಾಗಿ ತಾಕಿದರೆ ಪ್ರಯೋಜನ ಇರಬಹುದು. ಕೈಲಾಸಂ ರವರ ನಗೆ ಹೀಗೆ ನಿರ್ಮಲವಾದದ್ದು, ತೀವ್ರವಾದದ್ದು, ಮೇಲೆ ಮೇಲೆ ಮನವನ್ನು ಮುಟ್ಟಿ ಬಿಡುಗಡೆಯನ್ನು ತರತಕ್ಕದ್ದು. ಸಾಹಿತ್ಯ ಮಂಟಪದ ನವರಂಗದಲ್ಲಿ ಒಂದರ ದೈವ ಇವರ ಶುದ್ಧ ಹೃದಯಕ್ಕೆ ಒಲಿದು ಪ್ರತ್ಯಕ್ಷವಾಯಿತು. ಅದರ ಆರಾಧನೆಯಿಂದ ಇವರು ಕೃತಕೃತ್ಯರಾಗಿದ್ದಾರೆ.

ರಸದ ಆರಾಧಕರಾದ್ದರಿಂದ ಕೈಲಾಸಂರವರು ತಮ್ಮ ಕೃತಿಗಳಲ್ಲಿ ತಾವೇ, ಪ್ರಾಯಶಃ, ನೆನೆಯದ ಅರ್ಥವಿಸ್ತಾರವನ್ನು ಸಾಧಿಸಿದಾರೆ. “ಟೊಳ್ಳುಗಟ್ಟಿ” ಯಲ್ಲಿ ಇವರು ಉದ್ದೇಶಿಸಿದಂತೆ ನಮ್ಮ ಕಾಲದ ವಿದ್ಯಾಭ್ಯಾಸವನ್ನು ಕುರಿತ ಟೀಕೆ ಮಾತ್ರ ಇಲ್ಲ. ಬರಿಯ ಬುದ್ಧಿಯಿಂದ ಕೆಲಸ ಮಾಡಿ, ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಗೊಂಬೆಗಳನ್ನು ರಂಗಕ್ಕೆ ತಂದು ಇವರು ತತ್ವವನ್ನು ಪ್ರತಿಪಾದಿಸುವುದಿಲ್ಲ. ತಮ್ಮ ಅಭಿಪ್ರಾಯಕ್ಕೆ ಉದಾಹರಣೆಯಾಗಬಹುದಾದ ಒಂದು ಸಂದರ್ಭವನ್ನು ಎತ್ತಿಕೊಳ್ಳುವಲ್ಲಿ ಇವರು ತಾವು ಕಂಡಿರುವ ಮಾನವ ವ್ಯಕ್ತಿಗಳನ್ನು ಕರೆದು ತರುತ್ತಾರೆ. ಗೊಂಬೆಗಳಾಗಿದ್ದರೆ ಇವರ ಮಾತನ್ನು ಮಾತ್ರ ಹೇಳಬಹುದಾಗಿದ್ದ ವ್ಯಕ್ತಿಗಳು ಮಾನವರಾಗಿರುವುದರಿಂದ ಮಾನವ ಸಹಜವಾದ ಮಾತನ್ನು ಆಡುತ್ತಾರೆ, ಮಾನವ ಸಹಜವಾದ ರೀತಿಯಲ್ಲಿ ನಡೆಯುತ್ತಾರೆ. ಅವರ ನಿರ್ಮಾಪಕನು ಅವರನ್ನು ಒಂದು ತತ್ವವನ್ನು ಪ್ರತಿಪಾದಿಸುವುದಕ್ಕೆಂದು ಕರೆತಂದಿದ್ದರೂ ಅವರು ಆಡುವ ಮಾತು, ನಡೆಯುವ ರೀತಿಯಿಂದ ಬಹುಮುಖವಾದ ತತ್ವ ಹೊರ ಸೂಸುತ್ತದೆ. “ಟೊಳ್ಳುಗಟ್ಟಿಯ” ಹಿರಿಯಣ್ಣಯ್ಯ, ಅವನ ಹೆಂಡತಿ, ಮಕ್ಕಳು,

ಸೊಸೆಯರು, ನಾಗತ್ತೆ, ಇವರ ಮಾತು ನಮ್ಮ ವಿದ್ಯಾಭ್ಯಾಸಕ್ಕೆ ಸಂಬಂಧಪಡದ ಹತ್ತಾರು ವಿಷಯವನ್ನು ಸೂಚಿಸುತ್ತವೆ. ಹಾಗೆಯೇ ಈ "ಹುತ್ತದಲ್ಲಿ ಹುತ್ತ" ಗ್ರಂಥದಲ್ಲಿ ಹಿರಿಯಣ್ಣಯ್ಯ, ಅವನ ತಾಯಿ, ಅವನ ಮಗ, ಕಪ್ಪಣ್ಣ, ಅವನ ಜೊತೆಗಾತಿ, ಬೋರ, ಇವರ ಮಾತು ರೀತಿಯಿಂದಲೂ ಏಕದೇಶವಾದ ಒಂದು ನೀತಿ ಮಾತ್ರ ಹೊರ ಬೀಳುವುದಿಲ್ಲ. ಪ್ರಾಯಶಃ ಲೇಖಕರ ಉದ್ದೇಶವಾದರೂ ಏಕದೇಶ ಅಲ್ಲವೇನೊ? ಇಪ್ಪತ್ತು ವರ್ಷದಲ್ಲಿ ಕೈಲಾಸಂರವರ ಸಾಹಿತ್ಯೋಪಾಸನೆ ಸಿದ್ಧಿಯ ಕಡೆಗೆ ಮುಂದುವರಿದಿದೆ. "ಹುತ್ತದಲ್ಲಿ ಹುತ್ತ"ದಂಥ ಕೃತಿಯನ್ನು ನಿರ್ಮಿಸುವ ಕೈಗೆ ಕೌಶಲ ಕಡಿಮೆಯೇ? ಆ ಕೌಶಲವನ್ನು ಪಡೆಯ ಬೇಕಾದರೆ ಮಾಡಿರಬೇಕಾದ ತಪಸ್ಸು ಕೊಂಚವೇ? ಈ ದೃಷ್ಟಿಯೇನು! ಈ ಭಾವವೇನು! ಈ ಊಹೆಯೇನು! ಈ ಚಳಕವೇನು! ಕನ್ನಡ ಸಾಹಿತ್ಯದಲ್ಲಿ ಕೈಲಾಸಂ ಮಾಡಿರುವ ಕೆಲಸ ಕಲಶದ ಸ್ಥಾನವನ್ನು ಸೇರಿ ಕುಳಿತಿದೆ. ಈ ದಾರಿಯಲ್ಲಿ ಇವರ ಕೃತಿ ಪ್ರಪಂಚದ ಬೇರೆ ಯಾವ ಸಾಹಿತ್ಯಕ್ಕೂ ಕಡಮೆಯಲ್ಲವೆಂಬ ಹೆಮ್ಮೆಯನ್ನು ಕನ್ನಡಕ್ಕೆ ಸಲ್ಲಿಸಿದೆ.

"ವ್ಯಕ್ತಿಯ ಮಾತು ಬೇಡ, ಅವನ ಕೃತಿಯ ಮಾತನ್ನಾಡು" ಎಂದು ಕೈಲಾಸಂ ತಮ್ಮ ಜೊತೆಯ ಕೆಲಸಗಾರರಿಗೆ ಹೇಳುತ್ತಲೇ ಇರುತ್ತಾರೆ. ಈ ಮುನ್ನುಡಿಯಲ್ಲಿ ನಾನು ಕೃತಿಯ ಮಾತು ಬಹಳ ಹೇಳಿಲ್ಲ, ಕೈಲಾಸಂ ಮಾತನ್ನೇ ಬಹಳ ಹೇಳಿದೇನೆ. ಕೈಲಾಸಂಗೆ ತಮಗಿಂತ ತಮ್ಮ ಕೃತಿ ಮುಖ್ಯವೆಂದು ಕಾಣಬಹುದು. ಏಕೆ, ಕಾಣಬೇಕು. ನಮಗೆ ಅವರ ಕೃತಿಗಿಂತ ಕೈಲಾಸಂ ಮುಖ್ಯವೆಂದು ಕಾಣುವುದು ಅಷ್ಟೇ ಸಹಜವಾಗಿದೆ. "ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ." ಕೈಲಾಸಂ ಸಾಹಿತ್ಯ ನಿರ್ಮಾಣದಲ್ಲಿಯೇ ಕುಳಿತಿದ್ದು ಇವರ ಕಾರ್ಯರಂಗ ಇವರಿಗೆ ಇಂಗ್ಲೆಂಡಿನಲ್ಲಿ ಬರ್ನಾರ್ಡ್ ಷಾಗೆ ಇರುವಂತೆ ಅನುಕೂಲವಾಗಿ ಇದ್ದಿದ್ದರೆ ಅವರ ಕೃತಿ ಸಾಕಾದಷ್ಟು ಪ್ರಕಟವಾಗಿ, ರಂಗದಲ್ಲಿ ಕಂಡು, ವ್ಯಕ್ತಿ ಹಾಗಿರಲಿ ಎನ್ನುವಷ್ಟು ದೊರೆಯುತಿದ್ದುವೇನೊ! ಆ ಪುಣ್ಯ ಕನ್ನಡ ಜನಕ್ಕೆ ಇಲ್ಲ.

ಈಗ ಅವರ ಪ್ರತಿಭೆಯ ಗುರುತಾಗಿ ಕೆಲವು ಮಾತ್ರ ಕೃತಿ ಹೊರಬಂದಿವೆ. ಲೇಖಕರಾದರೂ ಕೈಗೆ ಸಿಕ್ಕದೆ ಹಕ್ಕಿಯಂತೆ ತಪ್ಪಿಸಿಕೊಂಡು ಸುಳಿಯುತ್ತಿದಾರೆ. ಸ್ನೇಹಿತರು ಕೂಡ ಅವರನ್ನು ನೆನೆದು ಸಂತೋಷಪಡುವುದಾಗಿದೆ. ಹೀಗಿರುವಲ್ಲಿ ನಾನು ಕೃತಿಗಿಂತ ಹೆಚ್ಚಾಗಿ ವ್ಯಕ್ತಿಯನ್ನು ಕುರಿತು ಈ ಮಾತನ್ನು ಬರೆಯುವುದು ತಪ್ಪಾಗಲಾರದು. ಅಥವಾ ಇದರಲ್ಲಿ ತಪ್ಪಿದ್ದರೂ ಕೈಲಾಸಂ ಇದನ್ನು ಗೆಳೆಯನ ತಪ್ಪು ಎಂಬ ಕಾರಣದಿಂದ ಮನ್ನಿಸುವರೆಂದು ನಾನು ನಂಬಿದ್ದೇನೆ.

ಈಗ ಎರಡು ತಿಂಗಳ ಹಿಂದೆ ಕೈಲಾಸಂರವರ ಹಿರಿಯ ಕಿರಿಯ ಗೆಳೆಯರು "ಕೈಲಾಸಂ ಕಾವ್ಯೋತ್ಸವ" ಎಂಬ ಹೆಸರಿನಿಂದ ಇವರ ಕೃತಿಗಳನ್ನು ಕುರಿತು ಉಪನ್ಯಾಸಗಳನ್ನೂ ಕೃತಿಗಳ ಓದನ್ನೂ ಏರ್ಪಡಿಸಿ ಒಂದು ವಾರ ಪೂರ ಹಬ್ಬ ನಡಸಿದರು. ಪ್ರತಿಭಾವಂತನಾದ ಒಬ್ಬ ಲೇಖಕನು ತನ್ನ ಕೃತಿಗಳಿಂದ ನಿಜವಾಗಿ ಎಂಥ ಹಬ್ಬವನ್ನು ಒದಗಿಸುವನೆಂಬು ತಿಳಿಯ ಬೇಕಾದರೆ ಇಂಥ ಉತ್ಸವದಲ್ಲಿ ಒಂದು ದಿನವಾದರೂ ಭಾಗವಹಿಸಬೇಕು. ಒಬ್ಬನ ಬರವಣಿಗೆ ಇಷ್ಟಿರಬಹುದೇ? ಇಷ್ಟು ವಿಧ ಇರಬಹುದೇ? ಇಷ್ಟು ರುಚಿಯಿರಬಹುದೆ? ಹೀಗೆನ್ನುವವರೆಗೆ ಆ ಹಬ್ಬದ ಉಪನ್ಯಾಸಗಳೂ ಓದುಗಳೂ ಜನರನ್ನು ಅಚ್ಚರಿಗೊಳಿಸಿದವು. ವಯಸ್ಸಿನ ದೃಷ್ಟಿಯಿಂದ ಕೈಲಾಸಂ ಈಗ ಮಧ್ಯ ವಯಸ್ಸನ್ನು ಮೀರುತಿದ್ದಾರೆ; ಅನುಭವದ ದೃಷ್ಟಿಯಿಂದ ಅವರು ಎಂದೋ ವೃದ್ಧರಾದರು. ಕೆಚ್ಚಿನ ಲೆಕ್ಕಕ್ಕಾದರೆ ಅವರಿನ್ನೂ ತರುಣರು. ಅವರ, ನಮ್ಮ, ಪುಣ್ಯ ತಳಿರುವುದೇ ಆದರೆ ಅವರು ಇನ್ನೂ ಹತ್ತಾರು ಕೃತಿಗಳನ್ನು ರಚಿಸಬಹುದು. ಈಗ ಆಗಲೇ ರಚಿಸಿರುವ ಕೃತಿಯೆಲ್ಲ ಕಾಲವಿಳಂಬವಿಲ್ಲದೆ ಪ್ರಕಟವಾಗಬೇಕು. ಕನ್ನಡದ ಜನ ಈ ಕೃತಿಗಳಿಗೆ ಇನ್ನೂ ಹೆಚ್ಚಿನ ಗಮನ ಕೊಡಬೇಕು. ನಾಟಕರಂಗ ಈ ಕೃತಿಗಳನ್ನು ಅಭಿನಯಿಸಿ ಹೊಸ ಒಂದು ಉಸಿರನ್ನು ಪಡೆಯಬೇಕು. ಈ ಆಸೆಯಿಂದ ಕೈಲಾಸಂರವರ ಗೆಳೆಯರು ಕೆಲವರು ಈ ಉತ್ಸವ ನಡೆದ ಈಚೆಗೆ ಇವರ ಗ್ರಂಥವೊಂದನ್ನು ಒಂದು ಕಡೆ ಪ್ರಕಟಿಸಿದ್ದಾರೆ, ಮತ್ತೊಂದನ್ನು ಬೇರೆಯ ಕಡೆ ಪ್ರಕಟಿಸುವವರಾಗಿದಾರೆ, ಈಗ ಈ ಗ್ರಂಥವನ್ನು ಅಚ್ಚುಹಾಕಿಸಿದಾರೆ.

ಈ ಸಾಹಿತ್ಯದ ಗುಣವನ್ನು ಬಲ್ಲ ಮಿತ್ರರು ಈ ಕೆಲಸದಲ್ಲಿ ಹೀಗೆಯೇ ಮುಂದುವರಿಯಲಿ; ಇದರಿಂದ ಕೈಲಾಸಂ ಸಾಹಿತ್ಯ ಕನ್ನಡಿಗರ ಕೈಯ ಕನ್ನಡಿಯಾಗಲಿ.

1942

ಶ್ರೀ ದೇಶಪಾಂಡೆ ಮನೋಹರರಾಯರ

## " ಅಭಿನವ ಸಂಸ್ಕೃತಪ್ರವೇಶ "

ನಮ್ಮ ದೇಶದ ಸಂಸ್ಕೃತಿಯ ಬೆಳವಣಿಗೆಯಲ್ಲಿ ಗೀರ್ವಾಣ ಭಾಷೆಯದು ಒಂದು ವಿಶೇಷಸ್ಥಾನ. ಬಹುಕಾಲದ ಹಿಂದೆ ಅದು ಭರತವರ್ಷದ ಕಲಿವಿನ ಭಾಷೆ ಆಗಿ, ಎಷ್ಟೋ ಶತಮಾನ ಎಲ್ಲ ಪ್ರಾಂತಗಳ ಬಲ್ಲವರ ಸೇವೆಯನ್ನು ಪಡೆದು, ಉನ್ನತ ಪದವಿಯನ್ನು ಹೊಂದಿತು. ಸದ್ಯದ ಸ್ಥಿತಿಯಲ್ಲಿ ನಮ್ಮ ಜನಾಂಗದ ಭವಿಷ್ಯವು ಹೇಗೆ ರೂಪುಗೊಳ್ಳಬಹುದೆಂದು ಊಹಿಸುವುದು ಕಷ್ಟವಾಗಿದೆ. ಆದರೆ ಅದು ರೂಪುಗೊಳ್ಳುವುದು ಇನ್ನು ಹೇಗೆತಾನೇ ಆದರೂ ಅದರಲ್ಲಿ ಗೀರ್ವಾಣ ಭಾಷೆಯ ಪ್ರಭಾವ ಒಂದು ಮುಖ್ಯ ಅಂಶವಾಗಿ ಇದ್ದೇ ಇರುತ್ತದೆ. ಈ ಕಾರಣದಿಂದ ನಮ್ಮ ದೇಶದ ಜನರಿಗೆ ಈ ಭಾಷೆಯ ತಿಳಿವು ಬಹಳ ಆವಶ್ಯಕ.

ಒಂದು ಕಾಲಕ್ಕೆ ಈ ಭಾಷೆಯ ಅಲ್ಪಸ್ವಲ್ಪ ಜ್ಞಾನ ಬಹು ಸಾಮಾನ್ಯವಾಗಿಯೇ ಇತ್ತು ಎನ್ನುವುದನ್ನು ನಾವು ಊಹಿಸಬಹುದಾಗಿದೆ. ದೇಶಭಾಷೆಗಳಿಗೆ ಇದು ಸಂಬಂಧಿಸದೆ ಇದ್ದ ಸಂದರ್ಭಗಳಲ್ಲಿ ಕೂಡ ಇದರ ಮಾತುಗಳು ಬಳಕೆಯ ಭಾಷೆಯಲ್ಲಿ ಸೇರಿಕೊಂಡಿವೆ. ಉಳಿದ ಭಾಷೆಗಳ ವಿಷಯ ಹಾಗಿರಲಿ, ಕನ್ನಡವಂತೂ ಸಂಸ್ಕೃತವನ್ನು ಧಾರಾಳವಾಗಿ ಬಳಸಿಕೊಂಡು ಬೆಳೆಯಿತು. ಕುಮಾರವ್ಯಾಸನ ಕಾವ್ಯಕ್ಕಿಂತ ತಿಳಿಯಾದ ಕನ್ನಡ ಕೃತಿಯಿಲ್ಲ: ಅದರಲ್ಲಿ ಕನ್ನಡ, ಸಂಸ್ಕೃತ ಎರಡೂ ಬೇಕಾದಷ್ಟು ಉಂಟು. ಎಷ್ಟೆಷ್ಟಿವೆ ಎಂದು ನೋಡ ಬೇಕಾಗಿಲ್ಲ: ಏಕೆಂದರೆ ಆ ಕಾವ್ಯದಲ್ಲಿ ಇವು ಬೇರೆ ಬೇರೆ ಎನ್ನಿಸುವುದಿಲ್ಲ. ಹಾಗೆಯೇ ಆ ಕಾವ್ಯ ಜನ ಸಾಮಾನ್ಯದ ಕಾವ್ಯ ಆಯಿತು. ಸಂಸ್ಕೃತ ಅಹಂಕಾರ ಪಡದೆ, ಕನ್ನಡ ದೈನ್ಯವನ್ನು ತೋರಿಸದೆ, ಜೋಕೆಯಾಗಿ ಬಾಳಿರುವ ಈ ರೀತಿ ಸಂಸ್ಕೃತವನ್ನು ಕನ್ನಡಿಗರು ಬೇರೆ ಎನ್ನಲಾಗದಷ್ಟು ಹತ್ತಿರ ಮಾಡಿತು, ಕನ್ನಡದಂತೆ ಸಂಸ್ಕೃತವೂ ನಮ್ಮ ಭಾಷೆಯಾಯಿತು.

ಭಾರತೀಯ ಇತಿಹಾಸ ಈಗ ಹಲವಾರು ಶತಮಾನಗಳಿಂದ ಕಾಡುಮೇಡಿನಲ್ಲಿ ಹರಿಯುತ್ತ ಬಂದು ಕುಮಾರ ವ್ಯಾಸನ ಕಾಲದಿಂದ ಈಚೆಗೆ ಪರಿಸ್ಥಿತಿ ಬಹಳ ಮಾರ್ಪಟ್ಟಿದೆ. ಒಂದಾಗಿದ್ದ ಜಾನಪದ ಮನ ಹಲವಾರು ಆಗಿ ಸಂಸ್ಕೃತ ಬಲ್ಲವರು ಸಾಮಾನ್ಯ ಜನರಿಂದ ಬೇರೆ ಯಾಗುವ ಒಂದು ಹದನು ಮೊದಲಿಟ್ಟಿತು. ಇಂಗ್ಲೀಷು ರಾಜಭಾಷೆ ಯಾಗಿ ಅದರ ಕಲಿವು ಅಷ್ಟೈಶ್ವರ್ಯದ ಸಾಧನವಾದಾಗ ಸಂಸ್ಕೃತದ ಪೃಥಕ್ಕರಣ ಪೂರ್ತಿಯಾಗುತ್ತ ಬಂತು. ಸಂಪನ್ನರೆನ್ನುವರೆಲ್ಲ ಸಂಸ್ಕೃತ ವನ್ನು ತಿಳಿದೇ ತಿಳಿಯಬೇಕಾಗಿದ್ದ ಕಾಲ ಹೋಯಿತು: ಈಗ ಸಂಪನ್ನ ತೆಯ ಲಾಂಛನ ಇಂಗ್ಲೀಷು. ವಿದ್ಯಾಭ್ಯಾಸಕ್ರಮದಲ್ಲಿ ದೇಶಭಾಷೆಗಳಿಗೆ ಕೂಡ ಒಂದು ಮೂಲೆ ತಕ್ಕ ಎಡೆಯಾಗಿರುವಾಗ ಸಂಸ್ಕೃತಕ್ಕೆ ಎಂಥ ಗಮನ ಕೊಡಬಹುದು? ವಿದ್ಯಾರ್ಥಿಯ ಗಮನದ ಬಹು ಭಾಗ ಇಂಗ್ಲೀಷಿನ ಪಾಲಾಗಿ ಉಳಿದ ಸ್ವಲ್ಪ ಮಾತ್ರ ನಮ್ಮ ಭಾಷೆಗಳಿಗೆ ದೊರೆಯಬಹುದಾಗಿರುವಲ್ಲಿ ದೇಶಭಾಷೆ ಸಂಸ್ಕೃತಗಳಿಗೇ ಕಚ್ಚಾಟ ಉಂಟಾಯಿತು. ಎಂಜಲ ಹಾಳಿಗೆಂದು ನಡೆಯುತ್ತಿರುವ ಈ ಜಗಳ ಮುಗಿಯ ಬೇಕಾದರೆ ದೇಶಭಾಷೆಗಳಿಗೆ ನಮ್ಮ ವಿದ್ಯಾಭ್ಯಾಸದಲ್ಲಿ ಸರಿಯಾದ ಎಂದರೆ ಮೊದಲನೆಯ ಸ್ಥಾನ ದೊರೆಯಬೇಕು. ಇದು ದೇವರ ಕೃಪೆಯಿಂದ ಮುಂದಕ್ಕೆ ಆಗಬಹುದು. ಆಗ್ಗೆ ಸಂಸ್ಕೃತಕ್ಕೂ ಆ ವಿದ್ಯಾಭ್ಯಾಸಕ್ರಮದಲ್ಲಿ ಸರಿಯಾದ ಒಂದು ಸ್ಥಾನ ಏರ್ಪಡುತ್ತದೆ.

ಇಂತಹ ಸುದಿನ ಬರುವವರೆಗೆ ನಾವು ಕಷ್ಟಪಟ್ಟು ನಿಷ್ಠೆ ಸಹಿಸಿಯಾದರೂ ದೇಶಭಾಷೆ ಮತ್ತು ಗೀರ್ವಾಣ ಭಾಷೆಗಳ ಹೋಮ ಕುಂಡವನ್ನು ನಂದದಂತೆ ನಿಲ್ಲಿಸಿಕೊಂಡಿರಬೇಕು. ಜನರ ಮನಸ್ಸು ಹಲವಾಗಿ ಒಡೆದಿರುವ ಈಗ ಈ ಮಾತು ಸಂಸ್ಕೃತಕ್ಕೆ ಅನ್ವಯಿಸುತ್ತದೆಯೇ ಎಂದು ಕೆಲವರು ಕೇಳಬಹುದು. ಕನ್ನಡಿಗರು ದುಡಿದು ಬೆಳೆಸಿದ ಸಂಸ್ಕೃತ ಕನ್ನಡಿಗರ ಆಸ್ತಿ ಎನ್ನುವುದೇ ಇಲ್ಲಿ ನಾವು ನೆನಪಿನಲ್ಲಿಡ ಬೇಕಾದ ವಿಷಯ. ತನ್ನ ದೇಹ ಬಿದ್ದಕಡೆ ತನ್ನ ತಾಯಿನಾಡ ಒಂದು ಚೂರು ಇರುತ್ತದೆ ಎಂದು ಆಂಗ್ಲ ಕವಿಯೊಬ್ಬನು ಹೇಳಿದನು. ಕನ್ನಡಿಗರ ಗೆಯ್ಮೆ ಫಲಿಸಿದಲ್ಲೆಲ್ಲ ಕನ್ನಡದ ಸ್ವತ್ತು ಇದೆ. ಈ ಅರ್ಥ

ದಿಂದ ನಾವು ಸಂಸ್ಕೃತವನ್ನು ಉಳಿಸಿಕೊಳ್ಳಬೇಕು. ಎಂದರೆ ಶಾಲೆಯಲ್ಲಿ ಓದುವವರೆಲ್ಲ ಅಲ್ಲಿ ಸಂಸ್ಕೃತವನ್ನು ಕಲಿಯಬೇಕೆಂದು ಇಲ್ಲಿ ಅಭಿಪ್ರಾಯವಲ್ಲ. ಪಾಂಡಿತ್ಯ ಬೇರೆ. ಬಳಕೆಗೆ ತಕ್ಕಷ್ಟು ತಿಳಿಯುವುದು ಬೇರೆ. ಸರಿಯಾದ ದಾರಿಯಲ್ಲಿ ಹೊರಟರೆ ಈ ಎರಡನೆಯ ಅಳತೆಗೆ ಸಂಸ್ಕೃತ ಕಲಿಯುವುದು ಬಹು ಕಷ್ಟವಾಗುವುದಿಲ್ಲ. ಹಿಂದಿನ ತಲೆಮಾರಿನಲ್ಲಿ ನಮ್ಮಲ್ಲಿ ಕಿರಿಯರೆಲ್ಲ ಸುಪ್ರಭಾತ, ಸ್ತೋತ್ರ, ಶ್ಲೋಕ ಎಂಬ ನಾಲ್ಕಾರು ನೆಪದಿಂದ ಹತ್ತಾರು ಸಂಸ್ಕೃತ ವೃತ್ತಗಳನ್ನು ಬಾಯಿಗೆ ಕಲಿಯುತ್ತಿದ್ದರು. ಹೀಗೆ ಕಲಿತ ಪದ್ಯದ ಅರ್ಥವನ್ನು ತಿಳಿದುಕೊಂಡರೆಯೇ ಸಂಸ್ಕೃತದ ಸ್ವಲ್ಪ ಪರಿಚಯ ಬರುತ್ತಿತ್ತು. ಈಗಲೂ ನಮ್ಮ ಎಳೆಯರಿಗೆ ನಾವು ಹೀಗೆ ಶ್ಲೋಕಗಳನ್ನು ಹೇಳಿಕೊಟ್ಟರೆ ಅವರಿಗೆ ಮುಂದೆ ಸಂಸ್ಕೃತ ಭಾಷೆಯ ಪರಿಚಯವನ್ನು ಪಡೆಯಲು ಬುತ್ತಿ ಕಟ್ಟಿ ಕೊಟ್ಟಂತೆ ಆಗುತ್ತದೆ. ಇದರಿಂದ ಅವರಿಗೂ ಪ್ರಯೋಜನವುಂಟು: ಜನಾಂಗಕ್ಕೂ ಪ್ರಯೋಜನವುಂಟು.

ಶ್ಲೋಕವನ್ನು ಕಲಿತವರು ಆಮೇಲೆ ಅರ್ಥವನ್ನು ತಿಳಿಯುವುದು ಎರಡು ರೀತಿಯಿಂದ ಆಗಬಹುದು: ಒಂದು ರೀತಿ ಉಪಾಧ್ಯಾಯರಿಂದ ಕಲಿಯುವುದು; ಇನ್ನೊಂದು ಸುಲಭವಾಗಿ ಗ್ರಹಿಸುವಂತೆ ಭಾಷೆಯ ಸ್ವರೂಪವನ್ನು ವಿವರಿಸುವ ಗ್ರಂಥಗಳಿಂದ ಕಲಿಯುವುದು. ವಯಸ್ಸಾದವರಿಗೆ ಈ ಎರಡನೆಯ ದಾರಿಯೇ ಹೆಚ್ಚು ಅನುಕೂಲ. ಹೀಗೆ ಸಂಸ್ಕೃತವನ್ನು ಕಲಿಯ ಬೇಕೆನ್ನುವವರಿಗೆ ನನ್ನ ಮಾನ್ಯ ಮಿತ್ರರಾದ ದೇಶಪಾಂಡೆ ಮನೋಹರರಾಯರ ಈ ಪುಸ್ತಕದ ಮಾಲೆಯಂಥ ಪಾಠ ಪುಸ್ತಕಗಳು ತುಂಬ ಸಹಾಯ ಮಾಡುತ್ತವೆ. ಈ ಮಾಲೆಯ ಕರ್ತೃಗಳು ಈ ಪುಸ್ತಕಗಳನ್ನು ಬಾಲಕರಿಗೆಂದೇ ರಚಿಸಿದ್ದಾರೆ. ಇವನ್ನು ಉಪಯೋಗಿಸಿ ಶಾಲೆಯಲ್ಲಿ ನಮ್ಮ ಎಳೆಯರಿಗೆ ಸಂಸ್ಕೃತವನ್ನು ಕಲಿಸಲೆಂದು ನಾನು ಹಾರೈಸುತ್ತೇನೆ. ಆದರೆ ಅದಕ್ಕೂ ಹೆಚ್ಚಾಗಿ ನಾನು ಹಾರೈಸುವುದು, ಸಂಸ್ಕೃತ ಅಲ್ಪ ಸ್ವಲ್ಪ ತಿಳಿದಿರುವ ಅಥವಾ ತಿಳಿಯದೆ ಇರುವ, ಮತ್ತು ಸಂಸ್ಕೃತ ಕಠಿಣ ಎಂದು ಅದನ್ನು ದೂರವಾಗಿ ಇಟ್ಟಿರುವ, ನಮ್ಮ ವಯಸ್ಕ ಬಂಧುಗಳು ಈ ಪುಸ್ತಕಗಳನ್ನು ನೋಡಿ ಸಂಸ್ಕೃತ ಸುಲಭವೆಂದು ಮನ

ಗಾಣಲಿ, ಅದನ್ನು ಕಲಿಯಲಿ, ಎಂದು. ಹೀಗೆ ಆದಾಗ್ಗೆ ನಮ್ಮ ಮಿತ್ರರ ಶ್ರಮ ಅವರು ಎಣಿಸದೆ ಇದ್ದ ಒಂದು ರೀತಿಯಲ್ಲಿ ಸಾರ್ಥಕ ವಾಗುವುದು.

ನಾನು ಈ ಮಾತನ್ನು ಹೇಳುವ ಕಾರಣ ನಾನೇ ಇಂಥ ವಯಸ್ಕರಲ್ಲಿ ಒಬ್ಬನಾಗಿರುವುದು. ಶಾಲೆಯಲ್ಲಿ ಸಂಸ್ಕೃತ ಕಲಿಯದೆ ಆಮೇಲೆ ಅಲ್ಪಸ್ವಲ್ಪ ಪಾಠ ಹೇಳಿಸಿಕೊಂಡು ಪ್ರಾಯದಲ್ಲಿ ವಾಲ್ಮೀಕಿಯ ರಾಮಾಯಣವನ್ನು ಓದತೊಡಗಿ ನಾನು ಈ ಕಾವ್ಯದಿಂದ ಅಪಾರ ಸೌಖ್ಯ, ಆರೋಗ್ಯ, ಆತ್ಮಗೌರವವನ್ನು ಪಡೆದೆನು. ಸಂಸ್ಕೃತ ಜ್ಞಾನ ಇಲ್ಲದೆ, ಸಂಸ್ಕೃತ ಗಂಧವೆಷ್ಟೋ ಅಷ್ಟರಿಂದ ಇದನ್ನೆಲ್ಲ ಪಡೆದು, ನಾನು ನಮ್ಮ ಜನಕ್ಕೆ ಈ ಭಾಷೆಯ ಜ್ಞಾನ ಎಷ್ಟು ಆವಶ್ಯಕವೆಂದು ಕಂಡುಕೊಂಡಿದ್ದೇನೆ. "ಸ್ವಲ್ಪಮಪಿ ಅಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್". ಸಂಸ್ಕೃತದಿಂದ ನಮ್ಮ ಜನಕ್ಕೆ ಆನಂದ ದೊರೆಯುತ್ತದೆ. ಆರೋಗ್ಯ ಕೆಡುವುದು ತಪ್ಪುತ್ತದೆ: ಆತ್ಮಗೌರವ ಉಂಟಾಗುತ್ತದೆ. ತಿಳಿದು ಬಳಸಿಕೊಂಡರೆ ಇದರಿಂದ ನಮ್ಮ ಜನತೆ ಮತ್ತೆ ಒಂದಾಗುತ್ತದೆ, ಒಡೆದಿರುವ ಅದರ ಮನಸ್ಸು ಮತ್ತೆ ಕೂಡುತ್ತದೆ.

ಸಂಸ್ಕೃತವನ್ನು ಅರಿಯದ ನಾನು ಸಂಸ್ಕೃತ ಪಂಡಿತರಾದ ಮಿತ್ರರ ಈ ಕೃತಿಗೆ ಮುನ್ನುಡಿ ಬರೆಯುವುದು ಸ್ವಲ್ಪ ಚಿತ್ರವೆಂದು ಕಾಣಬಹುದು. ನನ್ನ ಮನಸ್ಸಿಗೆ ಈ ಸಂದರ್ಭದಲ್ಲಿ ಸ್ವಲ್ಪವೂ ಸಂಕೋಚವಿಲ್ಲ. ಅಧಿಕಾರಿ ಹೋಮಮಾಡುವಲ್ಲಿ ಅನಧಿಕಾರಿ ಅವನನ್ನು ಸೋಕಿದ್ದರೆ ಅಧಿಕಾರಿ ಮಾಡಿದ ಹೋಮದ ಫಲದ ಒಂದು ಭಾಗ ಈ ಅನಧಿಕಾರಿಯನ್ನು ಸೇರುತ್ತದೆ. ಇದರಮೇಲೆ ನನಗೆ ಇಲ್ಲಿ ಗೆಳೆಯರು ಹೇಳಿದಂತೆ ನಡೆಯುವುದರ ಸಂತೋಷವುಂಟು. ಗೆಳೆಯ ಶ್ರೀ ದೇಶಪಾಂಡೆ ಮನೋಹರರಾಯರಿಗೆ, ನಿಮ್ಮ ಕೆಲಸದಿಂದ ನನ್ನಂಥವರಿಗೆ ಸಹಾಯವಾಗುತ್ತದೆ, ಎಂದು ಭರವಸೆ ಕೊಡುವುದು ನನ್ನ ಮುಖ್ಯ ಉದ್ದೇಶ. ಇದನ್ನು ಹತ್ತು ಜನರ ಮುಂದೆ ಕೊಡುವುದಕ್ಕಾಗಿ ಈ ನಾಲ್ಕು ಮಾತನ್ನು ಬರೆದಿದೇನೆ.

1942

ಶ್ರೀಮತಿ " ವಾಣಿ " ಯವರ

# " ಕಸ್ತೂರಿ "

ತಾಯಿ ಸೌಭಾಗ್ಯವತಿ ಸುಬ್ಬಮ್ಮನವರು ತಮ್ಮ ಈ ಕಥಾಸಂಗ್ರಹಕ್ಕೆ ಒಂದು ಮುನ್ನುಡಿ ಬರೆದುಕೊಡಬೇಕೆಂದು ನನ್ನನ್ನು ಕೇಳಿದಾರೆ. ಗ್ರಂಥಗಳಿಗೆ ಮುನ್ನುಡಿಯಿರುವುದು ಈಚೆಗೆ ನಮ್ಮಲ್ಲಿ ಹಿರಿಯರಿಗೆ, ಗೆಳೆಯರಿಗೆ, ಬೇಸರಕ್ಕೆ ಕಾರಣವಾಗಿದೆಯೆಂದು ಕಾಣುತ್ತದೆ. ಆದರೂ ತರುಣ ಲೇಖಕ ಲೇಖಕಿಯರು ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದಾಗ ಒಲ್ಲೆನೆಂದು ಹೇಳುವುದು ನನ್ನಿಂದಾಗಿಲ್ಲ. ಆದುದರಿಂದ ಸೌಭಾಗ್ಯವತಿ ಸುಬ್ಬಮ್ಮನವರ ಇಷ್ಟದಂತೆ ಈ ನಾಲ್ಕು ಮಾತನ್ನು ಬರೆಯುತ್ತಿದೇನೆ.

ಈಗ ಎರಡು ಮೂರು ವರ್ಷದ ಮುಂದೆ ಪತ್ರಿಕೆಗಳಲ್ಲಿ ಒಂದೆರಡು ಕಡೆ " ವಾಣಿ " ಎಂಬ ಕಾವ್ಯ ನಾಮದಿಂದ ಪ್ರಕಟವಾದ ಲೇಖನಗಳು ನನಗೆ ಕಂಡವು. ಬರಹ ಮಹಿಳೆ ಒಬ್ಬರದೆಂದು ಸ್ಪಷ್ಟವಷ್ಟೆ. ಬರವಣಿಗೆಯಲ್ಲಿ ಒಂದು ಸೊಗಸು ಇತ್ತು. ನಮ್ಮಲ್ಲಿ ಹೆಣ್ಣು ಮಕ್ಕಳು ಹೆಚ್ಚು ಹೆಚ್ಚಾಗಿ ಬರಹದಲ್ಲಿ ತೊಡಗಬೇಕೆಂದು ನನ್ನ ಅಭಿಪ್ರಾಯ; ಇದನ್ನು ನಾನು ಈ ಮೊದಲು ಇನ್ನೊಂದು ಸಂದರ್ಭದಲ್ಲಿ ವಿಶದವಾಗಿ ಹೇಳಿದೇನೆ. ಈ ಹೊಸ ಲೇಖನವನ್ನು ನೋಡಿದಾಗ ನನಗೆ ತುಂಬಾ ಸಂತೋಷವಾಯಿತು. ಇದಾದ ಕೆಲವು ದಿನದಲ್ಲಿ ಮೈಸೂರಿನಲ್ಲಿ ಭಗಿನಿ ಶ್ರೀಮತಿ ಅಮೃತಾಬಾಯಿ ಇವರ ಸಮಾಜದಲ್ಲಿ ನಾನು ಭಾಷಣ ಮಾಡಿದ ಸಂದರ್ಭದಲ್ಲಿ ಸಭಿಕರಲ್ಲೊಬ್ಬರು ಎದ್ದು ನನಗೆ ಉಪಚಾರ ವಂದನೆಯನ್ನು ಹೇಳಿದರು. ಎಳೆಯ ವಯಸ್ಸಿನ ಹೆಣ್ಣಾದರೂ ಆಕೆ ದಿಟ್ಟವಾಗಿ ಮಾತನಾಡಿದರು; ಪದಗಳಿಗಾಗಿ ಹಿಂದು ಮುಂದು ನೋಡಲಿಲ್ಲ; ಉಕ್ತಿಯ ರೀತಿ ಮೆಚ್ಚುವಂತಿತ್ತು. ಸಭೆ ಮುಗಿದ ಮೇಲೆ ಅವರು " ವಾಣಿ " ಎಂಬ ಹೆಸರಿನಿಂದ ಬರೆಯುತ್ತಿರುವ ಲೇಖಕಿ ಎಂದೂ ನಮ್ಮ ಹಿರಿಯರಾದ ಶ್ರೀಮಾನ್ ಬಿ. ನರಸಿಂಗರಾಯರ ಮಗಳು ಎಂದೂ ಪರಿಚಯವಾಯಿತು.

ಇದರೊಳಗೆ ಇವರ ಬರಹ ಇನ್ನೂ ಬೇರೆ ಬೇರೆ ಕಡೆ ಪ್ರಕಟವಾಗುತ್ತಿರುವುದನ್ನು ನೋಡಿ ನಾನು ಸಂತೋಷಪಟ್ಟಿದೇನೆ.

ಶ್ರೀಮಾನ್ ನರಸಿಂಗರಾಯರು ವಕೀಲಿಯಲ್ಲಿ ಹೆಸರಾಂತರು. ಆ ತಲೆಮಾರಿನಲ್ಲಿ ಇಂಥವರಿಗೆ ಪುಸ್ತಕ ರಚನೆಯ ಚಪಲಗಳಿರಲಿಲ್ಲ. ಹಾಗಲ್ಲವಿದ್ದರೆ ಶ್ರೀಯುತರು ಎಂಥೆಂಥ ಕತೆಗಳನ್ನು ಬರೆಯಬಹುದಾಗಿತ್ತೊ ಹೇಳುವಂತಿಲ್ಲ. ಏಕೆಂದರೆ ಅವರು ದಿನದ ಜೀವನದಲ್ಲಿ ಅಷ್ಟು ಸ್ವಾರಸ್ಯವಾಗಿ ಮಾತನಾಡುತ್ತಿದ್ದರು. ತಂದೆಯಲ್ಲಿದ್ದು ಗ್ರಂಥರೂಪವನ್ನು ಪಡೆಯದೆ ಮರೆತ ಶಕ್ತಿ ಈಗ ಸೌಭಾಗ್ಯವತಿ ಸುಬ್ಬಮ್ಮನವರಲ್ಲಿ ಆ ರೂಪಕ್ಕೆ ಬಂದಿರುವುದು ಸಹಜವಾಗಿದೆ. ಇದು ಒಂದು ರೀತಿಯಲ್ಲಿ ಜನಕ್ಕೆ ಉತ್ತೇಜಕವಾಗಬೇಕು. ಐವತ್ತು ವರುಷದ ಹಿಂದೆ ವಿದ್ಯಾಪಾರಂಗತರಾದ ಗಂಡಸರೂ ಪುಸ್ತಕ ಬರೆಯುವ ಯೋಚನೆ ಮಾಡುತ್ತಿರಲಿಲ್ಲ. ಕನ್ನಡ ಬರೆಯುವುದು ಮರ್ಯಾದೆಗೆ ಕಡಮೆಯೆಂತಲೋ, ಬರೆದು ಆಗುವುದೇನೆಂತಲೋ ಬರೆದರೆ ಏನಾಗುತ್ತದೋ ಎಂತಲೋ, ಆಗಿನ ಜನರು ಮೌನದಲ್ಲಿರುತ್ತಿದ್ದರು. ಈಗ ವಿದ್ಯೆಯಪಾರ ಬಹು ದೂರವೆಂದು ತಿಳಿದ ನಮ್ಮಂಥವರೂ ಇಂಥ ಅಭಿಮಾನ ತಿರಸ್ಕಾರ ಸಂಕೋಚಗಳನ್ನು ಒತ್ತಟ್ಟಿಗಿಟ್ಟು ಏನಾದರೂ ಬರೆಯಬೇಕೆಂದು ತೋರಿದವೇಳೆ ಬರೆದು ಹೊರಕ್ಕೆ ತರುತ್ತೇವೆ. ಜನತೆಯ ಬೆಳವಣಿಗೆಗೆ ಇದು ತೀರಾ ಅವಶ್ಯ ಕರ್ಮ. ಇದು ಇನ್ನೂ ಸಾಕಾದಷ್ಟು ಆಗುತ್ತಿಲ್ಲ. ಆದರೆ ಎಷ್ಟಾದರೂ ಆಗುತ್ತಿದೆಯಲ್ಲ ಅದೇ ಒಂದು ಸಂತೋಷ, ಶುಭ ಚಿಹ್ನೆ. ಅದರಲ್ಲಿಯೂ ನಮ್ಮ ಹೆಣ್ಣು ಮಕ್ಕಳು ಲೇಖನದಲ್ಲಿ ಕೈ ಹಾಕುವುದು ಮೆಚ್ಚಿಕೊಳ್ಳಬೇಕಾದ ವಿಷಯ.

ಸೌಭಾಗ್ಯವತಿ ಸುಬ್ಬಮ್ಮನವರ ಈ ಕತೆಗಳು ನಮ್ಮ ಹೆಣ್ಣುಮಕ್ಕಳ ಲೇಖನ ಒಂದು ಹಂತಕ್ಕೆ ಬಂದಿದೆಯೆಂಬುದನ್ನು ಸೂಚಿಸುತ್ತವೆ. ಇವರು ಹಲವಾರು ವಸ್ತುಗಳನ್ನು ತೆಗೆದುಕೊಂಡು ಸಣ್ಣ ಕತೆ ಬರೆದಿದ್ದಾರೆ; ಕತೆಗಳಲ್ಲಿ ತಮ್ಮ ಭಾವನೆಗೆ ರೂಪು ಕೊಡಲು ತೊಡಗಿದಾರೆ. ನಡತೆ, ಸಂಗತಿ, ಅಲ್ಲಲ್ಲಿ ವಾಡಿಕೆಯದಲ್ಲವೆಂಬಂತೆ ಕಾಣಬಹುದು. ಆದರೆ ಆ ವಿಷಯವನ್ನು ಅವರೂ ಯೋಚಿಸಿದಾರೆ; ವಾಡಿಕೆಯದು ಅಲ್ಲದಿದ್ದರೂ ಅಸ್ವಭಾವಿಕವಲ್ಲ ಎಂದು ನಿರ್ಧರಿಸಿಕೊಂಡಿದಾರೆ. ಎಂದರೆ ಇವರು ಬರೆಯುವ

ವೇಳೆ ಹೀಗಾದರೆ ಹೇಗೆ ಎಂದು ತಹತಹ ಪಡುತ್ತ ಬರಹವನ್ನು ನಿಲ್ಲಿಸು ವರೂ ಅಲ್ಲ; ಅಥವಾ ಕೈಗೆ ಬಂದದನ್ನು ಬರೆಯುತ್ತ ಬರೆದದ್ದೇ ಸರಿ ಎನ್ನುವರೂ ಅಲ್ಲ. ಇವರ ಸಹಜವಾದ ಲೇಖನ ಶಕ್ತಿಯಲ್ಲಿ ಧಾರಾಳ-ದೊಂದಿಗೆ ವಿವೇಚನೆ ಸೇರಿಕೊಂಡಿದೆ. ಈ ಕತೆಗಳು ಕಾಲಕ್ರಮವಾಗಿ ಐದಾರು ವರುಷಗಳಲ್ಲಿ ಬರೆದವು. ಅವುಗಳಲ್ಲಿ ಕಥನಕ್ರಮ, ಶಬ್ದಕೋಶ, ಭಾಷಾ ಸರಣಿ ಬರಬರುತ್ತಾ ಪರಿಷ್ಕಾರವಾಗಿರುವುದು ಕಾಣುತ್ತದೆ. ಎಲ್ಲವೂ ಒಂದು ಹದಕ್ಕೆ ಬಂದಿರುವ ಕತೆ ಉತ್ತಮ ಸಾಹಿತ್ಯವಾಗಿದೆ. ಇನ್ನು ಮುಂದೆ ಇವರು ಬರೆಯುವ ಕತೆ ಹೀಗೆ ಅಥವಾ ಇದಕ್ಕೂ ಚೆನ್ನಾಗಿ ಬರಬೇಕು. ಇಂಥ ಕತೆ ಇವರಿಂದ ಹತ್ತಾರು ಬರಲಿ; ನಮ್ಮ ಸಾಹಿತ್ಯ ಭಂಡಾರಕ್ಕೆ ರತ್ನಗಳಾಗಿ ಸೇರಲಿ.

1943

ಶ್ರೀ ಮಧುಗಿರಿ ವಾಸುದೇವಮೂರ್ತಿಯವರ

# " ಗುಲಿಸ್ತಾನ್ ಕತೆಗಳು "

ನನ್ನ ತರುಣ ಮಿತ್ರರಾದ ಶ್ರೀ ಮಧುಗಿರಿ ವಾಸುದೇವಮೂರ್ತಿಗಳವರು ತಮ್ಮ ಈ ಗುಲಿಸ್ತಾನ್ ಗ್ರಂಥದ ಭಾಷಾಂತರಕ್ಕೆ ನನ್ನಿಂದ ಒಂದು ಮುನ್ನುಡಿಯನ್ನು ಬಯಸಿದಾರೆ. ಹೋಮ ಮಾಡುವವರು ಮಾಡುತ್ತಿರಲಾಗಿ ಹೋಮಾಗ್ನಿಯ ಪಕ್ಕದಲ್ಲಿ ಕುಳಿತು ಯಾವುದೋ ಅಲ್ಪಸ್ವಲ್ಪ ಕೆಲಸಮಾಡಿ ಅಥವಾ ಯಾವ ಕೆಲಸವನ್ನೂ ಮಾಡದೆ ಇದ್ದು ಹೋಮ ಮುಗಿದ ಹೊತ್ತಿನಲ್ಲಿ ಎಲೆ ಅಡಿಕೆ ತೆಗೆದುಕೊಳ್ಳುವ ಒಂದು ಅಧಿಕಾರ ಸ್ಥಾನವಿದೆ: ಕನ್ನಡ ಗ್ರಂಥಗಳಿಗೆ ಮುನ್ನುಡಿ ಬರೆಯುವುದರಲ್ಲಿ ಇಂದು ನನ್ನ ಸ್ಥಾನ ಇದರಂತೆ ಆಗಿದೆ. ಕಷ್ಟವೇನನ್ನೂ ಕೊಡದೆ ಮರ್ಯಾದೆಯನ್ನು ಮಾತ್ರ ತೋರುವ ನನ್ನ ಮಿತ್ರರ ಈ ವ್ಯಾಪಾರಕ್ಕೆ ನಾನು ಮತ್ತೆಮತ್ತೆ ನಿಸ್ಸಂಕೋಚವಾಗಿ ಅಥವಾ ಬಹು ಸ್ವಲ್ಪ ಸಂಕೋಚದಿಂದ ಒಪ್ಪುತ್ತಿದೇನೆ. ಇದು ಅಂಥದೇ ಒಂದು ಸಂದರ್ಭವಾಗಿದೆ.

ನಮ್ಮ ಹೊಸ ಸಾಹಿತ್ಯ ಆರಂಭವಾದದ್ದು ಭಾಷಾಂತರಗ್ಳಿಂದ. ಇಂಗ್ಲೀಷು, ಬಂಗಾಳಿ, ಮರಾಠಿ, ತೆಲುಗು, ಭಾಷೆಗಳಿಂದ ಹತ್ತಾರು ಪುಸ್ತಕಗಳು ಪರಿವರ್ತಿತವಾಗಿ ಬಂದಮೇಲೆ ಕನ್ನಡ ಲೇಖಕರು ಸ್ವತಂತ್ರ ಕೃತಿಗಳನ್ನು ರಚಿಸಲಾರಂಭಿಸಿದರು. ಸ್ವತಂತ್ರ ರಚನೆಯಿಂದ ಒಂದು ಅರ್ಥಕ್ಕೆ ಭಾಷಾಂತರ ಕಾರ್ಯಕ್ಕೆ ತೊಂದರೆ ಆಯಿತು. ಆದರೂ ಸ್ವತಂತ್ರ ಕೃತಿ ಸೃಷ್ಟಿಯಾಗುವುದು ತೀರಾ ಆವಶ್ಯಕ ಎಂಬ ದೃಷ್ಟಿಯಿಂದ ಈ ಸ್ಥಿತಿಯನ್ನು ನಾವು ಸ್ವಾಗತಿಸಿದ್ದೇವೆ. ಒಂದು ಜನದ ಸ್ವಂತ ಅನುಭವಕ್ಕೆ ರೂಪುಕೊಡಬಲ್ಲದು ಸ್ವತಂತ್ರ ಸಾಹಿತ್ಯವೇ. ಆದ್ದರಿಂದ ನಮ್ಮಲ್ಲಿ ಸ್ವತಂತ್ರವೆಂಬ ರೀತಿಯ ಕೃತಿ ಬೆಳೆಯುವುದು ಸಂತೋಷದ ವಿಷಯ.

ಆದರೆ ಸಜೀವವಾಗಿರುವ, ಬೆಳೆಯುತ್ತಿರುವ, ಒಂದು ಸಾಹಿತ್ಯ ಇತರ ಸಾಹಿತ್ಯಗಳ ಮೈತ್ರಿಯನ್ನು ಬಹುಕಾಲ ತೊರೆಯಲಾಗದು.

ಕನ್ನಡಕ್ಕೆ ಪ್ರಪಂಚದ ಎಲ್ಲ ಭಾಷೆಗಳ ಉದ್ಗ್ರಂಥಗಳೂ ಭಾಷಾಂತರವಾಗಬೇಕೆನ್ನುವುದೇ ನಮ್ಮ ಧ್ಯೇಯ. ಆದ್ದರಿಂದ ಪರಿವರ್ತಕರ ಕಾರ್ಯವೂ ಸತತವಾಗಿ ನಡೆಯುತ್ತಿರಬೇಕು; ಇದಕ್ಕಾಗಿ ಇದರಲ್ಲಿ ಅಭಿರುಚಿ ಉಳ್ಳ ಹತ್ತಾರು ಲೇಖಕರಾದರೂ ದುಡಿಯುತ್ತಿರಬೇಕು. ಅಲ್ಲದೆ ಭಾಷಾಂತರಕಾರರು ಸಾಧ್ಯವಾದಷ್ಟು ಮಟ್ಟಿಗೆ ತಾವು ಪರಿವರ್ತಿಸುವ ಗ್ರಂಥಗಳನ್ನು ಮೂಲ ಭಾಷೆಯಲ್ಲಿ ಪಾಠಮಾಡಿ ತಿಳಿದುಕೊಂಡವರಾಗಿರಬೇಕು. ಹೀಗಾಗುತ್ತಿದ್ದರೆ ಮಾತ್ರ ಕನ್ನಡ ಲೇಖನಪ್ರಪಂಚ ಸರಿಯಾದ ರೀತಿಯಲ್ಲಿ ಬೆಳೆಯುತ್ತಿದೆ ಎಂದು ನಾವು ಧೈರ್ಯದಿಂದಿರಬಹುದು.

ಈ ಗ್ರಂಥದ ಲೇಖಕರು ನಮಗೆ ಈ ಧೈರ್ಯವನ್ನು ಕೊಡುವಂತೆ ಕೆಲಸ ಮಾಡುತ್ತಿರುವ ಮಿತ್ರರಲ್ಲಿ ಒಬ್ಬರು. ನಮ್ಮಲ್ಲಿ ಈಗ ಸಂಸ್ಕೃತ, ಇಂಗ್ಲೀಷು, ಬಂಗಾಳಿ, ಮರಾಠಿ, ತೆಲುಗು, ತಮಿಳು, ಹಿಂದೀ ಭಾಷೆಗಳಿಂದ ಆಯಾ ಭಾಷೆಗಳಲ್ಲಿರುವ ಮೂಲಗ್ರಂಥಗಳನ್ನು ನೋಡಿಕೊಂಡು ಭಾಷಾಂತರ ಮಾಡಿಕೊಡಬಲ್ಲ ಲೇಖಕರು ಹಲವರಿದ್ದಾರೆ. ಗ್ರೀಕ್ ಭಾಷೆಯಿಂದ ಹೀಗೆ ಭಾಷಾಂತರ ಮಾಡಿರುವವರು ಒಬ್ಬರಿದ್ದಾರೆ. ಇತರ ಭಾಷೆಗಳ ಪರಿಚಯವನ್ನು ಸಂಪಾದಿಸಿ ಈ ಕೆಲಸವನ್ನು ಮಾಡಬಲ್ಲವರು ಮುಂದೆಬರಬೇಕಾಗಿದೆ. ಇಂಥ ಭಾಷೆಗಳಲ್ಲಿ ಮುಖ್ಯವಾದುವು ಉರ್ದು ಮತ್ತು ಪರ್ಷಿಯನ್. ಶ್ರೀ ವಾಸುದೇವಮೂರ್ತಿಗಳವರು ಈ ಭಾಷೆಗಳನ್ನು ಅಭ್ಯಾಸ ಮಾಡಿದ್ದಾರೆ; ಅವುಗಳ ಕೃತಿಗಳಿಂದ ನೇರವಾಗಿ ಪರಿವರ್ತಿಸ ಬಲ್ಲವರಾಗಿದ್ದಾರೆ. ಇದು ಕನ್ನಡಕ್ಕೆ ಹಿರಿಯ ಸೇವೆ. ಈ ಬಗ್ಗೆ ನಾವು ಈ ಲೇಖಕರನ್ನು ಅಭಿನಂದಿಸಬೇಕು.

ಇನ್ನು ಈಗ ಇವರು ತೆಗೆದುಕೊಂಡಿರುವ ಗ್ರಂಥದ ವಿಚಾರ ಹೆಚ್ಚು ಏನನ್ನೂ ಹೇಳಬೇಕಾದುದಿಲ್ಲ. ಮಹಾಕವಿ ಸಾದಿ ಲೋಕಪ್ರಸಿದ್ಧನಾದ ರಸಿಕ ತತ್ವಜ್ಞ. ಇವನ ರಸ್ಯಜೀವನ, ಸೂಕ್ಷ್ಮದೃಷ್ಟಿ, ಉಕ್ತಿಚಾತುರಿ ಇವನ ಗುಲಿಸ್ತಾನ್ ಕೃತಿಗೆ ಲೋಕದ ಸಾಹಿತ್ಯದಲ್ಲಿ ಒಂದು ಉನ್ನತ

ಸ್ಥಾನವನ್ನು ಗಳಿಸಿವೆ. ಇದುವರೆಗೆ ನಮ್ಮಲ್ಲಿ ಈ ಕೃತಿಯ ಪರಿಚಯವನ್ನು ಬಯಸಿದವರು ಯಾವುದಾದರೊಂದು ಇಂಗ್ಲಿಷ್ ಪರಿವರ್ತನವನ್ನು ನೋಡಬೇಕಾಗಿದ್ದಿತು. ಈಗ ಶ್ರೀ ವಾಸುದೇವಮೂರ್ತಿಗಳ ಉದ್ಯಮದಿಂದ ಅದನ್ನು ಕನ್ನಡದಲ್ಲೇ ಪಡೆಯಬಹುದಾಗಿದೆ. ಈ ಸೇವೆಯ ಬಹುಮುಖವಾದ ಗುಣಗಳಲ್ಲಿ ಎರಡು ಮುಖ ಪ್ರಧಾನವಾದುವು: ಬಹು ಹೆಚ್ಚು ಸಂಖ್ಯೆಯ ಕನ್ನಡಿಗರು ಸಾದಿಯ ಹೂದೋಟವನ್ನು ಹೊಗಬಹುದು; ಅದರ ಸೌರಭವನ್ನು ಹೆಚ್ಚು ನಿಕಟವಾಗಿ ಅನುಭವಿಸಬಹುದು.

ಲೇಖಕರ ಹಿರಿಯ ಕನ್ನಡ ಸೇವೆ ಕನ್ನಡಿಗರಿಗೆ ಹಿರಿಯ ಉಪಕಾರವಾಗಿದೆ. ಈ ಬಗ್ಗೆ ನಾನು ಶ್ರೀ ವಾಸುದೇವಮೂರ್ತಿಗಳನ್ನು ಹೃತ್ಪೂರ್ವಕ ವಂದಿಸುತ್ತೇನೆ.

ಸಾದಿಯ ಹೂದೋಟದ ಕಂಪು ಕನ್ನಡ ನುಡಿಯಲ್ಲಿ ಹರಡಲಿ.

1945

ಶ್ರೀ ಕೆ. ಲ. ಸುಬ್ಬರಾಯರ

## " ದಾಸ "

ಆಂಗ್ಲ ವಿಖ್ಯಾತಕತೆಗಾರ್ತಿ ಜಾರ್ಜ್ ಎಲಿಯಟ್ ಮಹನೀಯಳ ಸೈಲಾಸ್ ಮಾರ್ನರ್ ಕಾದಂಬರಿಯ ತಮ್ಮ ಈ ಸರಳಾನುವಾದಕ್ಕೆ ನಾನೊಂದು ಮುನ್ನುಡಿ ಬರೆದುಕೊಡಬೇಕೆಂದು ಇದರ ಕರ್ತೃಗಳಾದ ನನ್ನ ಪ್ರಿಯ ಮಿತ್ರರು ಶ್ರೀ ಸುಬ್ಬರಾಯರು ಕೇಳಿದ್ದಾರೆ. ಈ ಮಿತ್ರರು ಈ ಕೆಲಸವನ್ನು ಮಾಡಿರುವುದು ಅವರ ದೃಷ್ಟಿಯಿಂದ ಅತ್ಯುತ್ತಮ ಭಾಷಾ ಸೇವೆ, ಕನ್ನಡಿಗರ ದೃಷ್ಟಿಯಿಂದ ಬಹುದೊಡ್ಡ ಉಪಕಾರ, ಎಂದು ನನ್ನ ಭಾವನೆ. ಈ ಸಂಗತಿಯನ್ನು ಸೂಚಿಸುವಷ್ಟರ ಮಾತ್ರಕ್ಕೆ ಕೃತಿಯ ಆರಂಭ ದಲ್ಲಿ ನನ್ನ ನಾಲ್ಕು ಮಾತನ್ನು ಸೇರಿಸಲು ನಾನು ಬಹು ಸಂತೋಷದಿಂದ ಒಪ್ಪಿದೇನೆ.

ಮೂಲಕೃತಿ ಸೈಲಾಸ್ ಮಾರ್ನರ್ ಆಂಗ್ಲ ಸಾಹಿತ್ಯದ ಎಷ್ಟೋ ವಿಸ್ತಾರವಾದ ಕಥಾ ಪ್ರಪಂಚದಲ್ಲಿ ಕೂಡ ಅಗ್ರಪಂಕ್ತಿಯ ಒಂದು ಪೀಠಕ್ಕೆ ಅಧಿಕಾರಿಯಾಗಿದೆ. ಜಾರ್ಜ್ ಎಲಿಯಟ್ ಆಂಗ್ಲ ಕತೆಗಾರರಲ್ಲಿ ಒಂದು ಮುಖ್ಯ ಸ್ಥಾನಕ್ಕೆ ಅಧಿಕಾರಿ : ಸೈಲಾಸ್ ಮಾರ್ನರ್ ಆಕೆಯ ಕೃತಿಗಳಲ್ಲಿ ಪ್ರಾಯಶಃ ಅತ್ಯುತ್ತಮ ಕೃತಿ. ಲೇಖಿಕೆ ಸಹಜವಾಗಿ ಕಥೆ ಹೇಳುವ ಶಕ್ತಿ ಯುಳ್ಳಾಕೆ ; ತನ್ನ ಸುತ್ತಣ ಜೀವನವನ್ನು ಕುತೂಹಲದಿಂದ ಅನುರಕ್ತಿ ಯಿಂದ ಕನಿಕರದಿಂದ ನೋಡಬಲ್ಲಾಕೆ ; ಆ ಜೀವನದ ನೋವು, ನಗೆ, ಆಶೆ, ಆವೇಶ, ಮೋಸ, ಮೋಹಕತೆ, ರೂಪು, ಅರೂಪುಗಳನ್ನು ಕುರಿತು ಚಿಂತಿಸಬಲ್ಲ ಧೀಮಂತೆ. ಇಂಥ ಕತೆಗಾತಿ ತಕ್ಕಷ್ಟು ಅನುಭವ ಬಂದ ಮೇಲೆ ನಾಲ್ಕು ಕೃತಿಯನ್ನು ರಚಿಸಿ ಕುದುರಿದ ಕೈಯಿಂದ ವಯಸ್ಸಾಗುವ ಮುನ್ನ ಈ ಕತೆಯನ್ನು ಬರೆದಳು. ಈ ಮಹನೀಯೆ ಆಮೇಲೆ ಬರೆದ ಕೃತಿಗಳಲ್ಲಿ ಧೀಮಂತಿಕೆ ಅತಿಯಾಯಿತು; ಮೊದಲ ಕೃತಿಗಳಲ್ಲಿ ಅದು ತಕ್ಕಷ್ಟು ಪ್ರಕಟವಾಗಲಿಲ್ಲ. ಈ ಕತೆಯಲ್ಲಿ ಜೀವನದ ಚಿತ್ರ, ಅದನ್ನು ಕುರಿತ ವಿಚಾರ,ಹಾಳತವರಿತು ಸೇರಿ ಕೃತಿಯ ಪಾಕ ಶ್ರೇಷ್ಠ ಕಥನದ

ಪಾಕಕ್ಕೆ ಒಂದು ಆದರ್ಶ ಎಂಬಂತೆ ಹದವಾಯಿತು. ಈ ಕಾರಣದಿಂದ ಸೈಲಾಸ್ ಮಾರ್ನರ್ ನೂರು ವರ್ಷ ಬೆಳೆದಿದ್ದ ಆಂಗ್ಲಕಥನ ಕಲೆಯ ಉತ್ತಮ ಫಲವಾಗಿ ನೂರು ವರ್ಷ ಮುಂದೆ ಬರಬಹುದಾದ ಲೇಖಕರಿಗೆ ಮೇಲ್ಪಂಕ್ತಿಯಾಗಿ ಸಾಹಿತ್ಯ ಪ್ರೇಮಿಗಳ ಮನಸ್ಸನ್ನು ಒಪ್ಪಿಸಿಕೊಂಡಿತು.

ಆಂಗ್ಲ ಸಾಹಿತ್ಯವನ್ನು ಓದುವಲ್ಲಿ ಅದು ಎಂತಹ ಭಾಗ್ಯಶಾಲಿ ಸಾಹಿತ್ಯ ಎಂದು ಪರದೇಶೀಯರಿಗೆ ಎನ್ನಿಸುವುದು ಇಂತಹ ಕೃತಿಗಳಿಂದ. ಆ ಸಾಹಿತ್ಯದ ಪರಿಚಯದಿಂದ ನಮ್ಮ ದೇಶಕ್ಕೆ ಬರಬೇಕಾದ ಪ್ರಚೋದನವನ್ನು ಒದಗಿಸಬಲ್ಲ ಅಲ್ಲಿಯ ಕೃತಿಗಳಲ್ಲಿ ಸೈಲಾಸ್ ಮಾರ್ನರ್ ಒಂದು. ಆಂಗ್ಲ ಸಾಹಿತ್ಯದಿಂದ ಪ್ರೇರಣೆ ಪಡೆದು ನಮ್ಮ ಸಾಹಿತ್ಯದಲ್ಲಿ ಕೆಲಸ ಮಾಡುತ್ತಿರುವ ಲೇಖಕರು ಇಂಥ ಕೃತಿಗಳನ್ನು ಕನ್ನಡಕ್ಕೆ ತರಬೇಕು; ಕನ್ನಡದ ಜೀವನವನ್ನು ಕುರಿತು ಇಂತಹ ಕೃತಿಗಳನ್ನು ರಚಿಸಬೇಕು. ಆಂಗ್ಲ ಸಾಹಿತ್ಯದ ಸ್ಯಾಂಡ್‌ಫರ್ಡ್ ಅಂಡ್ ಮರ್ಟನ್, ದಿ ವಿಕಾರ್ ಆಫ್ ವೇಕ್ ಫೀಲ್ಡ್ ಮುಂತಾದ ಕೆಲವು ಅತ್ಯುತ್ತಮ ಗದ್ಯ ಕೃತಿಗಳು ಈ ಮೊದಲೇ ನಮ್ಮ ಭಾಷೆಗೆ ಬಂದುದುಂಟು. ಆದರೆ ನನ್ನ ಪೂಜ್ಯ ಗುರುಗಳು ದಿವಂಗತ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರು ಮಾಡಿದ ಆಂಗ್ಲ ಗೀತಗಳ ಅನುವಾದದಂತೆ ಈ ಗದ್ಯ ಅನುವಾದಗಳು ನಮ್ಮ ಹೊಸ ಸಾಹಿತ್ಯದಲ್ಲಿ ಪ್ರೇರಕ ಶಕ್ತಿಗಳಾಗಿಲ್ಲ. ಇದು ಕೃತಿಗಳ ತಪ್ಪು ಎಂದಲ್ಲ: ಆ ದಿಕ್ಕಿನ ಪ್ರಯತ್ನ ಸಾಲದೇ ಹೋದುದೇ ಇದಕ್ಕೆ ಕಾರಣ. ಈಗಲಾದರೂ ನಮ್ಮ ತರುಣ ಲೇಖಕರು ಗದ್ಯ ಸಾಹಿತ್ಯದಲ್ಲಿ ಈ ಕೆಲಸವನ್ನು ಮುಂದುವರಿಸಲು ದೀಕ್ಷೆ ವಹಿಸಬೇಕಾಗಿದೆ. ಆಂಗ್ಲ ದೇಶದ ಮಕ್ಕಳು ಆಂಗ್ಲ ಸಾಹಿತ್ಯದಲ್ಲಿ ಶ್ರೇಷ್ಠವೆಂದು ಹೆಸರುಗೊಂಡ ನೂರು ಕತೆಗಳನ್ನು ಓದಬಹುದಾಗಿರುವಂತೆ ಕನ್ನಡ ಮಕ್ಕಳು ಕನ್ನಡದಲ್ಲಿ ರುಚಿಯಿಂದ ಓದಿ ಆರೋಗ್ಯವನ್ನು ಬೆಳೆಸಿಕೊಳ್ಳಬಹುದಾದ ನೂರು ಕತೆಗಳನ್ನು ರಚಿಸಬೇಕಾಗಿದೆ.

ನಮ್ಮ ಇಂದಿನ ಜೀವನದಲ್ಲಿ ನಮ್ಮನ್ನು ಕಾಡುತ್ತಿರುವ ನೂರು ಸಮಸ್ಯೆಗಳ ಮಧ್ಯದಲ್ಲಿ ಕೇವಲ ಸಾಹಿತ್ಯ ಮಾತ್ರ ಆದ ಇಂಥ ಕೃತಿಗಳಿಗೆ ಅವು ಎಷ್ಟೇ ಶ್ರೇಷ್ಠವಾದರೂ ಆವಶ್ಯಕತೆ ಇದೆಯೇ, ಇಂಬು ದೊರೆಯ ಬೇಕೇ, ಎಂದು ಯಾರಾದರೂ ಕೇಳಬಹುದು. ಕೇವಲ ಸಾಹಿತ್ಯ

ಅಥವಾ ಸಾಹಿತ್ಯ ಮಾತ್ರ ಎಂಬ ಮಾತುಗಳು ಸಾಹಿತ್ಯ ಸ್ವರೂಪವನ್ನು ಮರೆತಾಗ ಮಾತ್ರ ಸಾಧ್ಯ ಎಂದು ನನ್ನ ತಿಳಿವಳಿಕೆ. ಬದುಕನ್ನು ಸೋಕುವುದು, ನಲಿಸುವುದು, ಬೆಳೆಸುವುದು, ತಿದ್ದುವುದು, ಇದೆಲ್ಲಾ ಉತ್ತಮ ಸಾಹಿತ್ಯದ ಅನಿವಾರ್ಯ ಪರಿಣಾಮ. ಇದಕ್ಕೆ ಲೇಖಕನ ಉದ್ದೇಶ, ಪಾಠಕನ ಒಪ್ಪಿಗೆ ಆವಶ್ಯಕವಲ್ಲ. ಲೇಖಕನು ಜೀವನವನ್ನು ಕುತೂಹಲದಿಂದ, ಅನುರಕ್ತಿಯಿಂದ, ಕನಿಕರದಿಂದ, ನೋಡಿ ಅದನ್ನು ಕುರಿತು ವಿಚಾರ ಮಾಡಿ ಅದರ ಒಂದು ಚಿತ್ರವನ್ನು ನಮ್ಮ ಮುಂದೆ ಇಟ್ಟರೆ, ಅದು ಎಷ್ಟೇ ಕೇವಲ ಸಾಹಿತ್ಯ ಆದರೂ, ಎಷ್ಟು ಶೀರ ಸಾಹಿತ್ಯ ಮಾತ್ರವೇ ಆದರೂ ಅದರಿಂದ ನಮ್ಮ ಜೀವನ ಚೆಲುವಾಗುತ್ತದೆ. "ಧರ್ಮಾನ್ ವಕ್ಷ್ಯಾಮಿ ಶಾಶ್ವತಾನ್" ಎಂದ ಮಹಾಭಾರತದ ಕರ್ತೃ ವಾದ ಋಷಿ, ಈ ಮಾತನ್ನು ಸ್ಪಷ್ಟವಾಗಿ ಹೇಳದೆ ಅಷ್ಟೇ ಶಾಶ್ವತವಾದ ಧರ್ಮವನ್ನು ವಕ್ಷಿಸಿದ ರಾಮಾಯಣದ ಕರ್ತೃವಾದ ಋಷಿ, ಈ ತತ್ವಕ್ಕೆ ಸಾಕ್ಷಿಗಳು. ಅವರ ಕೃತಿಗಳು ಜೀವನವನ್ನು ಉದ್ಧರಿಸುವ ಸಾಹಿತ್ಯದ ಸಂಪ್ರದಾಯವನ್ನು ಮೊದಲು ಮಾಡಿದುವು. ಆ ಸಂಪ್ರದಾಯವನ್ನು ಬಲ್ಲ ಯಾರೂ ಸಾಹಿತ್ಯದ ಉತ್ತಮ ಕೃತಿಯೊಂದನ್ನು ಕೇವಲ ಸಾಹಿತ್ಯ ಎಂದು ವರ್ಣಿಸಿ ಅಲ್ಲಗಳೆಯಲಾರರು; ಕೃತಿ ಉತ್ತಮವಾದದ್ದೇ ಆದರೆ ಅದನ್ನು ಹೀಗೆ ಅಲ್ಲಗಳೆಯುವುದು ಅದರ ವಿಷಯಕ್ಕೆ ಅಪಚಾರ, ಅಲ್ಲ ಗಳೆಯುವನಲ್ಲಿ ಔದ್ಧತ್ಯ, ಎಂಬುದನ್ನು ಮನಗಂಡಿರುವವರು; ಕೇವಲ ಸಾಹಿತ್ಯ ಎಂಬ ಶಬ್ದಸಮುಚ್ಚಯ ಕೇವಲ ಧರ್ಮ, ಕೇವಲ ಸತ್ಯ, ಕೇವಲ ಸ್ವರ್ಗ ಎಂಬ ಶಬ್ದಸಮುಚ್ಚಯಗಳಂತೆ ವಿವೇಚನೆಯ ದಾರಿ ಯನ್ನು ತೊರೆದಿರುವುದೆಂದು ತಿಳಿಯುವರು. ಇಷ್ಟೇ ಅಲ್ಲ ಜೀವನದಲ್ಲಿ ಸಾಹಿತ್ಯ ಮಾಡಬೇಕಾದ ಕೆಲಸ ಒಂದಿದ್ದರೆ ಸಾಹಿತ್ಯವಾದ ಕೃತಿ ಅದನ್ನು ತಾನು ಎಷ್ಟು ಕೇವಲವಾಗಿ ಸಾಹಿತ್ಯವಾಗುತ್ತದೋ ಅಷ್ಟು ದಕ್ಷವಾಗಿ ಸಾಧಿಸುತ್ತದೆ ಎಂದು ಹೇಳಬೇಕು. ಕೇವಲ ಸಾಹಿತ್ಯವಾಗಿರುವುದು ಸಾಹಿತ್ಯದ ಒಂದು ಸುಂದರ ಕೃತಿಯಲ್ಲಿ ದೋಷವಲ್ಲ, ಹಿರಿಯ ಭೂಷಣ.

ಇಂತಹ ಉತ್ತಮ ಕೃತಿಯಾದ ಸೈಲಾಸ್ ಮಾರ್ನರ್ ಗ್ರಂಥವನ್ನು ಶ್ರೀಮಾನ್ ಸುಬ್ಬರಾಯರು ಕನ್ನಡಕ್ಕೆ ತಂದದ್ದು ಬಹು ಒಳ್ಳೆಯ

ದಾಯಿತು. ಭಾಷಾಂತರ ಅಥವಾ ಅನುವಾದ ಮಾಡುವರು ಇಂತಹ ಸಂದರ್ಭದಲ್ಲಿ ಎರಡರಲ್ಲಿ ಒಂದು ದಾರಿಯನ್ನು ಅನುಸರಿಸುತ್ತಾರೆ. ಮೂಲದ ನಾಮ, ಸಂಕೇತ, ಸನ್ನಿವೇಶಗಳನ್ನು ಮಾರ್ಪಡಿಸದೆ ಇದ್ದುದನ್ನು ಇದ್ದಂತೆಯೇ ಇನ್ನೊಂದು ಭಾಷೆಗೆ ತರುವುದು ಒಂದು ದಾರಿ. ಆ ನಾಮ, ಸಂಕೇತ, ಸನ್ನಿವೇಶಗಳನ್ನು ಭಾಷಾಂತರದ ಭಾಷೆಯ ಜನಜೀವನಕ್ಕೆ ಹೊಂದಿಸಿಕೊಂಡು ಆವಶ್ಯಕವಾದ ಕೆಲವೇ ಮಾರ್ಪಾಡುಗಳನ್ನು ಮಾಡಿಕೊಂಡು ಕಥೆ ತಮ್ಮ ನಾಡ ಜೀವನದ್ದು ಎಂಬಂತೆ ರಚಿಸುವುದು ಒಂದು ದಾರಿ. ಸರಿಯಾದ ಕೈಯಲ್ಲಿ ಎರಡೂ ಸಾಧು, ಎರಡೂ ಚೆನ್ನ. ಒಂದು ಒಂದಕ್ಕಿಂತ ತತ್ವತಃ ಶ್ರೇಷ್ಠ ಎಂದು ಹೇಳಲಾಗುವುದಿಲ್ಲ. ಆಂಗ್ಲ ಕೃತಿಗಳ ಅನುವಾದದ ಸಂಪ್ರದಾಯಕ್ಕೆ ಆಚಾರ್ಯರಾದ (ಅವರು ಇಷ್ಟು ಮಾತ್ರಕ್ಕೆ ಆಚಾರ್ಯರೆಂದು ಇಲ್ಲಿ ಅರ್ಥವಲ್ಲ) ಶ್ರೀಮಾನ್ ಶ್ರೀಕಂಠಯ್ಯನವರು ತಮ್ಮ ಕೃತಿ ಅನೇಕದರಲ್ಲಿ ಎರಡನೆಯ ದಾರಿಯನ್ನು ಅಂಗೀಕರಿಸಿದರು. ಈ ಅನುವಾದದ ಕರ್ತರೂ ಆ ದಾರಿಯನ್ನು ಅನುಸರಿಸಿದಾರೆ; ಇಂತಹ ವೇಳೆ ಅನಿವಾರ್ಯವಾದ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡು ತಮ್ಮ ಕಾರ್ಯವನ್ನು ನಿರ್ವಹಿಸಿದಾರೆ. ಮೂಲದ 'ಸ್ಕ್ವೈರ್' 'ಹೆಗ್ಗಡೆ'ಯಾಗಿರುವುದು, 'ಸೈಲಾಸ್' ಇಲ್ಲಿ 'ದಾಸ'ನಾಗಿರುವುದು, ಹಾಗೆಯೇ ಅಲ್ಲಿಯ ಕುದುರೆ ಇಲ್ಲಿ ಹಸುವಾಗಿರುವುದು, ಅಲ್ಲಿಯ 'ಇನ್' ಇಲ್ಲಿ ಚಾವಡಿಯಾಗಿರುವುದು, ಉಚಿತವಾಗಿದೆ, ವಿವೇಚನಾಪರವಾಗಿದೆ. ಬಸಪ್ಪ, ಮಾಯಿ ಇವರ ಸಂಬಂಧದ ತೊಡಕು, ಚಾವಡಿಯ ಮಾತುಗಾರರ ಮಾತಾಟದ ಕಲಿಕೆ, ಇಂಥ ಒಂದೆರಡು ಸಂಗತಿ ಮೂಲಕೃತಿಯ ಸೌರಭವನ್ನು ಸಾಧಿಸಿಲ್ಲ. ಬಸಪ್ಪನಂತಹ ದೊಡ್ಡ ಮನೆಯ ಯಜಮಾನ ಗೌರಿಯಂತಹ ಅಜ್ಞಾತ ಪಿತೃವಾದ ಬಾಲೆಯನ್ನು ಸ್ವೀಕಾರ ಮಾಡುವುದೆನ್ನುವುದು ಜಾತಿ ಭೇದವಿಲ್ಲದೆ ಆಂಗ್ಲ ಸಮಾಜದಲ್ಲಿ ಸಹಜವೆಂದು ಕಾಣುವಂತೆ ಜಾತಿ ಜಾತದಿಂದ ಕ್ಷತ ವಿಕ್ಷತವಾಗಿರುವ ನಮ್ಮ ಸಮಾಜದಲ್ಲಿ ಸಾಧ್ಯವೆಂದು ಕಾಣುವುದಿಲ್ಲ. ಆದರೆ ಇಂತಹ ಕೊರೆಯೂ ಇಲ್ಲದೆ ಈ ರೀತಿಯ ಅನುವಾದ ಸಾಧ್ಯವೇ ಇಲ್ಲ. ಅನುವಾದಕರು

ತಮ್ಮ 'ಗೌರಿ'ಗೆ ಅವಳ ಮೂಲ ಮೂರ್ತಿಯಾದ 'ಎಪ್ಪಿ'ಗೆ ಇಲ್ಲದ ಒಂದು ಮಗುವನ್ನು ಕೊಟ್ಟು ನಮ್ಮ ಜನರ ವಾಡಿಕೆಯ ಒಂದು ಲಾಲಸೆಯನ್ನು ತಾವೂ ತೋರಿ ಓದುವವರ ಪರವಾಗಿ ತುಂಬಿದಾರೆ. ಒಟ್ಟಿನಲ್ಲಿ ಈ ಅನುವಾದ ನನ್ನ ಮನಸ್ಸಿಗೆ ಒಪ್ಪಿಗೆಯಾಗಿದೆ ಎಂದು ನ್ಯಾಯವಾದ ಸಂಕೋಚ ನ್ಯಾಯವಾದ ಧೈರ್ಯದಿಂದ ನಾನು ಹೇಳ ಬಯಸುತ್ತೇನೆ.

* * *

ಶ್ರೀಮಾನ್ ಸುಬ್ಬರಾಯರು ಶ್ರೀ ಶ್ರೀಕಂಠಯ್ಯನವರ ಶಿಷ್ಯರಾಗಿದ್ದವರು. ಆ ಗುರುವರರು ಈ ಅನುವಾದವನ್ನು ನೋಡಿದ್ದರೆ ತುಂಬಾ ಸಂತೋಷಪಡುತ್ತಿದ್ದರು. ಈಗಲಾದರೂ ಅವರು ತಮ್ಮ ಶಿಷ್ಯರ ಈ ಕಾರ್ಯದ ಫಲವಾಗಿ ತಾವು ಇರುವಲ್ಲೇ ಸ್ವಲ್ಪ ಆನಂದವನ್ನು ಅನುಭವಿಸುವರೆಂದು ನನಗೆ ತೋರುತ್ತದೆ. ಕನ್ನಡಿಗರಿಗೆ ಬೇಕಾಗಿದ್ದ ಈ ಕೃತಿಯನ್ನು ರಚಿಸಿ ಗುರುತೃಪ್ತಿ ಲೋಕತೃಪ್ತಿಯನ್ನು ಆದಷ್ಟು ಸಾಧಿಸಿರುವ ಬಗ್ಗೆ ನಾನು ಅನುವಾದಕರನ್ನು ಅಭಿನಂದಿಸುತ್ತೇನೆ.

ಈ ಕತೆ ನಮ್ಮ ಜನರ ಆದರವನ್ನು ಗಳಿಸಲಿ. ದಾಸ, ಮಾಯಿ, ಬಸಪ್ಪ, ಗೌರಿ, ಚೆನ್ನಮ್ಮ, ಶಿವ, ಪರದೇಶದವರಾಗಿರದೆ ನಮ್ಮ ಜನರ ಹೃದಯದ ಜನಗಣಿತಿಯಲ್ಲಿ ನಮ್ಮವರಾಗಿ ಸೇರಲಿ. ಪ್ರಪಂಚದ ಬಾಳೆಲ್ಲಾ ಒಂದು, ಅದನ್ನು ರೂಪಿಸುವ ಸಾಹಿತ್ಯವೆಲ್ಲಾ ಒಂದು, ಎಂಬ ಶಪಥದ ಸಾಧನೆಯಲ್ಲಿ ಈ ಕೃತಿ ಒಂದು ನಿಮಿತ್ತವಾಗಲಿ.

1948

ಶ್ರೀ "ಶ್ರೀ" ಯವರ

# "ಹೊಂಗನಸುಗಳು"

ಹೊಸಗನ್ನಡದ ಸಾಹಿತ್ಯದ ಆದ್ಯಪ್ರವರ್ತಕರಲ್ಲಿ ಒಬ್ಬರಾದ ಶ್ರೀ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರ ಕೃತಿಗಳನ್ನು ಒಂದು ಮಾಲೆಯಾಗಿ ಪ್ರಕಟಿಸುವ ಈ ಸಂದರ್ಭದಲ್ಲಿ ಗೆಳೆಯ ಶ್ರೀ ಕ. ವೆಂ. ರಾಘವಾಚಾರ್ಯರು ಗುರುವರ್ಯರ "ಹೊಂಗನಸುಗಳು" ಎಂಬ ಕವಿತಾ ಸಂಕಲನಕ್ಕೆ ನಾನೊಂದು ಮುನ್ನುಡಿ ಬರೆಯ ಬೇಕೆಂದು ಸೂಚಿಸಿದಾರೆ. ಗೆಳೆಯರ ಈ ಸ್ತುತ್ಯ ಉದ್ಯಮದಲ್ಲಿ ಜೊತೆಗೆ ನಿಲ್ಲುವುದು ನನಗೆ ಒಂದು ಹೆಮ್ಮೆ ಮತ್ತು ಸಂತೋಷ. ಆದಕಾರಣ ಇಲ್ಲಿ ಗುರುಗಳ ಆರಾಧನೆಯ ದೃಷ್ಟಿಯಿಂದ ನಾಲ್ಕು ಮಾತನ್ನು ಬರೆದಿದೇನೆ.

ಶ್ರೀಕಂಠಯ್ಯನವರು ನನಗೆ ಪಾಠ ಹೇಳಿದ ಗುರುಗಳು. ಹದಿನೇಳು ವರ್ಷದ ತರುಣ ನಾನು ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಎಫ್.ಎ., ತರಗತಿಯಲ್ಲಿ ಓದುತ್ತಿದ್ದೆನು. ಆಗ ಇವರು ಎಂ.ಎ., ಮತ್ತು ಬಿ.ಎಲ್., ಪರೀಕ್ಷೆಗಳನ್ನು ಮುಗಿಸಿ ನಮ್ಮ ಕಾಲೇಜಿಗೆ ಇಂಗ್ಲೀಷ್ ಕನ್ನಡ ಎರಡರ ಲೆಕ್ಚರರ್ ಆಗಿ ಬಂದರು. ಆಗಲೇ ಇವರಿಗೆ ತುಂಬ ಓದಿದವರು ಎಂಬ ಕೀರ್ತಿ ಬಂದಿತ್ತು; ಕನ್ನಡದಲ್ಲಿ ಆಸಕ್ತಿ ಉಳ್ಳವರೆಂದೂ ಪ್ರತೀತಿ. ಬರಿಯ ಕನ್ನಡ ಉಪಾಧ್ಯಾಯನಿಗೆ ಬಹಳ ಮರ್ಯಾದೆ ದೊರೆಯುವುದು ಸಾಧ್ಯವಲ್ಲದ ಕಾಲ ಅದು: ಆದಕಾರಣ ಇವರನ್ನು ಇಂಗ್ಲೀಷ್ ಕನ್ನಡ ಎರಡರ ಉಪಾಧ್ಯಾಯರೆಂದು ನೇಮಿಸಿದ್ದರು. ಪಾಠ ಹೇಳುವ ಕೆಲಸಕ್ಕೆ ಹೊಸಬರಾದರೂ ಶ್ರೀಕಂಠಯ್ಯನವರು ಬಂದ ದಿನದಿಂದಲೇ ವಿದ್ಯಾರ್ಥಿಗಳ ವಿಶ್ವಾಸವನ್ನು ಗಳಿಸಿದರು. ಏನಿಲ್ಲದಿದ್ದರೂ ತನ್ನ ಕೆಲಸದಲ್ಲಿ ಅವರಿಗಿದ್ದ ಶ್ರದ್ಧೆ ಅವರನ್ನು ಶಿಕ್ಷಣ ವೃತ್ತಿಯಲ್ಲಿ ಶಿಖರಕ್ಕೆ ಕರೆದೊಯ್ಯುವಂತಿದ್ದಿತು. ಇನ್ನು ಆ ಶ್ರದ್ಧೆಗೆ ಸಮನಾದ ಪಾಂಡಿತ್ಯ, ಅದಕ್ಕೆ ಸರಿಯಾಗಿ ವಿದ್ಯಾರ್ಥಿಗಳಲ್ಲಿ ವಾತ್ಸಲ್ಯ, ಇದ್ದವೆಂದ ಮೇಲೆ

ಇವರ ಜೊತೆಗೆ ನಿಲ್ಲಬಲ್ಲ ಉಪಾಧ್ಯಾಯರ ಸಂಖ್ಯೆ ಬಹು ಸಣ್ಣದೇ ಸರಿ. ಶ್ರೀಕಂಠಯ್ಯನವರು ಕೊನೆಯುವರೆಗೂ ಜ್ಞಾನ ವಿತರಣ ಕಾರ್ಯದಲ್ಲಿ ಇದೇ ಶ್ರದ್ಧೆ ಉಳ್ಳವರಾಗಿದ್ದರು. ಆದರಿಂದಲೇ ಅವರು ಮೈಸೂರಿನಲ್ಲಿ ಕೆಲಸದಿಂದ ನಿವೃತ್ತರಾದ ಮೇಲೆ ಗೆಳೆಯರ ಒತ್ತಾಯಕ್ಕೆ ತಲೆಬಾಗಿ ಒಂದು ಕಾಲೇಜಿನ ಅಧ್ಯಕ್ಷರಾಗಿ ಧಾರವಾಡಕ್ಕೆ ಸಾರಿದರು. ಅವರ ಉಸಿರಿಗೆ ಪಾಠ ಹೇಳಿ ತೃಪ್ತಿಯಿಲ್ಲ; ಪರ್ಯಾಯವಾಗಿ, ಒಂದು ಪಾಠ ವನ್ನು ಹೇಳುತ್ತಿರುವಾಗಲೇ ಅವರು ದೇಹವನ್ನು ನೀಗಿದರು.

ಸಹಜವಾದ ಶಿಕ್ಷಕ ಮನೋಧರ್ಮದೊಂದಿಗೆ ಶ್ರೀಕಂಠಯ್ಯನವರು ಕವಿ ಮನೋಧರ್ಮವನ್ನೂ ಪಡೆದಿದ್ದರು. ಕಾಲೇಜಿನಲ್ಲಿ ಒಂದಲ್ಲ ಒಂದು ಕಾರಣದಿಂದ ಇವರು ತಮ್ಮ ಪ್ರೀತಿಯ ಆಂಗ್ಲ ಕವಿತೆಗಳನ್ನು ನಮಗೆ ಪರಿಚಯ ಮಾಡಿಕೊಡುತ್ತಿದ್ದರು. ನಮ್ಮ ತರಗತಿಗೆ ಕನ್ನಡ ಭಾಷಾಂತರದ ಪಾಠ. ಇವರು Fame is the spur that the clear spirit doth raise" ಎಂದು ಮೊದಲಾಗುವ Lycidas ಕಾವ್ಯದ ಪಂಕ್ತಿ ಗಳನ್ನೋ "Earth has not anything to show more fair" ಎಂದು ಮೊದಲಾಗುವ ವರ್ಡ್ಸ್‌ವರ್ತ್ ಕವಿಯ ಅಷ್ಟಷಟ್ಪದಿಯನ್ನೋ ಬರೆಯಿಸುವರು, ಭಾಷಾಂತರ ಮಾಡಿ ಎನ್ನುವರು. ವಿದ್ಯಾರ್ಥಿಗಳು ತಿರಿಚಿ ಮುರಿಚಿ ಮಾಡಿ ಎದುರಿಗಿಟ್ಟ ಭೀಕರ ಶಬ್ದ ಕೋಲಾಹಲಗಳನ್ನು ಶಾಳ್ಮೆಯಿಂದ ನೋಡುವರು; ಸಾವಧಾನವಾಗಿ ತಿದ್ದುವರು; ಉಪಾಯ ವಾಗಿ ತಮಗೆ ತೋರಿದ ಪದಗಳನ್ನೂ ವಾಕ್ಯಗಳನ್ನೂ ಸೂಚಿಸುವರು. ಕನ್ನಡಕ್ಕೆ ಇಂಗ್ಲೀಷ್ ಸಾಹಿತ್ಯದಿಂದ ಆಗಬೇಕಾದುದು ಬಹಳ ಇದೆ ಯೆನ್ನುವುದು ಎಂದಿನಿಂದಲೂ ಇವರ ನಂಬಿಕೆ. ಅದು ಈ ರೀತಿ ರೂಪು ಗೊಳ್ಳುತ್ತಿದ್ದಿತು. ಆ ಸುಮಾರಿನಲ್ಲೇ ಇಂಗ್ಲೀಷ್ ಭಾವಗೀತೆ ಕೆಲವನ್ನು ಅನುವಾದಿಸಿ ಇವರು ಕರ್ಣಾಟಕ ಗ್ರಂಥಮಾಲೆಯಲ್ಲಿ ಪ್ರಕಟವಾಗಲು ಕೊಟ್ಟರು. ಆದರೆ ಇದು ನಮಗೆ ಆಗ ತಿಳಿಯದು.

ಶಿಕ್ಷಕ ಮತ್ತು ಕವಿಯ ಮನೋಧರ್ಮದೊಂದಿಗೆ ಶ್ರೀಕಂಠಯ್ಯ ನವರಲ್ಲಿ ತೀವ್ರವಾದ ಸ್ವದೇಶಾಭಿಮಾನ, ಅದರ ಅಂಗವಾಗಿ ಕನ್ನಡ ನಾಡನ್ನು ಕುರಿತ ಕಳಕಳಿ, ಇದ್ದುವು. ಕನ್ನಡವೆಂದು ಬಹಳ ಮಾತ

ನಾಡಿದರೆ, ಇಂಗ್ಲೀಷಿನಲ್ಲಿ ಯೋಗ್ಯತೆ ಸಾಲದ್ದರಿಂದ ಈ ಮನುಷ್ಯ ಕನ್ನಡಕ್ಕೆ ತಿರುಗಿದ್ದಾನೆ ಎಂದು ಹೇಳುವ ಕಾಲ ಅದು. ಈ ಕಾರಣ ದಿಂದ ಶ್ರೀಕಂಠಯ್ಯನವರು ಮೊದಲು ಆಂಗ್ಲ ಭಾಷೆಯಲ್ಲಿ ತಮಗಿದ್ದ ಅಸಾಧಾರಣ ಪ್ರಭುತ್ವವನ್ನು ಸ್ಥಾಪಿಸುವುದು ಆವಶ್ಯಕವಾಗಿತ್ತು. ಕನ್ನಡಕ್ಕೆ ಕೆಲಸ ಮಾಡಬೇಕು ; ಆದರೆ ಅದು ಕಡಮೆ ಜಾತಿಯ ಜನರ ಕೆಲಸ ಎಂಬ ಹೀನಾಯಕ್ಕೆ ಗುರಿಯಾಗಬಾರದು. ಈ ಆಕಾಂಕ್ಷೆಯಿಂದ ಶ್ರೀಕಂಠಯ್ಯನವರು ಆಗ ನಡಸಬೇಕಾಗಿ ಬಂದ ಕ್ಷುರಧಾರಾ ವ್ರತದ ಕಷ್ಟ ಅವರಿಗೇ ಗೊತ್ತು. ಹದಿನೈದು ವರ್ಷ ಒಂದು ಸಮನಾಗಿ ದಕ್ಷತೆ ಯಿಂದ ಇಂಗ್ಲೀಷ್ ಪಾಠವನ್ನು ಕಲಿಸಿದ ಮೇಲೆ ಇವರು ಕನ್ನಡ ಕವಿ ಎಂಬ ಕಾರಣದಿಂದ ಸ್ಥಾನ ಚ್ಯುತಿಯಾದೀತು ಎಂಬ ಭಯವಿಲ್ಲದಂತೆ ನಡೆಯುವ ಕಾಲ ಬಂದಿತು. ಕಾಲ ಬಂದಿತು ಏನು, ಇವರು ತಮ್ಮ ಷ್ಟಕ್ಕೆ ಆ ಸ್ಥಿತಿಯನ್ನು ಸಂಪಾದಿಸಿದರು. ಮಧ್ಯೆ ಹೆಜ್ಜೆ ತಪ್ಪಿದರೆ ಕೈಹಿಡಿಯುವ ಜನ ಒಬ್ಬರಿರಲಿಲ್ಲ. ಹೀಗೆ ಏಕಾಂಗಿಯಾಗಿ ತಮ್ಮ ಆತ್ಮ ಸಾಕ್ಷಿಯ ಹೊರತು ಬೇರೊಬ್ಬರ ಪ್ರೋತ್ಸಾಹವೇ ಇಲ್ಲವೋ ಎಂಬಂಥ ನಿಸ್ಸಹೃದಯ ಕ್ಷೇತ್ರದಲ್ಲಿ ದುಡಿದು ಶ್ರೀಕಂಠಯ್ಯನವರು ಹೊಸಗನ್ನಡ ಸಾಹಿತ್ಯಕ್ಕೆ ಒಬ್ಬ ನಾಯಕರು ಬೇಕಾಗುವ ಹೊತ್ತಿಗೆ ಸಿದ್ಧರಾಗಿ ಮುಂದೆ ಬಂದರು.

ನಮ್ಮ ಹೊಸ ಸಾಹಿತ್ಯದಲ್ಲಿ "ಇಂಗ್ಲೀಷ್ ಗೀತಗಳು" ಗ್ರಂಥ ತಂದ ಮಾರ್ಪಾಡನ್ನು ಇಂದು ವರ್ಣಿಸಬೇಕಾಗಿಲ್ಲ. "ಇಂಗ್ಲೀಷ್ ಗೀತಗಳು" ಪ್ರಕಟವಾಗಿ ಈಗ ಇಪ್ಪತ್ತುನಾಲ್ಕು ವರ್ಷಗಳು ಮುಗಿದಿವೆ. ಅದು ಪ್ರಕಟವಾದ ಗಳಿಗೆ ಅಮೃತಗಳಿಗೆ; ಅದನ್ನು ರಚಿಸಿದ ಹಸ್ತ ಅಮೃತಹಸ್ತ. ಆ ದಿನದಲ್ಲಿ ಬೆಲೆಯುಳ್ಳ ಕವಿತೆ ಹೊಸಗನ್ನಡದಲ್ಲಿ ಏನಿದೆ ಎಂದರೆ ಹಲ ಕೆಲವು ಸಣ್ಣಪುಟ್ಟ ಕೃತಿ ಸಿಕ್ಕಬಹುದಾಗಿದ್ದೀತೇನೊ. ಆದರೆ ಅವನ್ನು ಹುಡುಕಬೇಕಾಗಿತ್ತು. ಅದಾದ ನಾಲ್ಕು ವರ್ಷದಲ್ಲಿ ಅದೇನು ಬೆಳೆಯ ಚಿಹ್ನೆ ಕಂಡಿತು! ಅಲ್ಲಿಂದ ಈಚಿನ ಇಪ್ಪತ್ತು ವರ್ಷ ಗಳಲ್ಲಿ ಎಂಥ ಹುಲುಸು ಬೆಳೆ ಬೆಳೆದಿದೆ! ಅದರಲ್ಲಿ ಅದೆಷ್ಟು ಭಾಗ ಪ್ರತ್ಯಕ್ಷವಾಗಿ ಶ್ರೀಕಂಠಯ್ಯನವರ ಶಿಷ್ಯರಾಗಿದ್ದವರ ಕೆಲಸ! ನಿಜ

ವಾಗಿಯೂ ಶ್ರೀಕಂಠಯ್ಯನವರು ಪುಣ್ಯಾತ್ಮರು. ಕನ್ನಡವನ್ನು ಕುರಿತ ಅವರ ಆಸೆ ಹರಕೆಗಳು ಅವರ ನಿರೀಕ್ಷೆಯನ್ನೂ ತುಂಬುವಷ್ಟು ಫಲಿಸಿದ್ದನ್ನು ಅವರು ನೋಡಿದರು.

ಇನ್ನಷ್ಟನ್ನು ನೋಡಬಹುದಾಗಿದ್ದಿತು. ದೈವ ನಮಗೆ ಅದನ್ನು ಅನುಗ್ರಹಿಸಲಿಲ್ಲ.

ವಾರ್ಧಕ್ಯವನ್ನು ಕಾಣದೆ ತೀರಿಕೊಂಡರಾದರೂ ಶ್ರೀಕಂಠಯ್ಯನವರು ನಾಡ ಜೀವನದಲ್ಲಿ ತಾವು ಮಾಡಬೇಕಾಗಿದ್ದ ಕಾರ್ಯವನ್ನು ಸಮಗ್ರವಾಗಿ ಮಾಡಿ ಮುಗಿಸಿದ್ದರು. ಆ ಪಾಂಡಿತ್ಯಕ್ಕೆ, ಆ ಅನುಭವಕ್ಕೆ, ಆ ಪ್ರಾಜ್ಞತೆಗೆ ತಕ್ಕಷ್ಟು ಕೃತಿಯನ್ನು ಅವರು ರಚಿಸಲಿಲ್ಲ. ಆದರೆ ರಚಿಸಿದಷ್ಟರಲ್ಲಿ ತಮ್ಮ ವ್ಯಕ್ತಿತ್ವವನ್ನು ಪೂರ್ಣವಾಗಿ ಪ್ರಕಟಿಸಿದ್ದಾರೆ. ಹಳೆಯದರಲ್ಲಿ ಬೆಲೆಯುಳ್ಳ ಸೊಗಸಾದ ಅಂಶವೇನು, ಹೊಸದರಲ್ಲಿ ಲಾಭಕರ ಕ್ಷೇಮಕರವಾದ ಅಂಶವೇನು, ಎಂದು ಸಾವಧಾನದಿಂದ ವಿವೇಚಿಸಿ ಇವರು ತಮ್ಮ ಮನಸ್ಸನ್ನು ಕಟ್ಟಿಕೊಂಡರು. ಇವರಿಗೆ ಜೀವನವಾಡಿಕೆಯ ಸುಖದೊಂದಿಗೆ ಬಹು ವಾಡಿಕೆಯದಲ್ಲದ ಕೆಲವು ಬೇನೆಗಳನ್ನು ತಂದಿತು: ಅದನ್ನು ಇವರು ತಮ್ಮ ವಿದ್ವತ್ತಿನ, ಅನುಭವದ, ವಿವೇಚನೆಯ, ಬಲದಿಂದ ಸಹಿಸಿಕೊಂಡರು ; ಮನಸ್ಸನ್ನು ಹಗುರವಾಗಿ ಉಳಿಸಿಕೊಂಡರು ; ಧೀರವಾಗಿ ಬೆಳೆಸಿಕೊಂಡರು. ಹಾಗೆ ಬೆಳೆದ ಮನಸ್ಸು ಇವರ ಕೃತಿಗಳಲ್ಲಿ ಪ್ರಕಟವಾಗಿದೆ. ಇವರ ಕಾವ್ಯದಲ್ಲಿ ಕನ್ನಡನಾಡ ಪ್ರೇಮ ಇದೆ, ಸಜ್ಜನರಾದ ಆಂಗ್ಲರನ್ನು ಕುರಿತು ವಿಶ್ವಾಸ ವಿದೆ, ವಿಶ್ವವನ್ನು ಒಳಕೊಳ್ಳುವ ವೈಶಾಲ್ಯವಿದೆ. ಇವರು ವೇದಕ್ಕೆ ಶರಣುಹೋದರು ; ಬೈಬಲನ್ನು ಮೆಚ್ಚಿಕೊಂಡರು ; ಖೊರಾನನ್ನು, ಜೆಂದ್ ಅವೆಸ್ತವನ್ನು ಒಪ್ಪಿ ಅರಿತರು. ಷೇಕ್ಸ್‌ಪಿಯರನ್ನು, ಕಾರ್ಲೈಲನ್ನು, ಗಯಟೆಯನ್ನು ಗುರು ಎಂದರು ; ಕಾಳಿದಾಸ, ಪಂಪ, ನಾರಣಪ್ಪ, ಬಸವಣ್ಣನವರಲ್ಲಿ ತಮ್ಮ ಹಿರಿಯರನ್ನು ಕಂಡರು. ಮಾನವನ ಪಾಲಿಗೆ ಬಾಹ್ಯಪ್ರಪಂಚಕ್ಕೆ ಒಬ್ಬ ಸೂರ್ಯನಿರುವಂತೆ, ಅಂತರ್ಲೋಕಕ್ಕೆ ಒಂದು ಜ್ಯೋತಿ ಇರುವುದನ್ನು ಅನುಭವಿಸಿದರು. ನಮ್ಮ ಕಾಲಕ್ಕೆ ಒಬ್ಬ ಋಷಿಯಂತೆ ಆದರು ; ಋಷಿಯಾಗಿ ನುಡಿದರು.

ಅವರ ಈ ಬೆಳವಣಿಗೆಯ ಮೂವತ್ತೈದು ವರ್ಷದ ಆಗಾಗಿನ ಬಯಕೆ ಇಲ್ಲಿ ಸೇರಿರುವ ಕವನಗಳಲ್ಲಿ ಕಾಣುತ್ತದೆ. “ಭರತಮಾತೆಯೆ ಭರತಮಾತೆಯೆ ಎಂದು ನೀ ತಲೆಯೆತ್ತುವೆ” ಎಂದು ಕೇಳಿ ಇವರು, “ನಿನ್ನ ಹಿಂದಿನ ಭಾಗ್ಯವೆಲ್ಲವ ಮರಳಿ ಸಾಧಿಸಿ ಮೆರೆವೆವು, ನಿನ್ನ ಧರ್ಮಾಮೃತವ ಶೋಧಿಸಿ ಬಿಡು ಲೋಕಕ್ಕೆರೆವೆವು, ದೈವಚಿತ್ತದಿ ನಿಲುವೆವು, ಸತ್ಸೇವೆ ಗೆಯ್ಯುತ ಸಲುವೆವು,” ಎಂದು ನಮ್ಮ ಇಂದಿನ ಭಾರತ ಜನತೆಯ ಪರವಾಗಿ ಮಾತನ್ನು ಕೊಟ್ಟರು. ಮೈಸೂರೂ ಉಳಿದ ಕನ್ನಡ ನಾಡೂ ಒಂದು ನಾಡು, ಒಂದು ಬಾಳನ್ನು ಬಾಳಬೇಕು, ಎಂಬ ತಮ್ಮ ನಂಬಿಕೆಯನ್ನು ಸಾರಿದರು; ಜನದ ಮನಸ್ಸಿನಲ್ಲಿ ಬಿತ್ತಿದರು. ಕನ್ನಡಿಗರದೊಂದು ಧರ್ಮವಿದೆ, ಅದರ ಗುರುತಾಗಿ ಕನ್ನಡ ಎತ್ತಿ ಹಿಡಿಯುವ ಬಾವುಟವೊಂದಿದೆ, ಎನ್ನುವುದನ್ನು ತೋರಿಸಿದರು. “ಸಹನಾವವತು ಸಹ ನೌ ಭುನಕ್ತು” ಎಂದು, “ಋತವೊಂದೆ ಗೆಲ್ಲುವುದು ಅನೃತವಲ್ತು” ಎಂದು, ಜಪಿಸಿದರು. ಕನ್ನಡ ಜನತೆಗೆ ಹಿರಿಯ ನಡೆ ಹಿರಿಯ ಮಾತಿನ ರೀತಿಯನ್ನು ಸೂಚಿಸಿದರು.

ಜೀವ ಹಿರಿದಾದರೆ ಮಾತು ನಡೆ ಎಂತೂ ಹಿರಿದೇ. ಶ್ರೀಕಂಠಯ್ಯನವರ ಹಿರಿಯ ಜೀವದ ನಡೆ ನುಡಿಯ ಆದರ್ಶ ನಮ್ಮ ಜೀವನಕ್ಕೆ ಮಾರ್ಗದರ್ಶಕವಾಗಿ ಎಂದಿಗೂ ನಿಂತಿರಲಿ.

1948

ಶ್ರೀ ದ. ಕೃ. ಭರದ್ವಾಜರ

## " ಕಮಲಾಕಾಂತನ ಕಡತ "

ನನ್ನ ಮಾನ್ಯಮಿತ್ರರಾದ ಶ್ರೀ ದತ್ತಾತ್ರೇಯ ಕೃಷ್ಣ ಭಾರದ್ವಾಜರು ತಾವು ಮಾಡಿರುವ " ಕಮಲಾಕಾಂತನ ದಫ್ತರ "ದ ಈ ಭಾಷಾಂತರಕ್ಕೆ ಎರಡು ಮಾತನ್ನು ಮುನ್ನುಡಿಯಾಗಿ ಕೂಡಿಸುವ ಭಾಗ್ಯವನ್ನು ನನ್ನ ಬೊಗಸೆಯಲ್ಲಿ ತುಂಬಿದಾರೆ. ಇತ್ತೀಚೆಗೆ ನಾನು ಇಂಥ ಕೆಲಸವನ್ನು ಒಪ್ಪಿಕೊಳ್ಳುತ್ತಿಲ್ಲ. ಆದರೆ ಈ ಮಿತ್ರರು ಈ ಕೆಲಸವನ್ನು ನನಗೆ ಒಪ್ಪಿಸಿದ್ದು ಹಲವು ವರ್ಷಗಳ ಹಿಂದೆ. ಅಲ್ಲದೆ ಮೂಲ ಬಂಕಿಂ ಚಂದ್ರರದು, ಅನುವಾದಕರು ಭಾರದ್ವಾಜರು, ಕೃತಿ ಕಮಲಾಕಾಂತನನ್ನು ಕುರಿತದ್ದು, ಎಂಬ ಕಾರಣಗಳಿಂದ ನನ್ನ ಮನಸ್ಸು ಈ ಕೆಲಸದಲ್ಲಿ ಸುಖವನ್ನು ಕಾಣುತ್ತಿದೆ. ಆದಕಾರಣ ನಾನು ಈ ಮುನ್ನುಡಿಯ ನುಡಿಗಳನ್ನು ಬಹು ಸಂತೋಷದಿಂದ ಬರೆಯುತ್ತಿದೇನೆ.

ಕಮಲಾಕಾಂತ ನನ್ನ ಬಾಲ್ಯದ ಸ್ನೇಹಿತ. ನಾನು ಹಳ್ಳಿಯ ಶಾಲೆಯಲ್ಲಿ ಓದುತ್ತಿದ್ದ ದಿನಗಳಲ್ಲಿ ನನ್ನ ಸೋದರತ್ತೆ ಬೆಂಗಳೂರಿಂದ ಹಳ್ಳಿಗೆ ಅತ್ತೆಯ ಮನೆಗೆ ಬಂದರು. ಬರುತ್ತ ಯುಗಳಾಂಗುರೀಯ, ರಾಧಾರಾಣಿ, ಕಮಲಾಕಾಂತನ ದಫ್ತರ, ಈ ಪುಸ್ತಕಗಳನ್ನು ತಂದರು. ಮೂರನ್ನೂ ನಾನು ಅವು ಬಂದ ದಿನ ಮಾರನೆಯ ದಿನವೇ ಓದಿ ಮುಗಿಸಿ ನಲಿದೆನು. ಇವುಗಳ ನೆನಪು ಈಗಲೂ ನನಗೆ ಬಹು ಸವಿಯಾಗಿದೆ. ಆಗ್ಯೆ ಅವು ಎಂಥ ಶ್ರೇಷ್ಠ ಸಾಹಿತ್ಯವೆಂದು ನನಗೆ ತಿಳಿಯುವ ಸಂದರ್ಭ ಇರಲಿಲ್ಲ. ಅವುಗಳ ಮೂಲ ಲೇಖಕರು ಭಾರತ ವರ್ಷದ ಮಹಾಪುರುಷರಲ್ಲಿ ಒಬ್ಬರೆಂದಾಗಲಿ ಅವುಗಳ ಆ ಕನ್ನಡ ರೂಪದ ಕರ್ತೃಗಳಾದ ಶ್ರೀ ಬಿಂಡಿಗನವಲೆ ವೆಂಕಟಾಚಾರ್ಯರು ಕನ್ನಡದ ಹೊಸ ಸಾಹಿತ್ಯದ ತಳಹದಿಯನ್ನು ಹಾಕಿಕೊಡುತ್ತಿದ್ದರೆಂದಾಗಲಿ ನನಗೆ ಒಂದು ಕಲ್ಪನೆ ಬರುವುದು ಸಾಧ್ಯವಾಗಿರಲಿಲ್ಲ. ರಾಮಾಯಣ ಭಾರತದ ಕಥೆಗಳನ್ನು ಸಂಗ್ರಹಗಳಲ್ಲಿ ಓದಿದ್ದ ಹುಡುಗ ಈ ಕತೆಗಳನ್ನೂ ಆನಂದದಿಂದ

ಓದಿದೆನು. ಯುಗಳಾಂಗುರೀಯದ ತರುಣ, ತರುಣಿ, ರಾಧಾರಾಣಿ, ಕಮಲಾಕಾಂತ, ಇವರನ್ನು ರಾಮ ಸೀತಾ ಭೀಮ ಹನುಮ ಇವರ ಜೊತೆಗೆ ಪೋಣಿಸಿ ಮನಸ್ಸಿನಲ್ಲಿ ಒಂದು ಮಣಿ ಹಾರವನ್ನು ಮಾಡಿ ಕೊಂಡೆನು.

ಮಣಿಗಳು ಸ್ವಲ್ಪ ಕಲಬೆರಕೆ ಆದವೆಂದು ಈಗ ನಮಗೆ ತೋರ ಬಹುದು. ಎಳೆಯ ಮನಸ್ಸಿಗೆ ಇಂಥ ಶಂಕೆ ಇರುವುದಿಲ್ಲ. ಅದರಲ್ಲೂ ಆ ಕೋರ್ಟಿನಲ್ಲಿ ಅಷ್ಟು ಧೈರ್ಯವಾಗಿ ಮಾತನಾಡಿ ಎಲ್ಲರನ್ನೂ ನಗಿಸಿದ ಆ ಅಫೀಮುಕೋರ ಕಮಲಾಕಾಂತ ನನಗೆ ತುಂಬ ಮೆಚ್ಚಿಗೆಯ ವ್ಯಕ್ತಿ ಯಾದನು. ಅಷ್ಟೇ ನಿಜವಾದ ವ್ಯಕ್ತಿಯೂ ಆದನು. ಅವನೊಂದಿಗೆ ಅವನಿಗೆ ಯಾವ ನಂಬಿಕೆಯಿಂದಲೋ ಅಷ್ಟೊಂದು ಹಾಲನ್ನು ಬೆಲೆ ಕೇಳದೆ ಕೊಟ್ಟ ಆ ಗೌಳಗಿತ್ತಿ ಪ್ರಸನ್ನೆಯೂ ನನ್ನ ಪರಿಚಯದ ಹೆಂಗಸಾ ದಳು. ಕಮಲಾಕಾಂತನನ್ನು ನಾನು ನಮ್ಮೂರಿನ ಯಾವ ಒಬ್ಬ ವ್ಯಕ್ತಿ ಯೊಂದಿಗೂ ಐಕ್ಯಮಾಡುವಂತಿರಲಿಲ್ಲ. ಈ ಗೌಳಗಿತ್ತಿ ನಮ್ಮ ಆ ಹಳ್ಳಿಯ ದನ ಸಾಕಿದ ಹೆಣ್ಮಕ್ಕಳಲ್ಲಿ ಐದಾರು ಜನರಲ್ಲಿ ಯಾರು ಬೇಕಾ ದರೂ ಆಗಬಹುದಾಗಿದ್ದಿತು, ಒಬ್ಬಾಕೆ ಆದಳು; ಈಗಲೂ ಆವಳೇ ಆಗಿದಾಳೆ. ಇಬ್ಬರೂ ಮನಸ್ಸಿಗೆ ಪುರಾಣದ ನಾಯಕ ನಾಯಿಕೆಯ ರಂತೆಯೇ ಪ್ರಿಯರಾದದ್ದಲ್ಲದೆ ಬೆಲೆಯ ವ್ಯಕ್ತಿಗಳೂ ಆದರು; ಬಾಲಕನ ಸ್ವಭಾವದ ಯಾವುದೋ ಒಂದು ಭಾಗವನ್ನು ತಮ್ಮ ಇರವಿನ ಅಮೃತ ಸೇಚನದಿಂದ ತಣಿಸಿದರು, ಬೆಳಸಿದರು. ಕಮಲಾಕಾಂತನನ್ನು ಕುರಿತ ಆ ಪುಸ್ತಕ ಬಹು ಸಣ್ಣದು: ಅಂಗೈಯಗಲದ ಹತ್ತು ಹನ್ನೆರಡು ಪುಟದ್ದು ಅಷ್ಟೇ. ಆದರೂ ಅದು ನನ್ನ ಬಾಳಿನಲ್ಲಿ ಒಂದು ಮಹಾ ಗ್ರಂಥದ ಸ್ಥಾನವನ್ನು ಪಡೆದಿದೆ.

ಆಮೇಲೆ ಬಹುದಿನ ಕಳೆಯುವ ಮುನ್ನ ನಾನು "ದೇವೀ ಚೌಧು ರಾಣಿ"ಯನ್ನು ಓದಿದೆನು; ಅದರ ನಾಯಕಿಯ ವ್ಯಕ್ತಿತ್ವಕ್ಕೆ ಮನ ಸೋತೆನು. "ಆನಂದಮಠ"ವನ್ನು ಓದಿದೆನು; ಅದರ ದೇಶಪ್ರೇಮಕ್ಕೆ ಶೌರ್ಯಸಾಹಸಗಳಿಗೆ ಮರುಳಾದೆನು. "ಚಿತ್ರವಿಚಿತ್ರಾವಳಿ"ಯನ್ನು ಓದಿದೆನು; ಅದರ ವಿಡಂಬನದಿಂದ ನಲಿದೆನು. ಆಮೇಲೆ ದಿನಕಳೆದು

ಇವನ್ನು ಬರೆದ ಮನುಷ್ಯ ಸಾಮಾನ್ಯನಲ್ಲ ಎಂದು ಮನಗಂಡೆನು. ಬಂಕಿಂಚಂದ್ರ ಭರತವರ್ಷದ ಭಾಗ್ಯಮೂರ್ತಿ. ಆತನನ್ನು ಜನ ಹೊಗಳಿದಾರೆ. ಆದರೆ ನಮ್ಮ ದೇಶದ ಸಾಹಿತ್ಯದಲ್ಲಿ, ಇತಿಹಾಸದಲ್ಲಿ ಆತನ ಸ್ಥಾನ ಎಷ್ಟು ಹಿರಿಯದೆಂದು ಈಗಲಾದರೂ ನಾವೆಲ್ಲ ಗ್ರಹಿಸಿದ್ದೇವೆಂದು ನಾನು ಹೇಳಲಾರೆ. ಈ ವಿಷಯವನ್ನು ವಿವರವಾಗಿ ಗುರುತಿಸಲು ಇದು ಸ್ಥಳವಲ್ಲ. ಆದರೆ ಒಂದು ಮಾತನ್ನು ಹೇಳುವ ಸಾಹಸವನ್ನು ಇಲ್ಲಿ ನಾನು ಮಾಡಬಹುದು. ಪ್ರಪಂಚ ಮೆಚ್ಚಿ ಹಿರಿಯರೆಂದ ರವೀಂದ್ರನಾಥ ಠಾಕೂರರು ಬಂಕಿಂಚಂದ್ರರಿಗಿಂತ ಹಿರಿಯರಲ್ಲ ಎಂದು ಕೆಲವು ವೇಳೆ ನನಗೆ ತೋರಿದೆ. ಹಿರಿಯರಲ್ಲ ಎನ್ನುವುದು ಅಷ್ಟೇ ಅಲ್ಲ, ಒಂದು ಅಂಶದಲ್ಲಿ ಸಮನೂ ಅಲ್ಲ.

ಆ ಅಂಶ ಬಂಕಿಂ ಚಂದ್ರರ ಸಮಾಜ ವಿಜ್ಞಾನ, ಸುಧಾರಕ ಮನೋಧರ್ಮ. ರವೀಂದ್ರರೂ ಸುಧಾರಕ ವರ್ಗದಲ್ಲಿ ಸೇರಿದವರೆ. ಆದರೆ ಅವರು ನಡೆದ ದಾರಿ ಅವರ ಹಿರಿಯರು ಹಾಕಿದ್ದದ್ದು. ಬಂಕಿಂ ಚಂದ್ರರು ಈ ಕೆಲಸದಲ್ಲಿ ತಮ್ಮ ದಾರಿಯನ್ನು ತಾವೆ ಮಾಡಿಕೊಂಡರು.

ಮಣ ಚಿನ್ನ ಮಣ ಬೆಳ್ಳಿಯನ್ನು ಎಡಬಲದ ತಟ್ಟೆಗಳಲ್ಲಿಟ್ಟು ಎಡಗೈಯಿಂದ ತಕ್ಕಡಿಯನ್ನೆತ್ತುವೆನೆನ್ನುವುದು ಅವಿವೇಕ. ಇಲ್ಲಿ ನಾನು ಈ ಕೆಲಸದಲ್ಲಿ ತೊಡಗಿದೇನೆಂದು ಯಾರೂ ತಿಳಿಯಬಾರದು.

ಬಂಕಿಂಚಂದ್ರರ ಈ ಅನ್ಯಾದೃಶ ಸಮಾಜ ವಿಜ್ಞಾನ " ಕಮಲಾಕಾಂತನ "ನ ಬಾಯಲ್ಲಿ ರೂಪುಗೊಂಡಿತು. ಹಾಗೆಯೇ ಅವರು ಈ ಅರೆ ಹುಚ್ಚನ ಬಾಯಲ್ಲಿ ತಮ್ಮ ಮನಸ್ಸಿನ ಸೌಂದರ್ಯಜ್ಞಾನ, ದೇಶಭಕ್ತಿ, ದೀನವಾತ್ಸಲ್ಯ, ಮುಂತಾದ ಹಲವು ಪ್ರವೃತ್ತಿಗಳಿಗೂ ಮಾತನ್ನು ಒದಗಿಸಿದರು. ವಿದ್ಯಾರ್ಥಿದೆಸೆ ಮುಗಿದು ಒಂದು ನೆಲೆಯಲ್ಲಿ ನಿಂತು ನಾನು ಬಂಗಾಳಿ ಕಲಿಯಬೇಕೆಂದು ಯೋಚಿಸಿದಾಗ ಬಂಕಿಂಚಂದ್ರರ ಉಪನ್ಯಾಸಗಳನ್ನು ಮೊದಲು ಕೈಗೆ ತೆಗೆದುಕೊಂಡೆನು; ಅವರ " ಆ ಹಾಡು ಯಾರದು ? " " ಬೆಕ್ಕು " " ಮನುಷ್ಯಫಲ " ಮುಂತಾದ ಲೇಖನಗಳನ್ನು ಮೂಲದಲ್ಲಿ ಓದಿ ಆನಂದಿಸಿದೆನು; ಇವನ್ನೆಲ್ಲ ಯಾರಾದರೂ ಕನ್ನಡಕ್ಕೆ ತಂದರೆ ಒಳ್ಳೆಯದಾದೀತಲ್ಲ ಎಂದುಕೊಂಡೆನು.

ಆ ಕೆಲಸವನ್ನು ಆಮೇಲೆ ಗೆಳೆಯರು ಮಾಡಿದರು. ಆ ಗೆಳೆಯರಲ್ಲಿ ಶ್ರೀ ಭಾರದ್ವಾಜರು ಒಬ್ಬರು. ಇದು ನನಗೆ ತಿಳಿಯುವುದಕ್ಕೆ ಮೊದಲು ಒಂದು ಸಲ ಶ್ರೀ ಭಾರದ್ವಾಜರೊಡನೆ ಮಾತನಾಡುವಲ್ಲಿ ಯಾವುದೊ ಮಾತಿಗೆ ನಾನು ಕಮಲಾಕಾಂತನ ದಪ್ತರದ ಒಂದು ಲೇಖನದ ಪರಿವರ್ತನವೊಂದನ್ನು ಮೆಚ್ಚಿಕೊಂಡೆನು. ಆ ಪರಿವರ್ತನ ನಮ್ಮ ಮಿತ್ರರು ಈಚೆಗೆ ದಿವಂಗತರಾದ ಶ್ರೀ ವೆಂಕಟಾದ್ರಿಶಾಸ್ತ್ರಿಗಳದು ಎಂದು ಆಗ ನನ್ನ ತಿಳಿವಳಿಕೆ. ಶ್ರೀ ಭಾರದ್ವಾಜರು ಅದು ತಮ್ಮ ಕೃತಿ ಎಂದು ನನಗೆ ತಿಳಿಸಿದರು. ಹಾಗೆಯೇ ಆ ಲೇಖನಗಳನ್ನು ಮುಂದರಿಸಿ ಒಟ್ಟುಗೂಡಿಸಿ ಪ್ರಕಟಿಸುವ ಉದ್ದೇಶವಿದೆಯೆಂದು ಹೇಳಿ ಈ ಮುನ್ನುಡಿಯನ್ನು ಬಯಸಿದರು. ಅವರ ಆ ಕೆಲಸ ಈಗ ರೂಪಕ್ಕೆ ಬಂದಿರುವುದು ನನಗೆ ಸಂತೋಷದ ಸಂಗತಿ. ಈ ವಿಷಯದಲ್ಲಿ ನಾನು ಅವರನ್ನು ಅಭಿನಂದಿಸುತ್ತೇನೆ.

ಜೊತೆಗೆ ನಮ್ಮ ಜನರ ಪರವಾಗಿ ಅವರಿಗೆ ವಂದನೆಯನ್ನೂ ಒಪ್ಪಿಸುತ್ತೇನೆ. ಬಂಕಿಂಚಂದ್ರರ ಈ ಕೃತಿಗಳನ್ನು ಮೊದಲೇ ನೋಡಿದ್ದವರಿಗೆ ಇವರ ಕಾರಣ ಸ್ಪಷ್ಟವಾಗಿಯೇ ಇರುತ್ತದೆ. ಈಗತಾನೇ ಮೊದಲಾಗಿ ನೋಡುವವರು ತಮ್ಮ ಆನಂದದಲ್ಲಿ ಆ ಕಾರಣವನ್ನು ಕಂಡುಕೊಳ್ಳುತ್ತಾರೆ.

1951